ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ ಸಂಖ್ಯಾ ೧೪

# ಶ್ರೀಸ್ಕಾಂದಮಹಾಪುರಾಣಂ

೫

## ಆವಂತ್ಯಖಂಡ

೩

ರೇವಾಖಂಡ (ಭಾಗ ೨)
(ಮೂಲ ಮತ್ತು ಅನುವಾದ ಸಹಿತ)

ಅನುವಾದ -
ಆಸ್ಥಾನ ವಿದ್ವಾನ್
**ಮೋಟಗಾನಹಳ್ಳಿ ಸುಬ್ರಹ್ಮಣ್ಯಶಾಸ್ತ್ರೀ**

ಬೆಂಗಳೂರು ಪ್ರೆಸ್
ಮೈಸೂರು ರೋಡು, ಬೆಂಗಳೂರು ಸಿಟಿ
೧೯೪೯

# ಶ್ರೀಸ್ಕಾಂದಮಹಾಪುರಾಣಂ

೫

**ಆವಂತ್ಯಖಂಡ**

**೩**

ರೇವಾಖಂಡ (ಭಾಗ ೨)

(ಮೂಲ ಮತ್ತು ಅನುವಾದ ಸಹಿತ)

ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ ಸಂಖ್ಯಾ ೧೪

# ಶ್ರೀಸ್ಕಾಂದಮಹಾಪುರಾಣಂ

೫

## ಆವಂತ್ಯಖಂಡ

೩

ರೇವಾಖಂಡ (ಭಾಗ ೨)

(ಮೂಲ ಮತ್ತು ಅನುವಾದ ಸಹಿತ)

ಅನುವಾದಕ

ಆಸ್ಥಾನ ವಿದ್ವಾನ್

**ವೋಟಿಗಾನಹಳ್ಳಿ ಸುಬ್ರಹ್ಮಣ್ಯಶಾಸ್ತ್ರೀ**

ಬೆಂಗಳೂರು ಪ್ರೆಸ್

ಮೈಸೂರು ರೋಡು, ಬೆಂಗಳೂರು ಸಿಟಿ

# ಅರಿಕೆ

ಈ ಸಂಪುಟದಲ್ಲಿ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯ ಖಂಡದ ಮೂರನೆಯ ರೇವಾಖಂಡದಲ್ಲಿ ಐವತ್ತೊಂದನೆಯ ಅಧ್ಯಾಯ ಮೊದಲಾಗಿ ನೂರಮೂವತ್ತೆರಡನೆಯ ಅಧ್ಯಾಯದವರೆಗಣ ಗ್ರಂಥವು ಸಂಪೂರ್ಣವಾಗಿರುತ್ತದೆ.

ಅವಂತೀಕ್ಷೇತ್ರಕ್ಕೆ 'ಮಹಾಕಾಲವನ'ವೆಂಬ ಮತ್ತೊಂದು ಹೆಸರೂ ಉಂಟು. ಮಹಾಕಾಲವನದಲ್ಲಿಯೇ 'ಮಹಾಕಾಲೇಶ್ವರಲಿಂಗ'ವು ವಿರಾಜಿಸುತ್ತಿರುವುದು ಕಾಲಿದಾಸಾದಿ ಮಹಾಕವಿಗಳೆಲ್ಲರೂ ಈ ಕ್ಷೇತ್ರವನ್ನು ತಮ್ಮ ಕಾವ್ಯಗಳಲ್ಲಿ ಬಹುವಾಗಿ ವರ್ಣಿಸಿರುತ್ತಾರೆ. ಮಹಾಕಾಲೇಶ್ವರ ದೇವಾಲಯವನ್ನೊಳಕೊಂಡು ಶೋಭಿಸುತ್ತಿರುವ ಅವಂತಿಯ ಉಜ್ಜಯಿನೀನಗರವು ಚಾರಿತ್ರಕವಾಗಿಯೂ ಪ್ರಸಿದ್ಧವಾದುದೇ ಆಗಿರುವುದು. ಪೂರ್ವದಲ್ಲಿ ಇಲ್ಲಿ ಅನೇಕ ವಿಶ್ವವಿದ್ಯಾನಿಲಯಗಳಿದ್ದುವೆಂದು ಸಂಶೋಧನೆಗಳಿಂದ ತಿಳಿದುಬಂದಿದೆ. ಭಾರತ ಸಂಸ್ಕೃತಿಯ ಸಂರಕ್ಷಣೆಯಸಲುವಾಗಿ ಮಹಾಮಹಾ ಮೇಧಾವಿಗಳು ಹಗಲಿರುಳೂ ಶ್ರಮವಹಿಸಿ ದುಡಿದ ದುಡಿಮೆಯ ಸತ್ಫಲಸಂಕೇತಗಳು ಇಂದಿಗೂ ಈ ದೇಶದಲ್ಲಿ ಚಿರಸ್ಥಾಯಿಯಾಗಿ ಕಂಗೊಳಿಸುತ್ತಿವೆ. ಇಂಥ ಸುಂದರ ಪ್ರಾಂತ್ಯವಾದ ಅವಂತಿಯನ್ನು ಕುರಿತ ಈ ಖಂಡವು ತನ್ನೊಂದು ಐತಿಹಾಸಿಕ, ಸಾಮಾಜಿಕ ಮತ್ತು ನೈತಿಕ ಕಥಾನುಕಥನಗುಣದಿಂದಲೂ, ದೇವದೇವಿಯರ ಭಕ್ತಿಪಾರಮ್ಯಸಂಕಥನ ವೈಭವದಿಂದಲೂ, ಹರಿಹರಕ್ಷೇತ್ರಗಳ ಮಾಹಾತ್ಮ್ಯ ನಿರೂಪಣ ವೈಖರಿಯಿಂದಲೂ ಓದುಗರಿಗೆ ಹೃದಯಹಾರಿಯಾಗಿ ಪರಿಣಮಿಸದಿರದು.

ಇಂತಹ ಅನೇಕಾನೇಕ ಕ್ಷೇತ್ರಮಾಹಾತ್ಮ್ಯಗಳ ಸಂಪುಟವೆನಿಸಿರುವ ಈ ಮಹಾಪುರಾಣವನ್ನು ಕನ್ನಡದ ಅನುವಾದದೊಡನೆ ಪ್ರಕಟಿಸಲು ಪ್ರೇರೇಪಿಸಿ ಕನ್ನಡಿಗರೆಲ್ಲರಿಗೂ ಮಹೋಪಕೃತಿಯೆನ್ನಸಗಿ ಅವರೆಲ್ಲರ ಚಿರಕೃತಜ್ಞತೆಗೆ ಪಾತ್ರರಾಗಿರುವ ನಮ್ಮನ್ನಾಳುವ ಶ್ರೀಮದ್ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್, ಜಿ.ಸಿ.ಬಿ., ಜಿ.ಸಿ.ಎಸ್.ಐ. ಮಹಾಪ್ರಭುಗಳವರಿಗೆ ಪರಮೇಶ್ವರನು ಇತೋಪ್ಯತಿಶಯವಾದ ಸಮಸ್ತ ಸನ್ಮಂಗಳಗಳನ್ನೂ ದಯೆಪಾಲಿಸಿ ಸಂರಕ್ಷಿಸಲೆಂದು ಸಂಪ್ರಾರ್ಥಿಸುತ್ತೇನೆ.

**ಮೋಟಗಾನಹಳ್ಳಿ ಸುಬ್ರಹ್ಮಣ್ಯಶಾಸ್ತ್ರೀ**

# ವಿಷಯಾನುಕ್ರಮಣಿಕೆ


| | ಪುಟ ಸಂಖ್ಯೆ |
|---|---|
| **ಐವತ್ತೊಂದನೆಯ ಅಧ್ಯಾಯ —** | |
| ದಾನಧರ್ಮಪ್ರಶಂಸಾವರ್ಣನ .. .. .. | ೩೯೭–೪೦೫ |
| **ಐವತ್ತೆರಡನೆಯ ಅಧ್ಯಾಯ —** | |
| ದೀರ್ಘತಪೋಮುನ್ಯುಪಾಖ್ಯಾನವರ್ಣನ .. .. | ೪೦೬–೪೦೮ |
| **ಐವತ್ತಮೂರನೆಯ ಅಧ್ಯಾಯ —** | |
| ಋಕ್ಷಶೃಂಗಸ್ವರ್ಗಗಮನವರ್ಣನ .. .. .. | ೪೦೯–೪೧೬ |
| **ಐವತ್ತನಾಲ್ಕನೆಯ ಅಧ್ಯಾಯ —** | |
| ದೀರ್ಘತಪನ ಸ್ವರ್ಗಾರೋಹಣವರ್ಣನ .. .. | ೪೧೭–೪೨೭ |
| **ಐವತ್ತೈದನೆಯ ಅಧ್ಯಾಯ —** | |
| ಕಾಶೀರಾಜಮೋಕ್ಷಗಮನವರ್ಣನ .. .. .. | ೪೨೮–೪೩೪ |
| **ಐವತ್ತಾರನೆಯ ಅಧ್ಯಾಯ —** | |
| ದಾನಾದಿಫಲವರ್ಣನ .. .. .. | ೪೩೫–೪೫೪ |
| **ಐವತ್ತೇಳನೆಯ ಅಧ್ಯಾಯ —** | |
| ವ್ಯಾಧಸ್ವರ್ಗಗಮನವರ್ಣನ .. .. .. | ೪೫೫–೪೫೯ |
| **ಐವತ್ತೆಂಟನೆಯ ಅಧ್ಯಾಯ —** | |
| ಶೂಲಭೇದತೀರ್ಥಮಾಹಾತ್ಮ್ಯವರ್ಣನ .. .. | ೪೬೦–೪೬೩ |
| **ಐವತ್ತೊಂಬತ್ತನೆಯ ಅಧ್ಯಾಯ —** | |
| ಆದಿತ್ಯತೀರ್ಥಮಾಹಾತ್ಮ್ಯವರ್ಣನ .. .. .. | ೪೬೪–೪೬೬ |
| **ಅರುವತ್ತನೆಯ ಅಧ್ಯಾಯ —** | |
| ಆದಿತ್ಯೇಶ್ವರತೀರ್ಥಮಾಹಾತ್ಮ್ಯವರ್ಣನ .. .. | ೪೬೭–೪೭೯ |
| **ಅರುವತ್ತೊಂದನೆಯ ಅಧ್ಯಾಯ —** | |
| ಶಕ್ರೇಶ್ವರತೀರ್ಥಮಾಹಾತ್ಮ್ಯವರ್ಣನ .. | ೪೮೦–೪೮೧ |
| **ಅರುವತ್ತೆರಡನೆಯ ಅಧ್ಯಾಯ —** | |
| ಕರೋಡೀಶ್ವರತೀರ್ಥಮಾಹಾತ್ಮ್ಯವರ್ಣನ .. .. | ೪೮೨–೪೮೫ |
| **ಅರುವತ್ತಮೂರನೆಯ ಅಧ್ಯಾಯ —** | |
| ಕುಮಾರೇಶ್ವರತೀರ್ಥಮಾಹಾತ್ಮ್ಯವರ್ಣನ .. .. | ೪೮೬–೪೮೭ |

ಪುಟ ಸಂಖ್ಯೆ

ಅರುವತ್ತನಾಲ್ಕನೆಯ ಅಧ್ಯಾಯ —
ಅಗಸ್ತ್ಯೇಶ್ವರತೀರ್ಥಮಾಹಾತ್ಮ್ಯವರ್ಣನ .. .. ೪೮೮

ಅರುವತ್ತೈದನೆಯ ಅಧ್ಯಾಯ —
ಆನಂದೇಶ್ವರತೀರ್ಥಮಾಹಾತ್ಮ್ಯವರ್ಣನ .. ೪೮೯–೪೯೦

ಅರುವತ್ತಾರನೆಯ ಅಧ್ಯಾಯ —
ಮಾತೃತೀರ್ಥಮಾಹಾತ್ಮ್ಯವರ್ಣನ .. .. .. ೪೯೧–೪೯೨

ಅರುವತ್ತೇಳನೆಯ ಅಧ್ಯಾಯ —
ಲುಂಕೇಶ್ವರತೀರ್ಥಮಾಹಾತ್ಮ್ಯವರ್ಣನ .. .. ೪೯೩–೫೦೮

ಅರುವತ್ತೆಂಟನೆಯ ಅಧ್ಯಾಯ —
ಧನದತೀರ್ಥಮಾಹಾತ್ಮ್ಯವರ್ಣನ .. .. .. ೫೦೯–೫೧೦

ಅರುವತ್ತೊಂಬತ್ತನೆಯ ಅಧ್ಯಾಯ —
ಮಂಗಲೇಶ್ವರತೀರ್ಥಮಾಹಾತ್ಮ್ಯವರ್ಣನ .. .. ೫೧೧–೫೧೩

ಎಪ್ಪತ್ತನೆಯ ಅಧ್ಯಾಯ —
ರವಿತೀರ್ಥಮಾಹಾತ್ಮ್ಯವರ್ಣನ .. .. .. ೫೧೪

ಎಪ್ಪತ್ತೊಂದನೆಯ ಅಧ್ಯಾಯ —
ಕಾಮೇಶ್ವರತೀರ್ಥಮಾಹಾತ್ಮ್ಯವರ್ಣನ .. .. ೫೧೫

ಎಪ್ಪತ್ತೆರಡನೆಯ ಅಧ್ಯಾಯ —
ಮಣಿನಾಗೇಶ್ವರತೀರ್ಥಮಾಹಾತ್ಮ್ಯವರ್ಣನ .. .. ೫೧೬–೫೨೫

ಎಪ್ಪತ್ತಮೂರನೆಯ ಅಧ್ಯಾಯ —
ಗೋಪಾರೇಶ್ವರಮಾಹಾತ್ಮ್ಯವರ್ಣನ .. .. .. ೫೨೬–೫೨೯

ಎಪ್ಪತ್ತನಾಲ್ಕನೆಯ ಅಧ್ಯಾಯ —
ಗೌತಮೇಶ್ವರತೀರ್ಥಮಾಹಾತ್ಮ್ಯವರ್ಣನ .. .. ೫೩೦–೫೩೧

ಎಪ್ಪತ್ತೈದನೆಯ ಅಧ್ಯಾಯ —
ಶಂಖಚೂಡತೀರ್ಥಮಾಹಾತ್ಮ್ಯವರ್ಣನ .. .. ೫೩೨–೫೩೩

ಎಪ್ಪತ್ತಾರನೆಯ ಅಧ್ಯಾಯ —
ಪಾರೇಶ್ವರತೀರ್ಥಮಾಹಾತ್ಮ್ಯವರ್ಣನ .. .. ೫೩೪–೫೩೭

ಎಪ್ಪತ್ತೇಳನೆಯ ಅಧ್ಯಾಯ —
ಭೀಮೇಶ್ವರತೀರ್ಥಮಾಹಾತ್ಮ್ಯವರ್ಣನ .. .. ೫೩೮–೫೩೯

ಪುಟ ಸಂಖ್ಯೆ

ಎಪ್ಪತ್ತೆಂಟನೆಯ ಅಧ್ಯಾಯ —
ನಾರದೇಶ್ವರತೀರ್ಥಮಾಹಾತ್ಮ್ಯವರ್ಣನ .. .. ೫೪೦–೫೪೫

ಎಪ್ಪತ್ತೊಂಬತ್ತನೆಯ ಅಧ್ಯಾಯ —
ದಧಿಸ್ಕಂದ ಮಧುಸ್ಕಂದತೀರ್ಥಮಾಹಾತ್ಮ್ಯವರ್ಣನ ೫೪೬–೫೪೭

ಎಂಬತ್ತನೆಯ ಅಧ್ಯಾಯ —
ನಂದಿಕೇಶ್ವರತೀರ್ಥಮಾಹಾತ್ಮ್ಯವರ್ಣನ . ೫೪೮–೫೪೯

ಎಂಬತ್ತೊಂದನೆಯ ಅಧ್ಯಾಯ —
ವರುಣೇಶ್ವರತೀರ್ಥಮಾಹಾತ್ಮ್ಯವರ್ಣನ .. ೫೫೦–೫೫೧

ಎಂಬತ್ತೆರಡನೆಯ ಅಧ್ಯಾಯ —
ಪಂಚತೀರ್ಥಮಾಹಾತ್ಮ್ಯವರ್ಣನ .. .. .. ೫೫೨–೫೫೪

ಎಂಬತ್ತಮೂರನೆಯ ಅಧ್ಯಾಯ —
ಹನೂಮಂತೇಶ್ವರತೀರ್ಥಮಾಹಾತ್ಮ್ಯವರ್ಣನ .. .. ೫೫೫–೫೭೨

ಎಂಬತ್ತನಾಲ್ಕನೆಯ ಅಧ್ಯಾಯ —
ಕಪಿತೀರ್ಥಾದಿಮಾಹಾತ್ಮ್ಯವರ್ಣನ .. .. .. ೫೭೩–೫೮೦

ಎಂಬತ್ತೈದನೆಯ ಅಧ್ಯಾಯ —
ಸೋಮನಾಥತೀರ್ಥಮಾಹಾತ್ಮ್ಯವರ್ಣನ .. . ೫೮೧–೫೯೬

ಎಂಬತ್ತಾರನೆಯ ಅಧ್ಯಾಯ —
ಪಿಂಗಲೇಶ್ವರತೀರ್ಥಮಾಹಾತ್ಮ್ಯವರ್ಣನ .. .. ೫೯೭–೫೯೯

ಎಂಬತ್ತೇಳನೆಯ ಅಧ್ಯಾಯ —
ಋಣತ್ರಯವಿಮೋಚನತೀರ್ಥಮಾಹಾತ್ಮ್ಯವರ್ಣನ .. .. ೬೦೦

ಎಂಬತ್ತೆಂಟನೆಯ ಅಧ್ಯಾಯ —
ಕಪಿಲೇಶ್ವರತೀರ್ಥಮಾಹಾತ್ಮ್ಯವರ್ಣನ .. .. ೬೦೧–೬೦೨

ಎಂಬತ್ತೊಂಬತ್ತನೆಯ ಅಧ್ಯಾಯ —
ಪೂತಿಕೇಶ್ವರತೀರ್ಥಮಾಹಾತ್ಮ್ಯವರ್ಣನ .. .. ೬೦೩–೬೦೪

ತೊಂಬತ್ತನೆಯ ಅಧ್ಯಾಯ —
ಜಲಶಾಯಿತೀರ್ಥಮಾಹಾತ್ಮ್ಯವರ್ಣನ .. .. ೬೦೫–೬೨೧

ತೊಂಬತ್ತೊಂದನೆಯ ಅಧ್ಯಾಯ —
ಚಂಡಾದಿತ್ಯತೀರ್ಥಮಾಹಾತ್ಮ್ಯವರ್ಣನ .. .. ೬೨೨–೬೨೩

ಪುಟ ಸಂಖ್ಯೆ

ತೊಂಬತ್ತೆರಡನೆಯ ಅಧ್ಯಾಯ —
ಯಮುಹಾಸ್ಯತೀರ್ಥಮಾಹಾತ್ಮ್ಯವರ್ಣನ .. .. ೬೨೪–೬೨೮

ತೊಂಬತ್ತಮೂರನೆಯ ಅಧ್ಯಾಯ —
ಕಲ್ಹೋಡೀತೀರ್ಥಮಾಹಾತ್ಮ್ಯವರ್ಣನ .. .. ೬೨೯–೬೩೦

ತೊಂಬತ್ತನಾಲ್ಕನೆಯ ಅಧ್ಯಾಯ —
ನಂದಿಕೇಶ್ವರತೀರ್ಥಮಾಹಾತ್ಮ್ಯವರ್ಣನ .. . ೬೩೧

ತೊಂಬತ್ತೈದನೆಯ ಅಧ್ಯಾಯ —
ನರನಾರಾಯಣತೀರ್ಥಮಾಹಾತ್ಮ್ಯವರ್ಣನ .. ೬೩೨–೬೩೫

ತೊಂಬತ್ತಾರನೆಯ ಅಧ್ಯಾಯ —
ಕೋಟೀಶ್ವರತೀರ್ಥಮಾಹಾತ್ಮ್ಯವರ್ಣನ .. . ೬೩೬–೬೩೭

ತೊಂಬತ್ತೇಳನೆಯ ಅಧ್ಯಾಯ —
ವ್ಯಾಸತೀರ್ಥಮಾಹಾತ್ಮ್ಯವರ್ಣನ .. .. ೬೩೮–೬೬೫

ತೊಂಬತ್ತೆಂಟನೆಯ ಅಧ್ಯಾಯ —
ಪ್ರಭಾಸತೀರ್ಥಮಾಹಾತ್ಮ್ಯವರ್ಣನ .. ೬೬೬–೬೭೧

ತೊಂಬತ್ತೊಂಬತ್ತನೆಯ ಅಧ್ಯಾಯ —
ನಾಗೇಶ್ವರತೀರ್ಥಮಾಹಾತ್ಮ್ಯವರ್ಣನ .. .. ೬೭೨–೬೭೫

ನೂರನೆಯ ಅಧ್ಯಾಯ —
ಮಾರ್ಕಂಡೇಶ್ವರತೀರ್ಥಮಾಹಾತ್ಮ್ಯವರ್ಣನ . .. ೬೭೬–೬೭೭

ನೂರೊಂದನೆಯ ಅಧ್ಯಾಯ —
ಸಂಕರ್ಷಣತೀರ್ಥಮಾಹಾತ್ಮ್ಯವರ್ಣನ .. ೬೭೮–೬೭೯

ನೂರೆರಡನೆಯ ಅಧ್ಯಾಯ —
ಮನ್ಮಥೇಶ್ವರತೀರ್ಥಮಾಹಾತ್ಮ್ಯವರ್ಣನ .. .. ೬೮೦–೬೮೨

ನೂರಮೂರನೆಯ ಅಧ್ಯಾಯ —
ಏರಂಡೀಸಂಗಮತೀರ್ಥಫಲಮಾಹಾತ್ಮ್ಯವರ್ಣನ .. . ೬೮೩–೭೧೮

ನೂರನಾಲ್ಕನೆಯ ಅಧ್ಯಾಯ —
ಸುವರ್ಣಶಿಲಾತೀರ್ಥಮಾಹಾತ್ಮ್ಯವರ್ಣನ .. .. ೭೧೯–೭೨೦

ನೂರೈದನೆಯ ಅಧ್ಯಾಯ —
ಕರಂಜತೀರ್ಥಮಾಹಾತ್ಮ್ಯವರ್ಣನ .. .. .. ೭೨೧

| | ಪುಟ ಸಂಖ್ಯೆ |
|---|---|
| **ನೂರಾರನೆಯ ಅಧ್ಯಾಯ —** | |
| ಕಾಮುದತೀರ್ಥಮಾಹಾತ್ಮ್ಯವರ್ಣನ .. .. | ೨೨೨–೨೨೫ |
| **ನೂರೇಳನೆಯ ಅಧ್ಯಾಯ —** | |
| ಭಂಡಾರೀತೀರ್ಥಮಾಹಾತ್ಮ್ಯವರ್ಣನ .. | ೨೨೬ |
| **ನೂರೆಂಟನೆಯ ಅಧ್ಯಾಯ —** | |
| ರೋಹಿಣೀಸೋಮನಾಥತೀರ್ಥಮಾಹಾತ್ಮ್ಯವರ್ಣನ .. | ೨೨೭–೨೩೦ |
| **ನೂರೊಂಬತ್ತನೆಯ ಅಧ್ಯಾಯ —** | |
| ಚಕ್ರತೀರ್ಥಮಾಹಾತ್ಮ್ಯವರ್ಣನ .. .. | ೨೩೧–೨೩೪ |
| **ನೂರಹತ್ತನೆಯ ಅಧ್ಯಾಯ —** | |
| ಧೌತಪಾಪತೀರ್ಥಮಾಹಾತ್ಮ್ಯವರ್ಣನ .. | ೨೩೫–೨೩೬ |
| **ನೂರಹನ್ನೊಂದನೆಯ ಅಧ್ಯಾಯ —** | |
| ಸ್ಕಂದತೀರ್ಥಮಾಹಾತ್ಮ್ಯವರ್ಣನ .. .. | ೨೩೭–೨೪೪ |
| **ನೂರಹನ್ನೆರಡನೆಯ ಅಧ್ಯಾಯ —** | |
| ಅಂಗಿರಸತೀರ್ಥಮಾಹಾತ್ಮ್ಯವರ್ಣನ .. | ೨೪೫–೨೪೭ |
| **ನೂರಹದಿಮೂರನೆಯ ಅಧ್ಯಾಯ —** | |
| ಕೋಟಿತೀರ್ಥಮಾಹಾತ್ಮ್ಯವರ್ಣನ . | ೨೪೮ |
| **ನೂರಹದಿನಾಲ್ಕನೆಯ ಅಧ್ಯಾಯ —** | |
| ಅಯೋನಿಸಂಭವತೀರ್ಥಮಾಹಾತ್ಮ್ಯವರ್ಣನ . | ೨೪೯ |
| **ನೂರಹದಿನೈದನೆಯ ಅಧ್ಯಾಯ —** | |
| ಅಂಗಾರಕತೀರ್ಥಮಾಹಾತ್ಮ್ಯವರ್ಣನ . .. | ೨೫೦–೨೫೨ |
| **ನೂರಹದಿನಾರನೆಯ ಅಧ್ಯಾಯ —** | |
| ಪಾಂಡುತೀರ್ಥಮಾಹಾತ್ಮ್ಯವರ್ಣನ .. . . | ೨೫೩ |
| **ನೂರಹದಿನೇಳನೆಯ ಅಧ್ಯಾಯ —** | |
| ತ್ರಿಲೋಚನತೀರ್ಥಮಾಹಾತ್ಮ್ಯವರ್ಣನ .. | ೨೫೪ |
| **ನೂರಹದಿನೆಂಟನೆಯ ಅಧ್ಯಾಯ —** | |
| ಇಂದ್ರತೀರ್ಥಮಾಹಾತ್ಮ್ಯವರ್ಣನ .. .. .. | ೨೫೫–೨೬೧ |
| **ನೂರಹತ್ತೊಂಬತ್ತನೆಯ ಅಧ್ಯಾಯ —** | |
| ರೇವಾಕಲ್ಹೋಡಿತೀರ್ಥಮಾಹಾತ್ಮ್ಯವರ್ಣನ . .. | ೨೬೨–೨೬೪ |

ಪುಟ ಸಂಖ್ಯೆ

ನೂರ ಇಪ್ಪತ್ತನೆಯ ಅಧ್ಯಾಯ —
ಕಂಬುಕೇಶ್ವರತೀರ್ಥಮಾಹಾತ್ಮ್ಯವರ್ಣನ .. ೨೬೫–೨೬೯

ನೂರ ಇಪ್ಪತ್ತೊಂದನೆಯ ಅಧ್ಯಾಯ —
ಸೋಮತೀರ್ಥಮಾಹಾತ್ಮ್ಯವರ್ಣನ .. . .. ೨೭೦–೨೭೪

ನೂರ ಇಪ್ಪತ್ತೆರಡನೆಯ ಅಧ್ಯಾಯ —
ಕೋಹನತೀರ್ಥಮಾಹಾತ್ಮ್ಯವರ್ಣನ .. ೨೭೫–೨೮೧

ನೂರ ಇಪ್ಪತ್ತಮೂರನೆಯ ಅಧ್ಯಾಯ —
ಕರ್ಮದೇಶ್ವರತೀರ್ಥಮಾಹಾತ್ಮ್ಯವರ್ಣನ .. ೨೮೨

ನೂರ ಇಪ್ಪತ್ತನಾಲ್ಕನೆಯ ಅಧ್ಯಾಯ —
ನರ್ಮದೇಶ್ವರತೀರ್ಥಮಾಹಾತ್ಮ್ಯವರ್ಣನ .. . ೨೮೩

ನೂರ ಇಪ್ಪತ್ತೈದನೆಯ ಅಧ್ಯಾಯ —
ರವಿತೀರ್ಥಮಾಹಾತ್ಮ್ಯವರ್ಣನ . ೨೮೪–೨೯೧

ನೂರ ಇಪ್ಪತ್ತಾರನೆಯ ಅಧ್ಯಾಯ —
ಅಯೋನಿಜಪ್ರಭವತೀರ್ಥಮಾಹಾತ್ಮ್ಯವರ್ಣನ . . ೨೯೨–೨೯೪

ನೂರ ಇಪ್ಪತ್ತೇಳನೆಯ ಅಧ್ಯಾಯ —
ಅಗ್ನಿತೀರ್ಥಮಾಹಾತ್ಮ್ಯವರ್ಣನ .. .. .. ೨೯೫

ನೂರ ಇಪ್ಪತ್ತೆಂಟನೆಯ ಅಧ್ಯಾಯ —
ಭೃಕುಟೇಶ್ವರತೀರ್ಥಮಾಹಾತ್ಮ್ಯವರ್ಣನ .. . ೨೯೬–೨೯೭

ನೂರ ಇಪ್ಪತ್ತೊಂಬತ್ತನೆಯ ಅಧ್ಯಾಯ —
ಬ್ರಹ್ಮತೀರ್ಥಮಾಹಾತ್ಮ್ಯವರ್ಣನ . .. .. ೨೯೮–೩೦೦

ನೂರ ಮೂವತ್ತನೆಯ ಅಧ್ಯಾಯ —
ದೇವತೀರ್ಥಮಾಹಾತ್ಮ್ಯವರ್ಣನ .. .. ೩೦೧

ನೂರ ಮೂವತ್ತೊಂದನೆಯ ಅಧ್ಯಾಯ —
ನಾಗೇಶ್ವರತೀರ್ಥಮಾಹಾತ್ಮ್ಯವರ್ಣನ . ೩೦೨–೩೦೮

ನೂರ ಮೂವತ್ತೆರಡನೆಯ ಅಧ್ಯಾಯ —
ಆದಿವರಾಹತೀರ್ಥಮಾಹಾತ್ಮ್ಯವರ್ಣನ .. .. ೩೦೯–೩೧೧

॥ ಶ್ರೀಃ ॥

**ಅಥ ಮಂಗಳಾಚರಣಶ್ಲೋಕಃ**

**ಯಸ್ಯಾಜ್ಞಯಾ ಜಗತ್ಸ್ರಷ್ಟಾ ವಿರಿಂಚಿಃ ಪಾಲಕೋ ಹರಿಃ ।**
**ಸಂಹರ್ತಾ ಕಾಲರುದ್ರಾಖ್ಯೋ ನಮಸ್ತಸ್ಮೈ ಪಿನಾಕಿನೇ ॥**

**ತಾತ್ಪರ್ಯ**

ಯಾವ ಪ್ರಭುವಿನ ಅಪ್ಪಣೆಯಿಂದ
ಬ್ರಹ್ಮನು ಜಗತ್ತನ್ನು ಸೃಜಿಸುವವನಾಗಿಯೂ
ಶ್ರೀಮನ್ನಾರಾಯಣಮೂರ್ತಿಯು ಸಂರಕ್ಷಿಸುವವನಾಗಿಯೂ
ಕಾಲರುದ್ರನೆಂದು ಹೆಸರಾದ ಸ್ವಾಮಿಯು ಸಂಹಾರಕರ್ತನಾಗಿಯೂ ಇರುವರೋ
. ಆ ಪಿನಾಕಪಾಣಿಯಾದ ಪರಮಶಿವನಿಗೆ
ನಮಸ್ಕಾರವು

॥ ಶ್ರೀಃ ॥

॥ ಶ್ರೀಶಂಕರಃ ಶಂಕರಃ ॥

# ಶ್ರೀ ಸ್ಕಾಂದಮಹಾಪುರಾಣಂ

## ಅಥಾಽವಂತ್ಯಖಂಡೇ
## ತೃತೀಯೇ ರೇವಾಖಂಡೇ ದ್ವಿತೀಯೋ ಭಾಗಃ ಪ್ರಾರಭ್ಯತೇ

ಓಂ ಶ್ರೀ ಗಣೇಶಾಯ ನಮಃ । ಓಂ ನಮೋ ಬೃಹಸ್ಪತಯೇ ।
ನಮಸ್ತಸ್ಮೈ ಬ್ರಹ್ಮಣೇ । ವಿಷ್ಣವೇ ನಮಃ ॥

ಶ್ರೀಮತ್ಸುಂದರಶಾಸನಂ ಶ್ರೀಮತ್ಸಿದ್ಧಿವಿನಾಯಕಂ ।
ಷಣ್ಮುಖಂ ಸ್ಕಂದನಾನಂದಂ ಬ್ರಹ್ಮಾಣಂ ವಿಷ್ಣುಮಾಶ್ರಯೇ ॥
ಯಸ್ಯಾಜ್ಞಯಾ ಜಗತ್ಸ್ರಷ್ಟಾ ವಿರಿಂಚಿಃ ಪಾಲಕೋ ಹರಿಃ ।
ಸಂಹರ್ತಾ ಕಾಲರುದ್ರಾಖ್ಯೋ ನಮಸ್ತಸ್ಮೈ ಪಿನಾಕಿನೇ ॥

### ಅಥೈಕಪಂಚಾಶತ್ತಮೋಽಧ್ಯಾಯಃ

**ದಾನಧರ್ಮಪ್ರಶಂಸಾವರ್ಣನಂ**

**ಉತ್ತಾನಪಾದ ಉವಾಚ :—**

**ಕಾಲೇ ತಸ್ಮಿನ್ಕ್ರಿಯತೇ ಕಸ್ಮಿಂಛ್ರಾದ್ಧಂ ದಾನಂ ತಥೇಶ್ವರ ।**
**ಯಾತ್ರಾ ತತ್ರ ಪ್ರಕರ್ತವ್ಯಾ ತಿಥೌ ಯಸ್ಯಾಂ ವದಾಽಽಶು ತತ್ ॥ ೧ ॥**

**ಈಶ್ವರ ಉವಾಚ :—**

**ಪಿತೃತೀರ್ಥಂ ಯಥಾ ಪುಣ್ಯಂ ಸರ್ವಕಾಮಿಕಮುತ್ತಮಂ ।**
**ಇದಂ ತೀರ್ಥಂ ತಥಾ ಪುಣ್ಯಂ ಸ್ನಾನದಾನಾದಿ ತರ್ಪಣೈಃ ॥ ೨ ॥**

---

### ಕನ್ನಡದ ಅನುವಾದ

**ದಾನಧರ್ಮಪ್ರಶಂಸಾವರ್ಣನ**

೧. ಉತ್ತಾನಪಾದನು ಕೇಳುತ್ತಾನೆ —ಈಶ್ವರನೆ! ಅಲ್ಲಿ ಯಾವಾಗ ಶ್ರಾದ್ಧ ದಾನಗಳನ್ನು ಮಾಡಬೇಕು? ಯಾವ ತಿಥಿಯಲ್ಲಿ ಯಾತ್ರೆಗೈಯಬೇಕು? ಅದನ್ನು ಶೀಘ್ರವಾಗಿ ನನಗೆ ಹೇಳು.

೨. ಈಶ್ವರನು ಹೇಳುತ್ತಾನೆ·—ಸಕಲೇಷ್ಟಾರ್ಥಗಳನ್ನೀಯುವ ಗಯಾ ತೀರ್ಥವು ಉತ್ತಮವೂ ಪುಣ್ಯಕರವೂ ಆಗಿರುವಂತೆ ಈ ತೀರ್ಥವೂ ಸ್ನಾನ, ದಾನ, ತರ್ಪಣಾದಿಗಳಿಂದ ಪುಣ್ಯವನ್ನುಂಟುಮಾಡುವುದು.

ವಿಶೇಷೇಣ ತು ಕುರ್ವೀತ ಶ್ರಾದ್ಧಂ ಸರ್ವಯುಗಾದಿಷು ।
ಮನ್ವಂತರಾದಯೋ ವತ್ಸ ಶ್ರೂಯಂತಾಂ ಚ ಚತುರ್ದಶ ॥ ೩ ॥
ಅಶ್ವಯುಕ್ಛುಕ್ಲನವಮೀ ದ್ವಾದಶೀ ಕಾರ್ತಿಕಸ್ಯ ಚ ।
ತೃತೀಯಾ ಚೈತ್ರಮಾಸಸ್ಯ ತಥಾ ಭಾದ್ರಪದಸ್ಯ ಚ ॥ ೪ ॥
ಆಷಾಢಸ್ಯೈವ ದಶಮೀ ಮಾಘಸ್ಯೈವ ತು ಸಪ್ತಮೀ ।
ಶ್ರಾವಣಸ್ಯಾಷ್ಟಮೀ ಕೃಷ್ಣಾ ತಥಾಽಽಷಾಢಸ್ಯ ಪೂರ್ಣಿಮಾ ॥ ೫ ॥
ಫಾಲ್ಗುನಸ್ಯ ತ್ವಮಾವಾಸ್ಯಾ ಪೌಷಸ್ಯೈಕಾದಶೀ ಸಿತಾ ।
ಕಾರ್ತಿಕೀ ಫಾಲ್ಗುನೀ ಚೈತ್ರೀ ಜ್ಯೈಷ್ಠೀ ಪಂಚದಶೀ ತಥಾ ॥ ೬ ॥
ಮನ್ವಂತರಾದಯಶ್ಚೈತೇ ಅನಂತಫಲದಾಃ ಸ್ಮೃತಾಃ ।
ಅಯನೇ ಚೋತ್ತರೇ ರಾಜನ್ದಕ್ಷಿಣೇ ಶ್ರಾದ್ಧಮಾಚರೇತ್ ॥ ೭ ॥
ಕಾರ್ತಿಕೀ ಚ ತಥಾ ಮಾಘೀ ವೈಶಾಖಸ್ಯ ತೃತೀಯಿಕಾ ।
ಪೌರ್ಣಮಾಸೀ ಚ ಚೈತ್ರಸ್ಯ ಜ್ಯೇಷ್ಠಸ್ಯ ಚ ವಿಶೇಷತಃ ॥ ೮ ॥
ಅಷ್ಟಕಾಸು ಚ ಸಂಕ್ರಾಂತೌ ವ್ಯತೀಪಾತೇ ತಥೈವ ಚ ।
ಶ್ರಾದ್ಧಕಾಲಾ ಇಮೇ ಸರ್ವೇ ದತ್ತಮೇಷ್ವಕ್ಷಯಂ ಸ್ಮೃತಂ ॥ ೯ ॥
ಮಧುಮಾಸೇ ಸಿತೇ ಪಕ್ಷ ಏಕಾದಶ್ಯಾಮುಪೋಷಿತಃ ।
ನಿಶಿ ಜಾಗರಣಂ ಕುರ್ಯಾದ್ವಿಷ್ಣುಪಾದಸಮೀಪತಃ ॥ ೧೦ ॥

---

೩. ವತ್ಸ! ಸಕಲ ಯುಗಾದಿ ದಿನಗಳಲ್ಲಿ ಶ್ರಾದ್ಧವನ್ನು ಮಾಡಬೇಕು. ಹದಿನಾಲ್ಕು ಮನ್ವಂತರಗಳ ಆದಿ ದಿನಗಳನ್ನು ಕೇಳು.

೪–೭. ಆಶ್ವಯುಜ ಶುದ್ಧ ನವಮೀ ಕಾರ್ತೀಕ ಶುದ್ಧ ದ್ವಾದಶೀ, ಚೈತ್ರ ಮಾಸದ ಶುದ್ಧ ತದಿಗೆ, ಭಾದ್ರಪದಮಾಸದ ಶುದ್ಧ ತದಿಗೆ, ಆಷಾಢಮಾಸದ ಶುದ್ಧ ದಶಮಿ, ಮಾಘಮಾಸದ ಶುದ್ಧ ಸಪ್ತಮೀ, ಶ್ರಾವಣ ಬಹುಳಾಷ್ಟಮೀ, ಆಷಾಢ ಮಾಸದ ಹುಣ್ಣಿಮೆ, ಫಾಲ್ಗುನ ಬಹುಳಾಮಾವಾಸ್ಯೆ, ಪುಷ್ಯಮಾಸದ ಶುದ್ಧ ಏಕಾದಶೀ, ಕಾರ್ತಿಕ, ಫಾಲ್ಗುನ, ಚೈತ್ರ, ಜ್ಯೇಷ್ಠಮಾಸಗಳ ಹುಣ್ಣಿಮೆಗಳು— ಇವುಗಳು ಅಪರಿಮಿತ ಫಲಗಳನ್ನೀಯುವ ಮನ್ವಂತರಗಳು. ಹಾಗೆಯೇ ದಕ್ಷಿಣೋತ್ತರಾಯಣ ಕಾಲಗಳಲ್ಲಿಯೂ ಶ್ರಾದ್ಧಗಳನ್ನು ಮಾಡಬೇಕು.

೮–೯. ಕಾರ್ತಿಕ, ಮಾಘ, ವೈಶಾಖ ಮಾಸಗಳ ತದಿಗೆಗಳು, ಚೈತ್ರ, ಜ್ಯೇಷ್ಠ ಮಾಸಗಳ ಹುಣ್ಣಿಮೆ, ಅಷ್ಟಕ, ಸಂಕ್ರಾಂತಿ, ವ್ಯತೀಪಾತ— ಇವುಗಳು ಶ್ರಾದ್ಧ ಕಾಲಗಳು. ಇವುಗಳಲ್ಲಿ ದಾನಮಾಡಿದರೆ ಅದು ಅಕ್ಷಯವಾಗುವುದು.

೧೦. ವೈಶಾಖ ಶುಕ್ಲೈಕಾದಶಿಯ ದಿನ ಉಪವಾಸ ಮಾಡಿ ವಿಷ್ಣುಪಾದದ ಬಳಿ ರಾತ್ರಿ ಜಾಗರಣೆಯನ್ನು ಮಾಡಬೇಕು.

ಧೂಪದೀಪಾದಿನೈವೇದ್ಯೈಃ ಸ್ರಜ್ಮಾಲಾಗುರುಚಂದನೈಃ ।
ಅರ್ಚಾಂ ಕುರ್ವಂತಿ ಯೇ ವಿಷ್ಣೋಃ ಪಠೇಯುಃ ಪ್ರಾಕ್ತನೀಂ ಕಥಾಂ ॥
ಋಗ್ಯಜುಃಸಾಮಮಂತ್ರೋಕ್ತಂ ಸೂಕ್ತಂ ಜಪತಿ ಯೋ ದ್ವಿಜಃ ।
ಸರ್ವಪಾಪವಿನಿರ್ಮುಕ್ತೋ ವಿಷ್ಣುಲೋಕಂ ಸ ಗಚ್ಛತಿ ॥ ೧೨ ॥
ಪ್ರಾತಃಶ್ರಾದ್ಧಂ ಪ್ರಕುರ್ವೀತ ದ್ವಿಜಾನ್ಸಂಪೂಜ್ಯ ಯತ್ನತಃ ।
ದಾನಂ ದದ್ಯಾದ್ಯಥಾಶಕ್ತಿ ಗೋಹಿರಣ್ಯಾಂಬರಾದಿಕಂ ॥ ೧೩ ॥
ಪಿತರಸ್ತಸ್ಯ ತೃಪ್ಯಂತಿ ಯಾವದಾಭೂತಸಂಪ್ಲವಂ ।
ಶ್ರಾದ್ಧದಸ್ತು ವ್ರಜೇತ್ತತ್ರ ಯತ್ರ ದೇವೋ ಜನಾರ್ದನಃ ॥ ೧೪ ॥
ತ್ರಯೋದಶ್ಯಾಂ ತತೋ ಗಚ್ಛೇದ್ಗುಹಾವಾಸಿನಿ ಲಿಂಗಕೇ ।
ದೃಷ್ಟ್ವಾ ಮಾರ್ಕಂಡಮೀಶಾನಂ ಮುಚ್ಯತೇ ಸರ್ವಪಾತಕೈಃ ॥ ೧೫ ॥

ಉತ್ತಾನಪಾದ ಉವಾಚ :—

ಗುಹಾಮಧ್ಯೇ ಮಹಾದೇವ ಲಿಂಗಂ ಪರಮಶೋಭಿತಂ ।
ಯೇನ ಪ್ರತಿಷ್ಠಿತಂ ದೇವ ತನ್ಮಮಾಖ್ಯಾತುಮರ್ಹಸಿ ॥ ೧೬ ॥

ಈಶ್ವರ ಉವಾಚ :—

ತ್ರಿಷು ಲೋಕೇಷು ವಿಖ್ಯಾತೋ ಮಾರ್ಕಂಡೇಯೋ ಮುನೀಶ್ವರಃ ।
ದಿವ್ಯಂ ವರ್ಷಸಹಸ್ರಂ ಸ ತಪಸ್ತೇಪೇ ಸುದಾರುಣಂ ॥ ೧೭ ॥

---

೧೧–೧೨ ಧೂಪ, ದೀಪ, ನೈವೇದ್ಯ, ಹೂವಿನ ಮಾಲೆ, ಅಗುರು, ಚಂದನ ಇವುಗಳಿಂದ ವಿಷ್ಣುವನ್ನು ಪೂಜಿಸಿ ಪುರಾಣದ ಕಥೆಯನ್ನು ಪಠಿಸಿದವನೂ, ಋಗ್ಯಜುಸ್ಸಾಮ ವೇದಗಳ ಸೂಕ್ತಗಳನ್ನು ಜಪಿಸುವ ದ್ವಿಜನೂ ಸಕಲ ಪಾಪ ಮುಕ್ತನಾಗಿ ವಿಷ್ಣುಲೋಕಕ್ಕೆ ತೆರಳುವನು.

೧೩. ಪ್ರಾತಃಕಾಲದಲ್ಲಿ ಶ್ರಾದ್ಧವನ್ನು ಮಾಡಿ ಬ್ರಾಹ್ಮಣರನ್ನು ಪೂಜಿಸಿ ಶಕ್ತ್ಯನುಸಾರ ಗೋವು, ಹಿರಣ್ಯ, ವಸ್ತ್ರ ಮೊದಲಾದವುಗಳನ್ನು ದಾನಮಾಡಬೇಕು.

೧೪. ಹೀಗೆ ಮಾಡಿದವನ ಪಿತೃಗಳು ಪ್ರಳಯಕಾಲದವರೆಗೆ ತೃಪ್ತಿಗೊಳ್ಳುವರು ಶ್ರಾದ್ಧಮಾಡಿದವನೂ ವಿಷ್ಣುಲೋಕಕ್ಕೆ ಹೋಗುವನು.

೧೫. ತ್ರಯೋದಶಿಯ ದಿನ ಗುಹಾವಾಸಿ ಲಿಂಗದೆಡೆಗೆ ಹೋಗಿ ಮಾರ್ಕಂಡೇಶ್ವರನನ್ನು ನೋಡಿದರೆ ಸಮಸ್ತ ಪಾಪಗಳಿಂದ ಮುಕ್ತನಾಗುವನು.

೧೬. ಉತ್ತಾನಪಾದನು ಕೇಳುತ್ತಾನೆ:—ಮಹೇಶ್ವರಾ! ಗುಹೆಯ ನಡುವೆ ಅತ್ಯಂತವಾಗಿ ವಿರಾಜಿಸುವ ಲಿಂಗವನ್ನು ಯಾರು ಪ್ರತಿಷ್ಠಮಾಡಿದರು? ಅದನ್ನು ನನಗೆ ಹೇಳು.

೧೭. ಈಶ್ವರನು ಹೇಳುತ್ತಾನೆ:—ತ್ರಿಭುವನವಿಖ್ಯಾತನಾದ ಮಾರ್ಕಂಡೇಯ ಮುನಿವರ್ಯನು ಸಾವಿರ ದಿವ್ಯ ವರ್ಷಕಾಲ ದಾರುಣತಪವನ್ನಾಚರಿಸಿದನು.

**ಗುಹಾಮಧ್ಯಂ ಪ್ರವಿಷ್ಟೋಽಸೌ ಯೋಗಾಭ್ಯಾಸಮುಪಾಶ್ರಿತಃ ।**
**ಲಿಂಗಂ ತು ಸ್ಥಾಪಿತಂ ತೇನ ಮಾರ್ಕಂಡೇಶ್ವರಸಂಜ್ಞಿತಂ ॥ ೧೮ ॥**
**ತತ್ರ ಸ್ನಾತ್ವಾ ಚ ಯೋ ಭಕ್ತ್ಯಾ ಸೋಪವಾಸೋ ಜಿತೇಂದ್ರಿಯಃ ।**
**ತತ್ರ ಜಾಗರಣಂ ಕುರ್ವನ್ದದ್ಯಾದ್ದೀಪಂ ಪ್ರಯತ್ನತಃ ॥ ೧೯ ॥**
**ದೇವಸ್ಯ ಸ್ನಪನಂ ಕುರ್ಯಾದಮೃತೈಃ ಪಂಚಭಿಸ್ತಥಾ ।**
**ಯಥಾ ಶಕ್ತ್ಯಾ ಸಮಾಲಭ್ಯ ಪೂಜಾಂ ಕುರ್ಯಾದ್ಯಥಾವಿಧಿ ॥ ೨೦ ॥**
**ಸ್ವಶಾಖೋತ್ಪನ್ನಮಂತ್ರೈಶ್ಚ ಜಪಂ ಕುರ್ಯುರ್ದ್ವಿಜಾತಯಃ ।**
**ಸಾವಿತ್ರ್ಯಷ್ಟಸಹಸ್ರಂ ತು ಶತಾಷ್ಟಕಮಥಾಽಪಿ ವಾ ॥ ೨೧ ॥**
**ಏತತ್ಕೃತ್ವಾ ನೃಪಶ್ರೇಷ್ಠ ಜನ್ಮನಃ ಫಲಮಾಪ್ನುಯಾತ್ ।**
**ಚತುರ್ದಶ್ಯಾಂ ತು ವೈ ಸ್ನಾತ್ವಾ ಪೂಜಾಂ ಕೃತ್ವಾ ಯಥಾವಿಧಿ ॥ ೨೨ ॥**
**ಪಾತ್ರಂ ಪರೀಕ್ಷ್ಯ ದಾತವ್ಯಮಾತ್ಮನಃ ಶ್ರೇಯ ಇಚ್ಛತಾ ।**
**ಪಿತರಸ್ತಸ್ಯ ತೃಪ್ಯಂತಿ ದ್ವಾದಶಾಬ್ದಾನ್ಯಸಂಶಯಂ ॥ ೨೩ ॥**
**ದಾತಾ ಸ ಗಚ್ಛತೇ ತತ್ರ ಯತ್ರ ಭೋಗಾಃ ಸನಾತನಾಃ ।**
**ಗುಹಾಮಧ್ಯೇ ಪ್ರವಿಷ್ಟಸ್ತು ಲೋಟಯೇಚ್ಚೈವ ಶಕ್ತಿತಃ ॥ ೨೪ ॥**
**ನೀಲೇ ಗಿರೌ ಹಿ ಯತ್ಪುಣ್ಯಂ ತತ್ಸಮಸ್ತಂ ಲಭಂತಿ ತೇ ।**
**ಶೂಲಭೇದೇ ತು ಯಃ ಕುರ್ಯಾಚ್ಛ್ರಾದ್ಧಂ ಪರ್ವಣಿ ಪರ್ವಣಿ ॥ ೨೫ ॥**

---

೧೮. ಗುಹೆಯ ಮಧ್ಯವನ್ನು ಪ್ರವೇಶಿಸಿ ಯೋಗಾಭ್ಯಾಸನಿರತನಾದ ಈ ಮಾರ್ಕಂಡೇಯನು ಮಾರ್ಕಂಡೇಶ್ವರನೆಂಬ ಲಿಂಗವನ್ನು ಪ್ರತಿಷ್ಠೆಮಾಡಿದನು.

೧೯. ಅಲ್ಲಿ ಮಿಂದು ಉಪವಾಸಮಾಡಿ ಜಿತೇಂದ್ರಿಯನಾಗಿ ಜಾಗರಣೆ ಮಾಡಿ ದೀಪವನ್ನು ಹೊತ್ತಿಸಬೇಕು.

೨೦. ಮಾರ್ಕಂಡೇಶ್ವರನಿಗೆ ಪಂಚಾಮೃತಾಭಿಷೇಕವನ್ನು ಮಾಡಿ ಶಕ್ತ್ಯನುಸಾರ ಗಂಧಾದಿಗಳನ್ನು ಲೇಪಿಸಿ ವಿಧಿಯಂತೆ ಪೂಜಿಸಬೇಕು.

೨೧. ಬ್ರಾಹ್ಮಣರು ತಮ್ಮ ಶಾಖೆಗೆ ಅನುಸಾರವಾಗಿ ಎಂಟುಸಾವಿರ ಅಥವಾ ಎಂಟನೂರು ಗಾಯತ್ರೀ ಜಪವನ್ನು ಮಾಡಬೇಕು.

೨೨–೨೩. ನೃಪವರ್ಯನೆ! ಹೀಗೆ ಮಾಡಿದವನು ಜನ್ಮಸಾಫಲ್ಯವನ್ನು ಪಡೆಯುವನು. ತನಗೆ ಶ್ರೇಯಸ್ಸನ್ನು ಬಯಸುವವನು ಚತುರ್ದಶೀ ದಿನದಲ್ಲಿ ಮಿಂದು ವಿಧಿಯಂತೆ ಪೂಜಿಸಿ ಪಾತ್ರವನ್ನು ಪರೀಕ್ಷಿಸಿ ದಾನಮಾಡಬೇಕು. ಹೀಗೆ ಮಾಡಿದವನ ಪಿತೃಗಳು ಹನ್ನೆರಡು ವರ್ಷಕಾಲ ತೃಪ್ತಿಗೊಳ್ಳುವರು.

೨೪–೨೦. ದಾನಮಾಡಿದವನು ಸನಾತನ ಭೋಗಗಳಿರುವ ಕೈಲಾಸಕ್ಕೆ ತೆರಳುವನು. ಗುಹೆಯ ಮಧ್ಯವನ್ನು ಪ್ರವೇಶಿಸಿ ಶಕ್ತ್ಯನುಸಾರ ಹೊರಳಾಡಿದವನು ನೀಲಗಿರಿಯಲ್ಲಿ ಲಭಿಸುವ ಸಕಲ ಪುಣ್ಯಗಳನ್ನು ಹೊಂದುವನು. ಶೂಲ

ವಿಶೇಷಾಚ್ಚೈತ್ರಮಾಸಾಂತೇ ತಸ್ಯ ಪುಣ್ಯಫಲಂ ಶೃಣು ।
ಕೇದಾರೇ ಚೈವ ಯತ್ಪುಣ್ಯಂ ಗಂಗಾಸಾಗರಸಂಗಮೇ ॥ ೨೬ ॥
ಸಿತಾಽಸಿತೇ ತು ಯತ್ಪುಣ್ಯಮನ್ಯತೀರ್ಥೇ ವಿಶೇಷತಃ ।
ಅರ್ಬುದೇ ವಿದ್ಯತೇ ಪುಣ್ಯಂ ಪುಣ್ಯಂ ಚಾಮರಪರ್ವತೇ ॥ ೨೭ ॥
ಗಯಾದಿ ಸರ್ವತೀರ್ಥಾನಾಂ ಫಲಮಾಪ್ನೋತಿ ಮಾನವಃ ।
ವಿಧಿಮಂತ್ರಸಮಾಯುಕ್ತಸ್ತರ್ಪಯೇತ್ಪಿತೃದೇವತಾಃ ॥ ೨೮ ॥
ಕುಲಾನಾಂ ತಾರಯೇದ್ವಿಂಶಂ ದಶಪೂರ್ವಾನ್ದಶಾಽಪರಾನ್ ।
ದಕ್ಷಿಣಸ್ಯಾಂ ತತೋ ಮೂರ್ತೌ ಶುಚಿರ್ಭೂತ್ವಾ ಸಮಾಹಿತಃ ॥ ೨೯ ॥
ನ್ಯಾಸಂ ಕೃತ್ವಾ ತು ಪೂರ್ವೋಕ್ತಂ ಪ್ರದದ್ಯಾದಷ್ಟಪುಷ್ಪಿಕಾಂ ।
ಶಾಸ್ತ್ರೋಕ್ತೈರಷ್ಟಭಿಃ ಪುಷ್ಪೈರ್ಮಾನಸೈಃ ಶೃಣು ತದ್ಯಥಾ ॥ ೩೦ ॥
ವಾರಿಜಂ ಸೌಮ್ಯಮಾಗ್ನೇಯಂ ವಾಯವ್ಯಂ ಪಾರ್ಥಿವಂ ಪುನಃ ।
ವಾನಸ್ಪತ್ಯಂ ಭವೇತ್ ಷಷ್ಠಂ ಪ್ರಾಜಾಪತ್ಯಂ ತು ಸಪ್ತಮಂ ॥ ೩೧ ॥
ಅಷ್ಟಮಂ ಶಿವಪುಷ್ಪಂ ಸ್ಯಾದೇಷಾಂ ಶೃಣು ವಿನಿರ್ಣಯಂ ।
ವಾರಿಜಂ ಸಲಿಲಂ ಜ್ಞೇಯಂ ಸೌಮ್ಯಂ ಮಧು ಘೃತಂ ಪಯಃ ॥ ೩೨ ॥
ಆಗ್ನೇಯಂ ಧೂಪದೀಪಾದ್ಯಂ ವಾಯವ್ಯಂ ಚಂದನಾದಿಕಂ ।
ಪಾರ್ಥಿವಂ ಕಂದಮೂಲಾದ್ಯಂ ವಾನಸ್ಪತ್ಯಂ ಫಲಾತ್ಮಕಂ ॥ ೩೩ ॥

---

ಭೇದದಲ್ಲಿ ಪ್ರತಿ ಪರ್ವಕಾಲದಲ್ಲಿಯೂ, ವಿಶೇಷವಾಗಿ ಚೈತ್ರಮಾಸದ ಅಮಾವಾಸ್ಯೆಯ ದಿನವೂ ಶ್ರಾದ್ಧವನ್ನು ಮಾಡಿದರೆ ಮಾನವನಿಗೆ ಉಂಟಾಗುವ ಫಲವನ್ನು ಕೇಳು. ಕೇದಾರ, ಗಂಗಾಸಾಗರಸಂಗಮ, ತ್ರಿವೇಣಿ, ಅರ್ಬುದ, ಅಮರ ಪರ್ವತ ಇವುಗಳ, ಇನ್ನೂ ಇತರ ಗಯಾದಿ ಸಮಸ್ತ ತೀರ್ಥಗಳ ಫಲವನ್ನು ಹೊಂದುವನು. ಅಲ್ಲಿ ವಿಧಿಮಂತ್ರಗಳಿಂದ ಕೂಡಿ ಪಿತೃದೇವತೆಗಳಿಗೆ ತರ್ಪಣ ಮಾಡಿದವನು ಹಿಂದಿನ ಮತ್ತು ಮುಂದಿನ ಹತ್ತು ತಲೆಯ ಪಿತೃಗಳನ್ನು ಉದ್ಧರಿಸುವನು. ಅನಂತರ ಅದರ ದಕ್ಷಿಣದಿಕ್ಕಿನಲ್ಲಿರುವ ಮೂರ್ತಿಗೆ ಶುದ್ಧನೂ, ಸಮಾಧಾನಗೊಂಡ ಮನಸ್ಸುಳ್ಳವನೂ ಆಗಿ ಹಿಂದೆ ಹೇಳಿದ ನ್ಯಾಸವನ್ನು ಮಾಡಿ ಶಾಸ್ತ್ರೋಕ್ತವೂ, ಮಾನಸಿಕವೂ ಆದ ಅಷ್ಟಪುಷ್ಪಗಳನ್ನು ಸಮರ್ಪಿಸಬೇಕು. ಅದು ಹೇಗೆಂಬುದನ್ನು ಕೇಳು.

೩೧–೩೭. ವಾರಿಜ, ಸೌಮ್ಯ, ಆಗ್ನೇಯ, ವಾಯವ್ಯ, ಪಾರ್ಥಿವ, ವಾನಸ್ಪತ್ಯ, ಪ್ರಾಜಾಪತ್ಯ, ಶಿವ ಎಂದು ಅಷ್ಟ ಪುಷ್ಪಗಳು. ಇವುಗಳ ನಿರ್ಣಯವನ್ನು ಕೇಳು. ನೀರಿನಿಂದ ವಾರಿಜಪುಷ್ಪವೂ, ಮಧು, ಘೃತ, ಹಾಲುಗಳಿಂದ ಸೌಮ್ಯ ಪುಷ್ಪವೂ, ಧೂಪದೀಪಾದಿಗಳಿಂದ ಆಗ್ನೇಯ ಪುಷ್ಪವೂ, ಚಂದನಾದಿಗಳಿಂದ ವಾಯವ್ಯ ಪುಷ್ಪವೂ, ಕಂದಮೂಲಾದಿಗಳಿಂದ ಪಾರ್ಥಿವ ಪುಷ್ಪವೂ, ಫಲದಿಂದ

ಪ್ರಾಜಾಪತ್ಯಂ ತು ಪಾಠಾದ್ಯಂ ಶಿವಪುಷ್ಪಂ ತು ವಾಸನಾ ।
ಅಹಿಂಸಾ ಪ್ರಥಮಂ ಪುಷ್ಪಂ ಪುಷ್ಪಮಿಂದ್ರಿಯನಿಗ್ರಹಃ ॥ ೩೪ ॥
ತೃತೀಯಂ ತು ದಯಾ ಪುಷ್ಪಂ ಕ್ಷಮಾ ಪುಷ್ಪಂ ಚತುರ್ಥಕಂ ।
ಧ್ಯಾನಪುಷ್ಪಂ ತಪಃಪುಷ್ಪಂ ಜ್ಞಾನಪುಷ್ಪಂ ತು ಸಪ್ತಮಂ ॥ ೩೫ ॥
ಸತ್ಯಂ ಚೈವಾಷ್ಟಮಂ ಪುಷ್ಪಮೇಭಿಸ್ತುಷ್ಯಂತಿ ದೇವತಾಃ ।
ಭಕ್ತ್ಯಾ ತಪಸ್ವಿನಃ ಪೂಜ್ಯಾ ಜ್ಞಾನಿನಶ್ಚ ನರಾಧಿಪ ॥ ೩೬ ॥
ಛತ್ರಮಾವರಣಂ ದದ್ಯಾದುಪಾನದ್ಯುಗಲಂ ತಥಾ ।
ತೇನ ಪೂಜಿತಮಾತ್ರೇಣ ಪೂಜಿತಾಃ ಪುರುಷಾಸ್ತ್ರಯಃ ॥ ೩೭ ॥
ಸ್ವರ್ಗಲೋಕೇ ವಸೇತ್ತಾವದ್ಯಾವದಾಭೂತಸಂಪ್ಲವಂ ।
ಶೂಲಪಾಣೇಸ್ತು ಭಕ್ತ್ಯಾ ವೈ ಜಾಪ್ಯಂ ಕುರ್ವಂತಿ ಯೇ ನರಾಃ ॥ ೩೮ ॥
ಪಂಚಾಮೃತೈಃ ಪಂಚಗವ್ಯೈರ್ಯಕ್ಷಕರ್ದಮಕುಂಕುಮೈಃ ।
ಸಮಾಲಭೇತ ದೇವೇಶಂ ಶ್ರೀಖಂಡಾಗುರುಚಂದನೈಃ ॥ ೩೯ ॥
ನಾನಾವಿಧೈಶ್ಚ ಯೇ ಪುಷ್ಪೈರರ್ಚಾಂ ಕುರ್ವಂತಿ ಶೂಲಿನಃ ।
ನಿಶಿ ಜಾಗರಣಂ ಕುರ್ಯುರ್ದೀಪದಾನಂ ಪ್ರಯತ್ನತಃ ॥ ೪೦ ॥
ಧೂಪನೈವೇದ್ಯಕಂ ದದ್ಯಾತ್ಪಠೇತ್ಪೌರಾಣಿಕೀಂ ಕಥಾಂ ।
ತತ್ರ ಸ್ಥಾನೇ ಸ್ಥಿತಾ ಭಕ್ತ್ಯಾ ಜಪಂ ಕುರ್ವಂತಿ ಯೇ ನರಾಃ ॥ ೪೧ ॥

---

ವಾನಸ್ಪತ್ಯ ಪುಷ್ಪವೂ, ಪಾಠಾದಿಗಳಿಂದ ಪ್ರಾಜಾಪತ್ಯ ಪುಷ್ಪವೂ, ವಾಸನೆಯಿಂದ ಶಿವಪುಷ್ಪವೂ ಸಾಧಿತವಾಗುವುದು. ಅಹಿಂಸಾ, ಇಂದ್ರಿಯನಿಗ್ರಹ, ದಯೆ, ಕ್ಷಮೆ, ಧ್ಯಾನ, ತಪಸ್ಸು, ಜ್ಞಾನ, ಸತ್ಯ ಈ ಎಂಟು ಪುಷ್ಪಗಳಿಂದಲೂ ದೇವತೆಗಳು ಸಂತುಷ್ಟರಾಗುತ್ತಾರೆ. ಭಕ್ತಿಯಿಂದ ತಪಸ್ವಿಗಳನ್ನೂ, ಜ್ಞಾನಿಗಳನ್ನೂ ಪೂಜಿಸಿ ಛತ್ರ, ವಸ್ತ್ರ, ಪಾದರಕ್ಷೆಗಳನ್ನು ಕೊಡಬೇಕು ಆ ಪೂಜೆಯಿಂದ ಬ್ರಹ್ಮ, ವಿಷ್ಣು, ಮಹೇಶ್ವರರು ಪೂಜಿಸಲ್ಪಟ್ಟವರಾಗುವರು

೩೮ ಅಲ್ಲಿ ಶಿವನ ಮುಂದೆ ಜಪಿಸಿದವರು ಪ್ರಳಯಕಾಲದವರೆಗೆ ಸ್ವರ್ಗಲೋಕದಲ್ಲಿ ವಾಸಿಸುವರು.

೩೯ ಪಂಚಾಮೃತದಿಂದಲೂ, ಪಂಚಗವ್ಯದಿಂದಲೂ ಮಹೇಶ್ವರನಿಗೆ ಅಭಿಷೇಕಮಾಡಿ ಯಕ್ಷಕರ್ದಮ, ಕುಂಕುಮ, ಶ್ರೀಖಂಡ, ಅಗುರು, ಚಂದನಗಳನ್ನು ಲೇಪಿಸಬೇಕು.

೪೦. ಮಹೇಶ್ವರನನ್ನು ನಾನಾವಿಧ ಪುಷ್ಪಗಳಿಂದ ಅರ್ಚಿಸಿ ರಾತ್ರಿ ಜಾಗರಣೆ ಮಾಡಿ ದೀಪವನ್ನು ದಾನಮಾಡಬೇಕು.

೪೧–೪೩. ಅನಂತರ ಧೂಪ ದೀಪ ನೈವೇದ್ಯಗಳನ್ನಿತ್ತು ಪುರಾಣ ಕಥೆಗಳನ್ನು ಪಠಿಸಬೇಕು. ಅಲ್ಲಿ ಭಕ್ತಿಯಿಂದ ಶ್ರೀಸೂಕ್ತ, ಪುರುಷಸೂಕ್ತ, ಪವಮಾನಸೂಕ್ತ,

ಶ್ರೀ ಸೂಕ್ತಂ ಪೌರುಷಂ ಸೂಕ್ತಂ ಪಾವಮಾನಂ ವೃಷಾಕಪಿಂ ।
ವೇದೋಕ್ತೈ ಶ್ಚೈವ ಮಂತ್ರೈಶ್ಚ ರೌದ್ರೀಂ ವಾ ಬಹುರೂಪಿಣೀಂ ॥ ೪೨ ॥
ಬ್ರಾಹ್ಮಣಾನ್ಪೂಜಯೇದ್ಭಕ್ತ್ಯಾ ಪೂಜಯಿತ್ವಾ ಪ್ರಣಮ್ಯ ಚ ।
ನಾನಾವಿಧೈರ್ಮಹಾಭೋಗೈಃ ಶಿವಲೋಕೇ ಮಹೀಯತೇ ॥ ೪೩ ॥
ಅಗ್ನಿಮಿತ್ಯಾದಿ ಜಾಪ್ಯಾನಿ ಋಗ್ವೇದೀ ಜಪತೇ ತು ಯಃ ।
ರುದ್ರಾನ್ಪುರುಷಸೂಕ್ತಂ ಚ ಶ್ಲೋಕಾಽಧ್ಯಾಯಂ ಚ ಶುಕ್ರಿಯಂ ॥ ೪೪ ॥
ಇಷೇತ್ವಾದಿಕಮಂತ್ರೌಘಂ ಜ್ಯೋತಿರ್ಬ್ರಾಹ್ಮಣಮೇವ ಚ ।
ಗಾಯತ್ರ್ಯಂ ವೈ ಮಧುಚ್ಚೈವ ಮಂಡಲಬ್ರಾಹ್ಮಣಾನಿ ಚ ॥ ೪೫ ॥
ಏತಾಂ ಜಪ್ಯಾಂಸ್ತು ಯೋ ಭಕ್ತ್ಯಾ ಯಜುರ್ವೇದೀ ಜಪೇದ್ಯದಿ ।
ದೇವವ್ರತಂ ವಾಮದೇವ್ಯಂ ಪುರುಷರ್ಷಭಮೇವ ಚ ॥ ೪೬ ॥
ಬೃಹದ್ರಥಂತರಂ ಚೈವ ಯೋ ಜಪೇದ್ಭಕ್ತಿತತ್ಪರಃ ।
ಸ ಪ್ರಯಾತಿ ನರಃ ಸ್ಥಾನಂ ಯತ್ರ ದೇವೋ ಮಹೇಶ್ವರಃ ॥ ೪೭ ॥
ಪಾದಶೌಚಂ ತಥಾಽಭ್ಯಂಗಂ ಕುರುತೇ ಯೋಽತ್ರ ಭಕ್ತಿತಃ ।
ಗೋದಾನೇ ಚೈವ ಯತ್ಪುಣ್ಯಂ ಲಭತೇ ನಾಽತ್ರ ಸಂಶಯಃ ॥ ೪೮ ॥
ಬ್ರಾಹ್ಮಣಾನ್ಭೋಜಯೇತ್ತತ್ರ ಮಧುನಾ ಪಾಯಸೇನ ಚ ।
ಏಕಸ್ಮಿನ್ಭೋಜಿತೇ ವಿಪ್ರೇ ಕೋಟಿರ್ಭವತಿ ಭೋಜಿತಾ ॥ ೪೯ ॥

---

ರುದ್ರಸೂಕ್ತ, ವೇದೋಕ್ತಮಂತ್ರ, ನಾನಾವಿಧವಾದ ರುದ್ರಮಂತ್ರ ಇವುಗಳನ್ನು ಜಪಿಸಿ ಬ್ರಾಹ್ಮಣರನ್ನು ಪೂಜಿಸಿ ನಮಸ್ಕಾರ ಮಾಡಿದವರು ಶಿವಲೋಕದಲ್ಲಿ ನಾನಾವಿಧ ಭೋಗಗಳಿಂದ ಪೂಜಿತರಾಗುವರು.

೪೪–೪೭. ಅಗ್ನಿಮೀಳೆ ಇತ್ಯಾದಿ ಮಂತ್ರವನ್ನು ಜಪಿಸಿದ ಋಗ್ವೇದಿಯೂ, ರುದ್ರ, ಪುರುಷಸೂಕ್ತ, ಶುಕ್ರಿಯ ಶ್ಲೋಕಾಧ್ಯಾಯ, ಇಷೇತ್ವಾದಿ ಮಂತ್ರ, ಜ್ಯೋತಿರ್ಬ್ರಾಹ್ಮಣ, ಗಾಯತ್ರೀ, ಮಧು, ಮಂಡಲ ಬ್ರಾಹ್ಮಣ ಇವುಗಳನ್ನು ಜಪಿಸಿದ ಯಜುರ್ವೇದಿಯೂ, ದೇವವ್ರತ, ವಾಮದೇವ್ಯ, ಪುರುಷರ್ಷಭ, ಬೃಹದ್ರಥಂತರ ಇವುಗಳನ್ನು ಭಕ್ತಿಯಿಂದ ಜಪಿಸಿದ ಸಾಮವೇದಿಯೂ ಮಹೇಶ್ವರನ ಸ್ಥಾನಕ್ಕೆ ಹೋಗುವರು.

೪೮. ಅಲ್ಲಿ ಭಕ್ತಿಯಿಂದ ಪಾದಪ್ರಕ್ಷಾಳನ, ಅಭ್ಯಂಗವನ್ನು ಮಾಡುವವನು ಗೋದಾನ ಮಾಡಿದ ಪುಣ್ಯವನ್ನು ನಿಶ್ಚಯವಾಗಿಯೂ ಪಡೆಯುವನು

೪೯. ಅಲ್ಲಿ ಮಧು ಮತ್ತು ಪಾಯಸಗಳಿಂದ ಬ್ರಾಹ್ಮಣರಿಗೆ ಭೋಜನ ಮಾಡಿಸಬೇಕು ಹೀಗೆ ಒಬ್ಬ ಬ್ರಾಹ್ಮಣನಿಗೆ ಭೋಜನಮಾಡಿಸಿದರೆ ಕೋಟಿ ಮಂದಿ ಬ್ರಾಹ್ಮಣರಿಗೆ ಭೋಜನ ಮಾಡಿಸಿದ ಫಲವು ದೊರೆಯುವುದು.

ಸುವರ್ಣಂ ರಜತಂ ವಸ್ತ್ರಂ ದದ್ಯಾದ್ಭಕ್ತ್ಯಾ ದ್ವಿಜೋತ್ತಮೇ ।
ತರ್ಪಿತಾಸ್ತೇನ ದೇವಾಃ ಸ್ಯುರ್ಮನುಷ್ಯಾಃ ಪಿತರಸ್ತಥಾ ॥ ೫೦ ॥
ಚಂದ್ರಸೂರ್ಯಗ್ರಹೇ ಭಕ್ತ್ಯಾ ಸ್ನಾನಂ ಕುರ್ವಂತಿ ಯೇ ನರಾಃ ।
ದೇವಾರ್ಚನಂ ಯೇ ಚ ಕುರ್ಯುರ್ಜಪಂ ಹೋಮಂ ವಿಶೇಷತಃ ।
ದದ್ಯಾದ್ದಾನಂ ಯಥಾಶಕ್ತಿ ಬ್ರಾಹ್ಮಣೇ ವೇದಪಾರಗೇ ॥ ೫೧ ॥
ಅಶ್ವಂ ರಥಂ ಗಜಂ ಯಾನಂ ತುಲಾಪುರುಷಮೇವ ಚ ।
ಶಕಟಂ ಯಃ ಪ್ರದದ್ಯಾದ್ವಾ ಸಪ್ತಧಾನ್ಯಪ್ರಪೂರಿತಂ ॥ ೫೨ ॥
ಸಯೋಕ್ತ್ರಂ ಲಾಂಗಲಂ ದದ್ಯಾದ್ಯುವಾನೌ ತು ಧುರಂಧರೌ ।
ಗೋಭೂತಿಲಹಿರಣ್ಯಾದಿ ಪಾತ್ರೇ ದಾತವ್ಯಮರ್ಚಿತಂ ॥ ೫೩ ॥
ಅಪಾತ್ರೇ ವಿದುಷಾ ಕಿಂಚಿನ್ನ ದೇಯಂ ಭೂತಿಮಿಚ್ಛತಾ ।
ಯತೋಽಸೌ ಸರ್ವಭೂತಾನಿ ದಧಾತಿ ಧರಣೀ ಕಿಲ ॥ ೫೪ ॥
ತತೋ ವಿಪ್ರಾಯ ಸಾ ದೇಯಾ ಸರ್ವಸಸ್ಯೌಘಮಾಲಿನೀ ।
ಅಥಾಽನ್ಯಚ್ಛೃಣು ರಾಜೇಂದ್ರ ಗೋದಾನಸ್ಯ ತು ಯತ್ಫಲಂ ॥ ೫೫ ॥
ಯಾವದ್ವತ್ಸಸ್ಯ ಪಾದೌ ದ್ವೌ ಮುಖಂ ಯೋನ್ಯಾಂ ಪ್ರದೃಶ್ಯತೇ ।
ತಾವದ್ಗೌಃ ಪೃಥಿವೀ ಜ್ಞೇಯಾ ಯಾವದ್ಗರ್ಭಂ ನ ಮುಂಚತಿ ॥ ೫೬ ॥

---

೫೦. ದ್ವಿಜವರ್ಯರಿಗೆ ಸುವರ್ಣ, ರಜತ, ವಸ್ತ್ರಗಳನ್ನು ಭಕ್ತಿಯಿಂದ ದಾನಮಾಡಿದರೆ ದೇವ, ಮನುಷ್ಯ, ಪಿತೃಗಳು ತೃಪ್ತಿಗೊಳ್ಳುವರು.

೫೧. ಚಂದ್ರ ಸೂರ್ಯ ಗ್ರಹಣಕಾಲದಲ್ಲಿ ಅಲ್ಲಿ ಭಕ್ತಿಯಿಂದ ಮಿಂದು ದೇವರನ್ನು ಅರ್ಚಿಸಿ ಜಪ ಹೋಮಗಳನ್ನು ಮಾಡಿ ವೇದಪಾರಂಗತನಾದ ಬ್ರಾಹ್ಮಣನಿಗೆ ಶಕ್ತ್ಯನುಸಾರ ದಾನಮಾಡಬೇಕು.

೫೨-೫೩. ಸತ್ಪಾತ್ರನಲ್ಲಿ ಕುದುರೆ, ರಥ, ಆನೆ, ವಾಹನ, ತುಲಾಪುರುಷ, ಸಪ್ತ ಧಾನ್ಯಗಳಿಂದ ತುಂಬಿದ ಗಾಡಿ, ಕಟ್ಟುಮಣೆಯಿಂದ ಕೂಡಿದ ನೇಗಿಲು, ಯೌವನವುಳ್ಳ ಎತ್ತುಗಳು, ಗೋವು, ಭೂಮಿ, ಎಳ್ಳು, ಚಿನ್ನ ಮೊದಲಾದುವುಗಳನ್ನು ದಾನಮಾಡಬೇಕು.

೫೪-೫೫ ತನ್ನ ಏಳಿಗೆಯನ್ನು ಬಯಸುವ ವಿದ್ವಾಂಸನು ಅಪಾತ್ರನಿಗೆ ಏನನ್ನೂ ಕೊಡಕೂಡದು. ಭೂಮಿಯು ಸಕಲ ಭೂತಗಳನ್ನೂ ಧರಿಸಿರುವುದರಿಂದ ಸಕಲ ಸಸ್ಯಗಳಿಂದ ತುಂಬಿದ ಅದನ್ನು ಬ್ರಾಹ್ಮಣನಿಗೆ ದಾನಮಾಡಬೇಕು. ದೊರೆಯೆ! ಗೋದಾನದಿಂದ ಉಂಟಾಗುವ ಫಲವನ್ನು ಕೇಳು.

೫೬. ಕರುವಿನ ಎರಡು ಕಾಲುಗಳೂ, ಮುಖವೂ ಜನನೇಂದ್ರಿಯದಲ್ಲಿ ಕಾಣುತ್ತಿದ್ದು ಕರುವು ನೆಲದಲ್ಲಿ ಬೀಳುವುದಕ್ಕೆ ಮುಂಚೆ ಗೋವನ್ನು ಭೂಮಿಯೆಂದು ತಿಳಿಯಬೇಕು.

ಯೇನ ಕೇನಾಽಪ್ಯುಪಾಯೇನ ಬ್ರಾಹ್ಮಣೇ ತಾಂ ಸಮರ್ಪಯೇತ್ ।
ಪೃಥ್ವೀ ದತ್ತಾ ಭವೇತ್ತೇನ ಸಶೈಲವನಕಾನನಾ ॥ ೫೭ ॥
ತಾರಯೇನ್ನಿಯುತಂ ದತ್ತಾ ಕುಲಾನಾಮೇಕವಿಂಶತಿಂ ।
ರೌಪ್ಯಖುರೀಂ ಕಾಂಸ್ಯದೋಹಾಂ ಸವಸ್ತ್ರಾಂ ಚ ಪಯಸ್ವಿನೀಂ ॥ ೫೮ ॥
ಯೇ ಪ್ರಯಚ್ಛಂತಿ ಕೃತಿನೋ ಗ್ರಸ್ತೇ ಸೂರ್ಯೇ ನಿಶಾಕರೇ ।
ತೇಷಾಂ ಸಂಖ್ಯಾಂ ನ ಜಾನಾಮಿ ಪುಣ್ಯಸ್ಯಾಽಬ್ದಶತೈರಪಿ ॥ ೫೯ ॥
ಸರ್ವಸ್ಯಾಽಪಿ ಹಿ ದಾನಸ್ಯ ಸಂಖ್ಯಾಽಸ್ತೀಹ ನರಾಧಿಪ ।
ಚಂದ್ರಸೂರ್ಯೋಪರಾಗೇ ಚ ದಾನಸಂಖ್ಯಾ ನ ವಿದ್ಯತೇ ॥ ೬೦ ॥
ಯತ್ರ ಗೌರ್ದೃಶ್ಯತೇ ರಾಜನ್ಸರ್ವತೀರ್ಥಾನಿ ತತ್ರ ಹಿ ।
ತತ್ರ ಪರ್ವ ವಿಜಾನೀಯಾನ್ನಾಽತ್ರ ಕಾರ್ಯಾ ವಿಚಾರಣಾ ॥ ೬೧ ॥
ಪುನಃ ಸ್ಮೃತ್ವಾ ತು ತತ್ತೀರ್ಥಂ ಯಃ ಕುರ್ಯಾದ್ಗಮನಂ ನರಃ ।
ಅಥವಾ ಮ್ರಿಯತೇ ಯೋಽತ್ರ ರುದ್ರಸ್ಯಾಽನುಚರೋ ಭವೇತ್ ॥ ೬೨ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ದಾನಧರ್ಮಪ್ರಶಂಸಾವರ್ಣನಂ" ನಾಮೈಕಪಂಚಾಶತ್ತಮೋಽಧ್ಯಾಯಃ

---

೫೭–೫೯. ಯಾವುದಾದರೊಂದು ಉಪಾಯದಿಂದ ಬ್ರಾಹ್ಮಣನಿಗೆ ಆ ಗೋವನ್ನು ದಾನಮಾಡಬೇಕು. ಅದರಿಂದ ಪರ್ವತಕಾನನಗಳಿಂದ ಕೂಡಿದ ಭೂಮಿಯನ್ನು ದಾನಮಾಡಿದಂತಾಗುವುದು. ಅದು ಇಪ್ಪತ್ತೊಂದು ಕುಲಗಳನ್ನು ಉದ್ಧರಿಸುವುದು. ಚಂದ್ರಸೂರ್ಯರ ಗ್ರಹಣಕಾಲದಲ್ಲಿ ಚಿನ್ನದ ಗೊರಸುಳ್ಳುದೂ, ಕಂಚಿನ ಪಾತ್ರೆಯಿಂದಲೂ, ವಸ್ತ್ರದಿಂದಲೂ ಕೂಡಿರುವುದೂ, ಹಾಲನ್ನು ಕೊಡುವುದೂ ಆದ ಧೇನುವನ್ನು ದಾನಮಾಡಿದ ಪುಣ್ಯವಂತರ ಪುಣ್ಯದ ಸಂಖ್ಯೆಯನ್ನು ನೂರು ವರ್ಷಗಳಿಂದಲೂ ತಿಳಿಯಲಾರೆನು.

೬೦. ಎಲೈ ಅರಸನೆ! ಈ ಲೋಕದಲ್ಲಿ ಸಮಸ್ತ ದಾನಗಳಿಗೂ ಒಂದು ಬೆಲೆಯಿದೆ. ಆದರೆ ಚಂದ್ರ ಸೂರ್ಯ ಗ್ರಹಣಕಾಲದಲ್ಲಿ ಮಾಡಿದ ದಾನಕ್ಕೆ ಬೆಲೆಯಿಲ್ಲ.

೬೧. ಗೋವು ಇರುವ ಸ್ಥಳದಲ್ಲಿ ಸಮಸ್ತ ತೀರ್ಥಗಳೂ ಇರುವುವು. ಆಗಲೆ ಪರ್ವಕಾಲವೆಂದರಿಯಬೇಕು. ಈ ವಿಷಯದಲ್ಲಿ ವಿಚಾರಮಾಡಕೂಡದು.

೬೨ ಈ ತೀರ್ಥವನ್ನು ಸ್ಮರಿಸಿ ಪ್ರಯಾಣಮಾಡಿದರೆ ಅಥವಾ ಅಲ್ಲಿ ಮಡಿದರೆ ಮಾನವನು ರುದ್ರನ ಸೇವಕನಾಗುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ದಾನಧರ್ಮಪ್ರಶಂಸಾವರ್ಣನ" ವೆಂಬ ಐವತ್ತೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ದ್ವಿಪಂಚಾಶತ್ತಮೋಽಧ್ಯಾಯಃ

## ದೀರ್ಘತಪೋಮುನ್ಯಾಖ್ಯಾನವರ್ಣನಂ

ಈಶ್ವರ ಉವಾಚ :—

ಅನ್ಯದಾಖ್ಯಾನಕಂ ವಕ್ಷ್ಯೇ ಪುರಾವೃತ್ತಂ ನರಾಧಿಪ ।
ಸಕುಟುಂಬೋ ಗತಃ ಸ್ವರ್ಗಂ ಮುನಿರ್ಯತ್ರ ಮಹಾತಪಾಃ ॥ ೧ ॥

ಉತ್ತಾನಪಾದ ಉವಾಚ :—

ಕಥಂ ನಾಕಂ ಗತೋ ವಿಪ್ರಃ ಸಕುಟುಂಬೋ ಮಹಾನೃಷಿಃ ।
ಕೌತುಕಂ ಪರಮಂ ದೇವ ಕಥಯಸ್ವ ಮಮ ಪ್ರಭೋ ॥ ೨ ॥

ಈಶ್ವರ ಉವಾಚ :—

ಚಿತ್ರಸೇನ ಇತಿ ಖ್ಯಾತಃ ಕಾಶಿರಾಜಃ ಪುರಾಽಭವತ್ ।
ಶೂರೋ ದಾತಾ ಸುಧರ್ಮಾತ್ಮಾ ಸರ್ವಕಾಮಸಮೃದ್ಧಿಮಾನ್ ॥ ೩ ॥
ಸಾ ಪುರೀ ಜನಸಂಕೀರ್ಣಾ ನಾನಾರತ್ನೋಪಶೋಭಿತಾ ।
ವಾರಾಣಸೀತಿ ವಿಖ್ಯಾತಾ ಗಂಗಾತೀರಮುಪಾಶ್ರಿತಾ ॥ ೪ ॥
ಶರಚ್ಚಂದ್ರಪ್ರತೀಕಾಶಾ ವಿದ್ವಜ್ಜನವಿಭೂಷಿತಾ ।
ಇಂದ್ರಯಷ್ಟಿಸಮಾಕೀರ್ಣಾ ಗೋಪಗೋಕುಲಸಂವೃತಾ ॥ ೫ ॥

---

### ಕನ್ನಡದ ಅನುವಾದ

#### ದೀರ್ಘತಪೋಮುನ್ಯುಪಾಖ್ಯಾನವರ್ಣನ

೧. ಈಶ್ವರನು ಹೇಳುತ್ತಾನೆ —ಅರಸನೆ! ಹಿಂದೆ ನಡೆದ ಮತ್ತೊಂದು ಕಥೆಯನ್ನು ಹೇಳುವೆನು. ಇಲ್ಲಿ ಮಹಾತಪಸ್ವಿಯಾದ ಮುನಿಯು ಕುಟುಂಬ ಸಹಿತನಾಗಿ ಸ್ವರ್ಗಕ್ಕೆ ಹೋಗಿರುವನು.

೨. ಉತ್ತಾನಪಾದನು ಹೇಳುತ್ತಾನೆ —ಸ್ವಾಮಿಯೆ! ಆ ಮುನಿಯು ಕುಟುಂಬ ಸಹಿತನಾಗಿ ಹೇಗೆ ಸ್ವರ್ಗಕ್ಕೆ ಹೋದನು? ನನಗೆ ಅತ್ಯಂತ ಕುತೂಹಲ ವುಂಟಾಗಿದೆ. ಅದನ್ನು ಹೇಳು.

೩. ಈಶ್ವರನು ಹೇಳುತ್ತಾನೆ.—ಹಿಂದೆ ಶೂರನೂ, ದಾನಶೀಲನೂ, ಧರ್ಮಾತ್ಮನೂ, ಸಕಲೇಷ್ಟಾರ್ಥಸಮೃದ್ಧನೂ ಆದ ಚಿತ್ರಸೇನನೆಂಬ ಕಾಶಿರಾಜನಿದ್ದನು.

೪–೯. ಜನರಿಂದ ತುಂಬಿರುವುದೂ, ರತ್ನಗಳಿಂದ ವಿರಾಜಿಸುವುದೂ, ಗಂಗೆಯ ದಡದಲ್ಲಿರುವುದೂ, ಶರತ್ಕಾಲದ ಚಂದ್ರನಂತಿರುವುದೂ, ವಿದ್ವಾಂಸರಿಂದ ಅಲಂಕಾರಗೊಂಡುದೂ, ಇಂದ್ರಧ್ವಜಗಳಿಂದ ತುಂಬಿರುವುದೂ, ಗೊಲ್ಲ

ಬಹುಧ್ವಜಸಮಾಕೀರ್ಣಾ ವೇದಧ್ವನಿನಿನಾದಿತಾ ।
ವಣಿಗ್ಜನೈರ್ಬಹುವಿಧೈಃ ಕ್ರಯವಿಕ್ರಯಶಾಲಿನೀ ॥ ೬ ॥
ಯಂತ್ರಾಽಽದಾನೈಃ ಪ್ರತೋಲೀಭಿರುಚ್ಚೈಶ್ಚಾನ್ಯೈಃ ಸುಶೋಭಿತಾ ।
ದೇವತಾಯತನೈರ್ದಿವ್ಯೈರಾಶ್ರಮೈರ್ಗಹನೈರ್ಯುತಾ ॥ ೭ ॥
ನಾನಾಪುಷ್ಪಫಲೈ ರಮ್ಯಾ ಕದಲೀಖಂಡಮಂಡಿತಾ ।
ಪನಸೈರ್ಬಕುಲೈಸ್ತಾಲೈರಶೋಕೈರಾಮ್ರಕೈಸ್ತಥಾ ॥ ೮ ॥
ರಾಜವೃಕ್ಷಕಪಿತ್ಥೈಶ್ಚ ದಾಡಿಮೈರುಪಶೋಭಿತಾ ।
ವೇದಾಽಧ್ಯಯನನಿರ್ಘೋಷೈಃ ಪವಿತ್ರೀಕೃತಮಂಗಲಾ ॥ ೯ ॥
ತಸ್ಯಾ ಉತ್ತರದಿಗ್ಭಾಗೇ ಆಶ್ರಮೋಽಭೂತ್ಸುಶೋಭನಃ ।
ತನ್ಮಂದರಾವನಂ ನಾಮ ತ್ರಿಷು ಲೋಕೇಷು ವಿಶ್ರುತಂ ॥ ೧೦ ॥
ಬಹುಮಂದಾರಸಂಯುಕ್ತಂ ತೇನ ಮಂದಾರಕಂ ವಿದುಃ ।
ವಿಪ್ರೋ ದೀರ್ಘತಪಾ ನಾಮ ಸರ್ವದಾ ತತ್ರ ತಿಷ್ಠತಿ ॥ ೧೧ ॥
ತಪಸ್ತಪತಿ ಸೋಽತ್ಯರ್ಥಂ ತೇನ ದೀರ್ಘತಪಾಃ ಸ್ಮೃತಃ ।
ಸ ತಿಷ್ಠತಿ ಸಪತ್ನೀಕಃ ಸಸುತಃ ಸಸ್ನುಷಸ್ತಥಾ ॥ ೧೨ ॥

---

ರಿಂದಲೂ, ಗೋವುಗಳ ಸಮೂಹಗಳಿಂದಲೂ ನಿಬಿಡವಾದುದೂ, ಅನೇಕ ಧ್ವಜಗಳುಳ್ಳದೂ, ವೇದಘೋಷವುಳ್ಳದೂ, ಬಹು ವಿಧ ವರ್ತಕರ ಕ್ರಯ ವಿಕ್ರಯಗಳಿಂದ ಶೋಭಿಸುವುದೂ, ಯಂತ್ರಗಳಿಂದಲೂ, ರಸ್ತೆಗಳಿಂದಲೂ ವಿರಾಜಿಸುವುದೂ, ದೇವಾಲಯ, ದಿವ್ಯಾಶ್ರಮ, ವನಗಳಿಂದ ಕೂಡಿರುವುದೂ, ಬಹು ವಿಧ ಪುಷ್ಪಫಲಗಳಿಂದ ರಮ್ಯವಾದುದೂ, ಬಾಳೆಯ ಸಮೂಹಗಳಿಂದ ಅಲಂಕಾರಗೊಂಡುದೂ, ಹಲಸು, ಬಕುಲ, ತಾಳೆ, ಅಶೋಕ, ಮಾವು, ರಾಜ ವೃಕ್ಷ, ಬೇಲ, ದಾಳಿಂಬ ವೃಕ್ಷಗಳಿಂದ ವಿರಾಜಿಸುವುದೂ, ವೇದಾಧ್ಯಯನ ಧ್ವನಿಗಳಿಂದ ಪವಿತ್ರಗೊಂಡುದೂ ಆದ ಆ ಕಾಶೀಪಟ್ಟಣವು ವಾರಾಣಸಿಯೆಂದು ಪ್ರಸಿದ್ಧವಾಯಿತು.

೧೦. ಆ ವಾರಾಣಸಿಯ ಉತ್ತರ ದಿಕ್ಕಿನಲ್ಲಿ ಮೂರು ಲೋಕಗಳಲ್ಲಿ ಪ್ರಸಿದ್ಧವಾದ ಮಂದಾರವನವೆಂಬ ಮಂಗಳಕರವಾದ ಆಶ್ರಮವಿದ್ದಿತು.

೧೧. ಅನೇಕ ಮಂದಾರ ವೃಕ್ಷಗಳಿರುವುದರಿಂದ ಅದನ್ನು ಮಂದಾರಕವೆಂದು ತಿಳಿದಿರುವರು. ಅಲ್ಲಿ ದೀರ್ಘತಪನೆಂಬ ಬ್ರಾಹ್ಮಣನು ಯಾವಾಗಲೂ ನೆಲಸಿರುವನು.

೧೨. ಅವನು ಅತಿಯಾಗಿ ತಪಸ್ಸನ್ನು ಮಾಡುತ್ತಿದ್ದುದರಿಂದ ದೀರ್ಘತಪನೆಂದು ಕರೆಯಲ್ಪಡುತ್ತಿದ್ದನು. ಆವನು ಅಲ್ಲಿ ಪತ್ನೀ, ಪುತ್ರ, ಸೊಸೆಯರೊಡನೆ ವಾಸಮಾಡುತ್ತಿದ್ದನು.

ಶುಶ್ರೂಷಂತಿ ಸದಾ ತಸ್ಯ ಪುತ್ರಾಃ ಪಂಚ ಪ್ರಯತ್ನತಃ ।
ತಸ್ಯ ಪುತ್ರಃ ಕನೀಯಾಂಸ್ತು ಋಕ್ಷಶೃಂಗೋ ಮಹಾತಪಾಃ ॥ ೧೩ ॥
ವೇದಾಽಧ್ಯಯನಸಂಪನ್ನೋ ಬ್ರಹ್ಮಚಾರೀ ಗುಣಾನ್ವಿತಃ ।
ಯೋಗಾಭ್ಯಾಸರತೋ ನಿತ್ಯಂ ಕಂದಮೂಲಫಲಾಽಶನಃ ॥ ೧೪ ॥
ತಿಷ್ಠತೇ ಮೃಗರೂಪೇಣ ಮೃಗಯೂಥಚರಸ್ತದಾ ।
ದಿನಾಂತೇ ಚ ದಿನಾಂತೇ ಚ ಮಾತಾಪಿತ್ರೋಃ ಸಮೀಪಗಃ ॥ ೧೫ ॥
ಅಭಿವಾದಯತೇ ನಿತ್ಯಂ ಭಕ್ತಿಮಾನ್ಮುನಿಪುತ್ರಕಃ ।
ಪುನರ್ಗಚ್ಛತಿ ತತ್ರೈವ ಕಾನನೇ ಗಿರಿಗಹ್ವರೇ ॥ ೧೬ ॥
ಕ್ರೀಡನ್ಬಾಲಮೃಗೈಃ ಸಾರ್ಧಂ ಪ್ರತ್ಯಹಂ ಸ ಮುನೇಃ ಸುತಃ ।
ಕದಾಚಿದ್ದೈವಯೋಗೇನ ಋಕ್ಷಶೃಂಗೋ ಮಮಾರ ಸಃ ॥ ೧೭ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
" ದೀರ್ಘತಪೋಮುನ್ಯಾಖ್ಯಾನವರ್ಣನಂ " ನಾಮ
ದ್ವಿಪಂಚಾಶತ್ತಮೋಽಧ್ಯಾಯಃ

---

೧೩–೧೪. ಅವನನ್ನು ಐದು ಮಂದಿ ಪುತ್ರರು ಯಾವಾಗಲೂ ಸೇವಿಸುತ್ತಿದ್ದರು. ಮಹಾ ತಪಸ್ವಿಯೂ, ವೇದಾಧ್ಯಯನಸಂಪನ್ನನೂ, ಬ್ರಹ್ಮಚಾರಿಯೂ, ಗುಣವಂತನೂ, ಯಾವಾಗಲೂ ಯೋಗಾಭ್ಯಾಸನಿರತನೂ, ಕಂದ, ಮೂಲ, ಫಲಗಳನ್ನು ತಿನ್ನುವವನೂ ಆದ ಋಕ್ಷಶೃಂಗನೆಂಬವನು ಅವನಿಗೆ ಚಿಕ್ಕ ಮಗನಾಗಿದ್ದನು.

೧೫. ಅವನು ಮೃಗರೂಪದಿಂದ ಮೃಗಗಳ ಹಿಂಡಿನಲ್ಲಿ ಸಂಚರಿಸುತ್ತ ಪ್ರತಿದಿನ ಸಾಯಂಕಾಲ ತಾಯಿತಂದೆಗಳ ಹತ್ತಿರಕ್ಕೆ ಬಂದು ಭಕ್ತಿಯಿಂದ ವಂದಿಸಿ ಮರಳಿ ಕಾಡಿಗೂ ಬೆಟ್ಟದ ಗುಹೆಗೂ ಹೋಗುತ್ತಿದ್ದನು.

೧೬. ಮುನಿಸುತನಾದ ಆ ಋಕ್ಷಶೃಂಗನು ಪ್ರತಿದಿನವೂ ಮೃಗಗಳೊಡನೆ ಆಡುತ್ತ ಒಂದಾನೊಂದು ದಿನ ಮಡಿದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
" ದೀರ್ಘತಪೋಮುನ್ಯುಪಾಖ್ಯಾನವರ್ಣನ "ವೆಂಬ
ಐವತ್ತೆರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ತ್ರಿಪಂಚಾಶತ್ತಮೋಽಧ್ಯಾಯಃ

## ಋಕ್ಷಶೃಂಗಸ್ವರ್ಗಗಮನವರ್ಣನಂ

ಉತ್ತಾನಪಾದ ಉವಾಚ :—

ಆಶ್ರಮೇ ವಸತಸ್ತಸ್ಯ ಸ ದೀರ್ಘತಪಸೋ ಮುನೇಃ ।
ಕನೀಯಾಂಸ್ತನಯೋ ದೇವ ಕಥಂ ಮೃತ್ಯುಮುಪಾಗತಃ ॥ ೧ ॥

ಈಶ್ವರ ಉವಾಚ :—

ಶೃಣುಷ್ವೈಕಮನಾ ಭೂತ್ವಾ ಕಥಾಂ ದಿವ್ಯಾಂ ಮಹೀಪತೇ ।
ಶ್ರವಣಾದೇವ ಯಾಸ್ಯಾಸ್ತು ಮುಚ್ಯತೇ ಸರ್ವಕಿಲ್ಬಿಷೈಃ ॥ ೨ ॥
ಕಾಶೀರಾಜೋ ಮಹಾವೀರ್ಯೋ ಮಹಾಬಲಪರಾಕ್ರಮಃ ।
ಚಿತ್ರಸೇನ ಇತಿ ಖ್ಯಾತೋ ಧರಣ್ಯಾಂ ಸ ನರಾಧಿಪ ॥ ೩ ॥
ತಸ್ಯ ರಾಜ್ಯೇ ಸದಾ ಧರ್ಮೋ ನಾಽಧರ್ಮೋ ವಿದ್ಯತೇ ಕ್ವಚಿತ್ ।
ವೇದಧರ್ಮರತೋ ನಿತ್ಯಂ ಪ್ರಜಾ ಧರ್ಮೇಣ ಪಾಲಯನ್ ॥ ೪ ॥
ಸ್ವಧರ್ಮನಿರತಶ್ಚೈವ ಯುದ್ಧಾತಿಥ್ಯಪ್ರಿಯಃ ಸದಾ ।
ಕ್ಷತ್ರಧರ್ಮಂ ಸಮಾಶ್ರಿತ್ಯ ಭೋಗಾನ್ ಭುಂಕ್ತೇ ಸ ಕಾಮತಃ ॥ ೫ ॥

---

## ಕನ್ನಡದ ಅನುವಾದ

### ಋಕ್ಷಶೃಂಗಸ್ವರ್ಗಗಮನವರ್ಣನ

೧. ಉತ್ತಾನಪಾದನು ಕೇಳುತ್ತಾನೆ :—ಸ್ವಾಮಿಯೆ! ಆಶ್ರಮದಲ್ಲಿ ವಾಸಿಸುತ್ತಿದ್ದ ಆ ದೀರ್ಘತಪೋಮುನಿಯ ಚಿಕ್ಕ ಮಗನು ಹೇಗೆ ಮಡಿದನು?

೨. ಈಶ್ವರನು ಹೇಳುತ್ತಾನೆ :—ದೊರೆಯೆ! ಏಕಮನಸ್ಸಿನಿಂದ ಈ ದಿವ್ಯ ಕಥೆಯನ್ನು ಕೇಳು. ಇದನ್ನು ಕೇಳುವುದರಿಂದಲೇ ನರನು ಸಕಲ ಪಾಪಗಳಿಂದ ಮುಕ್ತನಾಗುವನು.

೩. ಅತ್ಯಂತ ಪರಾಕ್ರಮಿಯೂ, ವೀರನೂ ಆದ ಕಾಶಿರಾಜನು ಧರೆಯಲ್ಲಿ ಚಿತ್ರಸೇನನೆಂದು ಪ್ರಸಿದ್ಧನಾಗಿದ್ದನು.

೪–೫. ಅವನ ರಾಜ್ಯದಲ್ಲಿ ಯಾವಾಗಲೂ ಧರ್ಮವು ನೆಲೆಸಿದ್ದಿತು. ಅಧರ್ಮವು ಎಲ್ಲಿಯೂ ಇರಲಿಲ್ಲ. ಅವನು ಯಾವಾಗಲೂ ವೇದಧರ್ಮಾಸಕ್ತನೂ, ಪ್ರಜೆಗಳನ್ನು ಧರ್ಮದಿಂದ ಪೊರೆಯುವವನೂ, ಸ್ವಧರ್ಮನಿರತನೂ, ಯುದ್ಧ ಮತ್ತು ಅಥಿತಿಸತ್ಕಾರಗಳಲ್ಲಿ ಪ್ರೀತಿಯುಳ್ಳವನೂ ಆಗಿ ಕ್ಷತ್ರಿಯಧರ್ಮವನ್ನಾಶ್ರಯಿಸಿ ಸ್ವೇಚ್ಛೆಯಾಗಿ ಭೋಗಗಳನ್ನು ಅನುಭವಿಸುತ್ತಿದ್ದನು.

**ಕೋಶಸ್ಯಾಂತೋ ನ ವಿದ್ಯೇತ ಹಸ್ತ್ಯಶ್ವರಥಪತ್ತಿಮಾನ್ ।**
**ಇತಿಹಾಸಪುರಾಣಜ್ಞೈಃ ಪಂಡಿತೈಃ ಸಹ ಸಂಕಥಾಂ ॥ ೬ ॥**
**ಕಥಯನ್ರಾಜತೇ ರಾಜಾ ಕೈಲಾಸ ಇವ ಶಂಕರಃ ।**
**ಏವಂ ಸ ಪಾಲಯನ್ರಾಜ್ಯಂ ರಾಜಾ ಮಂತ್ರಿಣಮಬ್ರವೀತ್ ॥ ೭ ॥**
**ಮೃಗಯಾಯಾಂ ಗಮಿಷ್ಯಾಮಿ ತಿಷ್ಠ ತ್ವಂ ರಾಜ್ಯಪಾಲನೇ ।**
**ಗಮ್ಯತಾಂ ಸಚಿವೈಃ ಪ್ರೋಕ್ತೇ ಗತೋಽಸೌ ವಸುಧಾಧಿಪಃ ॥ ೮ ॥**
**ಅಶ್ವಾರೂಢಾಶ್ಚ ಧಾವಂತೋ ರಾಜಾನೋ ಮಂಡಲಾಧಿಪಾಃ ।**
**ಛತ್ರೈಶ್ಛತ್ರಾಣಿ ಘೃಷ್ಯಂತೋಽನುಜಗ್ಮುಃ ಕಾನನಂ ಪ್ರತಿ ॥ ೯ ॥**
**ರಜಸ್ತತ್ರೋತ್ಥಿತಂ ಭೌಮಂ ಗಜವಾಜಿಪದಾಹತಂ ।**
**ತೇನೈತಚ್ಛಾದಿತಂ ಸರ್ವಂ ಸದಿಙ್ಮಾರ್ತಂಡಮಂಡಲಂ ॥ ೧೦ ॥**
**ನ ತತ್ರ ದೃಶ್ಯತೇ ಸೂರ್ಯೋ ನ ಕಾಷ್ಠಾ ನ ಚ ಚಂದ್ರಮಾಃ ।**
**ಪಾದಪಾಶ್ಚ ನ ದೃಶ್ಯಂತೇ ಗಿರಿಶೃಂಗಾಣಿ ಸರ್ವತಃ ॥ ೧೧ ॥**
**ಪರಸ್ಪರಂ ನ ಪಶ್ಯಂತಿ ನಿಶಾರ್ಧೇ ವಾರ್ಷಿಕೇ ಯಥಾ ।**
**ತತ್ರಾಽಸೌ ಸುಮಹದ್ಯೂಥಂ ಮೃಗಾಣಾಂ ಸಮಲಕ್ಷ್ಯತ ॥ ೧೨ ॥**
**ಅಥಾವತ್ಸಹಿತಃ ಸರ್ವೈಃ ಸ ರಾಜಾ ರಾಜಪುತ್ರಕೈಃ ।**
**ವೃಂದಾಸ್ಫೋಟೋಽಭವತ್ತೇಷಾಂ ಶೀಘ್ರಂ ಜಗ್ಮುರ್ದಿಶೋ ದಶ ॥ ೧೩ ॥**

---

೬–೮. ಅವನ ಬೊಕ್ಕಸವು ಬರಿದಾಗುತ್ತಿರಲಿಲ್ಲ. ಆನೆ, ಕುದುರೆ, ರಥ, ಕಾಲಾಳುಗಳುಳ್ಳ ಅವನು ಇತಿಹಾಸ ಪುರಾಣಗಳನ್ನರಿತ ಪಂಡಿತರೊಡನೆ ಸಂಭಾಷಣಮಾಡುತ್ತ ಕೈಲಾಸದಲ್ಲಿ ಶಂಕರನಂತೆ ವಿರಾಜಿಸುತ್ತಿದ್ದನು. ಹೀಗೆ ಆ ರಾಜನು ರಾಜ್ಯವನ್ನಾಳುತ್ತ ಒಮ್ಮೆ ಮಂತ್ರಿಯನ್ನು ಕುರಿತು "ನಾನು ಬೇಟೆಗೆ ಹೋಗುವೆನು. ನೀನು ರಾಜ್ಯವನ್ನು ಪಾಲನೆಮಾಡು" ಎಂದನು. ಆ ಮಂತ್ರಿಯು ಬೇಟೆಗೆ ಹೋಗು ಎನ್ನಲು ದೊರೆಯು ಹೊರಟನು.

೯. ಸಾಮಂತರಾಜರು ಅಶ್ವಗಳನ್ನೇರಿ ಧಾವಿಸುತ್ತ ಛತ್ರಗಳಿಂದ ಛತ್ರಗಳನ್ನು ಘರ್ಷಿಸುತ್ತ ಕಾಡಿಗೆ ಹೋಗುತ್ತಿರುವ ರಾಜನನ್ನು ಹಿಂಬಾಲಿಸಿದರು.

೧೦. ಆನೆ ಕುದುರೆ ಕಾಲಾಳುಗಳ ತುಳಿತದಿಂದುಂಟಾದ ಭೂಮಿಯ ಧೂಳಿಯಿಂದ ದಿಕ್ಕುಗಳೂ, ಸೂರ್ಯಮಂಡಲವೂ ಮುಸುಕಿದುವು.

೧೧–೧೩. ಅಲ್ಲಿ ಸೂರ್ಯಚಂದ್ರರೂ, ದಿಕ್ಕುಗಳೂ, ಮರಗಳೂ, ಪರ್ವತಶಿಖರಗಳೂ ಎಲ್ಲಿಯೂ ಕಾಣುತ್ತಿರಲಿಲ್ಲ. ಮಳೆಗಾಲದ ಅರ್ಧರಾತ್ರಿಯಂತೆ ಪದಾರ್ಥಗಳಾವುವೂ ಪರಸ್ಪರ ಕಾಣುತ್ತಿರಲಿಲ್ಲ. ಅಲ್ಲಿ ಈ ಚಿತ್ರಸೇನನು ದೊಡ್ಡ ಮೃಗಗಳ ಹಿಂಡೊಂದನ್ನು ಕಂಡನು. ಅವನು ರಾಜಪುತ್ರರೊಡನೆ ಅಲ್ಲಿಗೆ ಓಡಿದನು. ಅವು ಗುಂಪು ಚದರಿ ಹತ್ತು ದಿಕ್ಕುಗಳಿಗೂ ಬೇಗನೆ ಓಡಿದುವು.

ಏಕಮಾರ್ಗಗತೋ ರಾಜಾ ಚಿತ್ರಸೇನೋ ಮಹೀಪತಿಃ ।
ಏಕಾಕೀ ಸ ಗತಸ್ತತ್ರ ಯತ್ರ ಯತ್ರ ಚ ತೇ ಮೃಗಾಃ ॥ ೧೪ ॥
ಪ್ರವಿಷ್ಟೋಽಸೌ ತತೋ ದುರ್ಗಂ ಕಾನನಂ ಗಿರಿಗಹ್ವರಂ ।
ವಲ್ಲೀಗುಲ್ಮಸಮಾಕೀರ್ಣಂ ಸ್ಥಿತೋ ಯತ್ರ ನ ಲಕ್ಷ್ಯತೇ ॥ ೧೫ ॥
ಅದೃಶ್ಯಾಂಶ್ಚ ಮೃಗಾನ್ಮತ್ವಾ ದಿಶೋ ರಾಜಾ ವ್ಯಲೋಕಯತ್ ।
ಕಾಂ ದಿಶಂ ನು ಗಮಿಷ್ಯಾಮಿ ಕ್ವ ಮೇ ಸೈನ್ಯಸಮಾಗಮಃ ॥ ೧೬ ॥
ಏವಂ ಕಷ್ಟಂ ಗತೋ ರಾಜಾ ಚಿತ್ರಸೇನೋ ನರಾಧಿಪಃ ।
ವೃಕ್ಷಚ್ಛಾಯಾಂ ಸಮಾಶ್ರಿತ್ಯ ವಿಶ್ರಾಮಮಕರೋನ್ನೃಪಃ ॥ ೧೭ ॥
ಕ್ಷುತ್ತೃಷಾರ್ತೋ ಭ್ರಮನ್ದುರ್ಗೇ ಕಾನನೇ ಗಿರಿಗಹ್ವರೇ ।
ತತೋಽಪಶ್ಯತ್ಸರೋ ದಿವ್ಯಂ ಪದ್ಮಿನೀಖಂಡಮಂಡಿತಂ ॥ ೧೮ ॥
ಹಂಸಕಾರಂಡವಾಕೀರ್ಣಂ ಚಕ್ರವಾಕೋಪಶೋಭಿತಂ ।
ತತೋ ದೃಷ್ಟ್ವಾ ಸ ರಾಜೇಂದ್ರಃ ಸಂಪ್ರಹೃಷ್ಟತನೂರಹಃ ॥ ೧೯ ॥
ಕಮಲಾನಿ ಗೃಹೀತ್ವಾ ತು ತತಃ ಸ್ನಾನಂ ಸಮಾಚರತ್ ।
ತರ್ಪಯಿತ್ವಾ ಪಿತೄನ್ದೇವಾನ್ಮನುಷ್ಯಾಂಶ್ಚ ಯಥಾವಿಧಿ ॥ ೨೦ ॥
ಆಚ್ಛಾದ್ಯ ಶತಪತ್ರೈಶ್ಚ ಪೂಜಯಾಮಾಸ ಶಂಕರಂ ।
ಯಯೌ ಪಾನೀಯಮಮಲಂ ಯಥಾವತ್ಸಮಾಹಿತಃ ॥ ೨೧ ॥

---

೧೪–೧೫. ಈ ಚಿತ್ರಸೇನರಾಜನು ಒಬ್ಬಂಟಿಗನಾಗಿ ಒಂದು ಮಾರ್ಗವನ್ನು ಹಿಡಿದು ಮೃಗಗಳಿರುವ ಸ್ಥಳಕ್ಕೆ ಹೋದನು. ಅವನು ಲತೆ, ಪೊದೆಗಳಿಂದ ತುಂಬಿರುವ ದುರ್ಗಮವಾದ ಕಾಡನ್ನು ಪ್ರವೇಶಿಸಿ ಯಾರಿಗೂ ಕಾಣಿಸುತ್ತಿರಲಿಲ್ಲ.

೧೬. ರಾಜನು ಮೃಗಗಳು ಅಡಗಿಕೊಂಡಿರುವುವು ಎಂದು ತಿಳಿದು "ಈಗ ಯಾವ ದಿಕ್ಕಿಗೆ ಹೋಗಲಿ? ನನಗೆ ಸೈನ್ಯಸಮಾಗಮವು ಎಲ್ಲಿ ಆಗುವುದು?" ಎಂದು ಎಲ್ಲ ದಿಕ್ಕುಗಳನ್ನೂ ನೋಡಿದನು.

೧೭. ಹೀಗೆ ಕಷ್ಟಕ್ಕೆ ಸಿಕ್ಕಿದ ಆ ಚಿತ್ರಸೇನರಾಜನು ಮರದ ನೆರಳಿನಲ್ಲಿ ವಿಶ್ರಾಂತಿಯನ್ನು ಹೊಂದಿದನು.

೧೮. ಅನಂತರ ಹಸಿವು ಬಾಯಾರಿಕೆಗಳಿಂದ ಪೀಡಿತನಾಗಿ ದುರ್ಗಮವಾದ ಕಾಡಿನಲ್ಲಿ ಸಂಚರಿಸುತ್ತ ಕಮಲಗಳ ಸಮೂಹಗಳಿಂದ ಅಲಂಕಾರಗೊಂಡ ದಿವ್ಯವಾದ ಒಂದು ಸರೋವರವನ್ನು ಕಂಡನು.

೧೯–೨೧. ಹಂಸ, ಕಾರಂಡವ, ಚಕ್ರವಾಕ ಪಕ್ಷಿಗಳಿಂದ ಶೋಭಾಯಮಾನವಾದ ಆ ಸರಸ್ಸನ್ನು ನೋಡಿ ಮೊರೆಯು ರೋಮಾಂಚಗೊಂಡ ಶರೀರವುಳ್ಳವನಾಗಿ ಕಮಲಗಳನ್ನು ತೆಗೆದುಕೊಂಡು ಮಿಂದು ಪಿತೃ, ದೇವ, ಮನುಷ್ಯರಿಗೆ ವಿಧಿಯಂತೆ ತರ್ಪಣಮಾಡಿ ಶಂಕರನನ್ನು ತಾವರೆ ಹೂವುಗಳಿಂದ ಪೂಜಿಸಿದನು. ಸಾವಧಾನ ಮನಸ್ಸಿನಿಂದ ನೀರನ್ನು ಕುಡಿದನು.

ಉತ್ತೀರ್ಯ ಸಲಿಲಾತ್ತೀರೇ ದೃಷ್ಟ್ವಾ ವೃಕ್ಷಂ ಸಮೀಪಗಂ ।
ಉತ್ತರೀಯಮಧಃ ಕೃತ್ವೋಪವಿಷ್ಟೋ ಧರಣೀತಲೇ ॥ ೨೨ ॥
ಚಿಂತಯನ್ನುಪವಿಷ್ಟೋಽಸೌ ಕಿಮದ್ಯ ಪ್ರಕರೋಮ್ಯಹಂ ।
ತತ್ರಾಽಽಸೀನೋ ದದರ್ಶಾಽಥ ವನೋದ್ದೇಶೇ ಮೃಗಾನ್ಬಹೂನ್ ॥ ೨೩ ॥
ಕೇಚಿತ್ಪೂರ್ವಮುಖಾಸ್ತತ್ರ ಚಾಽಪರೇ ದಕ್ಷಿಣಾಮುಖಾಃ ।
ವಾರುಣ್ಯಾಭಿಮುಖಾಃ ಕೇಚಿತ್ಕೇಚಿತ್ಕೌಬೇರದಿಙ್ಮುಖಾಃ ॥ ೨೪ ॥
ಕೇಚಿನ್ನಿದ್ರಾಪರಾಃ ಕೇಚಿದೂರ್ಧ್ವಕರ್ಣಾಃ ಸ್ಥಿತಾಃ ಪರೇ ।
ಮೃಗಮಧ್ಯೇ ಸ್ಥಿತೋ ಯೋಗೀ ಋಕ್ಷಶೃಂಗೋ ಮಹಾತಪಾಃ ॥ ೨೫ ॥
ಮೃಗಾನ್ದೃಷ್ಟ್ವಾ ತತೋ ರಾಜಾ ಆಹಾರಾರ್ಥಮಚಿಂತಯತ್ ।
ಹತ್ವೈತೇಷು ಮೃಗಂ ಕಂಚಿದ್ಭಕ್ಷಯಾಮಿ ಯದೃಚ್ಛಯಾ ॥ ೨೬ ॥
ಸ್ವಸ್ಥಾವಸ್ಥೋ ಭವಿಷ್ಯಾಮಿ ಮೃಗಮಾಂಸಸ್ಯ ಭಕ್ಷಣಾತ್ ।
ಕಾಶೀಂ ಪ್ರತಿ ಗಮಿಷ್ಯಾಮಿ ಮಾರ್ಗಮನ್ವಿಷ್ಯ ಯತ್ನತಃ ॥ ೨೭ ॥
ವಿಚಿಂತ್ಯೈವಂ ತತೋ ರಾಜಾ ವೃಕ್ಷಮೂಲಮುಪಾಶ್ರಿತಃ ।
ಚಾಪಂ ಗೃಹ್ಯ ಕರಾಗ್ರೇಣ ಸ ಶರಂ ಸಂದಧೇ ತತಃ ॥ ೨೮ ॥

---

೨೨. ನೀರಿನಿಂದ ಮೇಲಕ್ಕೆದ್ದು ದಡದಲ್ಲಿ ಹತ್ತಿರವಿರುವ ಮರವನ್ನು ನೋಡಿ ಉತ್ತರೀಯವನ್ನು ನೆಲದಲ್ಲಿ ಹಾಸಿ ಅದರಲ್ಲಿ ಕುಳಿತನು.

೨೩. ಅವನು "ಈಗ ನಾನು ಏನನ್ನು ಮಾಡಲಿ?" ಎಂದು ಚಿಂತಿಸುತ್ತಲೇ ಆ ವನದಲ್ಲಿ ಅನೇಕ ಮೃಗಗಳನ್ನು ಕಂಡನು.

೨೪–೨೫. ಆ ಮೃಗಗಳಲ್ಲಿ ಕೆಲವು ಪೂರ್ವಮುಖವಾಗಿಯೂ, ಕೆಲವು ದಕ್ಷಿಣಮುಖವಾಗಿಯೂ, ಕೆಲವು ಪಶ್ಚಿಮಮುಖವಾಗಿಯೂ, ಇನ್ನು ಕೆಲವು ಉತ್ತರಮುಖವಾಗಿಯೂ, ಕೆಲವು ನಿದ್ರಿಸುವುವೂ, ಕೆಲವು ಮೇಲ್ಮುಖವಾದ ಕಿವಿಯುಳ್ಳವೂ ಆಗಿದ್ದುವು. ಯೋಗಿಯಾದ ಋಕ್ಷಶೃಂಗನು ಆ ಮೃಗಗಳ ನಡುವೆ ನಿಂತಿದ್ದನು.

೨೬. ರಾಜನು ಮೃಗಗಳನ್ನು ಕಂಡು ಯೋಚಿಸಿದನು. "ಆಹಾರಕ್ಕಾಗಿ ಇವುಗಳಲ್ಲಿ ಒಂದು ಮೃಗವನ್ನು ಕೊಂದು ತಿನ್ನುವೆನು.

೨೭. ಈ ಮೃಗಮಾಂಸದ ಭಕ್ಷಣದಿಂದ ಸ್ವಸ್ಥನಾಗಿ, ಪ್ರಯತ್ನದಿಂದ ಮಾರ್ಗವನ್ನು ಹುಡುಕಿ ಕಾಶಿಗೆ ತೆರಳುವೆನು" ಎಂದು ಆಲೋಚಿಸಿದನು.

೨೮. ಅವನು ಹೀಗೆ ಚಿಂತಿಸಿ ಮರದ ಬುಡಕ್ಕೆ ಹೋಗಿ ಕೈಯಿಂದ ಬಿಲ್ಲನ್ನು ಹಿಡಿದುಕೊಂಡು ಬಾಣವನ್ನು ಜೋಡಿಸಿದನು.

ವಿಚಿಕ್ಷೇಪ ಶರಂ ತತ್ರ ಯತ್ರ ತೇ ಬಹವೋ ಮೃಗಾಃ ।
ತೇಷಾಂ ಮಧ್ಯೇ ಸ ವೈ ವಿದ್ಧಃ ಋುಕ್ಷಶೃಂಗೋ ಮಹಾತಪಾಃ ॥ ೨೯ ॥
ಜಗ್ಮುಸ್ತ್ರಸ್ತಾಸ್ತು ತೇ ಸರ್ವೇ ಶಬ್ದಂ ಕೃತ್ವಾ ವನೌಕಸಃ ।
ಸ ಋಷಿಃ ಪತಿತಸ್ತತ್ರ ಕೃಷ್ಣಕೃಷ್ಣೇತಿ ಚಾಽಬ್ರವೀತ್ ॥ ೩೦ ॥
ಹಾಹಾ ಕಷ್ಟಂ ಕೃತಂ ತೇನ ಯೇನಾಽಹಂ ಘಾತಿತೋಽಧುನಾ ।
ಕಸ್ಯೈಷಾ ದುರ್ಮತಿರ್ಜಾತಾ ಪಾಪಬುದ್ಧೇರ್ಮನೋಪರಿ ॥ ೩೧ ॥
ಮೃಗಮಧ್ಯೇ ಸ್ಥಿತಶ್ಚಾಽಹಂ ನ ಕಂಚಿದುಪರೋಧಯೇ ।
ತಾಂ ವಾಚಂ ಮಾನುಷೀಂ ಶ್ರುತ್ವಾ ಸ ರಾಜಾ ವಿಸ್ಮಯಾನ್ವಿತಃ ॥ ೩೨ ॥
ಶೀಘ್ರಂ ಗತ್ವಾ ತತೋಽಪಶ್ಯದ್ಬ್ರಾಹ್ಮಣಂ ಬ್ರಹ್ಮತೇಜಸಾ ।
ಹಾಹಾ ಕಷ್ಟಂ ಕೃತಂ ಮೇಽದ್ಯ ಯೇನಾಽಸೌ ಘಾತಿತೋ ದ್ವಿಜಃ ॥ ೩೩ ॥

ಚಿತ್ರಸೇನ ಉವಾಚ :—

ಅಕಾಮಾದ್ಘಾತಿತಸ್ತ್ವಂ ತು ಮೃಗಭ್ರಾಂತ್ಯಾ ಮಯಾಽನಘ ।
ಗೃಹೀತ್ವಾ ಬಹುದಾರೂಣಿ ಸ್ವತನುಂ ದಾಹಯಾಮ್ಯಹಂ ॥ ೩೪ ॥
ದೃಷ್ಟಾಽದೃಷ್ಟಂ ತು ಯತ್ಕಿಂಚಿನ್ನ ಸಮಂ ಬ್ರಹ್ಮಹತ್ಯಯಾ ।
ಅನ್ಯಥಾ ಬ್ರಹ್ಮಹತ್ಯಾಯಾಃ ಶುದ್ಧಿರ್ಮೇ ನ ಭವಿಷ್ಯತಿ ॥ ೩೫ ॥

---

೨೯. ಅನೇಕ ಮೃಗಗಳಿರುವ ಆ ಸ್ಥಳಕ್ಕೆ ಬಾಣವನ್ನು ಪ್ರಯೋಗಿಸಿದನು. ಅದರಿಂದ ಆ ಮೃಗಗಳ ನಡುವೆ ಇದ್ದ ಋುಕ್ಷಶೃಂಗನು ತಾಡಿತನಾದನು.

೩೦. ಆಗ ಆ ಮೃಗಗಳೆಲ್ಲವೂ ಭಯಗೊಂಡು ಧ್ವನಿಗೈಯುತ್ತ ಓಡಿಹೋದುವು. ಆ ಮುನಿಯು ಅಲ್ಲಿಯೆ ಬಿದ್ದು "ಕೃಷ್ಣ ! ಕೃಷ್ಣ !" ಎಂದನು.

೩೧. "ಈಗ ನನ್ನನ್ನು ಹೊಡೆದವನು ಅತ್ಯಂತ ಕಷ್ಟವನ್ನುಂಟುಮಾಡಿರುವನು. ಯಾವ ಪಾಪಿಗೆ ನನ್ನಮೇಲೆ ಇಂತಹ ದುರ್ಬುದ್ಧಿಯುಂಟಾಯಿತು ?

೩೨–೩೩. ಮೃಗಮಧ್ಯದಲ್ಲಿರುವ ನಾನು ಯಾರಿಗೂ ತೊಂದರೆಯನ್ನುಂಟುಮಾಡಲಿಲ್ಲ." ಚಿತ್ರಸೇನನಾದರೊ ಆ ಮನುಷ್ಯನ ಮಾತನ್ನು ಕೇಳಿ ಆಶ್ಚರ್ಯಗೊಂಡು ಶೀಘ್ರವಾಗಿ ಹತ್ತಿರ ಹೋಗಿ ಬ್ರಹ್ಮತೇಜಸ್ಸುಳ್ಳ ಆ ಬ್ರಾಹ್ಮಣನನ್ನು ಕಂಡನು. "ಅಯ್ಯೊ ! ಬ್ರಾಹ್ಮಣನನ್ನು ವಧಿಸಿದ ನನಗೆ ಕಷ್ಟವುಂಟಾಯಿತು" ಎಂದನು.

೩೪. ಚಿತ್ರಸೇನನು ಹೇಳುತ್ತಾನೆ.—ನಿರ್ದುಷ್ಟನಾದ ಮುನಿಯೆ ! ನಾನು ತಿಳಿಯದೆ ಮೃಗವೆಂಬ ಭ್ರಾಂತಿಯಿಂದ ನಿನ್ನನ್ನು ಕೊಂದೆನು. ಆದ್ದರಿಂದ ನಾನೇ ಕಟ್ಟಿಗೆಯನ್ನು ತಂದು ನನ್ನ ಶರೀರವನ್ನು ಸುಟ್ಟುಕೊಳ್ಳುವೆನು.

೩೫. ನಾನು ಹೀಗೆ ಮಾಡದಿದ್ದರೆ ಬ್ರಹ್ಮಹತ್ಯೆಯು ಪರಿಹಾರವಾಗುವುದಿಲ್ಲ. ಬ್ರಹ್ಮಹತ್ಯೆಗೆ ಸಮಾನವಾದ ದೃಷ್ಟಾದೃಷ್ಟ ಪಾಪಗಳಿಲ್ಲ.

ಋಕ್ಷಶೃಂಗ ಉವಾಚ :—

ನ ತೇ ಸಿದ್ಧಿರ್ಭವೇತ್ಕಾಚಿನ್ಮಯಿ ಪಂಚತ್ವಮಾಗತೇ ।
ಬಹ್ವ್ಯೋ ಹತ್ಯಾ ಭವಿಷ್ಯಂತಿ ವಿನಾಶೇ ಮಮ ಸಾಂಪ್ರತಂ ॥ ೩೬ ॥
ಜನನೀ ಮೇ ಪಿತಾ ವೃದ್ಧೋ ಭ್ರಾತರಶ್ಚ ತಪಸ್ವಿನಃ ।
ಭ್ರಾತೃಜಾಯಾ ಮರಿಷ್ಯಂತಿ ಮಯಿ ಪಂಚತ್ವಮಾಗತೇ ॥ ೩೭ ॥
ಏತಾ ಹತ್ಯಾ ಭವಿಷ್ಯಂತಿ ಕಥಂ ಶುದ್ಧಿರ್ಭವೇತ್ತವ ।
ಉಪಾಯಂ ಕಥಯಿಷ್ಯಾಮಿ ತಂ ಕರ್ತುಂ ಯದಿ ಮನ್ಯಸೇ ॥ ೩೮ ॥

ಚಿತ್ರಸೇನ ಉವಾಚ :—

ಉಪಾಯಃ ಕಥ್ಯತಾಂ ಮೇಽದ್ಯ ಯಸ್ತೇ ಮನಸಿ ವರ್ತತೇ ।
ಕರಿಷ್ಯೇ ತಮಹಂ ಸರ್ವಂ ಯತ್ನೇನಾಽಪಿ ಮಹಾಮುನೇ ॥ ೩೯ ॥

ಋಕ್ಷಶೃಂಗ ಉವಾಚ :—

ಪೃಚ್ಛಾಮಿ ತ್ವಾಂ ಕಥಂ ಕೋ ವಾ ಕುತಸ್ತ್ವಮಿಹ ಚಾಽಽಗತಃ ।
ಬ್ರಹ್ಮಕ್ಷತ್ರವಿಶಾಂ ಮಧ್ಯೇ ಕೋ ಭವಾನುತ ಶೂದ್ರಜಃ ॥ ೪೦ ॥

ಚಿತ್ರಸೇನ ಉವಾಚ :—

ನಾಽಹಂ ಶೂದ್ರೋಽಸ್ಮಿ ಭೋಸ್ತಾತ ನ ವೈಶ್ಯೋ ಬ್ರಾಹ್ಮಣೋ ನ ವಾ ।
ನ ಚಾಂತ್ಯಜೋಽಸ್ಮಿ ವಿಪ್ರೇಂದ್ರ ಕ್ಷತ್ರಿಯೋಽಸ್ಮಿ ಮಹಾಮುನೇ ॥ ೪೧ ॥

---

೩೬. ಋಕ್ಷಶೃಂಗನು ಹೇಳುತ್ತಾನೆ —ನಾನು ಸಾಯುವುದರಿಂದ ನಿನಗೆ ಯಾವ ಫಲಸಿದ್ಧಿಯೂ ಆಗುವುದಿಲ್ಲ. ನನ್ನ ಮರಣದಿಂದ ಈಗ ಬಹಳ ಹತ್ಯೆಯೂ ಆಗುವುದು.

೩೭. ನನ್ನ ತಾಯಿ, ವೃದ್ಧನಾದ ತಂದೆ, ತಪಸ್ವಿಗಳಾದ ಸಹೋದರರು, ಅವರ ಪತ್ನಿಯರು ಇವರೆಲ್ಲ ನಾನು ಸಾಯುವುದರಿಂದ ಮಡಿಯುವರು.

೩೮. ಇವರ ಮರಣವು ಸಂಭವಿಸುವುದರಿಂದ ನಿನಗೆ ಹೇಗೆ ಶುದ್ಧಿಯಾಗುವುದು? ನೀನು ಮಾಡಬಯಸುವೆಯಾದರೆ ಒಂದುಪಾಯವನ್ನು ಹೇಳುವೆನು.

೩೯. ಚಿತ್ರಸೇನನು ಹೇಳುತ್ತಾನೆ.—ಮಹರ್ಷಿಯೆ! ನಿನ್ನ ಮನಸ್ಸಿನಲ್ಲಿರುವ ಉಪಾಯವನ್ನು ಹೇಳು. ಅದನ್ನು ಪ್ರಯತ್ನಿಸಿ ಮಾಡುವೆನು.

೪೦. ಋಕ್ಷಶಂಗನು ಹೇಳುತ್ತಾನೆ —ನೀನು ಇಲ್ಲಿಗೆ ಹೇಗೆ ಏತಕ್ಕೆ ಬಂದಿರುವೆ? ಬ್ರಹ್ಮ, ಕ್ಷತ್ರ, ವೈಶ್ಯರಲ್ಲಿ ನೀನು ಯಾವ ಜಾತಿಯವನು? ಅಥವಾ ಶೂದ್ರನೊ?

೪೧. ಚಿತ್ರಸೇನನು ಹೇಳುತ್ತಾನೆ:—ಮಹರ್ಷಿಯೆ! ನಾನು ಶೂದ್ರನೂ, ವೈಶ್ಯನೂ, ಬ್ರಾಹ್ಮಣನೂ, ಚಂಡಾಲನೂ ಅಲ್ಲ. ಕ್ಷತ್ರಿಯನಾಗಿರುವೆನು.

ಧರ್ಮಜ್ಞಶ್ಚ ಕೃತಜ್ಞಶ್ಚ ಸರ್ವಸತ್ವಹಿತೇ ರತಃ ।
ಅಕಾಮಾತ್ಪಾತಕಂ ಜಾತಂ ಕಥಂ ಶುದ್ಧಿರ್ಭವಿಷ್ಯತಿ ॥ ೪೨ ॥
ಋಕ್ಷಶೃಂಗ ಉವಾಚ :—
ಮಾಂ ಗೃಹೀತ್ವಾಽಽಶ್ರಮಂ ಗಚ್ಛ ಯತ್ರ ತೌ ಪಿತರೌ ಮಮ ।
ಆವೇದಯಸ್ವ ಚಾತ್ಮಾನಂ ಪುತ್ರಘಾತಿನಮಾತುರಂ ॥ ೪೩ ॥
ತೇ ದೃಷ್ಟ್ವಾ ಮಾಂ ಕರಿಷ್ಯಂತಿ ಕಾರುಣ್ಯಂ ಚ ತವೋಪರಿ ।
ಉಪಾಯಂ ಕಥಯಿಷ್ಯಂತಿ ಯೇನ ಶಾಂತಿರ್ಭವಿಷ್ಯತಿ ॥ ೪೪ ॥
ತಸ್ಯ ತದ್ವಚನಂ ಶ್ರುತ್ವಾ ಚಿತ್ರಸೇನೋ ನೃಪೋತ್ತಮ ।
ಸ್ಕಂಧೇ ಕೃತ್ವಾ ತು ತಂ ವಿಪ್ರಂ ಜಗಾಮಾಶ್ರಮಸನ್ನಿಧೌ ॥ ೪೫ ॥
ನ ಶಕ್ನೋತಿ ಯದಾ ವೋಢುಂ ವಿಶ್ರಾಮ್ಯತಿ ಪುನಃ ಪುನಃ ।
ತಾವತ್ಪಶ್ಯತಿ ತಂ ವಿಪ್ರಂ ಮೂರ್ಛಿತಂ ವಿಕಲೇಂದ್ರಿಯಂ ॥ ೪೬ ॥
ಮುಮೋಚ ಚಿತ್ರಸೇನಸ್ತಂ ಛಾಯಾಯಾಂ ವಟಭೂರುಹಃ ।
ವಸ್ತ್ರಂ ಚತುರ್ಗುಣಂ ಕೃತ್ವಾ ಚಕ್ರೇ ವಾತಂ ಮುಹುರ್ಮುಹುಃ ॥ ೪೭ ॥

---

೪೨. ಧರ್ಮವನ್ನರಿತವನೂ, ಕೃತಜ್ಞನೂ, ಸಕಲ ಪ್ರಾಣಿಗಳ ಹಿತದಲ್ಲಿ ನಿರತನೂ ಆದ ನನಗೆ ಅರಿಯದೆ ಪಾಪವುಂಟಾಗಿದೆ ಆದರಿಂದ ನಾನು ಹೇಗೆ ಶುದ್ಧನಾಗುವೆನು ?

೪೩. ಋಕ್ಷಶೃಂಗನು ಹೇಳುತ್ತಾನೆ —ನನ್ನನ್ನು ನನ್ನ ತಂದೆ ತಾಯಿಗಳಿರುವ ಸ್ಥಳಕ್ಕೆ ಕರೆದುಕೊಂಡು ಹೋಗು. ನೀನು ನನ್ನನ್ನು ಕೊಂದಿರುವೆಯೆಂದು ತಿಳಿಸು.

೪೪. ಅವರು ನನ್ನನ್ನು ನೋಡಿ ನಿನ್ನ ಮೇಲೆ ದಯೆಮಾಡಿ ಶುದ್ಧಿಯಾಗಲು ಉಪಾಯವನ್ನು ಹೇಳುವರು.

೪೫. ದೊರೆಯೆ ! ಚಿತ್ರಸೇನರಾಜನು ಅವನ ಆ ಮಾತನ್ನು ಕೇಳಿ ಆ ಬ್ರಾಹ್ಮಣನನ್ನು ಹೆಗಲಮೇಲೆ ಕುಳ್ಳಿರಿಸಿಕೊಂಡು ಆಶ್ರಮದ ಹತ್ತಿರಕ್ಕೆ ಹೋದನು.

೪೬. ಅವನು ಆ ಬ್ರಾಹ್ಮಣನನ್ನು ಹೊತ್ತುಕೊಂಡು ಹೋಗಲಾರದೆ ಪುನಃಪುನಃ ವಿಶ್ರಾಂತಿಗೊಂಡನು. ಆಗ ಆ ಬ್ರಾಹ್ಮಣನು ಮೂರ್ಛೆಗೊಂಡು ಇಂದ್ರಿಯವೈಕಲ್ಯವನ್ನು ಹೊಂದಿರುವುದನ್ನು ನೋಡಿದನು.

೪೭. ಚಿತ್ರಸೇನನು ಅವನನ್ನು ಆಲದಮರದ ನೆರಳಿನಲ್ಲಿ ಮಲಗಿಸಿ ಬಟ್ಟೆಯನ್ನು ನಾಲ್ಕುಮಡಿ ಮಾಡಿ ಬಾರಿಬಾರಿಗೂ ಗಾಳಿ ಬೀಸಿದನು.

ಪಶ್ಯತಸ್ತಸ್ಯ ರಾಜೇಂದ್ರ ಋಕ್ಷಶೃಂಗೋ ಮಹಾತಪಾಃ ।
ಪಂಚತ್ವಮಗಮಚ್ಛೀಘ್ರಂ ಧ್ಯಾನಯೋಗೇನ ಯೋಗವಿತ್ ॥ ೪೮ ॥
ದಾಹಯಾಮಾಸ ತಂ ವಿಪ್ರಂ ವಿಧಿದೃಷ್ಟೇನ ಕರ್ಮಣಾ ।
ಸ್ನಾನಂ ಕೃತ್ವಾ ಸ ಶೋಕಾರ್ತೋ ವಿಲಲಾಪ ಮುಹುರ್ಮುಹುಃ ॥ ೪೯ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ಋಕ್ಷಶೃಂಗಸ್ವರ್ಗಗಮನವರ್ಣನಂ"ನಾಮ
ತ್ರಿಪಂಚಾಶತ್ತಮೋಽಧ್ಯಾಯಃ

---

೪೮. ಅವನು ನೋಡುತ್ತಿರುವಾಗಲೆ ಯೋಗಜ್ಞನಾದ ಋಕ್ಷಶೃಂಗನು ಧ್ಯಾನಯೋಗದಿಂದ ಬೇಗನೆ ಮಡಿದನು.

೪೯. ಚಿತ್ರಸೇನನು ಆ ಬ್ರಾಹ್ಮಣನಿಗೆ ವಿಧಿಯಂತೆ ದಹನಸಂಸ್ಕಾರವನ್ನು ಮಾಡಿ ಮಿಂದು ಶೋಕದಿಂದ ಬಿಕ್ಕಿಬಿಕ್ಕಿ ಅತ್ತನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಋಕ್ಷಶೃಂಗಸ್ವರ್ಗಗಮನವರ್ಣನ"ವೆಂಬ
ಐವತ್ತಮೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಚತುಃಪಂಚಾಶತ್ತಮೋಽಧ್ಯಾಯಃ

### ದೀರ್ಘತಪಸಃ ಸ್ವರ್ಗಾರೋಹಣವರ್ಣನಂ

ಈಶ್ವರ ಉವಾಚ :—

**ತತಶ್ಚಾಽನಂತರಂ ರಾಜಾ ಜಗಾಮೋದ್ವೇಗಮುತ್ತಮಂ ।**
**ಕಥಂ ಯಾಮಿ ಗೃಹಂ ತ್ವದ್ಯ ವಾರಾಣಸ್ಯಾಮಹಂ ಪುನಃ ॥ ೧ ॥**
**ಬ್ರಹ್ಮಹತ್ಯಾಸಮಾವಿಷ್ಟೋ ಜುಹೋಮ್ಯಗ್ನೌ ಕಲೇವರಂ ।**
**ಅಥವಾ ತಸ್ಯ ವಾಕ್ಯೇನ ತಂ ಗಚ್ಛಾಮ್ಯಾಶ್ರಮಂ ಪ್ರತಿ ॥ ೨ ॥**
**ಕಥಯಾಮಿ ಯಥಾವೃತ್ತಂ ಗತ್ವಾ ತಸ್ಯ ಮಹಾಮುನೇಃ ।**
**ಏವಂ ಸಂಚಿಂತ್ಯ ರಾಜಾಽಸೌ ಜಗಾಮಾಶ್ರಮಸನ್ನಿಧೌ ॥ ೩ ॥**
**ಋಕ್ಷಶೃಂಗಸ್ಯ ಚಾಽಸ್ಥೀನಿ ಗೃಹೀತ್ವಾ ಸ ನೃಪೋತ್ತಮಃ ।**
**ದೃಷ್ಟಿಮಾರ್ಗೇ ಸ್ಥಿತಸ್ತಸ್ಯ ಮಹರ್ಷೇರ್ಭಾವಿತಾತ್ಮನಃ ॥ ೪ ॥**

ದೀರ್ಘತಪಾ ಉವಾಚ :—

**ಆಗಚ್ಛ ಸ್ವಾಗತಂ ತೇಽಸ್ತು ಆಸನೇಽತ್ರೋಪವಿಶ್ಯತಾಂ ।**
**ಅರ್ಘ್ಯಂ ದದಾಮ್ಯಹಂ ಯೇನ ಮಧುಪರ್ಕಂ ಸವಿಸ್ತರಂ ॥ ೫ ॥**

---

### ಕನ್ನಡದ ಅನುವಾದ

#### ದೀರ್ಘತಪನ ಸ್ವರ್ಗಾರೋಹವರ್ಣನ

೧. ಈಶ್ವರನು ಹೇಳುತ್ತಾನೆ —ಅನಂತರ ಆ ಚಿತ್ರಸೇನನು "ಈಗ ನಾನು ಕಾಶಿಯಲ್ಲಿರುವ ನನ್ನ ಮನೆಗೆ ಹೇಗೆ ಹೋಗಲಿ?" ಎಂದು ಅತ್ಯಂತ ವ್ಯಥೆಗೊಂಡನು.

೨–೪. "ಬ್ರಹ್ಮಹತ್ಯೆಯಿಂದ ಕೂಡಿದ ನಾನು ಅಗ್ನಿಯಲ್ಲಿ ಶರೀರವನ್ನು ತ್ಯಜಿಸಲೆ? ಅಥವಾ ಆ ಮುನಿಯ ಮಾತಿನಂತೆ ಆ ಆಶ್ರಮಕ್ಕೆ ಹೋಗಿ ಅವನ ತಂದೆಗೆ ನಡೆದ ಸಮಾಚಾರವನ್ನು ತಿಳಿಸಲೆ?" ಚಿತ್ರಸೇನನು ಹೀಗೆ ಆಲೋಚಿಸಿ ಋಕ್ಷಶೃಂಗನ ಮೂಳೆಗಳನ್ನು ತೆಗೆದುಕೊಂಡು ಆಶ್ರಮದ ಹತ್ತಿರ ಹೋಗಿ ಜ್ಞಾನಿಯಾದ ಆ ದೀರ್ಘತಪನ ದೃಷ್ಟಿಗೆ ಗೋಚರನಾದನು.

೫. ದೀರ್ಘತಪನು ಹೇಳುತ್ತಾನೆ—ಮಹಾರಾಜ! ಬಾ. ನಿನಗೆ ಸುಖಾಗಮನವಾಗಲಿ. ಈ ಆಸನದಲ್ಲಿ ಕುಳಿತುಕೊ. ನಿನಗೆ ನಾನು ಅರ್ಘ್ಯ ಆಸನ ಮಧುಪರ್ಕಗಳನ್ನು ಕೊಡುವೆನು.

ಚಿತ್ರಸೇನ ಉವಾಚ :—

ಅರ್ಘ್ಯಸ್ಯಾಽಸ್ಯ ನ ಯೋಗ್ಯೋಽಹಂ ಮಹರ್ಷೇ ನಾಽಸ್ಮಿ ಭಾಷಣೇ ।
ಮೃಗಮಧ್ಯಸ್ಥಿತೋ ವಿಪ್ರಸ್ತವ ಪುತ್ರೋ ಮಯಾ ಹತಃ ॥ ೬ ॥
ಪುತ್ರಘ್ನಂ ವಿದ್ಧಿ ಮಾಂ ವಿಪ್ರ ತೀವ್ರದಂಡೇನ ದಂಡಯ ।
ಮೃಗಭ್ರಾಂತ್ಯಾ ಹತೋ ವಿಪ್ರ ಋಕ್ಷಶೃಂಗೋ ಮಹಾತಪಾಃ ॥ ೭ ॥
ಇತಿ ಮತ್ವಾ ಮುನಿಶ್ರೇಷ್ಠ ಕುರು ಮೇ ತ್ವಂ ಯಥೋಚಿತಂ ।
ಮಾತಾ ತದ್ವಚನಂ ಶ್ರುತ್ವಾ ಗೃಹಾನ್ನಿಷ್ಕ್ರಮ್ಯ ವಿಹ್ವಲಾ ॥ ೮ ॥
ಹಾ ಹತಾಽಸ್ಮೀತ್ಯುವಾಚೇದಂ ಪಪಾತ ಧರಣೀತಲೇ ।
ವಿಲಲಾಪ ಸುದುಃಖಾರ್ತಾ ಪುತ್ರಶೋಕೇನ ಪೀಡಿತಾ ॥ ೯ ॥
ಹಾ ಹತಾ ಪುತ್ರ ಪುತ್ರೇತಿ ಕರುಣಂ ಕುರರೀ ಯಥಾ ।
ವಿಲಲಾಪಾತುರಾ ಮಾತಾ ಕ್ವ ಗತೋ ಮಾಂ ವಿಹಾಯ ವೈ ।
ಮುಖಂ ದರ್ಶಯ ಚಾತ್ಮೀಯಂ ಮಾತರಂ ಮಾಂ ಹಿ ಮಾನಯ ॥ ೧೦ ॥
ಶ್ರುತಾಽಧ್ಯಯನಸಂಪನ್ನಂ ಜಪಹೋಮಪರಾಯಣಂ ।
ಆಗತಂ ತ್ವಾಂ ಗೃಹದ್ವಾರೇ ಕದಾ ದ್ರಕ್ಷ್ಯಾಮಿ ಪುತ್ರಕ ॥ ೧೧ ॥
ಲೋಕೋಕ್ತ್ಯಾ ಶ್ರೂಯತೇ ಚೈತಚ್ಚಂದನಂ ಕಿಲ ಶೀತಲಂ ।
ಪುತ್ರಗಾತ್ರಪರಿಷ್ವಂಗಶ್ಚಂದನಾದಪಿ ಶೀತಲಃ ॥ ೧೨ ॥

---

೬. ಚಿತ್ರಸೇನನು ಹೇಳುತ್ತಾನೆ —ಮಹರ್ಷಿಯೆ! ನಾನು ಅರ್ಘ್ಯಕ್ಕೆ ಅರ್ಹನಲ್ಲ. ಮಾತನಾಡಿಸಲೂ ಯೋಗ್ಯನಲ್ಲ ನಾನು ಮೃಗಗಳ ನಡುವೆ ಇರುವ ನಿನ್ನ ಮಗನನ್ನು ಕೊಂದಿರುವೆನು.

೭ ಮೃಗಭ್ರಾಂತಿಯಿಂದ ಆ ಋಕ್ಷಶೃಂಗನನ್ನು ಕೊಂದಿರುವ ನನ್ನನ್ನು ಪುತ್ರಘ್ನನೆಂದು ತಿಳಿದು ಕಠಿನ ಶಿಕ್ಷೆಯನ್ನು ವಿಧಿಸು.

೮–೧೦. ಮುನಿವರ್ಯನೆ! ನೀನು ಇದನ್ನರಿತು ಯುಕ್ತವಾದುದನ್ನು ಮಾಡು ಎಂದನು. ತಾಯಿಯು ಆ ಮಾತನ್ನು ಕೇಳಿ ವ್ಯಥೆಗೊಂಡು ಮನೆಯಿಂದ ಹೊರಟು, "ಅಯ್ಯೊ! ಹತಳಾದೆನು" ಎಂದು ನೆಲದಮೇಲೆ ಬಿದ್ದಳು. ಪುತ್ರಶೋಕದಿಂದ ಪೀಡಿತಳಾದ ಲವಳು, "ಅಯ್ಯೋ! ಮಗನೆ!" ಎಂದು ಕುರರಿಯಂತೆ ಕೂಗುತ್ತ ಈ ರೀತಿ ಗೋಳಾಡಿದಳು. "ಮಗು! ನೀನು ನನ್ನನ್ನು ಬಿಟ್ಟು ಎಲ್ಲಿಗೆ ಹೋದೆ? ನಿನ್ನ ಮುಖವನ್ನು ತೋರಿಸು. ತಾಯಿಯಾದ ನನ್ನನ್ನು ಗೌರವಿಸು.

೧೧. ಮಗು! ವೇದಾಧ್ಯಯನಸಂಪನ್ನನೂ, ಜಪಹೋಮನಿರತನೂ ಆಗಿ ಮನೆಯಬಾಗಿಲಿನಲ್ಲಿ ಬಂದು ನಿಂತಿರುವ ನಿನ್ನನ್ನು ಯಾವಾಗ ನೋಡುವೆನು?

೧೨. ಜನರ ಮಾತಿನಿಂದ ಚಂದನವು ಶೀತಲವೆಂದು ಕೇಳಲ್ಪಡುತ್ತದೆ. ಮಗನ ಶರೀರದ ಆಲಿಂಗನವು ಚಂದನಕ್ಕಿಂತಲೂ ಶೀತಲವಾದುದು.

ಕಿಂ ಚಂದನೇನ ಪೀಯೂಷಬಿಂದುನಾ ಕಿಂ ಕಿಮಿಂದುನಾ ॥ ೧೩ ॥
ಪುತ್ರಗಾತ್ರಪರಿಷ್ವಂಗಪಾತ್ರಂ ಗಾತ್ರಂ ಭವೇದ್ಯದಿ ॥ ೧೪ ॥
ಪರಿಷ್ವಜಿತುಮಿಚ್ಛಾಮಿ ತ್ವಾಮಹಂ ಪುತ್ರ ಸುಪ್ರಿಯ ।
ಪಂಚತ್ವಮನುಯಾಸ್ಯಾಮಿ ತ್ವದ್ವಿಹೀನಾಽದ್ಯ ದುಃಖಿತಾ ॥ ೧೫ ॥
ಏವಂ ವಿಲಪತೀ ದೀನಾ ಪುತ್ರಶೋಕೇನ ಪೀಡಿತಾ ।
ಮೂರ್ಛಿತಾ ವಿಹ್ವಲಾ ದೀನಾ ನಿಪಪಾತ ಮಹೀತಲೇ ॥ ೧೬ ॥
ಭಾರ್ಯಾಂ ಚ ಪತಿತಾಂ ದೃಷ್ಟ್ವಾ ಪುತ್ರಶೋಕೇನ ಪೀಡಿತಾಂ ।
ಚುಕೋಪ ಸ ಮುನಿಸ್ತತ್ರ ಚಿತ್ರಸೇನಾಯ ಭೂಭೃತೇ ॥ ೧೭ ॥

ದೀರ್ಘತಪಾ ಉವಾಚ :—

ಯಾಹಿ ಯಾಹಿ ಮಹಾಪಾಪ ಮಾ ಮುಖಂ ದರ್ಶಯಸ್ವ ಮೇ ।
ಕಿಂ ತ್ವಯಾ ಘಾತಿತೋ ವಿಪ್ರೋ ಹ್ಯಕಾಮಾಚ್ಚ ಸುತೋ ಮಮ ॥ ೧೮ ॥
ಬ್ರಹ್ಮಹತ್ಯಾ ಭವಿಷ್ಯಂತಿ ಬಹ್ವ್ಯಸ್ತೇ ವಸುಧಾಧಿಪ ।
ಸಕುಟುಂಬಸ್ಯ ಮೇ ತ್ವಂ ಹಿ ಮೃತ್ಯುರೇಷ ಉಪಸ್ಥಿತಃ ॥ ೧೯ ॥
ಏವಮುಕ್ತ್ವಾ ತತೋ ವಿಪ್ರೋ ವಿಚಿಂತ್ಯ ಚ ಪುನಃ ಪುನಃ ।
ಪರಿತ್ಯಜ್ಯ ತದಾ ಕ್ರೋಧಂ ಮುನಿಭಾವಾಜ್ಜಗಾದ ಹ ॥ ೨೦ ॥

---

೧೩–೧೪. ಶರೀರವು ಮಗನ ಗಾತ್ರಾಲಿಂಗನೆಗೆ ಪಾತ್ರವಾಗಿರಲು ಚಂದನದಿಂದಾಗಲಿ, ಅಮೃತ ಬಿಂದುವಿನಿಂದಾಗಲಿ, ಚಂದ್ರನಿಂದಾಗಲಿ ಏನು ಪ್ರಯೋಜನ?

೧೫. ಪ್ರಿಯಪುತ್ರನೆ! ನಾನು ನಿನ್ನನ್ನು ಆಲಿಂಗಿಸಲು ಬಯಸುವೆನು. ನಿನ್ನನ್ನು ಅಗಲಿದ ನಾನು ಈಗ ದುಃಖಿತಳಾಗಿ ಮಡಿಯುವೆನು.''

೧೬. ಪುತ್ರಶೋಕದಿಂದ ಪೀಡಿತಳಾಗಿ ದೈನ್ಯದಿಂದ ಗೋಳಾಡುತ್ತಿರುವ ಅವಳು ಮೂರ್ಛೆಗೊಂಡು ನೆಲದಮೇಲೆ ಬಿದ್ದಳು.

೧೭. ಆ ದೀರ್ಘತಪನು ಪುತ್ರಶೋಕದಿಂದ ಪೀಡಿತಳಾಗಿ ನೆಲದಮೇಲೆ ಬಿದ್ದಿರುವ ಪತ್ನಿಯನ್ನು ನೋಡಿ ಚಿತ್ರಸೇನರಾಜನಲ್ಲಿ ಕೋಪಿಸಿಕೊಂಡನು.

೧೮. ದೀರ್ಘತಪನು ಹೇಳುತ್ತಾನೆ —ಮಹಾಪಾಪಿಯೆ! ತೊಲಗು. ನನಗೆ ಮುಖವನ್ನು ತೋರಿಸಬೇಡ. ನೀನು ನನ್ನ ಮಗನನ್ನು ಅರಿಯದೆ ಕೊಂದಿರಲಾರೆ?

೧೯. ನಿನಗೆ ಅನೇಕ ಬ್ರಹ್ಮಹತ್ಯೆಗಳು ಸಂಭವಿಸುವುವು. ನೀನು ಕುಟುಂಬ ಸಹಿತನಾದ ನನಗೆ ಮೃತ್ಯುವಾಗಿ ಬಂದಿರುವೆ.''

೨೦. ಹೀಗೆ ಹೇಳಿ ಅವನು ಮರಳಿ ಆಲೋಚಿಸಿ ಮುನಿಭಾವದಿಂದ ಕೋಪವನ್ನು ತ್ಯಜಿಸಿ ಇಂತೆಂದನು.

ದೀರ್ಘತಪಾ ಉವಾಚ :—

ಉದ್ವೇಗಂ ತ್ಯಜ ಭೋ ವತ್ಸ ದುರುಕ್ತಂ ಗದಿತೋ ಮಯಾ ।
ಪುತ್ರಶೋಕಾಽಭಿಭೂತೇನ ದುಃಖತಪ್ತೇನ ಮಾನದ ॥ ೨೧ ॥
ಕಿಂ ಕರೋತಿ ನರಃ ಪ್ರಾಜ್ಞಃ ಪ್ರೇರ್ಯಮಾಣಃ ಸ್ವಕರ್ಮಭಿಃ ।
ಪ್ರಾಗೇವ ಹಿ ಮನುಷ್ಯಾಣಾಂ ಬುದ್ಧಿಃ ಕರ್ಮಾನುಸಾರಿಣೀ ॥ ೨೨ ॥
ಅನೇನೈವ ವಿಧಾನೇನ ಪಂಚತ್ವಂ ವಿಹಿತಂ ಮಮ ।
ಹತ್ಯಾಸ್ತವ ಭವಿಷ್ಯಂತಿ ಪೂರ್ವಮುಕ್ತಾ ನ ಸಂಶಯಃ ॥ ೨೩ ॥
ಬ್ರಹ್ಮಕ್ಷತ್ರವಿಶಾಂ ಮಧ್ಯೇ ಶೂದ್ರಚಂಡಾಲಜಾತಿಷು ।
ಕಸ್ತ್ವಂ ಕಥಯ ಸತ್ಯಂ ಮೇ ಕಸ್ಮಾಚ್ಚ ನಿಹತೋ ದ್ವಿಜಃ ॥ ೨೪ ॥

ಚಿತ್ರಸೇನ ಉವಾಚ :—

ವಿಜ್ಞಾಪಯಾಮಿ ವಿಪ್ರರ್ಷೇ ಕ್ಷಂತವ್ಯಂ ಮೇ ಮಮೋಪರಿ ।
ನಾಽಹಂ ವಿಪ್ರೋಽಸ್ಮಿ ವೈ ತಾತ ನ ವೈಶ್ಯೋ ನ ಚ ಶೂದ್ರಜಃ ॥ ೨೫ ॥
ನ ವ್ಯಾಧಶ್ಚಾಂತ್ಯಜಾತೋ ವಾ ಕ್ಷತ್ರಿಯೋಽಹಂ ಮಹಾಮುನೇ ।
ಕಾಶೀರಾಜೋ ಮೃಗಾನ್ಹಂತುಮಾಗತೋ ವನಮುತ್ತಮಂ ॥ ೨೬ ॥
ಭ್ರಾಂತ್ಯಾ ನಿಪಾತಿತೋ ಹ್ಯೇಷ ಮೃಗರೂಪಧರೋ ಮುನಿಃ ।
ಇದಾನೀಂ ತವ ಪಾದಾಂತೇ ಸಂಶ್ರಿತಃ ಪಾತಕಾನ್ವಿತಃ ॥ ೨೭ ॥

---

೨೧. ದೀರ್ಘತಪನು ಹೇಳುತ್ತಾನೆ —ಮಗು! ಪುತ್ರಶೋಕದಿಂದ ಸಂತಪ್ತನಾದ ನಾನು ಬಿರುನುಡಿಯನ್ನು ನುಡಿದಿರುವೆನು. ಅದರಿಂದ ನೀನು ವ್ಯಥೆಯನ್ನು ಬಿಡು

೨೨. ಸ್ವಕರ್ಮದಿಂದ ಪ್ರೇರಿತನಾದ ಮಾನವನು ಜ್ಞಾನಿಯಾದರೂ ಏನನ್ನು ಮಾಡುವನು? ಮೊದಲೇ ಮನುಷ್ಯರ ಬುದ್ಧಿಯು ಕರ್ಮಾನುಸಾರವಾದುದು.

೨೩. ಈ ಕ್ರಮದಿಂದಲೇ ನನಗೆ ಮರಣವು ವಿಹಿತವಾಗಿರುವುದು. ಹಿಂದೆ ನಾನು ನಿನಗೆ ಹೇಳಿರುವ ಬ್ರಹ್ಮಹತ್ಯೆಗಳು ನಿಜವಾಗಿಯೂ ಉಂಟಾಗುವುವು.

೨೪. ನೀನು ಬ್ರಹ್ಮ, ಕ್ಷತ್ರಿಯ, ವೈಶ್ಯ, ಶೂದ್ರ, ಚಂಡಾಲರಲ್ಲಿ ಯಾರಾಗಿರುವೆ? ನಿಜವಾಗಿ ಹೇಳು. ಏಕೆ ಬ್ರಾಹ್ಮಣನನ್ನು ಕೊಂದಿರುವೆ?

೨೫–೨೭. ಚಿತ್ರಸೇನನು ಹೇಳುತ್ತಾನೆ.—ಬ್ರಹ್ಮರ್ಷಿಯೆ! ನನ್ನನ್ನು ಕ್ಷಮಿಸು. ನಾನು ಬ್ರಾಹ್ಮಣನೂ, ವೈಶ್ಯನೂ, ಶೂದ್ರನೂ, ಬೇಡನೂ, ಚಂಡಾಲನೂ ಅಲ್ಲ. ಕ್ಷತ್ರಿಯನಾದ ಕಾಶೀರಾಜನಾಗಿರುವೆನು. ನಾನು ಮೃಗಗಳ ಬೇಟೆಗಾಗಿ ಕಾಡಿಗೆ ಬಂದು ಭ್ರಾಂತಿಯಿಂದ ಮೃಗರೂಪವನ್ನು ಧರಿಸಿದ್ದ ಈ ನಿನ್ನ ಮಗನನ್ನು ಕೊಂದೆನು. ಈಗ ಪಾಪಿಯಾಗಿ ನಿನ್ನ ಪಾದದ ಬಳಿಗೆ ಬಂದಿರುವೆನು.

**ಕಿಂ ಕರ್ತವ್ಯಂ ಮಯಾ ವಿಪ್ರ ಉಪಾಯಂ ಕಥಯಸ್ವ ಮೇ ॥ ೨೮ ॥**
**ದೀರ್ಘತಪಾ ಉವಾಚ :—**
**ಬ್ರಹ್ಮಹತ್ಯಾ ನ ಶಕ್ಯೇತಾಪ್ಯೇಕಾ ನಿಸ್ತರಿತುಂ ಪ್ರಭೋ ।**
**ದಶೈಕಾ ಚ ಕಥಂ ಶಕ್ತಾಸ್ತಾಃ ಶೃಣುಷ್ವ ನರೇಶ್ವರ ॥ ೨೯ ॥**
**ಚತ್ವಾರೋ ಮೇ ಸುತಾ ರಾಜನ್ ಸಭಾರ್ಯಾ ಮಾತೃಪೂರ್ವಕಾಃ ।**
**ಮಯಾ ಸಹ ನ ಜೀವಂತಿ ಋಕ್ಷಶೃಂಗಸ್ಯ ಕಾರಣೇ ॥ ೩೦ ॥**
**ಉಪಾಯಂ ಶೋಭನಂ ತಾತ ಕಥಯಿಷ್ಯೇ ಶೃಣುಷ್ವ ತಂ ।**
**ಶಕ್ನೋಷಿ ಯದಿ ತಂ ಕರ್ತುಂ ಸುಖೋಪಾಯಂ ನರೇಶ್ವರ ॥ ೩೧ ॥**
**ಸಕುಟುಂಬಂ ಸಮಸ್ತಂ ಮಾಂ ದಾಹಯಿತ್ವಾಽನಲೇ ನೃಪ ।**
**ಅಸ್ಥೀನಿ ನರ್ಮದಾತೋಯೇ ಶೂಲಭೇದೇ ವಿನಿಕ್ಷಿಪ ॥ ೩೨ ॥**
**ನರ್ಮದಾದಕ್ಷಿಣೇ ಕೂಲೇ ಶೂಲಭೇದಂ ಹಿ ವಿಶ್ರುತಂ ।**
**ಸರ್ವಪಾಪಹರಂ ತೀರ್ಥಂ ಸರ್ವದುಃಖಘ್ನಮುತ್ತಮಂ ॥ ೩೩ ॥**
**ಶುಚಿರ್ಭೂತ್ವಾ ಮಮಾಽಸ್ಥೀನಿ ತತ್ರ ತೀರ್ಥೇ ವಿನಿಕ್ಷಿಪ ।**
**ಮೋಕ್ಷ್ಯಸೇ ಸರ್ವಪಾಪೈಸ್ತ್ವಂ ಮಮ ವಾಕ್ಯಾನ್ನ ಸಂಶಯಃ ॥ ೩೪ ॥**

---

೨೮. ನಾನು ಈಗ ಏನನ್ನು ಮಾಡಬೇಕು? ಉಪಾಯವನ್ನು ನನಗೆ ಹೇಳು.

೨೯. ದೀರ್ಘತಪನು ಹೇಳುತ್ತಾನೆ —ಅರಸನೆ! ಒಂದು ಬ್ರಹ್ಮಹತ್ಯೆಯನ್ನೇ ಪರಿಹಾರಮಾಡಿಕೊಳ್ಳಲು ಸಾಧ್ಯವಾಗುವುದಿಲ್ಲ. ಹನ್ನೊಂದು ಬ್ರಹ್ಮಹತ್ಯೆಗಳನ್ನು ನೀಗಿಕೊಳ್ಳಲು ಹೇಗೆ ಶಕ್ಯವು? ಆ ಬ್ರಹ್ಮಹತ್ಯೆಗಳನ್ನು ಕೇಳು.

೩೦. ಆ ಋಕ್ಷಶೃಂಗನಿಗಾಗಿ ನನ್ನೊಡನೆ ನನ್ನ ನಾಲ್ಕು ಮಂದಿ ಮಕ್ಕಳೂ, ಅವರ ಪತ್ನಿಯರೂ, ತಾಯಿಯೂ ಜೀವಿಸುವುದಿಲ್ಲ.

೩೧. ಒಂದು ಒಳ್ಳೆಯ ಉಪಾಯವನ್ನು ಹೇಳುವೆನು ಕೇಳು. ಸುಖವಾದ ಆ ಉಪಾಯವನ್ನು ನೀನು ಮಾಡಲು ಸಮರ್ಥನಾಗುವೆ

೩೨. ದೊರೆಯೆ! ಕುಟುಂಬಸಹಿತನಾದ ನನಗೆ ಅಗ್ನಿಸಂಸ್ಕಾರವನ್ನು ಮಾಡಿ ಅಸ್ಥಿಗಳನ್ನು ನರ್ಮದಾನದಿಯ ನೀರಿನಲ್ಲಿರುವ ಶೂಲಭೇದದಲ್ಲ ಎಸೆ.

೩೩. ಸಕಲ ಪಾಪವನ್ನು ಪರಿಹರಿಸುವುದೂ, ಸಮಸ್ತ ದುಃಖವನ್ನು ನೀಗಿಸುವುದೂ ಆದ ಶೂಲಭೇದವೆಂಬ ಆ ಪ್ರಸಿದ್ಧ ತೀರ್ಥವು ನರ್ಮದಾನದಿಯ ದಕ್ಷಿಣ ತೀರದಲ್ಲಿರುವುದು.

೩೪. ನೀನು ಶುದ್ಧನಾಗಿ ನನ್ನ ಅಸ್ಥಿಗಳನ್ನು ಅಲ್ಲಿ ಹಾಕು. ಆದರಿಂದ ನೀನು ನನ್ನ ಮಾತಿನಂತೆ ಸಮಸ್ತಪಾಪಮುಕ್ತನಾಗುವೆ.

**ರಾಜೋವಾಚ :—**

**ಆದೇಶೋ ದೀಯತಾಂ ತಾತ ಕರಿಷ್ಯಾಮಿ ನ ಸಂಶಯಃ ।**
**ಸಮಸ್ತಂ ಮೇಽಸ್ತಿ ಯತ್ಕಿಂಚಿದ್ರಾಜ್ಯಂ ಕೋಶಃ ಸುಹೃತ್ಸುತಾಃ ॥ ೩೫ ॥**
**ತವಾಽಧೀನಂ ಮಹಾವಿಪ್ರ ಪ್ರಯಚ್ಛಾಮಿ ಪ್ರಸೀದ ಮೇ ।**
**ಪರಸ್ಪರಂ ವಿವದತೋರ್ವಿಪ್ರರಾಜ್ಞೋಸ್ತದಾ ನೃಪ ॥ ೩೬ ॥**
**ಸ್ಫುಟಿತ್ವಾ ಹೃದಯಂ ಶೀಘ್ರಂ ಮುನಿಭಾರ್ಯಾ ಮೃತಾ ತದಾ ।**
**ಪುತ್ರಶೋಕಸಮಾವಿಷ್ಟಾ ನಿರ್ಜೀವಾ ಪತಿತಾ ಕ್ಷಿತೌ ॥ ೩೭ ॥**
**ಪುತ್ರಾಶ್ಚ ಮಾತೃಶೋಕೇನ ಸರ್ವೇ ಪಂಚತ್ವಮಾಗತಾಃ ।**
**ಸ್ನುಷಾಶ್ಚೈವ ತದಾ ಸರ್ವಾ ಮೃತಾಶ್ಚ ಸಹ ಭರ್ತೃಭಿಃ ॥ ೩೮ ॥**
**ಪಂಚತ್ವಂ ಚ ಗತಾಃ ಸರ್ವೇ ಮುನಿಮುಖ್ಯಾ ನೃಪೋತ್ತಮ ।**
**ವಿಪ್ರಾನಾಹ್ವಾಪಯಾಮಾಸ ಯೇ ತತ್ರಾಶ್ರಮವಾಸಿನಃ ॥ ೩೯ ॥**
**ತೇಭ್ಯೋ ನಿವೇದಯಾಮಾಸ ಯಥಾವೃತ್ತಂ ನೃಪೋತ್ತಮಃ ।**
**ಸ ತೈಸ್ತದಾಽಭ್ಯನುಜ್ಞಾತಃ ಕಾಷ್ಠಾನ್ಯಾದಾಯ ಯತ್ನತಃ ॥ ೪೦ ॥**
**ದಾಹಂ ಸಂಚಯನಂ ಚಕ್ರೇ ಚಿತ್ರಸೇನೋ ಮಹೀಪತಿಃ ।**
**ಋಕ್ಷಶೃಂಗಾದಿಸರ್ವೇಷಾಂ ಗೃಹೀತ್ವಾಽಸ್ಥೀನಿ ಯತ್ನತಃ ॥ ೪೧ ॥**
**ಯಾಮ್ಯಾಶಾಂ ಪ್ರಸ್ಥಿತೋ ರಾಜಾ ಪಾದಚಾರೀ ಮಹೀಪತೇ ।**
**ನ ಶಕ್ನೋತಿ ಯದಾ ಗಂತುಂ ಛಾಯಾಮಾಶ್ರಿತ್ಯ ತಿಷ್ಠತಿ ॥ ೪೨ ॥**

---

೩೫–೩೭. ರಾಜನು ಹೇಳುತ್ತಾನೆ.—ಮುನಿಯೆ! ನನಗೆ ಅಪ್ಪಣೆಯನ್ನು ಕೊಡು. ನಿಶ್ಚಯವಾಗಿಯೂ ಮಾಡುವೆನು. ನನ್ನ ರಾಜ್ಯ, ಕೋಶ, ಮಿತ್ರರು, ಮಕ್ಕಳು ಇವೆಲ್ಲವೂ ನಿನ್ನ ಅಧೀನನಾಗಿರುವುವು. ಅವನ್ನೆಲ್ಲ ಕೊಡುವೆನು. ನನ್ನಲ್ಲಿ ಪ್ರಸನ್ನನಾಗು. ಹೀಗೆ ಆ ಬ್ರಾಹ್ಮಣನೂ, ರಾಜನೂ ಮಾತಾಡುತ್ತಿರಲು ಬ್ರಾಹ್ಮಣನ ಪತ್ನಿಯು ಪುತ್ರಶೋಕದಿಂದ ಎದೆಯೊಡೆದು ಮಡಿದು ನಿರ್ಜೀವಳಾಗಿ ನೆಲದಮೇಲೆ ಬಿದ್ದಳು

೩೮. ಮಕ್ಕಳೂ ತಾಯಿಯು ಮೃತಳಾದ್ದರಿಂದ ದುಃಖಗೊಂಡು ಮಡಿದರು. ಸೊಸೆಯರೂ ಪತಿಗಳೊಡನೆ ಮೃತರಾದರು.

೩೯–೪೨. ಮುನಿಯೇ ಮೊದಲಾದವರು ಮಡಿಯಲು ರಾಜನು ಆ ಆಶ್ರಮದಲ್ಲಿ ವಾಸಮಾಡುತ್ತಿದ್ದ ಬ್ರಾಹ್ಮಣರನ್ನು ಕರೆದು ಅವರಿಗೆ ನಡೆದ ಸಮಾಚಾರವನ್ನು ತಿಳಿಸಿದನು. ಅವರ ಅನುಮತಿಯಂತೆ ಕಾಷ್ಠಗಳನ್ನು ತಂದು ದಾಹಸಂಚಯನಾದಿಗಳನ್ನು ಮಾಡಿ ಆ ಋಕ್ಷಶೃಂಗನೇ ಮೊದಲಾದವರ ಅಸ್ಥಿಗಳನ್ನು ತೆಗೆದುಕೊಂಡು ಪಾದಚಾರಿಯಾಗಿ ದಕ್ಷಿಣದಿಕ್ಕಿಗೆ ಪ್ರಯಾಣಮಾಡಿ ನಡೆದು ನಡೆಯಲಾರದಿದ್ದಾಗ ನೆರಳಿನಲ್ಲಿ ನಿಂತನು.

ವಿಶ್ರಮ್ಯ ಚ ಪುನರ್ಗಚ್ಛೇದ್ಭಾರಾಕ್ರಾಂತೋ ಮಹೀಪತಿಃ ।
ಸಚೈಲಂ ಕುರುತೇ ಸ್ನಾನಂ ಮುಕ್ತ್ವಾಽಸ್ಥೀನಿ ಪದೇ ಪದೇ ॥ ೪೩ ॥
ಪಿಬೇಜ್ಜಲಂ ನಿರಾಹಾರಃ ಸ ಗಚ್ಛನ್ದಕ್ಷಿಣಾಮುಖಃ ।
ಅಚಿರೇಣೈವ ಕಾಲೇನ ಸಂಗತೋ ನರ್ಮದಾತಟಂ ॥ ೪೪ ॥
ಆಶ್ರಮಸ್ಥಾನ್ದ್ವಿಜಾನ್ದೃಷ್ಟ್ವಾ ಪಪ್ರಚ್ಛ ಪೃಥಿವೀಪತಿಃ ॥ ೪೫ ॥

ಚಿತ್ರಸೇನ ಉವಾಚ :—

ಕಥ್ಯತಾಂ ಶೂಲಭೇದಸ್ಯ ಮಾರ್ಗಂ ಮೇ ದ್ವಿಜಸತ್ತಮಾಃ ।
ಯೇನ ಯಾಮಿ ಮಹಾಭಾಗಾ ಸ್ವಕಾರ್ಯಾರ್ಥಸ್ಯ ಸಿದ್ಧಯೇ ॥ ೪೬ ॥

ಮುನಯ ಊಚುಃ :—

ಇತಃ ಕ್ರೋಶಾಂತರಾದರ್ವಾಕ್ತೀರ್ಥಂ ಪರಮಶೋಭನಂ ।
ನರ್ಮದಾದಕ್ಷಿಣೇ ಕೂಲೇ ತತೋ ದ್ರಕ್ಷ್ಯಸಿ ನಾಽನ್ಯಥಾ ॥ ೪೭ ॥
ಋಷಿವಾಕ್ಯೇನ ರಾಜಾಽಸೌ ಶೀಘ್ರಂ ಗತ್ವಾ ನರೇಶ್ವರಃ ।
ಸ ದದರ್ಶ ತತಃ ಶೀಘ್ರಂ ಬಹುದ್ವಿಜಸಮಾಕುಲಂ ॥ ೪೮ ॥
ಬಹುದ್ರುಮಲತಾಕೀರ್ಣಂ ಬಹುಪುಷ್ಪೋಪಶೋಭಿತಂ ।
ಋಕ್ಷಸಿಂಹಸಮಾಕೀರ್ಣಂ ನಾನಾವ್ರತಧರೈಃ ಶುಭೈಃ ॥ ೪೯ ॥

---

೪೩–೪೪. ಅಸ್ಥಿಯ ಭಾರವನ್ನು ಹೊತ್ತಿರುವ ರಾಜನು ವಿಶ್ರಾಂತಿಗಾಗಿ ಆಗಾಗ ಆ ಅಸ್ಥಿಗಳನ್ನು ಕೆಳಗಿಟ್ಟು ಸಚೇಲಸ್ನಾನಮಾಡಿ ನೀರನ್ನು ಕುಡಿದು ನಿರಾಹಾರನಾಗಿ ದಕ್ಷಿಣಾಭಿಮುಖನಾಗಿ ಹೋಗುತ್ತ ಬೇಗನೆ ನರ್ಮದಾ ತಟವನ್ನು ಸೇರಿದನು.

೪೫. ಅವನು ಅಲ್ಲಿ ಆಶ್ರಮದಲ್ಲಿರುವ ಬ್ರಾಹ್ಮಣರನ್ನು ಕಂಡು ಹೀಗೆ ಪ್ರಶ್ನೆ ಮಾಡಿದನು.

೪೬–೪೭. ಚಿತ್ರಸೇನನು ಹೇಳುತ್ತಾನೆ —ದ್ವಿಜವರ್ಯರೆ! ಶೂಲಭೇದ ತೀರ್ಥಕ್ಕೆ ಮಾರ್ಗವನ್ನು ಹೇಳಿರಿ. ಅಲ್ಲಿಗೆ ನನ್ನ ಕಾರ್ಯಸಿದ್ಧಿಗಾಗಿ ಹೋಗುವೆನು. ಮುನಿಗಳು ಹೇಳುತ್ತಾರೆ —ನೀನು ಈ ನರ್ಮದಾನದಿಯ ದಕ್ಷಿಣ ತಟದಲ್ಲಿ ಇಲ್ಲಿಂದ ಎರಡು ಮೈಲಿಗಳ ಒಳಗೆ ಅತಿ ಮನೋಹರವಾದ ಆ ತೀರ್ಥವನ್ನು ಕಾಣುವೆ. ಬೇರೆ ವಿಧವಾಗಿ ಇಲ್ಲ.

೪೮–೪೯. ಆ ರಾಜನು ಋಷಿಗಳ ಮಾತಿನಿಂದ ಶೀಘ್ರವಾಗಿ ಹೋಗಿ ಅನೇಕ ಬ್ರಾಹ್ಮಣರಿಂದ ಕೂಡಿರುವುದೂ, ಅನೇಕ ಮರಗಳಿಂದ ತುಂಬಿರುವುದೂ, ಬಹು ಪುಷ್ಪಗಳಿಂದ ವಿರಾಜಿಸುವುದೂ, ಕರಡಿ, ಸಿಂಹಗಳಿಂದ ಕೂಡಿರುವುದೂ, ಮಂಗಳಕರವಾದ ನಾನಾ ವ್ರತಧಾರಿಗಳಿಂದ ತುಂಬಿರುವುದೂ ಆದ ಆ ತೀರ್ಥವನ್ನು ಕಂಡನು.

ಏಕಪಾದಾ ಸ್ಥಿತಾಃ ಕೇಚಿದಪರೇ ಸೂರ್ಯದೃಷ್ಟಯಃ ।
ಏಕಾಂಗುಷ್ಠಸ್ಥಿತಾಃ ಕೇಚಿದೂರ್ಧ್ವಬಾಹುಸ್ಥಿತಾಃ ಪರೇ ॥ ೫೦ ॥
ದಿನೈಕಭೋಜನಾಃ ಕೇಚಿತ್ಕೇಚಿತ್ಕಂದಫಲಾಽಶನಾಃ ।
ತ್ರಿರಾತ್ರಭೋಜನಾಃ ಕೇಚಿತ್ಪರಾಕವ್ರತಿನೋಽಪರೇ ॥ ೫೧ ॥
ಚಾಂದ್ರಾಯಣರತಾಃ ಕೇಚಿತ್ಕೇಚಿತ್ಪಕ್ಷೋಪವಾಸಿನಃ ।
ಮಾಸೋಪವಾಸಿನಃ ಕೇಚಿತ್ಕೇಚಿದೃತ್ವಂತಪಾರಣಾಃ ॥ ೫೨ ॥
ಯೋಗಾಭ್ಯಾಸರತಾಃ ಕೇಚಿತ್ಕೇಚಿದ್ಧ್ಯಾಯಂತಿ ತತ್ಪದಂ ।
ಶೀರ್ಣಪರ್ಣಾಽಶಿನಃ ಕೇಚಿತ್ಕೇಚಿಚ್ಚ ಕಟುಕಾಽಶನಾಃ ॥ ೫೩ ॥
ಶೈವಾಲಭೋಜನಾಃ ಕೇಚಿತ್ಕೇಚಿನ್ಮಾರುತಭೋಜನಾಃ ।
ಗಾರ್ಹಸ್ಥ್ಯೇ ಚ ಸ್ಥಿತಾಃ ಕೇಚಿತ್ಕೇಚಿಚ್ಚೈವಾಽಗ್ನಿಹೋತ್ರಿಣಃ ॥ ೫೪ ॥
ಏವಂ ವಿಧಾನ್ ದ್ವಿಜಾನ್ದೃಷ್ಟ್ವಾ ಜಾನುಭ್ಯಾಮವನಿಂ ಗತಃ ।
ಪ್ರಣಮ್ಯ ಶಿರಸಾ ರಾಜನ್ರಾಜಾ ವಚನಮಬ್ರವೀತ್ ॥ ೫೫ ॥

ಚಿತ್ರಸೇನ ಉವಾಚ :—

ಕಸ್ಮಿನ್ದೇಶೇ ಚ ತತ್ತೀರ್ಥಂ ಸತ್ಯಂ ಕಥಯತ ದ್ವಿಜಾಃ ।
ಯೇನಾಽಭಿವಾಂಛಿತಾ ಸಿದ್ಧಿಃ ಸಫಲಾ ಮೇ ಭವಿಷ್ಯತಿ ॥ ೫೬ ॥

---

೫೦–೫೪. ಅಲ್ಲಿ ಕೆಲವರು ಒಂದು ಪಾದದಿಂದಲೆ ನಿಂತವರೂ, ಇನ್ನು ಕೆಲವರು ಸೂರ್ಯನನ್ನು ನೋಡುವವರೂ, ಕೆಲವರು ಒಂದು ಬೆರಳಿನಿಂದ ನಿಂತವರೂ, ಕೆಲವರು ಊರ್ಧ್ವಬಾಹುಗಳಾಗಿ ನಿಂತವರೂ, ಕೆಲವರು ದಿನಕ್ಕೆ ಒಂದಾವೃತ್ತಿ ಭುಂಜಿಸುವವರೂ, ಕೆಲವರು ಗಣಸು ಹಣ್ಣುಗಳನ್ನು ತಿನ್ನುವವರೂ, ಕೆಲವರು ಮೂರು ರಾತ್ರಿಗಳಿಗೊಮ್ಮೆ ಭೋಜನ ಮಾಡುವವರೂ, ಕೆಲವರು ಪರಾಕ ವ್ರತಧಾರಿಗಳೂ, ಕೆಲವರು ಚಾಂದ್ರಾಯಣ ವ್ರತನಿರತರೂ, ಕೆಲವರು ಪಕ್ಷಕಾಲ ಉಪವಾಸಮಾಡುವವರೂ, ಕೆಲವರು ತಿಂಗಳಕಾಲ ಉಪವಾಸಮಾಡುವವರೂ, ಕೆಲವರು ಋತುವಿನ ಕೊನೆಯಲ್ಲಿ ಪಾರಣೆಮಾಡುವವರೂ, ಕೆಲವರು ಯೋಗಾಭ್ಯಾಸ ನಿರತರೂ, ಕೆಲವರು ಉತ್ತಮಸ್ಥಾನವನ್ನು ಧ್ಯಾನಿಸುವವರೂ, ಕೆಲವರು ಒಣಗಿದ ಎಲೆಗಳನ್ನು ತಿನ್ನುವವರೂ, ಕೆಲವರು ಕಹಿಯಾದ ಪದಾರ್ಥಗಳನ್ನು ಭುಂಜಿಸುವವರೂ, ಕೆಲವರು ಪಾಚಿಯನ್ನು ತಿನ್ನುವವರೂ, ಕೆಲವರು ಗಾಳಿಯನ್ನು ಸೇವಿಸುವವರೂ, ಕೆಲವರು ಗೃಹಸ್ಥರೂ, ಕೆಲವರು ಅಗ್ನಿಹೋತ್ರಿಗಳೂ ಆಗಿದ್ದರು.

೫೫. ಆ ರಾಜನು ಇಂತಹ ಬ್ರಾಹ್ಮಣರನ್ನು ಈಕ್ಷಿಸಿ ಮೊಣಕಾಲುಗಳನ್ನೂರಿ ತಲೆಬಾಗಿ ವಂದಿಸಿ ಇಂತೆಂದನು.

೫೬. ಚಿತ್ರಸೇನನು ಹೇಳುತ್ತಾನೆ:—ಎಲೈ ದ್ವಿಜರೆ! ಶೂಲಭೇದತೀರ್ಥವು ಎಲ್ಲಿದೆ? ನಿಜವಾಗಿ ಹೇಳಿರಿ. ಅದರಿಂದ ನನ್ನ ಇಷ್ಟಾರ್ಥವು ನೆರವೇರುವುದು.

ಋಷಯ ಊಚುಃ:—

ಧನ್ವಂತರಶತಂ ಗಚ್ಛ ಭೃಗುತುಂಗಸ್ಯ ಮೂರ್ಧನಿ ।
ಕುಂಡಂ ದ್ರಕ್ಷ್ಯಸಿ ತತ್ಪೂರ್ಣಂ ವಿಸ್ತೀರ್ಣಂ ಪಯಸಾ ಶಿವಂ ॥ ೫೭ ॥
ತೇಷಾಂ ತದ್ವಚನಂ ಶ್ರುತ್ವಾ ಗತಃ ಕುಂಡಸ್ಯ ಸನ್ನಿಧೌ ।
ದೃಷ್ಟ್ವಾ ಚೈವ ತು ತತ್ತೀರ್ಥಂ ಭ್ರಾಂತಿರ್ಜಾತಾ ನೃಪಸ್ಯ ವೈ ॥ ೫೮ ॥
ತತೋ ವಿಸ್ಮಯಮಾಪನ್ನಶ್ಚಿಂತಯನ್ವೈ ಮುಹುರ್ಮುಹುಃ ।
ಆಕಾಶಸ್ಥಂ ದದರ್ಶಾಽಸೌ ಸಾಮಿಷಂ ಕುರರಂ ನೃಪಃ ॥ ೫೯ ॥
ಭ್ರಮಮಾಣಂ ಗೃಹೀತಾಽಹಿಂ ವಧ್ಯಮಾನಂ ನಿರಾಮಿಷೈಃ ।
ಪರಸ್ಪರಂ ಚ ಯುಯುಧುಃ ಸರ್ವೇಽಪ್ಯಾಮಿಷಕಾಂಕ್ಷಯಾ ॥ ೬೦ ॥
ಹತಶ್ಚಂಚುಪ್ರಹಾರೇಣ ಸ ತತಃ ಪತಿತೋಽಂಭಸಿ ।
ಶೂಲೇನ ಶೂಲಿನಾ ಯತ್ರ ಭೂಭಾಗೋ ಭೇದಿತಃ ಪುರಾ ॥ ೬೧ ॥
ತತ್ತೀರ್ಥಸ್ಯ ಪ್ರಭಾವೇಣ ಸ ಸದ್ಯಃ ಪುರುಷೋಽಭವತ್ ।
ವಿಮಾನಸ್ಥಂ ದದರ್ಶಾಽಸೌ ಪುಮಾಂಸಂ ದಿವ್ಯರೂಪಿಣಂ ॥ ೬೨ ॥
ಗಂಧರ್ವಾಪ್ಸರಸೋ ಯಕ್ಷಾಸ್ತಂ ಯಾಂತಂ ತುಷ್ಟುವುರ್ದಿವಿ ।
ಅಪ್ಸರೋಗೀಯಮಾನೇ ತು ಗತೇ ಸೂರ್ಯಸ್ಯ ಮೂರ್ಧನಿ ।
ಚಿತ್ರಸೇನಸ್ತತಸ್ತಸ್ಮಿನ್ನಾಶ್ಚರ್ಯಂ ಪರಮಂ ಗತಃ ॥ ೬೩ ॥

---

೫೭. ದೊರೆಯೆ! ನೀನು ನೂರು ಬಿಲ್ಲಿನ ದೂರ ಹೋಗು. ಅಲ್ಲಿ ಭೃಗು ಪರ್ವತದ ಶಿಖರದಲ್ಲಿ ನೀರಿನಿಂದ ತುಂಬಿರುವ ವಿಸ್ತೀರ್ಣವಾದ ಒಂದು ಕುಂಡವನ್ನು ನೋಡುವೆ.

೫೮. ಅವರ ಆ ಮಾತನ್ನು ಕೇಳಿ ಕುಂಡದ ಹತ್ತಿರ ಹೋಗಿ ಆ ತೀರ್ಥವನ್ನು ನೋಡಿದ ಕೂಡಲೆ ರಾಜನಿಗೆ ಭ್ರಾಂತಿಯುಂಟಾಯಿತು.

೫೯. ಬಳಿಕ ಅವನು ಆಶ್ಚರ್ಯಗೊಂಡು ಬಾರಿಬಾರಿಗೂ ಚಿಂತಿಸುತ್ತ ಆಕಾಶದಲ್ಲಿ ಮಾಂಸವನ್ನು ಕಚ್ಚಿಕೊಂಡಿರುವ ಕುರರ ಪಕ್ಷಿಯನ್ನು ಕಂಡನು.

೬೦. ಮಾಂಸವಿಲ್ಲದ ಇತರ ಪಕ್ಷಿಗಳು ಮಾಂಸದ ಆಶೆಯಿಂದ ಸರ್ಪವನ್ನು ಕಚ್ಚಿಕೊಂಡು ಸುತ್ತುತ್ತಿರುವ ಆ ಕುರರ ಪಕ್ಷಿಯೊಡನೆ ಪರಸ್ಪರ ಜಗಳವಾಡಿದುವು.

೬೧. ಆ ಪಕ್ಷಿಗಳ ಕೊಕ್ಕುಗಳ ಏಟಿನಿಂದ ಮಡಿದ ಆ ಕುರರ ಪಕ್ಷಿಯು ಈಶ್ವರನು ಶೂಲದಿಂದ ಹಿಂದೆ ಸೀಳಿದ ಸ್ಥಳದಲ್ಲಿ ಬಿದ್ದಿತು.

೬೨–೬೩. ಅದು ಕೂಡಲೆ ಆ ತೀರ್ಥದ ಪ್ರಭಾವದಿಂದ ಪುರುಷಾಕಾರವನ್ನು ತಾಳಿತು. ಚಿತ್ರಸೇನನು ವಿಮಾನದಲ್ಲಿರುವ ಆ ದಿವ್ಯ ರೂಪಿಯಾದ ಪುರುಷನನ್ನು ಕಂಡನು. ಗಂಧರ್ವರು, ಅಪ್ಸರರು ಯಕ್ಷರು ಇವರು ಆಕಾಶದಲ್ಲಿ ಹೋಗು

ಋಷಿಣಾ ಕಥಿತಂ ಯದ್ವತ್ತದ್ವತ್ತೀರ್ಥಂ ನ ಸಂಶಯಃ ।
ಹೃಷ್ಟರೋಮಾಭವದ್ದೃಷ್ಟ್ವಾ ಪ್ರಭಾವಂ ತೀರ್ಥಸಂಭವಂ ॥ ೬೪ ॥
ಮಮಾದ್ಯ ದಿವಸೋ ಧನ್ಯೋ ಯಸ್ಮಾದತ್ರ ಸಮಾಗತಃ ।
ಅಸ್ಥೀನಿ ಭೂಮೌ ನಿಕ್ಷಿಪ್ಯ ಸ್ನಾನಂ ಕೃತ್ವಾ ಯಥಾವಿಧಿ ॥ ೬೫ ॥
ತಿಲಮಿಶ್ರೇಣ ತೋಯೇನಾತರ್ಪಯತ್ಪಿತೃದೇವತಾಃ ।
ಗೃಹ್ಯಾಸ್ಥೀನಿ ತತೋ ರಾಜಾ ಚಿಕ್ಷೇಪಾಂತರ್ಜಲೇ ತದಾ ॥ ೬೬ ॥
ಕ್ಷಣಮೇಕಂ ತತೋ ವೀಕ್ಷ್ಯ ರಾಜೋರ್ಧ್ವವದನಃ ಸ್ಥಿತಃ ।
ತಾನ್ದದರ್ಶ ಪುನಃ ಸರ್ವಾನ್ದಿವ್ಯರೂಪಧರಾಂಛುಭಾನ್ ॥ ೬೭ ॥
ದಿವ್ಯವಸ್ತ್ರೈಶ್ಚ ಸಂವೀತಾನ್ದಿವ್ಯಾಭರಣಭೂಷಿತಾನ್ ।
ವಿಮಾನೈರ್ವಿವಿಧೈರ್ದಿವ್ಯೈರಪ್ಸರೋಗಣಸೇವಿತೈಃ ॥ ೬೮ ॥
ಪೃಥಗ್ಭೂತಾಂಶ್ಚ ತಾನ್ ಸರ್ವಾನ್ವಿಮಾನೇಷು ವ್ಯವಸ್ಥಿತಾನ್ ।
ಉತ್ಪತ್ತಿವತ್ಸಮಾಲೋಕ್ಯ ರಾಜಾ ಸಂಹರ್ಷಿತೋಽಭವತ್ ॥ ೬೯ ॥
ಋಷಿರ್ವಿಮಾನಮಾರೂಢಶ್ಚಿತ್ರಸೇನಮಥಾಽಬ್ರವೀತ್ ।
ಭೋಃ ಭೋಃ ಸಾಧೋ ಮಹಾರಾಜ ಚಿತ್ರಸೇನ ಮಹೀಪತೇ ॥ ೭೦ ॥

---

ತ್ತಿರುವ ಆ ಮನುಷ್ಯನನ್ನು ಸ್ತುತಿಸಿದರು. ಅಪ್ಸರರು ಸ್ತುತಿಸುತ್ತಿರಲು ಆ ಪುರುಷನು ಸೂರ್ಯನನ್ನು ದಾಟಿ ಮೇಲಕ್ಕೆ ಹೋಗಲು ಚಿತ್ರಸೇನನು ಅವನನ್ನು ನೋಡಿ ಆಶ್ಚರ್ಯಗೊಂಡನು

೬೪. ಆ ತೀರ್ಥವು ಋಷಿಗಳು ಹೇಳಿದಂತೆಯೇ ಇದ್ದಿತು. ರಾಜನು ಆ ತೀರ್ಥದ ಪ್ರಭಾವವನ್ನು ನೋಡಿ ರೋಮಾಂಚಗೊಂಡನು.

೬೫–೬೬. "ನಾನು ಈದಿನ ಇಲ್ಲಿಗೆ ಬಂದದ್ದರಿಂದ ಪುಣ್ಯವಂತನಾದೆನು" ಎಂದಾಲೋಚಿಸಿ ಅಸ್ಥಿಗಳನ್ನು ಭೂಮಿಯಲ್ಲಿಟ್ಟು ವಿಧಿಯಂತೆ ಮಿಂದು ತಿಲಮಿಶ್ರವಾದ ನೀರಿನಿಂದ ಪಿತೃದೇವತೆಗಳನ್ನು ತೃಪ್ತಿಗೊಳಿಸಿದನು. ಬಳಿಕ ಅಸ್ಥಿಗಳನ್ನು ತೆಗೆದುಕೊಂಡು ಅವುಗಳನ್ನು ನೀರಿನಲ್ಲಿ ಹಾಕಿದನು.

೬೭–೬೯. ದೊರೆಯು ಬಳಿಕ ಒಂದು ಕ್ಷಣಕಾಲ ಮುಖವನ್ನು ಮೇಲಕ್ಕೆತ್ತಿ ದಿವ್ಯರೂಪಧಾರಿಗಳೂ, ದಿವ್ಯವಸ್ತ್ರಗಳನ್ನುಟ್ಟವರೂ, ದಿವ್ಯಾಭರಣಗಳಿಂದ ಅಲಂಕಾರಗೊಂಡವರೂ, ಅಪ್ಸರೆಯರಿಂದ ಸೇವಿಸಲ್ಪಟ್ಟ ದಿವ್ಯ ವಿಮಾನದಲ್ಲಿ ಪ್ರತ್ಯೇಕವಾಗಿ ಕುಳಿತಿರುವರೂ ಆಗಿ ಪುನರ್ಜನ್ಮವನ್ನು ಹೊಂದಿದಂತಿನ ಆ ಮುನಿ ಮೊದಲಾದವರನ್ನು ನೋಡಿ ಸಂತೋಷಗೊಂಡನು.

೭೦–೭೧. ವಿಮಾನವನ್ನೇರಿದ ದೀರ್ಘತಪನು ಚಿತ್ರಸೇನನನ್ನು ಕುರಿತು ಹೀಗೆಂದನು. "ಎಲೈ ಸಾಧುವಾದ ಚಿತ್ರಸೇನ ಮಹಾರಾಜನೆ! ನಿನ್ನ ಅನುಗ್ರಹ

ತ್ವತ್ಪ್ರಸಾದಾನ್ನೃಪಶ್ರೇಷ್ಠ ಗತಿರ್ದಿವ್ಯಾ ಮಮೇದೃಶೀ ।
ಜಾತೇಯಂ ಯತ್ತ್ವಯಾ ಕಾರ್ಯಂ ಕೃತಂ ಪರಮಶೋಭನಂ ॥ ೭೧ ॥
ಸ್ವಸುತೋಽಪಿ ನ ಶಕ್ನೋತಿ ಪಿತೄಣಾಂ ಕರ್ತುಮೀದೃಶಂ ।
ಮದೀಯವಚನಾತ್ತಾತ ನಿಷ್ಪಾಪಸ್ತ್ವಂ ಭವಿಷ್ಯಸಿ ॥ ೭೨ ॥
ಫಲಂ ಪ್ರಾಪ್ಸ್ಯಸಿ ರಾಜೇಂದ್ರ ಕಾಮಿಕಂ ಮನಸೇಪ್ಸಿತಂ ।
ಆಶೀರ್ವಾದಾಂಸ್ತತೋ ದತ್ವಾ ಚಿತ್ರಸೇನಾಯ ಧೀಮತೇ ।
ಸ್ವರ್ಗಂ ಜಗಾಮ ಸಸುತಸ್ತತೋ ದೀರ್ಘತಪಾ ಮುನಿಃ ॥ ೭೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ದೀರ್ಘತಪಸಃ ಸ್ವರ್ಗಾರೋಹಣವರ್ಣನಂ"
ನಾಮ ಚತುಃಪಂಚಾಶತ್ತಮೋಽಧ್ಯಾಯಃ

---

ದಿಂದ ನನಗೆ ಇಂತಹ ದಿವ್ಯಗತಿಯುಂಟಾಯಿತು. ನೀನು ಮಂಗಳಕರವಾದ ಕಾರ್ಯವನ್ನು ಮಾಡಿರುವೆ.

೭೨. ಪಿತೃಗಳಿಗೆ ಮಗನೂ ಇಂತಹ ಕಾರ್ಯವನ್ನೆಸಗಲು ಶಕ್ತನಾಗುವುದಿಲ್ಲ. ನೀನು ನನ್ನ ಮಾತಿನಿಂದ ಪಾಪವಿಲ್ಲದವನಾಗಿರುವೆ.

೭೩. ಮತ್ತು ಮನೋಭಿಲಷಿತವನ್ನು ಪಡೆಯುವೆ. ಮುನಿಯು ಹೀಗೆ ಚಿತ್ರಸೇನನಿಗೆ ಆಶೀರ್ವಾದವನ್ನಿತ್ತು ಪುತ್ರರೊಡನೆ ಸ್ವರ್ಗಕ್ಕೆ ತೆರಳಿದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ದೀರ್ಘತಪನ ಸ್ವರ್ಗಾರೋಹಣವರ್ಣನ"ವೆಂಬ
ಐವತ್ತನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಪಂಚಪಂಚಾಶತ್ತಮೋಽಧ್ಯಾಯಃ

## ಕಾಶೀರಾಜಮೋಕ್ಷಗಮನವರ್ಣನಂ

ಉತ್ತಾನಪಾದ ಉವಾಚ :—

ಮಾಹಾತ್ಮ್ಯಂ ತೀರ್ಥಜಂ ದೃಷ್ಟ್ವಾ ಚಿತ್ರಸೇನೋ ನರೇಶ್ವರಃ ।
ಕಿಂ ಚಕಾರ ಕ್ವ ವಾ ವಾಸಂ ಕಿಮಾಹಾರೋ ಬಭೂವ ಹ ॥ ೧ ॥

ಈಶ್ವರ ಉವಾಚ :—

ಭೃಗುತಂಗಂ ಸಮಾರುಹ್ಯ ಐಶಾನೀಂ ದಿಶಮಾಶ್ರಿತಃ ।
ತಪಶ್ಚಚಾರ ವಿಪುಲಂ ಕುಂಡೇ ತತ್ರ ನೃಪೋತ್ತಮಃ ॥ ೨ ॥
ಸರ್ವಾನ್ದೇವಾನ್ ಹೃದಿ ಧ್ಯಾತ್ವಾ ಬ್ರಹ್ಮವಿಷ್ಣುಮಹೇಶ್ವರಾನ್ ।
ವಿಚಿಕ್ಷೇಪ ಯದಾತ್ಮಾನಂ ಪ್ರತ್ಯಕ್ಷೌ ರುದ್ರಕೇಶವೌ ।
ಕರೇ ಗೃಹೀತ್ವಾ ರಾಜಾನಂ ರುದ್ರೋ ವಚನಮಬ್ರವೀತ್ ॥ ೩ ॥

ಈಶ್ವರ ಉವಾಚ :—

ಪ್ರಾಣತ್ಯಾಗಂ ಮಹಾರಾಜ ಮಾಽಕಾಲೇ ತ್ವಂ ಕೃಥಾ ವೃಥಾ ।
ಅದ್ಯಾಪ್ಯಸಿ ಯುವಾ ತ್ವಂ ವೈ ನ ಯುಕ್ತಂ ಮರಣಂ ತವ ॥ ೪ ॥

---

## ಕನ್ನಡದ ಅನುವಾದ

### ಕಾಶೀರಾಜಮೋಕ್ಷಗಮನವರ್ಣನ

೧. ಉತ್ತಾನಪಾದನು ಹೇಳುತ್ತಾನೆ —ಚಿತ್ರಸೇನರಾಜನು ಆ ತೀರ್ಥದ ಮಾಹಾತ್ಮ್ಯವನ್ನು ನೋಡಿ ಏನನ್ನು ಮಾಡಿದನು? ಎಲ್ಲಿ ವಾಸಮಾಡಿದನು? ಏನು ಆಹಾರವನ್ನು ತೆಗೆದುಕೊಂಡನು?

೨. ಈಶ್ವರನು ಹೇಳುತ್ತಾನೆ —ಆ ರಾಜನು ಭೃಗುಪರ್ವತದ ಶಿಖರವನ್ನೇರಿ ಈಶಾನ್ಯದಿಕ್ಕನ್ನಾಶ್ರಯಿಸಿ ಆ ಕುಂಡದಲ್ಲಿ ಅತಿಶಯತಪಸ್ಸನ್ನಾಚರಿಸಿದನು.

೩. ಅವನು ಬ್ರಹ್ಮವಿಷ್ಣು ಮಹೇಶ್ವರರನ್ನು ಧ್ಯಾನಮಾಡಿ ಕುಂಡದಲ್ಲಿ ಬೀಳುತ್ತಿರಲು ವಿಷ್ಣುಮಹೇಶ್ವರರು ಪ್ರತ್ಯಕ್ಷರಾದರು. ರುದ್ರನು ರಾಜನ ಕೈಯನ್ನು ಹಿಡಿದುಕೊಂಡು ಇಂತೆಂದನು.

೪. ಈಶ್ವರನು ಹೇಳುತ್ತಾನೆ —ಮಹಾರಾಜ! ನೀನು ಅಕಾಲದಲ್ಲಿ ವ್ಯರ್ಥವಾಗಿ ಪ್ರಾಣವನ್ನು ತ್ಯಜಿಸಬೇಡ. ನೀನಿನ್ನೂ ಯುವಕನಾಗಿರುವೆ. ನಿನಗೆ ಮರಣವು ಉಚಿತವಲ್ಲ.

ಸ್ವಸ್ಥಾನಂ ಗಚ್ಛ ಶೀಘ್ರಂ ತ್ವಂ ಭುಕ್ತ್ವಾ ಭೋಗಾನ್ಯಥೇಪ್ಸಿತಾನ್ ।
ಕುರು ನಿಷ್ಕಂಟಕಂ ರಾಜ್ಯಂ ನಾಕೇ ಶಕ್ರ ಇವಾಽಪರಃ ॥ ೫ ॥

ಚಿತ್ರಸೇನ ಉವಾಚ :—

ನ ರಾಜ್ಯಂ ಕಾಮಯೇ ದೇವ ನ ಪುತ್ರಾನ್ನ ಚ ಬಾಂಧವಾನ್ ।
ನ ಭಾರ್ಯಾಂ ನ ಚ ಕೋಶಂ ಚ ನ ಗಜಾನ್ನ ತುರಂಗಮಾನ್ ॥ ೬ ॥
ಮುಂಚ ಮುಂಚ ಮಹಾದೇವ ಮಾ ವಿಘ್ನಃ ಕ್ರಿಯತಾಂ ಮಮ ।
ಸ್ವರ್ಗಪ್ರಾಪ್ತಿರ್ಮಮಾಽದ್ಯೈವ ತ್ವತ್ಪ್ರಸಾದಾನ್ಮಹೇಶ್ವರ ॥ ೭ ॥

ಈಶ್ವರ ಉವಾಚ :—

ಯಸ್ಯಾಽಗ್ರತೋ ಭವೇದ್ಬ್ರಹ್ಮಾ ವಿಷ್ಣುಃ ಶಂಭುಸ್ತಥೈವ ಚ ।
ಸ್ವರ್ಗೇಣ ತಸ್ಯ ಕಿಂ ಕಾರ್ಯಂ ಸ ಗತಃ ಕಿಂ ಕರಿಷ್ಯತಿ ॥ ೮ ॥
ತುಷ್ಟಾ ವಯಂ ತ್ರಯೋ ದೇವಾ ವೃಣೀಷ್ವ ವರಮುತ್ತಮಂ ।
ಯಥೇಪ್ಸಿತಂ ಮಹಾರಾಜ ಸತ್ಯಮೇತದಸಂಶಯಂ ॥ ೯ ॥

ಚಿತ್ರಸೇನ ಉವಾಚ :—

ಯದಿ ತುಷ್ಟಾಸ್ತ್ರಯೋ ದೇವಾ ಬ್ರಹ್ಮವಿಷ್ಣುಮಹೇಶ್ವರಾಃ ।
ಅದ್ಯಪ್ರಭೃತಿ ಯುಷ್ಮಾಭಿಃ ಸ್ಥಾತವ್ಯಮಿಹ ಸರ್ವದಾ ॥ ೧೦ ॥

---

೫. ನೀನು ಬೇಗನೆ ನಿನ್ನ ರಾಜ್ಯಕ್ಕೆ ಹೋಗಿ ಇಷ್ಟವಾದ ಭೋಗಗಳನ್ನು ಅನುಭವಿಸಿ ಸ್ವರ್ಗದ ಮತ್ತೊಬ್ಬ ದೇವೇಂದ್ರನಂತೆ ನಿಷ್ಕಂಟಕವಾಗಿ ರಾಜ್ಯವನ್ನಾಳು.

೬. ಚಿತ್ರಸೇನನು ಹೇಳುತ್ತಾನೆ —ಸ್ವಾಮಿ! ನಾನು ರಾಜ್ಯವನ್ನೂ, ಪುತ್ರರನ್ನೂ, ಬಂಧುಗಳನ್ನೂ, ಪತ್ನಿಯನ್ನೂ, ಬೊಕ್ಕಸವನ್ನೂ, ಆನೆ ಕುದುರೆಗಳನ್ನೂ ಅಪೇಕ್ಷಿಸುವುದಿಲ್ಲ.

೭. ಮಹೇಶ್ವರ! ನೀನು ನನ್ನನ್ನು ಬಿಟ್ಟುಬಿಡು. ಅಡ್ಡಿ ಮಾಡಬೇಡ. ನನಗೆ ನಿನ್ನ ಅನುಗ್ರಹದಿಂದ ಈಗಲೆ ಸ್ವರ್ಗವು ಲಭಿಸಲಿ.

೮. ಈಶ್ವರನು ಹೇಳುತ್ತಾನೆ:—ಯಾವನಿಗೆ ಬ್ರಹ್ಮ, ವಿಷ್ಣು, ಮಹೇಶ್ವರರು ಪ್ರತ್ಯಕ್ಷರಾಗಿಯೇ ಇರುವರೊ, ಅವನಿಗೆ ಸ್ವರ್ಗದಿಂದೇನು ಬೇರೆ ಪ್ರಯೋಜನ? ಅವನು ಅಲ್ಲಿಗೆ ಹೋಗಿತಾನೆ ಏನನ್ನು ಮಾಡುವನು?

೯. ನಾವು ಮೂವರೂ ನಿನ್ನಲ್ಲಿ ಸಂತುಷ್ಟರಾಗಿದ್ದೇವೆ. ನಿನಗೆ ಇಷ್ಟವಾದ ಬೇರೊಂದು ಉತ್ತಮವರವನ್ನು ಕೇಳಿಕೊ.

೧೦. ಚಿತ್ರಸೇನನು ಹೇಳುತ್ತಾನೆ —ಬ್ರಹ್ಮ, ವಿಷ್ಣು, ಮಹೇಶ್ವರರು ನನ್ನಲ್ಲಿ ಸಂತುಷ್ಟರಾಗಿದ್ದರೆ ಇದು ಮೊದಲ್ಗೊಂಡು ನೀವು ಯಾವಾಗಲೂ ಇಲ್ಲಿಯೆ ವಾಸಮಾಡಿರಿ.

ಗಯಾಶಿರೋ ಯಥಾ ಪುಣ್ಯಂ ಕೃತಂ ಯುಷ್ಮಾಭಿರೇವ ಚ ।
ತಥೈವೇದಂ ಪ್ರಕರ್ತವ್ಯಂ ಶೂಲಭೇದಂ ಚ ಪಾವನಂ ॥ ೧೧ ॥
ಯತ್ರ ಯತ್ರ ಸ್ಥಿತಾ ಯೂಯಂ ತತ್ರ ತತ್ರ ವಸಾಮ್ಯಹಂ ।
ಗಣಾನಾಂ ಚೈವ ಸರ್ವೇಷಾಮಾಧಿಪತ್ಯಮಥಾಽಸ್ತು ಮೇ ॥ ೧೨ ॥

ಈಶ್ವರ ಉವಾಚ —

ಅದ್ಯ ಪ್ರಭೃತಿ ತಿಷ್ಠಾಮಃ ಶೂಲಭೇದೇ ನರೇಶ್ವರ ।
ತ್ರಿಕಾಲಂ ಹಿ ತ್ರಯೋ ದೇವಾಃ ಕಲಾಂಶೇನ ವಸಾಮಹೇ ॥ ೧೩ ॥
ನಂದಿಸಂಜ್ಞೋ ಗಣಾಧೀಶೋ ಭವಿಷ್ಯತಿ ಭವಾನ್ಧ್ರುವಂ ।
ಮತ್ಸಮೀಪೇ ತು ಭವತ ಆದೌ ಪೂಜಾ ಭವಿಷ್ಯತಿ ॥ ೧೪ ॥
ಪ್ರಕ್ಷಿಪ್ಯ ತಾನಿ ಚಾಽಸ್ಥೀನಿ ಯತ್ರ ದೀರ್ಘತಪಾ ಯಯೌ ।
ಸಕುಟುಂಬೋ ವಿಮಾನಸ್ಥಃ ಸ್ವರ್ಗತಸ್ತ್ವಂ ತಥಾ ಕುರು ॥ ೧೫ ॥
ಏವಂ ದೇವಾ ವರಂ ದತ್ವಾ ಚಿತ್ರಸೇನಾಯ ಪಾರ್ಥಿವ ।
ಕುಂಡಮೂರ್ಧನಿ ಯಾಮ್ಯಾಯಾಂ ತ್ರಯೋ ದೇವಸ್ತದಾ ಸ್ಥಿತಾಃ॥ ೧೬ ॥
ಪರಸ್ಪರಂ ವದಂತ್ಯೇವಂ ಪುಣ್ಯತೀರ್ಥಮಿದಂ ಪರಂ ।
ಯಥಾ ಗಯಾಶಿರಃ ಪುಣ್ಯಂ ಪೂರ್ವಮೇವ ಹಿ ಪಠ್ಯತೇ ।
ತಥಾ ರೇವಾತಟೇ ಪುಣ್ಯಂ ಶೂಲಭೇದಂ ನ ಸಂಶಯಃ ॥ ೧೭ ॥

---

೧೧. ನೀವು ಗಯೆಯನ್ನು ಪುಣ್ಯಕ್ಷೇತ್ರವನ್ನಾಗಿ ಮಾಡಿದಂತೆ ಈ ಶೂಲಭೇದವನ್ನೂ ಪಾವನವನ್ನಾಗಿ ಮಾಡಿರಿ.

೧೨. ನೀವಿರುವ ಸ್ಥಳದಲ್ಲೆಲ್ಲ ನಾನು ವಾಸಮಾಡುವೆನು. ನಿನ್ನ ಗಣಗಳಿಗೆಲ್ಲ ನನ್ನನ್ನು ಒಡೆಯನನ್ನಾಗಿ ಮಾಡು.

೧೩. ಈಶ್ವರನು ಹೇಳುತ್ತಾನೆ —ದೊರೆಯೆ! ಇದು ಮೊದಲ್ಗೊಂಡು ನಾವು ಮೂರುಕಾಲಗಳಲ್ಲಿಯೂ ಶೂಲಭೇದದಲ್ಲಿ ಕಲಾಂಶದಿಂದ ಇರುವೆವು.

೧೪. ನೀನು ನನ್ನ ಬಳಿಯಲ್ಲಿಯೆ ನಂದಿಯೆಂಬ ಹೆಸರಿನಿಂದ ಗಣಾಧ್ಯಕ್ಷನಾಗಿರುವೆ. ನನ್ನ ಬಳಿ ನಿನಗೆ ಮೊದಲ ಪೂಜೆಯು ನಡೆಯುವುದು.

೧೫–೧೬. ಈ ಕುಂಡದಲ್ಲಿ ಅಸ್ಥಿಗಳನ್ನು ಹಾಕುವುದರಿಂದ ದೀರ್ಘತಪನು ಕುಟುಂಬಸಹಿತನಾಗಿ ವಿಮಾನವನ್ನೇರಿ ದೇವಲೋಕಕ್ಕೆ ಹೋಗುವಂತೆ ನೀನು ಮಾಡು. ಅರಸ! ಆ ದೇವತೆಗಳು ಚಿತ್ರಸೇನನಿಗೆ ಹೀಗೆ ವರವನ್ನಿತ್ತು ಕುಂಡದ ಮೇಲ್ಭಾಗದಲ್ಲಿ ದಕ್ಷಿಣ ದಿಕ್ಕಿನಲ್ಲಿ ನೆಲೆಸಿದರು.

೧೭. ''ಗಯಾಶಿರಸ್ಸು ಪುಣ್ಯಕರವಾದಂತೆಯೇ ರೇವಾತಟದಲ್ಲಿ ಶೂಲಭೇದ ತೀರ್ಥವು ನಿಜವಾಗಿಯೂ ಅತಿ ಪುಣ್ಯಕರವಾದುದು'' ಎಂದು ಪರಸ್ಪರ ಮಾತಾಡಿಕೊಂಡರು.

ಈಶ್ವರ ಉವಾಚ :—

ಇದಂ ತೀರ್ಥಂ ತಥಾ ಪುಣ್ಯಂ ಯಥಾ ಪುಣ್ಯಂ ಗಯಾಶಿರಃ ।
ಸಕೃತ್ಪಿಂಡೋದಕೇನೈವ ನರೋ ನಿರ್ಮಲತಾಂ ವ್ರಜೇತ್ ॥ ೧೮ ॥
ಏಕಂ ಗಯಾಶಿರೋ ಮುಕ್ತ್ವಾ ಸರ್ವತೀರ್ಥಾನಿ ಭೂಪತೇ ।
ಶೂಲಭೇದಸ್ಯ ತೀರ್ಥಸ್ಯ ಕಲಾಂ ನಾಽರ್ಹಂತಿ ಷೋಡಶೀಂ ॥ ೧೯ ॥
ಕುಂಡಮುದೀಚ್ಯಾಂ ಯಾಮ್ಯಾಯಾಂ ದಶಹಸ್ತಪ್ರಮಾಣತಃ ।
ರೌದ್ರವಾರುಣಕಾಷ್ಠಾಯಾಂ ಪ್ರಮಾಣಂ ಚೈಕವಿಂಶತಿ ॥ ೨೦ ॥
ಏತತ್ಪ್ರಮಾಣಂ ತತ್ತೀರ್ಥಂ ಪಿಂಡದಾನಾದಿ ಕರ್ಮಸು ।
ನಾಽಧರ್ಮನಿರತಾ ದಾತುಂ ಲಭಂತೇ ದಾನಮತ್ರ ಹಿ ॥ ೨೧ ॥
ವಿಷ್ಣುಸ್ತು ಪಿತೃರೂಪೇಣ ಬ್ರಹ್ಮರೂಪೀ ಪಿತಾಮಹಃ ।
ಪ್ರಪಿತಾಮಹೋ ರುದ್ರೋಽಭೂದೇವಂ ತ್ರಿಪುರುಷಾಃ ಸ್ಥಿತಾಃ ॥ ೨೨ ॥
ಕದಾ ಪಶ್ಯತಿ ತೀರ್ಥಂ ವೈ ಕದಾ ನಸ್ತಾರಯಿಷ್ಯತಿ ।
ಇತಿ ಪ್ರತೀಕ್ಷಾಂ ಕುರ್ವಂತಿ ಪುತ್ರಾಣಾಂ ಸತತಂ ನೃಪ ।
ಶೂಲಭೇದೇ ನರಃ ಸ್ನಾತ್ವಾ ದೃಷ್ಟ್ವಾ ಶೂಲಧರಂ ಸಕೃತ್ ॥ ೨೩ ॥
ನಾಽಪುತ್ರೋ ನಾಽಧನೋ ರೋಗೀ ಸಪ್ತಜನ್ಮಸು ಜಾಯತೇ ।
ಏಕವಿಂಶತಿಂ ಪಿತುಃ ಪಕ್ಷೇ ಮಾತುಶ್ಚೈವೈಕವಿಂಶತಿಂ ॥ ೨೪ ॥

---

೧೮. ಈಶ್ವರನು ಹೇಳುತ್ತಾನೆ —ಗಯಾಶಿರಸ್ಸು ಪುಣ್ಯಕರವಾದಂತೆಯೇ ಈ ತೀರ್ಥವೂ ಪುಣ್ಯಕರವಾದುದು. ಇಲ್ಲಿ ಮನುಷ್ಯನು ಒಂದುಸಾರಿ ಪಿಂಡೋದಕವನ್ನು ಕೊಡುವುದರಿಂದಲೇ ಶುದ್ಧನಾಗುವನು.

೧೯ ದೊರೆಯೆ! ಗಯಾಶಿರಸ್ಸನ್ನು ಬಿಟ್ಟು ಸಕಲ ತೀರ್ಥಗಳೂ ಶೂಲಭೇದತೀರ್ಥದ ಹದಿನಾರನೆ ಒಂದಂಶಕ್ಕೂ ಸರಿಯಾಗಲಾರದು.

೨೦. ಈ ಕುಂಡವು ಉತ್ತರ ದಕ್ಷಿಣ ದಿಕ್ಕುಗಳಲ್ಲಿ ಹತ್ತುಮಾರು ಅಗಲವಾಗಿಯೂ, ಪೂರ್ವಪಶ್ಚಿಮ ದಿಕ್ಕುಗಳಲ್ಲಿ ಇಪ್ಪತ್ತೊಂದು ಮಾರು ಉದ್ದವಾಗಿಯೂ ಇರುವುದು.

೨೧. ಇಷ್ಟು ವಿಸ್ತೀರ್ಣದ ತೀರ್ಥದಲ್ಲಿ ಪಿಂಡದಾನಾದಿಗಳನ್ನು ಮಾಡಬೇಕು. ಅಧರ್ಮನಿರತರು ಇಲ್ಲಿ ದಾನಮಾಡಲು ಅವಕಾಶವನ್ನು ಹೊಂದುವುದಿಲ್ಲ.

೨೨. ಇಲ್ಲಿ ವಿಷ್ಣುವು ಪಿತೃರೂಪದಿಂದಲೂ, ಬ್ರಹ್ಮನು ಪಿತಾಮಹ ರೂಪದಿಂದಲೂ, ರುದ್ರನು ಪ್ರಪಿತಾಮಹರೂಪದಿಂದಲೂ ಇರುವರು.

೨೩–೨೭. ಪಿತೃಗಳು "ನಮ್ಮ ಪುತ್ರರು ಯಾವಾಗ ಈ ತೀರ್ಥವನ್ನು ನೋಡುವರೊ? ಯಾವಾಗ ನಮ್ಮನ್ನು ಉದ್ಧರಿಸುವರೊ?" ಎಂದು ನಿರೀಕ್ಷಿಸುತ್ತಿರುವರು. ಶೂಲಭೇದದಲ್ಲಿ ಮಿಂದು ಶೂಲಧರನನ್ನು ಒಂದುಸಾರಿ ನೋಡಿದ

**ಭಾರ್ಯಾಪಕ್ಷೇ ದಶೈವೇಹ ಕುಲಾನ್ಯೇತಾನಿ ತಾರಯೇತ್ ।**
**ಶೂಲಭೇದವನೇ ರಾಜಂಛಾಕಮೂಲಫಲೈರಪಿ ॥ ೨೫ ॥**
**ಏಕಸ್ಮಿನ್ಭೋಜಿತೇ ವಿಪ್ರೇ ಕೋಟಿರ್ಭವತಿ ಭೋಜಿತಾ ।**
**ಪಂಚಸ್ಥಾನೇಷು ಯಃ ಶ್ರಾದ್ಧಂ ಕುರುತೇ ಭಕ್ತಿಮಾನ್ನರಃ ॥ ೨೬ ॥**
**ಕುಲಾನಿ ಪ್ರೇತಭೂತಾನಿ ಸರ್ವಾಣ್ಯಪಿ ಹಿ ತಾರಯೇತ್ ।**
**ದ್ವಿಜದೇವಪ್ರಸಾದೇನ ಪಿತೄಣಾಂ ಚ ಪ್ರಸಾದತಃ ॥ ೨೭ ॥**
**ಶ್ರಾದ್ಧದೋ ನಿವಸೇತ್ತತ್ರ ಯತ್ರ ದೇವೋ ಮಹೇಶ್ವರಃ ।**
**ಸ್ಯುರಾತ್ಮಘಾತಿನೋ ಯೇ ಚ ಗೋಬ್ರಾಹ್ಮಣಹನಶ್ಚ ಯೇ ॥ ೨೮ ॥**
**ದಂಷ್ಟ್ರಿಭಿರ್ಜಲಪಾತೇ ಚ ವಿದ್ಯುತ್ಪಾತೇಷು ಯೇ ಮೃತಾಃ ।**
**ನ ಯೇಷಾಮಗ್ನಿಸಂಸ್ಕಾರೋ ನಾಶೌಚಂ ನೋದಕಕ್ರಿಯಾ ॥ ೨೯ ॥**
**ತತ್ರ ತೀರ್ಥೇ ತು ಯಸ್ತೇಷಾಂ ಶ್ರಾದ್ಧಂ ಕುರ್ವೀತ ಭಕ್ತಿತಃ ।**
**ಮೋಕ್ಷಾವಾಪ್ತಿರ್ಭವೇತ್ತೇಷಾಂ ಯುಗಮೇಕಂ ನ ಸಂಶಯಃ ॥ ೩೦ ॥**
**ಅಜ್ಞಾನಾದ್ಯತ್ಕೃತಂ ಪಾಪಂ ಬಾಲಭಾವಾಚ್ಚ ಯತ್ಕೃತಂ ।**
**ತತ್ಸರ್ವಂ ನಾಶಯೇತ್ಪಾಪಂ ಸ್ನಾನಮಾತ್ರೇಣ ಭೂಪತೇ ॥ ೩೧ ॥**

---

ಮನುಷ್ಯನು ಏಳು ಜನ್ಮಗಳಲ್ಲಿ ಅಪುತ್ರನೂ, ನಿರ್ಧನನೂ, ರೋಗಿಯೂ ಆಗುವುದಿಲ್ಲ. ಮತ್ತು ತಾಯಿ ತಂದೆಗಳ ವಂಶಗಳಲ್ಲಿ ಇಪ್ಪತ್ತೊಂದು ತಲೆಯ ಪಿತೃಗಳನ್ನೂ, ಪತ್ನೀಪಕ್ಷದಲ್ಲಿ ಹತ್ತು ತಲೆಮೊರೆಯ ಪಿತೃಗಳನ್ನೂ ಉದ್ಧರಿಸುವನು. ಈ ಶೂಲಭೇದವನದಲ್ಲಿ ಶಾಕ, ಗೆಣಸು, ಫಲಗಳಿಂದಲಾದರೂ ಒಬ್ಬ ಬ್ರಾಹ್ಮಣನನ್ನು ಭೋಜನಮಾಡಿಸಿದರೆ ಕೋಟಿ ಸಂಖ್ಯೆಯ ಬ್ರಾಹ್ಮಣರನ್ನು ಭೋಜನಮಾಡಿಸಿದಂತಾಗುವುದು. ಪಂಚಸ್ಥಾನಗಳಲ್ಲಿ ಭಕ್ತಿಯಿಂದ ಶ್ರಾದ್ಧಮಾಡಿದವನು ದ್ವಿಜ, ದೇವ, ಪಿತೃಗಳ ಅನುಗ್ರಹದಿಂದ ಪ್ರೇತರಾಗಿರುವ ಕುಲದ ಸಮಸ್ತ ಜನರನ್ನೂ ಉದ್ಧರಿಸುವನು.

೨೮–೩೦. ಶ್ರಾದ್ಧಮಾಡುವವನು ಮಹೇಶ್ವರನ ಸ್ಥಾನದಲ್ಲಿ ವಾಸಿಸುವನು. ಆತ್ಮಹತ್ಯೆಮಾಡಿಕೊಂಡವರೂ, ಗೋಬ್ರಾಹ್ಮಣರ ಹತ್ಯೆಮಾಡಿದವರೂ, ಹಲ್ಲುಳ್ಳ ಘಾತುಕಪ್ರಾಣಿಗಳಿಂದಲೂ, ಜಲದಲ್ಲಿ ಬೀಳುವುದರಿಂದಲೂ ಸಿಡಿಲಿನಿಂದಲೂ ಮಡಿದವರೂ, ಅಗ್ನಿಸಂಸ್ಕಾರವಿಲ್ಲದವರೂ, ಆಶೌಚ, ತರ್ಪಣಾದಿಗಳಿಲ್ಲದವರೂ ಆ ತೀರ್ಥದಲ್ಲಿ ಭಕ್ತಿಯಿಂದ ಶ್ರಾದ್ಧಮಾಡುವುದರಿಂದ ಒಂದು ಯುಗಕಾಲ ಮುಕ್ತರಾಗುವರು.

೩೧. ದೊರೆಯೆ! ಇಲ್ಲಿ ಸ್ನಾನಮಾಡುವುದರಿಂದ ಅಜ್ಞಾನದಿಂದಲೂ, ಬಾಲಭಾವದಿಂದಲೂ ಮಾಡಿದ ಪಾಪವೆಲ್ಲವೂ ಪರಿಹಾರವಾಗುವುದು.

ರಜಕೇನ ಯಥಾ ಧೌತಂ ವಸ್ತ್ರಂ ಭವತಿ ನಿರ್ಮಲಂ ।
ತಥಾ ಪಾಪೋಽಪಿ ತತ್ತೀರ್ಥೇ ಸ್ನಾತೋ ಭವತಿ ನಿರ್ಮಲಃ ॥ ೩೨ ॥
ಸನ್ನ್ಯಾಸಂ ಕುರುತೇ ಯೋಽತ್ರ ತೀರ್ಥೇ ವಿಧಿಸಮನ್ವಿತಂ ।
ಧ್ಯಾಯನ್ನಿತ್ಯಂ ಮಹಾದೇವಂ ಸ ಗಚ್ಛೇತ್ಪರಮಂ ಪದಂ ॥ ೩೩ ॥
ಕ್ರೀಡಿತ್ವಾ ಸ ಯಥಾಕಾಮಂ ಸ್ವೇಚ್ಛಯಾ ಶಿವಮಂದಿರೇ ।
ವೇದವೇದಾಂಗತತ್ತ್ವಜ್ಞೋ ಜಾಯತೇಽಸೌ ಶುಭೇ ಕುಲೇ ॥ ೩೪ ॥
ರೂಪವಾನ್ಸುಭಗಶ್ಚೈವ ಸರ್ವವ್ಯಾಧಿವಿವರ್ಜಿತಃ ।
ರಾಜಾ ವಾ ರಾಜಪುತ್ರೋ ವಾ ಧರ್ಮಾಚಾರಸಮನ್ವಿತಃ ॥ ೩೫ ॥
ಏತತ್ತೇ ಕಥಿತಂ ರಾಜಂಸ್ತೀರ್ಥಸ್ಯ ಫಲಮುತ್ತಮಂ ।
ಯಚ್ಛ್ರುತ್ವಾ ಮಾನವೋ ನಿತ್ಯಂ ಮುಚ್ಯತೇ ಸರ್ವಕಿಲ್ಬಿಷೈಃ ॥ ೩೬ ॥
ಯ ಇದಂ ಶ್ರಾವಯೇನ್ನಿತ್ಯಮಾಖ್ಯಾನಂ ದ್ವಿಜಪುಂಗವಾನ್ ।
ಶ್ರಾದ್ಧೇ ದೇವಕುಲೇ ವಾಽಪಿ ಪಠೇತ್ಪರ್ವಣಿ ಪರ್ವಣಿ ॥ ೩೭ ॥
ಗೀರ್ವಾಣಾಸ್ತಸ್ಯ ತುಷ್ಯಂತಿ ಮನುಷ್ಯಾಃ ಪಿತೃಭಿಃ ಸಹ ।
ಪಠತಾಂ ಶೃಣ್ವತಾಂ ಚೈವ ನಶ್ಯತೇ ಸರ್ವಪಾತಕಂ ॥ ೩೮ ॥

---

೩೨. ಅಗಸನು ಒಗೆದ ಬಟ್ಟೆಯು ಮಡಿಯಾಗುವಂತೆ ಆ ತೀರ್ಥದಲ್ಲಿ ಮಿಂದ ಪಾಪಿಯೂ ನಿರ್ಮಲನಾಗುವನು.

೩೩. ಈ ತೀರ್ಥದಲ್ಲಿ ಮಹಾದೇವನನ್ನು ಧ್ಯಾನಿಸುತ್ತ ವಿಧಿಯಂತೆ ಸನ್ನ್ಯಾಸವನ್ನು ಸ್ವೀಕರಿಸುವವನು ಉತ್ತಮಸ್ಥಾನಕ್ಕೆ ತೆರಳುವನು.

೩೪. ಅವನು ಶಿವಮಂದಿರದಲ್ಲಿ ಸ್ವೇಚ್ಛೆಯಾಗಿ ವಿನೋದಗೊಂಡು ವೇದ ವೇದಾಂಗ ತತ್ತ್ವಗಳನ್ನರಿತವನಾಗಿ ಸದ್ವಂಶದಲ್ಲಿ ಜನಿಸುವನು.

೩೫. ಸುಂದರನೂ, ಸುಭಗನೂ, ಸಕಲವ್ಯಾಧಿರಹಿತನೂ ಆಗಿ ಧರ್ಮಾಚಾರದಿಂದ ಕೂಡಿದ ರಾಜನೊ ಅಥವಾ ರಾಜಪುತ್ರನೊ ಆಗುವನು.

೩೬. ಎಲೈ ರಾಜನೆ! ತೀರ್ಥದ ಉತ್ತಮ ಫಲವನ್ನು ನಿನಗೆ ಹೇಳಿರುವೆನು. ಇದನ್ನು ನಿತ್ಯವೂ ಕೇಳಿದ ಮಾನವನು ಸಮಸ್ತಪಾಪಗಳಿಂದಲೂ ಮುಕ್ತನಾಗುವನು.

೩೭–೩೮. ಈ ಕಥೆಯನ್ನು ಬ್ರಾಹ್ಮಣರಿಗೆ ಹೇಳಿದವನ, ಶ್ರಾದ್ಧದ, ದೇವಾಲಯ ಪ್ರತಿಪರ್ವಕಾಲಗಳಲ್ಲಿಯೂ ಪಠಿಸಿದವನ ವಿಷಯದಲ್ಲಿ ದೇವ, ಪಿತೃ, ಮನುಷ್ಯರು ಸಂತುಷ್ಟರಾಗುವರು. ಇದನ್ನು ಕೇಳುವವರ ಮತ್ತು ಪಠಿಸುವವರ ಸಕಲಪಾಪಗಳೂ ಪರಿಹಾರವಾಗುವುವು.

**ಲಿಖಿತ್ವಾ ತೀರ್ಥಮಾಹಾತ್ಮ್ಯಂ ಬ್ರಾಹ್ಮಣೇಭ್ಯೋ ದದಾತಿ ಯಃ ।**
**ಜಾತಿಸ್ಮರತ್ವಂ ಲಭತೇ ಪ್ರಾಪ್ನೋತ್ಯಭಿಮತಂ ಫಲಂ ॥ ೩೯ ॥**
**ರುದ್ರಲೋಕೇ ವಸೇತ್ತಾವದ್ಯಾವದಕ್ಷರಸಮನ್ವಿತಂ ॥ ೪೦ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ "ಕಾಶೀರಾಜಮೋಕ್ಷಗಮನವರ್ಣನಂ"ನಾಮ ಪಂಚಪಂಚಾಶತ್ತಮೋಽಧ್ಯಾಯಃ**

---

೩೯–೪೦. ಈ ತೀರ್ಥದ ಮಾಹಾತ್ಮ್ಯವನ್ನು ಬರೆದು ಬ್ರಾಹ್ಮಣರಿಗೆ ದಾನ ಮಾಡುವವನು ಪೂರ್ವಜನ್ಮವನ್ನು ಸ್ಮರಿಸುವವನಾಗಿ ಇಷ್ಟವಾದ ಫಲವನ್ನು ಪಡೆಯುವನು. ಮತ್ತು ಈ ಅಧ್ಯಾಯದ ಅಕ್ಷರಗಳ ಸಂಖ್ಯೆಯಷ್ಟುಕಾಲ ರುದ್ರ ಲೋಕದಲ್ಲಿ ವಾಸಿಸುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ "ಕಾಶೀರಾಜಮೋಕ್ಷಗಮನವರ್ಣನ"ವೆಂಬ ಐವತ್ತೈದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಷಟ್‌ಪಂಚಾಶತ್ತಮೋಽಧ್ಯಾಯಃ

## ದಾನಾದಿಫಲವರ್ಣನಂ

ಉತ್ತಾನಪಾದ ಉವಾಚ :—

ಅನ್ಯಚ್ಚ ಶ್ರೋತುಮಿಚ್ಛಾಮಿ ಕೇನ ಗಂಗಾಽವತಾರಿತಾ ।
ರುದ್ರಶೀರ್ಷೇ ಸ್ಥಿತಾ ದೇವೀ ಪುಣ್ಯಾ ಕಥಮಿಹಾಗತಾ ॥ ೧ ॥
ಪುಣ್ಯಾ ದೇವಶಿಲಾನಾಮ ತಸ್ಯಾ ಮಾಹಾತ್ಮ್ಯಮುತ್ತಮಂ ।
ಏತದಾಖ್ಯಾಹಿ ಮೇ ಸರ್ವಂ ಪ್ರಸನ್ನೋ ಯದಿ ಶಂಕರ ॥ ೨ ॥

ಈಶ್ವರ ಉವಾಚ :—

ಶೃಣುಷ್ವೈಕಮನಾ ಭೂತ್ವಾ ಯಥಾ ಗಂಗಾಽವತಾರಿತಾ ।
ದೇವೈಃ ಸರ್ವೈರ್ಮಹಾಭಾಗಾ ಸರ್ವಲೋಕಹಿತಾಯ ವೈ ॥ ೩ ॥
ಅಸ್ತಿ ವಿಂಧ್ಯೋ ನಗೋ ನಾಮ ಯಾಮ್ಯಾಶಾಯಾಂ ಮಹೀಪತೇ ।
ಗೀರ್ವಾಣಾಸ್ತು ಗತಾಃ ಸರ್ವೇ ತಸ್ಯ ಮೂರ್ಧ್ನಿ ನರೇಶ್ವರ ॥ ೪ ॥
ತತ್ರ ಚಾಹ್ವಾನಿತಾ ಗಂಗಾ ಬ್ರಹ್ಮಾದ್ಯೈರಖಿಲೈಃ ಸುರೈಃ ।
ಅಭ್ಯರ್ಚ್ಯೇಶಂ ಜಗನ್ನಾಥಂ ದೇವದೇವಂ ಜಗದ್ಗುರುಂ ॥ ೫ ॥

---

## ಕನ್ನಡದ ಅನುವಾದ

### ದಾನಾದಿಫಲವರ್ಣನ

೧–೨. ಉತ್ತಾನಪಾದನು ಹೇಳುತ್ತಾನೆ —ಎಲೈ ಶಂಕರನೆ! ಗಂಗೆಯನ್ನು ಯಾರು ಭೂಮಿಗೆ ಇಳಿಸಿದರು ? ರುದ್ರನ ಶಿರಸ್ಸಿನಲ್ಲಿರುವ ಪುಣ್ಯಕರಳಾದ ಗಂಗಾದೇವಿಯು ಇಲ್ಲಿಗೆ ಹೇಗೆ ಬಂದಳು ? ನೀನು ಸಂತುಷ್ಟನಾಗಿದ್ದರೆ ಇದನ್ನೂ ದೇವಶಿಲೆಯ ಮಾಹಾತ್ಮ್ಯವನ್ನೂ ನನಗೆ ಹೇಳು. ಇದನ್ನು ಕೇಳಬಯಸುವೆನು.

೩. ಈಶ್ವರನು ಹೇಳುತ್ತಾನೆ —ಸಮಸ್ತ ದೇವತೆಗಳು ಸಕಲಲೋಕಗಳ ಹಿತಕ್ಕಾಗಿ ಮಹಾಭಾಗಳಾದ ಗಂಗೆಯನ್ನು ಹೇಗೆ ಇಳಿಸಿದರೆಂಬುದನ್ನು ಒಮ್ಮನಸ್ಸಿನಿಂದ ಕೇಳು.

೪. ಮಹಾರಾಜನೆ! ದಕ್ಷಿಣದಿಕ್ಕಿನಲ್ಲಿ ವಿಂಧ್ಯವೆಂಬ ಪರ್ವತವಿದೆ. ಒಮ್ಮೆ ಸಕಲ ದೇವತೆಗಳೂ ಅದರ ಶಿಖರಕ್ಕೆ ಹೋದರು.

೫–೬. ಅಲ್ಲಿ ಸಮಸ್ತ ದಿವಿಜರೂ, ಜಗನ್ನಾಥನೂ, ಜಗದ್ಗುರುವೂ ಆದ ಮಹೇಶ್ವರನನ್ನು ಅರ್ಚಿಸಿ ಆತನ ಜಟೆಯಲ್ಲಿರುವ ಗಂಗೆಯನ್ನು ಬಿಡೆಂದು

**ಜಟಾಮಧ್ಯಸ್ಥಿತಾಂ ಗಂಗಾಂ ಮೋಚಯಸ್ವೇತಿ ಭೂತಲೇ ।**
**ಭಾಸ್ವಂತೀ ಸಾ ತತೋ ಮುಕ್ತಾ ರುದ್ರೇಣ ಶಿರಸಾ ಭುವಿ ॥ ೬ ॥**
**ತತ್ರ ಸ್ಥಾನೇ ಮಹಾಪುಣ್ಯಾ ದೇವೈರುತ್ಪಾದಿತಾ ಸ್ವಯಂ ।**
**ತತೋ ದೇವನದೀ ಜಾತಾ ಸಾ ಹಿತಾಯ ನೃಣಾಂ ಭುವಿ ॥ ೭ ॥**
**ವಸಂತಿ ಯೇ ತಟೇ ತಸ್ಯಾಃ ಸ್ನಾನಂ ಕುರ್ವಂತಿ ಭಕ್ತಿತಃ ।**
**ಪಿಬಂತಿ ಚ ಜಲಂ ನಿತ್ಯಂ ನ ತೇ ಯಾಂತಿ ಯಮಾಲಯಂ ॥ ೮ ॥**
**ಯತ್ರ ಸಾ ಪತಿತಾ ಕುಂಡೇ ಶೂಲಭೇದೇ ನರಾಧಿಪ ।**
**ದೇವನದ್ಯಾಃ ಪ್ರತೀಚ್ಯಾಂ ತು ತತ್ರ ಪ್ರಾಚೀ ಸರಸ್ವತೀ ॥ ೯ ॥**
**ಯಾಮ್ಯಾಯಾಂ ಶೂಲಭೇದಸ್ಯ ತತ್ರ ತೀರ್ಥಮನುತ್ತಮಂ ।**
**ತತ್ರ ದೇವಶಿಲಾ ಪುಣ್ಯಾ ಸ್ವಯಂ ದೇವೇನ ನಿರ್ಮಿತಾ ॥ ೧೦ ॥**
**ತತ್ರ ಸ್ನಾತ್ವಾ ತು ಯೋ ಭಕ್ತ್ಯಾ ತರ್ಪಯೇತ್ಪಿತೃದೇವತಾಃ ।**
**ಪಿತರಸ್ತಸ್ಯ ತೃಪ್ಯಂತಿ ಯಾವದಾಭೂತಸಂಪ್ಲವಂ ॥ ೧೧ ॥**
**ತತ್ರ ಸ್ನಾತ್ವಾ ತು ಯೋ ಭಕ್ತ್ಯಾ ಬ್ರಾಹ್ಮಣಾನ್ಭೋಜಯೇನ್ನೃಪ ।**
**ಸ್ವಲ್ಪಾಽನ್ನೇನಾಽಪಿ ದತ್ತೇನ ತಸ್ಯ ಚಾಂತೋ ನ ವಿದ್ಯತೇ ॥ ೧೨ ॥**

---

ಪ್ರಾರ್ಥಿಸಿ ಗಂಗೆಯನ್ನು ಕರೆದರು ಅನಂತರ ಈಶ್ವರನು ತನ್ನ ಮಸ್ತಕದಿಂದ ಪ್ರಕಾಶಳಾದ ಗಂಗೆಯನ್ನು ಭೂಮಿಯಲ್ಲಿ ಬಿಟ್ಟನು

೭. ಆ ಸ್ಥಳವನ್ನು ದೇವತೆಗಳೇ ಉಂಟುಮಾಡಿರುವುದರಿಂದ ದೇವನದಿ ಯೆನಿಸಿದ ಗಂಗೆಯು ಮಾನವರ ಹಿತಕ್ಕಾಗಿ ಅಲ್ಲಿ ಅವತರಿಸಿದಳು.

೮. ಆ ನದಿಯ ತೀರದಲ್ಲಿ ವಾಸಿಸುವವರೂ, ಅದರಲ್ಲಿ ಭಕ್ತಿಯಿಂದ ಸ್ನಾನ ಮಾಡುವವರೂ, ಅದರ ನೀರನ್ನು ನಿತ್ಯವೂ ಕುಡಿಯುವವರೂ ಯಮನಗರಿಗೆ ಹೋಗುವುದಿಲ್ಲ.

೯. ದೊರೆಯೆ! ಶೂಲಭೇದ ಕುಂಡದಲ್ಲಿ ಬಿದ್ದ ಗಂಗಾನದಿಯ ಪಶ್ಚಿಮ ದಲ್ಲಿಯೆ ಪ್ರಾಚೀನಸರಸ್ವತಿಯಿರುವುದು.

೧೦. ಶೂಲಭೇದದ ದಕ್ಷಿಣದಲ್ಲಿ ದೇವತೆಗಳು ನಿರ್ಮಿಸಿದ ದೇವಶಿಲಾ ಎಂಬ ಪುಣ್ಯಕರವಾದ ತೀರ್ಥವಿರುವುದು.

೧೧. ಅಲ್ಲಿ ಮಿಂದು ಭಕ್ತಿಯಿಂದ ಪಿತೃದೇವತೆಗಳಿಗೆ ತರ್ಪಣ ಮಾಡಿದವನ ಪಿತೃಗಳು ಪ್ರಳಯಕಾಲದವರೆಗೆ ತೃಪ್ತಿಗೊಳ್ಳುವರು.

೧೨. ಅಲ್ಲಿ ಮಿಂದು ಭಕ್ತಿಯಿಂದ ಬ್ರಾಹ್ಮಣರಿಗೆ ಸ್ವಲ್ಪ ಅನ್ನದಿಂದ ಭೋಜನ ಮಾಡಿಸಿದವನ ಪುಣ್ಯವೂ ಅವಸಾನಗೊಳ್ಳುವುದಿಲ್ಲ.

ಉತ್ತಾನಪಾದ ಉವಾಚ :—

ಕಾನಿ ದಾನಾನಿ ದತ್ತಾನಿ ಶಸ್ತಾನಿ ಧರಣೀತಲೇ ।
ಯಾನಿ ದತ್ವಾ ನರೋ ಭಕ್ತ್ಯಾ ಮುಚ್ಯತೇ ಸರ್ವಪಾತಕೈಃ ॥ ೧೩ ॥
ದೇವಶಿಲಾಯಾ ಮಾಹಾತ್ಮ್ಯಂ ಸ್ನಾನದಾನಾದಿಜಂ ಫಲಂ ।
ವ್ರತೋಪವಾಸನಿಯಮೈರ್ಯತ್ಪ್ರಾಪ್ಯಂ ತದ್ವದಸ್ವ ಮೇ ॥ ೧೪ ॥

ಈಶ್ವರ ಉವಾಚ :—

ಆಸೀತ್ಪುರಾ ಮಹಾವೀರ್ಯಶ್ಚೇದಿನಾಥೋ ಮಹಾಬಲಃ ।
ವೀರಸೇನ ಇತಿಖ್ಯಾತೋ ಮಂಡಲಾಧಿಪತಿರ್ನೃಪ ॥ ೧೫ ॥
ರಾಷ್ಟ್ರೇ ತಸ್ಯ ರಿಪುರ್ನಾಸ್ತಿ ನ ವ್ಯಾಧಿರ್ನ ಚ ತಸ್ಕರಾಃ ।
ನ ಚಾಧರ್ಮೋಽಭವತ್ತತ್ರ ಧರ್ಮ ಏವ ಹಿ ಸರ್ವದಾ ॥ ೧೬ ॥
ಸದಾ ಮುದಾನ್ವಿತೋ ರಾಜಾ ಸಭಾರ್ಯೋ ಬಹುಪುತ್ರಕಃ ।
ಏಕಾಽಽಸೀದ್ದುಹಿತಾ ತಸ್ಯ ಸುರೂಪಾ ಗಿರಿಜಾ ಯಥಾ ॥ ೧೭ ॥
ಇಷ್ಟಾ ಸಾ ಪಿತೃಮಾತೃಭ್ಯಾಂ ಬಂಧುವರ್ಗಜನಸ್ಯ ಚ ।
ಕೃತಂ ವೈವಾಹಿಕಂ ಕರ್ಮ ಕಾಲೇ ಪ್ರಾಪ್ತೇ ಯಥಾ ವಿಧಿ ॥ ೧೮ ॥
ಅನಂತರಂ ಚೇದಿಪತಿರ್ದ್ವಾದಶಾಬ್ದಮುಖೇ ಸ್ಥಿತಃ ।
ತತಸ್ತಸ್ಯಾಸ್ತು ಯೋ ಭರ್ತಾ ಸ ಮೃತ್ಯುವಶಮಾಗತಃ ॥ ೧೯ ॥

---

೧೩. ಉತ್ತಾನಪಾದನು ಕೇಳುತ್ತಾನೆ —ಭೂಮಿಯಲ್ಲಿ ಕೊಟ್ಟ ಯಾವ ದಾನಗಳು ಉತ್ತಮವಾದುವು? ಯಾವ ದಾನಗಳನ್ನು ಕೊಟ್ಟರೆ ಮನುಷ್ಯನು ಸಕಲ ಪಾಪಗಳಿಂದಲೂ ಮುಕ್ತನಾಗುವನು?

೧೪. ದೇವಶಿಲೆಯ ಮಾಹಾತ್ಮ್ಯ, ಸ್ನಾನ ದಾನಾದಿಗಳಿಂದುಂಟಾಗುವ ಫಲ ಮತ್ತು ವ್ರತ, ಉಪವಾಸ, ನಿಯಮಗಳಿಂದ ಲಭಿಸುವ ಪುಣ್ಯ ಇವುಗಳನ್ನು ನನಗೆ ಹೇಳು.

೧೫. ಈಶ್ವರನು ಹೇಳುತ್ತಾನೆ —ಹಿಂದೆ ಅತಿವೀರನೂ, ಅತ್ಯಂತ ಬಲಶಾಲಿಯೂ ಆದ ವೀರಸೇನನೆಂಬ ಸಾಮಂತರಾಜನಿದ್ದನು.

೧೬. ಅವನ ರಾಜ್ಯದಲ್ಲಿ ಶತ್ರುಪೂ, ವ್ಯಾಧಿಯೂ, ಕಳ್ಳರೂ, ಅಧರ್ಮವೂ ಇರಲಿಲ್ಲ. ಯಾವಾಗಲೂ ಧರ್ಮಮಾತ್ರವೇ ನೆಲಸಿದ್ದಿತು.

೧೭–೧೯. ಪತ್ನಿ, ಬಹುಮಂದಿ ಪುತ್ರರು— ಇವರಿಂದ ಸಹಿತನಾದ ರಾಜನು ಯಾವಾಗಲೂ ಸಂತೋಷಗೊಂಡವನಾಗಿದ್ದನು. ಅವನಿಗೆ ಗಿರಿಜೆಯಂತೆ ಸುಂದರಿಯೂ, ತಂದೆತಾಯಿಗಳಿಗೂ, ಬಂಧು ಜನಗಳಿಗೂ ಪ್ರಿಯಳೂ ಆದ ಒಬ್ಬ ಮಗಳಿದ್ದಳು. ರಾಜನು ಸಕಾಲದಲ್ಲಿ ಅವಳಿಗೆ ವಿಧಿಯಂತೆ ವಿವಾಹಮಾಡಿ ಹನ್ನೆರಡು ವರ್ಷಗಳ ಯಜ್ಞದಲ್ಲಿ ನಿರತನಾದನು. ಬಳಿಕ ಆ ರಾಜಪುತ್ರಿಯ ಪತಿಯು ಮಡಿದನು.

ವಿಧವಾಂ ತಾಂ ಸುತಾಂ ದೃಷ್ಟ್ವಾ ರಾಜಾ ಶೋಕಸಮನ್ವಿತಃ ।
ಉವಾಚ ವಚನಂ ತತ್ರ ಸ್ವಭಾರ್ಯಾಂ ದುಃಖಪೀಡಿತಾಂ ॥ ೨೦ ॥
ಪ್ರಿಯೇ ದುಃಖಮಿದಂ ಜಾತಂ ಯಾವಜ್ಜೀವಂ ಸುದುಃಸಹಂ ।
ನೈಷಾ ರಕ್ಷಯಿತುಂ ಶಕ್ಯಾ ರೂಪಯೌವನಗರ್ವಿತಾ ॥ ೨೧ ॥
ದೂಷಯೇತ ಕುಲಂ ಕ್ವಾಽಪಿ ಕಥಂ ರಕ್ಷ್ಯಾ ಹಿ ಬಾಲಿಕಾ ।
ನೋಪಾಯೋ ವಿದ್ಯತೇ ಕ್ವಾಽಪಿ ಭಾನುಮತ್ಯಾಶ್ಚ ರಕ್ಷಣೇ ।
ಪರಸ್ಪರಂ ವಿವದತೋಃ ಶ್ರುತ್ವಾ ತತ್ಕನ್ಯಕಾಽಬ್ರವೀತ್ ॥ ೨೨ ॥

ಭಾನುಮತ್ಯುವಾಚ :—

ನ ಲಜ್ಜಾಮಿ ತವಾಽಗ್ರೇಽಹಂ ಜಲ್ಪಂತೀ ತಾತ ಕರ್ಹಿಚಿತ್ ।
ಸತ್ಯಂ ನೋತ್ಪದ್ಯತೇ ದೋಷೋ ಮದರ್ಥೇ ತೇ ನರಾಧಿಪ ॥ ೨೩ ॥
ಅದ್ಯ ಪ್ರಭೃತ್ಯಹಂ ತಾತ ಧಾರಯಿಷ್ಯೇ ನ ಮೂರ್ಧಜಾನ್ ।
ಸ್ಥೂಲವಸ್ತ್ರಪಟಾರ್ಧಂ ತು ಧಾರಯಿಷ್ಯಾಮಿ ತೇ ಗೃಹೇ ॥ ೨೪ ॥
ಕರಿಷ್ಯಾಮಿ ವ್ರತಾನ್ಯಾಶು ಪುರಾಣವಿಹಿತಾನಿ ಚ ।
ಆತ್ಮಾನಂ ಶೋಷಯಿಷ್ಯಾಮಿ ತೋಷಯಿಷ್ಯೇ ಜನಾರ್ದನಂ ॥ ೨೫ ॥

---

೨೦. ದೊರೆಯು ವಿಧವೆಯಾದ ಮಗಳನ್ನು ಕಂಡು ದುಃಖಗೊಂಡು ಶೋಕ ಪೀಡಿತಳಾದ ತನ್ನ ಪತ್ನಿಯನ್ನು ಕುರಿತು ಹೀಗೆಂದನು.

೨೧. "ಪ್ರಿಯಳೆ! ನಮಗೆ ಸಾಯುವವರೆಗೂ ದುಸ್ಸಹವಾದ ಈ ದುಃಖ ವುಂಟಾಯಿತು. ರೂಪ ಯೌವನದಿಂದ ಗರ್ವಿತಳಾದ ಈ ಕನ್ಯೆಯನ್ನು ರಕ್ಷಿಸಲು ಸಾಧ್ಯವಿಲ್ಲ.

೨೨. ಒಂದಾನೊಂದು ವೇಳೆ ಇವಳು ಕುಲವನ್ನೆ ಕೆಡಿಸಿಯಾಳು. ಈ ಬಾಲೆ ಯನ್ನು ಹೇಗೆ ರಕ್ಷಿಸಬೇಕು? ಯಾವ ಉಪಾಯವೂ ಇಲ್ಲ." ಹೀಗೆ ಪರಸ್ಪರ ಸಂಭಾಷಣೆ ಮಾಡುತ್ತಿರುವ ಅವರ ಮಾತನ್ನು ಆ ಭಾನುಮತಿಯು ಕೇಳಿ ಇಂತೆಂದಳು.

೨೩. ಭಾನುಮತಿಯು ಹೇಳುತ್ತಾಳೆ.—ಅಪ್ಪ! ನಿನ್ನ ಮುಂದೆ ಮಾತಾಡಲು ನನಗೆ ನಾಚಿಕೆಯಿಲ್ಲ. ನನ್ನಿಂದ ಯಾವ ದೋಷವೂ ನಿಜವಾಗಿಯೂ ಉಂಟಾಗು ವುದಿಲ್ಲ.

೨೪. ಅಪ್ಪ! ನಾನು ಇದು ಮೊದಲ್ಗೊಂಡು ತಲೆಕೂದಲುಗಳನ್ನು ಧರಿಸು ವುದಿಲ್ಲ. ನಿನ್ನ ಮನೆಯಲ್ಲಿ ದಪ್ಪವಾದ ವಸ್ತ್ರದ ತುಂಡನ್ನು ಉಟ್ಟುಕೊಂಡಿರು ವೆನು.

೨೫. ಬೇಗನೆ ಪುರಾಣವಿಹಿತವಾದ ವ್ರತಗಳನ್ನಾಚರಿಸಿ ದೇಹವನ್ನು ಶೋಷಣೆಮಾಡಿ ವಿಷ್ಣುವನ್ನು ಸಂತೋಷಗೊಳಿಸುವೆನು.

ಮನ್ಯೈಷಾ ವರ್ತತೇ ಬುದ್ಧಿರ್ಯದಿ ತ್ವಂ ತಾತ ಮನ್ಯಸೇ ।
ಭಾನುಮತ್ಯಾ ವಚಃ ಶ್ರುತ್ವಾ ರಾಜಾ ಸಂಹರ್ಷಿತೋಽಭವತ್ ॥ ೨೬ ॥
ತೀರ್ಥಯಾತ್ರಾಂ ಸಮುದ್ದಿಶ್ಯ ಕೋಶಂ ದತ್ವಾ ಸುಪುಷ್ಕಲಂ ।
ವಿಸೃಜ್ಯ ಪುರುಷಾನ್ವೃದ್ಧಾನ್ಕೃತ್ವಾ ತಸ್ಯಾಃ ಸುರಕ್ಷಣೇ ॥ ೨೭ ॥
ಪುರುಷಾನ್ ಸಾಯುಧಾಂಶ್ಚಾಽಪಿ ಬ್ರಾಹ್ಮಣಾನ್ ಸಪುರೋಹಿತಾನ್ ।
ದಾಸೀದಾಸಾನ್ಪದಾತೀಂಶ್ಚ ಚಾಸ್ಯಾಃ ಸಂರಕ್ಷಣಕ್ಷಮಾನ್ ॥ ೨೮ ॥
ತತಃ ಪಿತುರ್ಮತೇನೈವ ಗಂಗಾತೀರಂ ಗತಾ ಸತೀ ।
ಅವಗಾಹ್ಯ ತಟೇ ದ್ವೇ ತು ಗಂಗಾಯಾಃ ಸ ನರಾಧಿಪ ॥ ೨೯ ॥
ನಿತ್ಯಂ ಸಂಪೂಜ್ಯ ಸದ್ವಿಪ್ರಾನ್ಗಂಧಮಾಲ್ಯಾದಿಭೂಷಣೈಃ ।
ದ್ವಾದಶಾಬ್ದಾನಿ ಸಾ ತೀರೇ ಗಂಗಾಯಾಃ ಸಮವಸ್ಥಿತಾ ॥ ೩೦ ॥
ತ್ಯಕ್ತ್ವಾ ಗಂಗಾಂ ತದಾ ರಾಜ್ಞೀ ಗತಾ ಕಾಷ್ಠಾಂ ತು ದಕ್ಷಿಣಾಂ ।
ಪ್ರಾಪ್ತಾ ಸಾ ಸಚಿವೈಃ ಸಾರ್ಧಂ ಯತ್ರ ರೇವಾ ಮಹಾನದೀ ॥ ೩೧ ॥
ಸಮಾಃ ಪಂಚ ಸ್ಥಿತಾತತ್ರ ಓಂಕಾರೇಽಮರಕಂಟಕೇ ।
ಉದಗ್ಯಾಮ್ಯೇಷು ತೀರ್ಥೇಷು ತೀರ್ಥಾತ್ತೀರ್ಥಂ ಜಗಾಮ ಸಾ ॥ ೩೨ ॥
ಸ್ನಾತ್ವಾ ಸ್ನಾತ್ವಾ ಪೂಜ್ಯ ವಿಪ್ರಾನ್ಭಕ್ತಿಪೂರ್ವಮತಂದ್ರಿತಾ ।
ವಾರುಣೀಂ ಸಾ ದಿಶಂ ಗತ್ವಾ ದೇವನದ್ಯಾಶ್ಚ ಸಂಗಮೇ ॥ ೩೩ ॥

---

೨೬. ನೀನು ಒಪ್ಪುವುದಾದರೆ ನಾನು ಹೀಗೆಮಾಡಲು ಆಲೋಚಿಸಿರುವೆನು. ರಾಜನು ಭಾನುಮತಿಯ ಮಾತನ್ನು ಕೇಳಿ ಹರ್ಷಗೊಂಡನು.

೨೭–೨೮. ಅವಳಿಗೆ ತೀರ್ಥಯಾತ್ರೆಗಾಗಿ ಬಹಳ ದ್ರವ್ಯವನ್ನಿತ್ತು ಅವಳೊಡನೆ ವೃದ್ಧರನ್ನೂ, ರಕ್ಷಣೆಗಾಗಿ ಆಯುಧಪಾಣಿಗಳಾದ ಪುರುಷರನ್ನೂ, ಪುರೋಹಿತರನ್ನೂ, ದಾಸೀದಾಸರನ್ನೂ, ಅವಳ ಸಂರಕ್ಷಣೆಯಲ್ಲಿ ಸಮರ್ಥರಾದ ಕಾಲಾಳುಗಳನ್ನೂ ಕೊಟ್ಟು ಕಳುಹಿಸಿದನು.

೨೯–೩೦. ಅವಳು ತಂದೆಯ ಅಭಿಪ್ರಾಯದಂತೆ ಗಂಗಾತೀರಕ್ಕೆ ಹೋಗಿ ಅಲ್ಲಿ ಗಂಗೆಯಲ್ಲಿ ಸ್ನಾನಮಾಡುತ್ತ ಸದ್ವಿಪ್ರರನ್ನು ನಿತ್ಯವೂ ಗಂಧಮಾಲ್ಯಾದಿಗಳಿಂದ ಪೂಜಿಸುತ್ತ ಹನ್ನೆರಡು ವರ್ಷಕಾಲ ಅಲ್ಲಿಯೆ ವಾಸವಾಗಿದ್ದಳು.

೩೧. ಅನಂತರ ಆ ರಾಜಕುಮಾರಿಯು ಗಂಗೆಯನ್ನು ತ್ಯಜಿಸಿ ಮಂತ್ರಿಗಳೊಡನೆ ದಕ್ಷಿಣದಿಕ್ಕಿಗೆ ಹೋಗಿ ನರ್ಮದಾನದಿಯನ್ನು ಸೇರಿದಳು.

೩೨. ಅಲ್ಲಿ ಓಂಕಾರಾಮರಕಂಟಕ ತೀರ್ಥಗಳಲ್ಲಿ ಐದು ವರ್ಷಗಳ ಕಾಲವಿದ್ದು ಉತ್ತರ ದಕ್ಷಿಣ ತೀರ್ಥಗಳಲ್ಲಿ ಒಂದು ತೀರ್ಥದಿಂದ ಮತ್ತೊಂದು ತೀರ್ಥಕ್ಕೆ ಹೋದಳು.

೩೩–೩೪. ಅವಳು ಅಲ್ಲಿ ಮಿಂದು ಬ್ರಾಹ್ಮಣರನ್ನು ಭಕ್ತಿಪೂರ್ವಕವಾಗಿ ಪೂಜಿಸಿ ಪಶ್ಚಿಮ ದಿಕ್ಕಿಗೆ ಹೋಗಿ ಗಂಗೆಯ ಸಂಗಮದಲ್ಲಿ ಮುನಿಗಳ ಸಮೂಹ

**ದದರ್ಶ ಚಾಶ್ರಮಂ ಪುಣ್ಯಂ ಮುನಿಸಂಘೈಃ ಸಮಾಕುಲಂ ।**
**ದೃಷ್ಟ್ವಾ ಮುನಿಸಮೂಹಂ ಸಾ ಪ್ರಣಿಪತ್ಯೇದಮಬ್ರವೀತ್ ॥ ೩೪ ॥**
**ಮಾಹಾತ್ಮ್ಯಮಸ್ಯ ತೀರ್ಥಸ್ಯ ನಾಮ ಚೈವಾಸ್ಯ ಕೀದೃಶಂ ।**
**ಕಥಯಂತು ಮಹಾಭಾಗಾಃ ಪ್ರಸಾದಃ ಕ್ರಿಯತಾಂ ಮಮ ॥ ೩೫ ॥**

**ಋಷಯ ಊಚುಃ :–**

**ಚಕ್ರತೀರ್ಥಂ ತು ವಿಖ್ಯಾತಂ ಚಕ್ರಂ ದತ್ತಂ ಪುರಾ ಹರೇಃ ।**
**ಮಹೇಶ್ವರೇಣ ತುಷ್ಟೇನ ದೇವದೇವೇನ ಶೂಲಿನಾ ॥ ೩೬ ॥**
**ಅತ್ರ ತೀರ್ಥೇ ತು ಯಃ ಸ್ನಾತ್ವಾ ತರ್ಪಯೇತ್ಪಿತೃದೇವತಾಃ ।**
**ಅನಿವರ್ತಿಕಾ ಗತಿಸ್ತಸ್ಯ ಜಾಯತೇ ನಾಽತ್ರ ಸಂಶಯಃ ॥ ೩೭ ॥**
**ದ್ವಿತೀಯೇಽಹ್ನಿ ತತೋ ಗಚ್ಛೇಚ್ಛೂಲಭೇದೇ ತಪಸ್ವಿನಿ ।**
**ಪೂರ್ವೋಕ್ತೇನ ವಿಧಾನೇನ ಸ್ನಾನಂ ಕುರ್ಯಾದ್ಯಥಾವಿಧಿ ॥ ೩೮ ॥**
**ಜನ್ಮತ್ರಯಕೃತೈಃ ಪಾಪೈರ್ಮುಚ್ಯತೇ ನಾಽತ್ರ ಸಂಶಯಃ ।**
**ಜಲೇನ ತಿಲಮಿಶ್ರೇಣ ಪ್ರದದ್ಯಾದಂಜಲಿತ್ರಯಂ ॥ ೩೯ ॥**
**ತೃಪ್ಯಂತಿ ಪಿತರಸ್ತಸ್ಯ ದ್ವಾದಶಾಬ್ದಾನ್ಯಸಂಶಯಂ ।**
**ಯಃ ಶ್ರಾದ್ಧಂ ಕುರುತೇ ಭಕ್ತ್ಯಾ ಶ್ರೋತ್ರಿಯೈರ್ಬ್ರಾಹ್ಮಣೈರ್ನೃಪ ॥ ೪೦ ॥**

---

**ದಿಂದ** ತುಂಬಿರುವ ಪುಣ್ಯಾಶ್ರಮವನ್ನು ನೋಡಿ ಆ ಮುನಿಗಳ ಸಮೂಹವನ್ನು **ವಂ**ದಿಸಿ ಇಂತೆಂದಳು.

೩೫. "ಮಹಾಭಾಗ್ಯವಂತರೆ! ಈ ತೀರ್ಥದ ಮಾಹಾತ್ಮ್ಯವನ್ನೂ, **ಹೆ**ಸರನ್ನೂ ನನ್ನಲ್ಲಿ ಅನುಗ್ರಹಮಾಡಿ ಹೇಳಿರಿ.

೩೬. ಋಷಿಗಳು ಹೇಳುತ್ತಾರೆ —ಇಲ್ಲಿ ಹಿಂದೆ ಸಂತುಷ್ಟನಾದ ಈಶ್ವರನು **ವಿಷ್ಣು**ವಿಗೆ ಚಕ್ರವನ್ನು ಕೊಟ್ಟುದರಿಂದ ಇದು ಚಕ್ರತೀರ್ಥವೆಂದು ಪ್ರಸಿದ್ಧ **ವಾ**ಗಿದೆ.

೩೭. ಈ ತೀರ್ಥದಲ್ಲಿ ಮಿಂದು ಪಿತೃ ದೇವತೆಗಳಿಗೆ ತರ್ಪಣಮಾಡಿದವನಿಗೆ **ಪು**ನರಾವೃತ್ತಿಯಿಲ್ಲದ ಶಾಶ್ವತ ಗತಿಯುಂಟಾಗುವುದು.

೩೮. ತಪಸ್ವಿನಿಯೆ! ಎರಡನೆಯ ದಿನ ಶೂಲಭೇದ ತೀರ್ಥಕ್ಕೆ ಹೋಗಿ **ಹಿಂದೆ** ಹೇಳಿದ ವಿಧಿಯಂತೆ ಸ್ನಾನಮಾಡಬೇಕು.

೩೯–೪೧. ಅದರಿಂದ ನರನು ಮೂರು ಜನ್ಮಗಳಲ್ಲೆಸಗಿದ ಪಾಪದಿಂದ **ನಿಶ್ಚಯ**ವಾಗಿಯೂ ಮುಕ್ತನಾಗುವನು. ಮೂರು ಬೊಗಸೆ ತಿಲಮಿಶ್ರವಾದ **ಜಲದಿಂದ** ತರ್ಪಣಮಾಡಿದರೆ ಅವನ ಪಿತೃಗಳು ಹನ್ನೆರಡು ವರ್ಷಕಾಲ **ನಿಶ್ಚ**ಯವಾಗಿಯೂ ತೃಪ್ತಿಗೊಳ್ಳುವರು. ಅಲ್ಲಿ ಶ್ರೋತ್ರಿಯ ಬ್ರಾಹ್ಮಣರಿಂದ

ವಾರ್ಧುಷ್ಯಾದ್ಯಾಸ್ತು ವರ್ಜ್ಯಂತೇ ಪಿತೄಣಾಂ ದತ್ತಮಕ್ಷಯಂ ।
ಅಪರೇಽಹ್ನಿ ತತೋ ಗಚ್ಛೇತ್ಸ್ನಾತ್ವಾಂ ದೇವಶಿಲಾಂ ಶುಭಾಂ ॥ ೪೧ ॥
ವೀಕ್ಷ್ಯತೇ ಜಾಹ್ನವೀ ಪುಣ್ಯಾ ದೇವೈರುತ್ಪಾದಿತಾ ಪುರಾ ।
ಸ್ನಾತ್ವಾ ತತ್ರ ಜಲಂ ದದ್ಯಾತ್ತಿಲಮಿಶ್ರಂ ನರಾಧಿಪ ॥ ೪೨ ॥
ಸಕೃತ್ಪಿಂಡಪ್ರದಾನೇನ ಮುಚ್ಯತೇ ಬ್ರಹ್ಮಹತ್ಯಯಾ ।
ಏಕಾದಶ್ಯಾಮುಪೋಷಿತ್ವಾ ಪಕ್ಷಯೋರುಭಯೋರಪಿ ॥ ೪೩ ॥
ಕ್ಷಪಾಜಾಗರಣಂ ಕುರ್ಯಾತ್ಪಠೇತ್ಪೌರಾಣಿಕೀಂ ಕಥಾಂ ।
ವಿಷ್ಣುಪೂಜಾಂ ಪ್ರಕುರ್ವೀತ ಪುಷ್ಪಧೂಪನಿವೇದನೈಃ ॥ ೪೪ ॥
ಪ್ರಭಾತೇ ಭೋಜಯೇದ್ವಿಪ್ರಾನ್ದಾನಂ ದದ್ಯಾತ್ಸ್ವಶಕ್ತಿತಃ ।
ಚತುರ್ಥೇಽಹ್ನಿ ತತೋ ಗಚ್ಛೇದ್ಯತ್ರ ಪ್ರಾಚೀ ಸರಸ್ವತೀ ॥ ೪೫ ॥
ಬ್ರಹ್ಮದೇಹಾದ್ವಿನಿಷ್ಕ್ರಾಂತಾ ಪಾವನಾರ್ಥಂ ಶರೀರಿಣಾಂ ।
ತತ್ರ ಸ್ನಾತ್ವಾ ನರೋ ಭಕ್ತ್ಯಾ ತರ್ಪಯೇತ್ಪಿತೃದೇವತಾಃ ॥ ೪೬ ॥
ಶ್ರಾದ್ಧಂ ಕೃತ್ವಾ ಯಥಾ ನ್ಯಾಯಮನಿಂದ್ಯಾನ್ಭೋಜಯೇದ್ದ್ವಿಜಾನ್ ।
ಪಿತರಸ್ತಸ್ಯ ತೃಪ್ಯಂತಿ ದ್ವಾದಶಾಬ್ದಾನ್ಯಸಂಶಯಂ ॥ ೪೭ ॥

---

ಶ್ರಾದ್ಧಮಾಡಿದವನು ಬಡ್ಡಿಯಿಂದ ಜೀವಿಸುವುದೇ ಮೊದಲಾದುವುಗಳಿಂದ ಉಂಟಾದ ಪಾಪದಿಂದ ಮುಕ್ತನಾಗುವನು. ಪಿತೃಗಳಿಗರ್ಪಿಸಿರುವುದು ಅಕ್ಷಯವಾಗುವುದು. ಮೂರನೆಯದಿನ ಪುಣ್ಯಕರವಾದ ದೇವಶಿಲೆಗೆ ಹೋಗಬೇಕು.

೪೨. ಅಲ್ಲಿ ಹಿಂದೆ ದೇವತೆಗಳು ಉಂಟುಮಾಡಿರುವ ಗಂಗೆಯು ಕಾಣಿಸುವುದು. ಅಲ್ಲಿ ಮಿಂದು ತಿಲಮಿಶ್ರವಾದ ಜಲದಿಂದ ತರ್ಪಣಮಾಡಬೇಕು.

೪೩–೪೭. ಅಲ್ಲಿ ಒಂದು ಸಾರಿ ಪಿಂಡಪ್ರದಾನ ಮಾಡುವುದರಿಂದ ಬ್ರಹ್ಮಹತ್ಯೆಯಿಂದ ಮುಕ್ತನಾಗುವನು. ಮತ್ತು ಅಲ್ಲಿ ಎರಡು ಪಕ್ಷಗಳಲ್ಲಿಯೂ ಏಕಾದಶೀದಿನ ಉಪವಾಸಮಾಡಿ ರಾತ್ರಿ ಜಾಗರಣೆಗೈದು ಪುರಾಣ ಕಥೆಗಳನ್ನು ಪಠಿಸಿ ಪುಷ್ಪ ಧೂಪ ನಿವೇದನಗಳಿಂದ ವಿಷ್ಣುವನ್ನು ಪೂಜಿಸಬೇಕು. ಬೆಳಗ್ಗೆ ವಿಪ್ರರಿಗೆ ಭೋಜನವನ್ನು ಮಾಡಿಸಿ ತನ್ನ ಶಕ್ತ್ಯನುಸಾರ ದಾನವನ್ನು ಕೊಡಬೇಕು. ನಾಲ್ಕನೆಯ ದಿನ ನರರ ಶುದ್ಧಿಗಾಗಿ ಬ್ರಹ್ಮನ ಶರೀರದಿಂದ ಹೊರಟ ಪ್ರಾಚೀನ ಸರಸ್ವತಿಯೆಡೆಗೆ ಹೋಗಬೇಕು. ಅಲ್ಲಿ ಮಿಂದು ಭಕ್ತಿಯಿಂದ ಪಿತೃದೇವತಗಳಿಗೆ ತರ್ಪಣಮಾಡಿ ವಿಧಿಯಂತೆ ಶ್ರಾದ್ಧಗೈದು ಶ್ಲಾಘ್ಯರಾದ ಬ್ರಾಹ್ಮಣರಿಗೆ ಭೋಜನ ಮಾಡಿಸಬೇಕು. ಅದರಿಂದ ಅವನ ಪಿತೃಗಳು ಹನ್ನೆರಡು ವರ್ಷಕಾಲ ತೃಪ್ತಿಗೊಳ್ಳುವರು.

**ಸರ್ವದೇವಮಯಂ ಸ್ಥಾನಂ ಸರ್ವತೀರ್ಥಮಯಂ ತಥಾ ।**
**ದೇವಕೋಟಿಸಮಾಕೀರ್ಣಂ ಕೋಟಿಲಿಂಗೋತ್ತಮೋತ್ತಮಂ ॥ ೪೮ ॥**
**ತ್ರಿರಾತ್ರಂ ಕುರುತೇ ಯೋಽತ್ರ ಶುಚಿಃ ಸ್ನಾತ್ವಾ ಜಿತೇಂದ್ರಿಯಃ ।**
**ಪಕ್ಷಂ ಮಾಸಂ ಚ ಷಣ್ಮಾಸಮಬ್ದಮೇಕಂ ಕದಾಚನ ॥ ೪೯ ॥**
**ನ ತಸ್ಯ ಸಂಭವೋ ಮರ್ತ್ಯೇ ತಸ್ಯ ವಾಸೋ ಭವೇದ್ದಿವಿ ।**
**ನಿಯಮಸ್ಥೋ ವಿಮುಚ್ಯೇತ ತ್ರಿಜನ್ಮಜನಿತಾದಘಾತ್ ॥ ೫೦ ॥**
**ವಿನಾ ಪುಂಸಾ ತು ಯಾ ನಾರೀ ದ್ವಾದಶಾಬ್ದಂ ಶುಚಿವ್ರತಾ ।**
**ತಿಷ್ಠತೇ ಸಾಽಕ್ಷಯಂ ಕಾಲಂ ರುದ್ರಲೋಕೇ ಮಹೀಯತೇ ॥ ೫೧ ॥**
**ಮುನೀನಾಂ ವಚನಂ ಶ್ರುತ್ವಾ ಮುದಾ ಪರಮಯಾ ಯಯೌ ।**
**ತತೋಽವಗಾಹ್ಯ ತತ್ತೀರ್ಥಮಹರ್ನಿಶಮತಂದ್ರಿತಾ ॥ ೫೨ ॥**
**ದೃಷ್ಟ್ವಾ ತೀರ್ಥಪ್ರಭಾವಂ ತು ಪುನರ್ವಚನಮಬ್ರವೀತ್ ।**
**ಶ್ರೂಯತಾಂ ವಚನಂ ಮೇಽದ್ಯ ಬ್ರಾಹ್ಮಣಾಃ ಸಪುರೋಹಿತಾಃ ॥ ೫೩ ॥**
**ನ ತ್ಯಜಾಮೀದೃಶಂ ಸ್ಥಾನಂ ಯಾವಜ್ಜೀವಮಹರ್ನಿಶಂ ।**
**ಮತ್ಪಿತುಶ್ಚ ತಥಾ ಮಾತುಃ ಕಥಯಧ್ವಮಿದಂ ವಚಃ ॥ ೫೪ ॥**

---

೪೮. ಹಾಗೆಯೇ ಸಕಲ ದೇವತಾರೂಪವೂ, ಸಮಸ್ತ ತೀರ್ಥರೂಪವೂ, ಅನೇಕ ತೀರ್ಥಗಳಿಂದ ತುಂಬಿರುವುದೂ, ಉತ್ತಮವೂ ಆದ ಕೋಟಿಲಿಂಗ ತೀರ್ಥಕ್ಕೆ ಹೋಗಬೇಕು

೪೯–೫೦. ಇಲ್ಲಿ ಮೂರು ರಾತ್ರಿಯಾಗಲಿ, ಹದಿನೈದು ದಿನಗಳಾಗಲಿ, ಒಂದು ತಿಂಗಳಾಗಲಿ, ಆರು ತಿಂಗಳಾಗಲಿ, ಒಂದು ವರ್ಷವಾಗಲಿ ಜಿತೇಂದ್ರಿಯನಾಗಿ ಮಿಂದು ಶುದ್ಧನಾದವನು ಮಾನವಲೋಕದಲ್ಲಿ ಜನಿಸುವುದಿಲ್ಲ. ದೇವಲೋಕದಲ್ಲಿಯೇ ವಾಸಿಸುವನು. ವ್ರತವನ್ನಾಚರಿಸುವವನು ಮೂರು ಜನ್ಮಗಳ ಪಾಪದಿಂದ ಮುಕ್ತನಾಗುವನು.

೫೧. ಪುರುಷನಲ್ಲದೆ ನಾರಿಯೂ ಹನ್ನೆರಡು ವರ್ಷಕಾಲ ಶುದ್ಧಳಾಗಿ ವ್ರತವನ್ನಾಚರಿಸಿದರೆ ಶಾಶ್ವತವಾಗಿ ರುದ್ರಲೋಕದಲ್ಲಿ ವಾಸಿಸುತ್ತ ಪೂಜ್ಯಳಾಗುವಳು.

೫೨–೫೩. ಆ ಭಾನುಮತಿಯು ಮುನಿಗಳ ಆ ವಚನವನ್ನು ಕೇಳಿ ಅತ್ಯಂತ ಸಂತೋಷದಿಂದ ಆ ತೀರ್ಥದಲ್ಲಿ ಪ್ರತಿದಿನವೂ ಆಲಸ್ಯವಿಲ್ಲದೆ ಮಿಂದು ಆ ತೀರ್ಥದ ಪ್ರಭಾವವನ್ನು ನೋಡಿ ಬ್ರಾಹ್ಮಣರನ್ನು ಕುರಿತು ಇಂತೆಂದಳು. "ಪುರೋಹಿತರಿಂದ ಸಹಿತರಾದ ದ್ವಿಜರೆ! ಈಗ ನನ್ನ ಮಾತನ್ನು ಕೇಳಿರಿ.

೫೪–೫೫. ನಾನು ಮಡಿಯುವವರೆಗೆ ಹಗಲುರಾತ್ರಿ ಇಂತಹ ಸ್ಥಳವನ್ನು ಬಿಡುವುದಿಲ್ಲ. ನನ್ನ ತಂದೆಗೂ, ತಾಯಿಗೂ ನಿಮ್ಮ ಮಗಳು ಶೂಲಭೇದದಲ್ಲಿ

ತ್ವತ್ಕನ್ಯಾ ಶೂಲಭೇದಸ್ಥಾ ನಿಯತಾ ವ್ರತಚಾರಿಣೀ ।
ಏವಮುಕ್ತ್ವಾ ಸ್ಥಿತಾ ಸಾ ತು ತತ್ರ ಭಾನುಮತೀ ನೃಪ ॥ ೫೫ ॥
ಏಕಾಂತರೋಪವಾಸಸ್ಥಾ ಶನೈರ್ಮಾಸೋಪವಾಸಿತಾ ।
ದೇವಶಿಲಾಸ್ಥಿತಾ ನಿತ್ಯಂ ದಧ್ಯೌ ಸಾ ಚಕ್ರಪಾಣಿನಂ ॥ ೫೬ ॥
ಅಹರ್ನಿಶಂ ದಹೇದ್ಧೂಪಂ ಚಂದನಂ ಚ ಸದೀಪಕಂ ।
ಪಾದಶೌಚಂ ಸ್ವಯಂ ಕೃತ್ವಾ ಸ್ವಯಂ ಭೋಜಯತೇ ದ್ವಿಜಾನ್ ।
ದ್ವಾದಶಾಬ್ದಾನಿ ಸಾ ರಾಜ್ಞೀ ಸುವ್ರತಾ ತತ್ರ ಸಂಸ್ಥಿತಾ ॥ ೫೭ ॥

ಈಶ್ವರ ಉವಾಚ :—

ಅನ್ಯದ್ದೇವಶಿಲಾಯಾಸ್ತು ಮಾಹಾತ್ಮ್ಯಂ ಶೃಣು ಭೂಪತೇ ।
ಕಥಯಾಮಿ ಮಹಾಬಾಹೋ ಸೇತಿಹಾಸಂ ಪುರಾತನಂ ॥ ೫೮ ॥
ಕಶ್ಚಿದ್ವನೇಚರೋ ವ್ಯಾಧಃ ಶಬರಃ ಸಹ ಭಾರ್ಯಯಾ ।
ದುರ್ಭಿಕ್ಷಪೀಡಿತಸ್ತತ್ರ ಆಮಿಷಾರ್ಥಂ ವನಂಗತಃ ॥ ೫೯ ॥
ನಾಽಪಶ್ಯತ್ಪಕ್ಷಿಣಸ್ತತ್ರ ನ ಮೃಗಾನ್ನ ಫಲಾನಿ ಚ ।
ಸರಸ್ತತೋ ದದರ್ಶಾಽಥ ಪದ್ಮಿನೀಖಂಡಮಂಡಿತಂ ॥ ೬೦ ॥

---

ವ್ರತವನ್ನಾಚರಿಸುತ್ತಿರುವಳು ಎಂದು ಹೇಳಿರಿ.'' ಆ ಭಾನುಮತಿಯು ಹೀಗೆ ಹೇಳಿ ಅಲ್ಲಿಯೇ ವಾಸವಾಗಿದ್ದಳು.

೫೬. ಅವಳು ಎರಡು ದಿನಕ್ಕೊಮ್ಮೆ ಊಟಮಾಡುವವಳೂ, ಕ್ರಮವಾಗಿ ತಿಂಗಳುಕಾಲ ಉಪವಾಸಮಾಡುವವಳೂ ಆಗಿ ದೇವಶಿಲೆಯಲ್ಲಿ ನೆಲಸಿ ವಿಷ್ಣುವನ್ನು ಧ್ಯಾನಿಸಿದಳು.

೫೭. ಹಗಲು ರಾತ್ರಿ ಧೂಪ, ಚಂದನ, ದೀಪಗಳನ್ನಿತ್ತು ಬ್ರಾಹ್ಮಣರ ಪಾದಗಳನ್ನು ತೊಳೆದು ಅವರನ್ನು ಭೋಜನಮಾಡಿಸಿದಳು. ಹೀಗೆ ಅವಳು ಹನ್ನೆರಡು ವರ್ಷಕಾಲ ವ್ರತವನ್ನಾಚರಿಸುತ್ತಿದ್ದಳು.

೫೮. ಈಶ್ವರನು ಹೇಳುತ್ತಾನೆ —ದೊರೆಯೆ! ದೇವಶಿಲೆಯ ಮತ್ತೊಂದು ಮಾಹಾತ್ಮ್ಯವನ್ನು ಕೇಳು. ಇತಿಹಾಸ ಸಹಿತವಾಗಿ ಪುರಾತನವಾದ ಅದರ ಚರಿತ್ರೆಯನ್ನು ಹೇಳುತ್ತೇನೆ.

೫೯. ವನಸಂಚಾರಿಯಾದ ಒಬ್ಬ ಬೇಡನು ಪತ್ನಿಯೊಡನೆ ದುರ್ಭಿಕ್ಷದಿಂದ ಪೀಡಿತನಾಗಿ ಮಾಂಸಕ್ಕೋಸ್ಕರ ಕಾಡಿಗೆ ಹೋದನು.

೬೦. ಅವನು ಆ ಕಾಡಿನಲ್ಲಿ ಪಕ್ಷಿಗಳನ್ನೂ, ಮೃಗಗಳನ್ನೂ, ಫಲಗಳನ್ನೂ ನೋಡಲಿಲ್ಲ. ತಾವರೆಯ ಸಮೂಹದಿಂದ ಅಲಂಕಾರಗೊಂಡ ಒಂದು ಸರೋವರವನ್ನು ಮಾತ್ರ ನೋಡಿದನು.

**ದೃಷ್ಟ್ವಾ ಸರೋವರಂ ತತ್ರ ಶಬರೀ ವಾಕ್ಯಮಬ್ರವೀತ್ ।**
**ಕುಮುದಾನಿ ಗೃಹಾಣ ತ್ವಂ ದಿವ್ಯಾನ್ಯಾಹಾರಸಿದ್ಧಯೇ ॥ ೬೧ ॥**
**ದೇವಸ್ಯ ಪೂಜನಾರ್ಥಂ ತು ಶೂಲಭೇದಸ್ಯ ಯತ್ನತಃ ।**
**ವಿಕ್ರಯೋ ಭವಿತಾ ತತ್ರ ಧರ್ಮಶೀಲೋ ಜನೋ ಯತಃ ॥ ೬೨ ॥**
**ಭಾರ್ಯಾಯಾ ವಚನಂ ಶ್ರುತ್ವಾ ಜಗ್ರಾಹ ಕುಮುದಾನಿ ಸಃ ।**
**ಉತ್ತೀರ್ಣಸ್ತು ತಟೇ ಯಾವದ್ದೃಷ್ಟ್ವಾ ಶ್ರೀವೃಕ್ಷಮಗ್ರತಃ ॥ ೬೩ ॥**
**ಶ್ರೀಫಲಾನಿ ಗೃಹೀತ್ವಾತು ಸುಪಕ್ವಾನಿ ವಿಶೇಷತಃ ।**
**ಶೂಲಭೇದಂ ಸ ಸಂಪ್ರಾಪ್ತೋ ದದರ್ಶ ಸುಬಹೂನ್ ಜನಾನ್ ॥ ೬೪ ॥**
**ಚೈತ್ರಮಾಸೇ ಸಿತೇ ಪಕ್ಷೇ ಏಕಾದಶ್ಯಾಂ ನರಾಧಿಪ ।**
**ತಸ್ಮಿನ್ನಹನಿ ನಾಶ್ನೀಯುರ್ಬಾಲಾ ವೃದ್ಧಾಸ್ತಥಾಸ್ತ್ರಿಯಃ ॥ ೬೫ ॥**
**ಮಂಡಪಂ ದದೃಶೇ ತತ್ರ ಕೃತಂ ದೇವಶಿಲೋಪರಿ ।**
**ವಸ್ತ್ರೈಃ ಸಂವೇಷ್ಟಿತಂ ದಿವ್ಯಂ ಸ್ರಙ್ಮಾಲ್ಯೈರುಪಶೋಭಿತಂ ॥ ೬೬ ॥**
**ಋಷಯಶ್ಚಾಽಽಗತಾಸ್ತತ್ರ ಯೇ ಚಾಽಽಶ್ರಮನಿವಾಸಿನಃ ।**
**ಸೋಪವಾಸಾಃ ಸನಿಯಮಾಃ ಸರ್ವೇ ಸಾಽಗ್ನಿಪರಿಗ್ರಹಾಃ ॥ ೬೭ ॥**
**ದೇವನದ್ಯಾಸ್ತಟೇ ರಮ್ಯೇ ಮುನಿಸಂಘೈಃ ಸಮಾಕುಲೇ ।**
**ಆಗಚ್ಛದ್ಭಿರ್ನೃಪಶ್ರೇಷ್ಠ ಮಾರ್ಗಸ್ತತ್ರ ನ ಲಭ್ಯತೇ ॥ ೬೮ ॥**

---

೬೧. ಅವನ ಪತ್ನಿಯು ಸರೋವರವನ್ನು ಕಂಡು, "ನಾಥ! ನೀನು ಆಹಾರಕ್ಕಾಗಿ ಈ ನೈದಿಲೆ ಹೂವುಗಳನ್ನು ತೆಗೆದುಕೊ

೬೨. ಜನರು ಧರ್ಮಿಷ್ಠರಾಗಿರುವುದರಿಂದ ಶೂಲಭೇದ ದೇವರ ಪೂಜೆಗಾಗಿ ಇದನ್ನು ಕೊಂಡುಕೊಳ್ಳುವರು."

೬೩–೬೪. ಆ ಬೇಡನು ಪತ್ನಿಯ ಮಾತನ್ನು ಕೇಳಿ ನೈದಿಲೆ ಹೂವುಗಳನ್ನು ತೆಗೆದುಕೊಂಡು ಮೇಲಕ್ಕೆ ಬಂದು ಮುಂದೆ ದಡದಲ್ಲಿ ಬಿಲ್ವವೃಕ್ಷವನ್ನು ನೋಡಿ ಮಾಗಿದ ಅದರ ಹಣ್ಣುಗಳನ್ನು ತೆಗೆದುಕೊಂಡು ಶೂಲಭೇದಕ್ಕೆ ಹೋಗಿ ಅನೇಕ ಜನಗಳನ್ನು ಕಂಡನು.

೬೫. ದೊರೆಯೆ! ಚೈತ್ರಮಾಸದ ಶುಕ್ಲಪಕ್ಷೈಕಾದಶೀ ದಿನ ಅಲ್ಲಿ ಬಾಲಕರೂ, ವೃದ್ಧರೂ, ಹೆಂಗಸರೂ ಭೋಜನಮಾಡಲಿಲ್ಲ.

೬೬. ಅಲ್ಲಿ ದೇವಶಿಲೆಯಮೇಲೆ ವಸ್ತ್ರಗಳಿಂದ ಸುತ್ತಿರುವ ಹೂವಿನಮಾಲೆಗಳಿಂದ ಅಲಂಕಾರಗೊಂಡ ದಿವ್ಯಮಂಡಪವನ್ನು ಕಂಡನು.

೬೭. ಅಲ್ಲಿಗೆ ಆಶ್ರಮವಾಸಿಗಳೂ, ಉಪವಾಸಮಾಡುವವರೂ, ನಿಯಮವನ್ನಾಚರಿಸುವವರೂ, ಅಗ್ನಿಹೋತ್ರಿಗಳೂ ಆದ ಮುನಿಗಳು ಬಂದರು.

೬೮. ಮನೋಹರವಾದ ಗಂಗಾತಟವು ಮುನಿಗಳ ಸಮೂಹಗಳಿಂದ ವ್ಯಾಪ್ತವಾಗಿದ್ದುದರಿಂದ ಬರುವ ಜನರಿಗೆ ದಾರಿಯು ಸಿಕ್ಕುತ್ತಿರಲಿಲ್ಲ.

ದೃಷ್ಟ್ವಾ ಜನಪದಂ ತತ್ರ ತಾಂ ಭಾರ್ಯಾಂ ಶಬರೋಽಬ್ರವೀತ್ ।
ಗಚ್ಛ ಪೃಚ್ಛಸ್ವ ಕಮಪಿ ಕಿಮದ್ಯ ಸ್ನಾನಕಾರಣಂ ॥ ೬೯ ॥
ಪರ್ವಾಣಿ ಯಾನಿ ಶ್ರೂಯಂತೇ ಕಿಂ ಸ್ವಿತ್ಸೂರ್ಯೇಂದುಸಂಪ್ಲವಃ ।
ಅಯನಂ ಕಿಂ ಭವೇದದ್ಯ ಕಿಂವಾಽಕ್ಷಯತೃತೀಯಕಾ ॥ ೭೦ ॥
ತತಃ ಸ್ವಭರ್ತುರ್ವಚನಾಚ್ಛಬರೀ ಪ್ರಸ್ಥಿತಾ ತದಾ ।
ಪಪ್ರಚ್ಛ ನಾರೀಂ ದೃಷ್ಟ್ವಾಽಗ್ರೇ ದತ್ತ್ವಾಽಗ್ರೇ ಕಮಲೇ ಶುಭೇ ॥ ೭೧ ॥
ತಿಥಿರದ್ಯೈವ ಕಾ ಪ್ರೋಕ್ತಾ ಕಿಂ ಪರ್ವ ಕಥಯಸ್ವ ಮೇ ।
ಕಿಮಯಂ ಸ್ನಾತಿ ಲೋಕೋಽಯಂ ಕಿಂ ವಾ ಸ್ನಾನಸ್ಯ ಕಾರಣಂ ॥ ೭೨ ॥

ನಾರ್ಯುವಾಚ :—

ಅದ್ಯ ಚೈಕಾದಶೀ ಪುಣ್ಯಾ ಸರ್ವಪಾಪಕ್ಷಯಂಕರೀ ।
ಉಪೋಷಿತಾ ಸಕೃದ್ಯೇನ ನಾಕಪ್ರಾಪ್ತಿಂ ಕರೋತಿ ಸಾ ॥ ೭೩ ॥
ತಸ್ಯಾಸ್ತದ್ವಚನಂ ಶ್ರುತ್ವಾ ಶಬರೀ ಶಬರಾಯ ವೈ ।
ಕಥಯಾಮಾಸ ಚಾಽವ್ಯಗ್ರಾ ಸ್ತ್ರೀವಾಕ್ಯಂ ನೃಪಸತ್ತಮ ॥ ೭೪ ॥
ಅದ್ಯ ತ್ವೇಕಾದಶೀ ಪುಣ್ಯಾ ಬಾಲವೃದ್ಧೈರುಪೋಷಿತಾ ।
ಮದನ್ಯೈಕಾದಶೀ ನಾಮ ಸರ್ವಪಾಪಕ್ಷಯಂಕರೀ ॥ ೭೫ ॥

---

೬೯. ಶಬರನು ಆ ಜನರ ಗುಂಪನ್ನು ನೋಡಿ ಪತ್ನಿಯನ್ನು ಕುರಿತು ಹೀಗೆಂದನು. "ಹೋಗು ಸ್ನಾನಮಾಡಲು ಕಾರಣವನ್ನು ಯಾರನ್ನಾದರೂ ಕೇಳು.

೭೦. ಪರ್ವತಿಥಿಯೊ? ಸೂರ್ಯಚಂದ್ರರ ಗ್ರಹಣವೊ? ಅಯನ ಸಂಕ್ರಾಂತಿಯೊ? ಅಥವಾ ಅಕ್ಷಯತದಿಗೆಯೊ ಏನೆಂಬುದನ್ನು ಕೇಳಿತಿಳಿದುಕೊ?"

೭೧. ಬಳಿಕ ಆ ಬೇಡನ ಸತಿಯು ತನ್ನ ಪತಿಯ ವಚನದಿಂದ ಅಲ್ಲಿಂದ ಹೊರಟು ಒಬ್ಬ ಹೆಂಗಸನ್ನು ನೋಡಿ ಮುಂದೆ ಕಮಲಗಳನ್ನು ಇಟ್ಟು ಹೀಗೆ ಪ್ರಶ್ನಿಸಿದಳು.

೭೨. "ಈ ದಿನ ಯಾವ ತಿಥಿಯು? ಪರ್ವತಿಥಿಯೊ? ನನಗೆ ಹೇಳು. ಈ ಜನರು ಏಕೆ ಸ್ನಾನಮಾಡುವರು? ಸ್ನಾನಕ್ಕೆ ಕಾರಣವೇನು?"

೭೩. ನಾರಿಯು ಹೇಳುತ್ತಾಳೆ —ಈ ದಿನ ಸಕಲ ಪಾಪಗಳನ್ನು ಪರಿಹರಿಸುವ ಪುಣ್ಯಕರವಾದ ಏಕಾದಶೀ ತಿಥಿಯು. ಈ ದಿನ ಉಪವಾಸಮಾಡಿದರೆ ಸ್ವರ್ಗವು ಲಭಿಸುವುದು.

೭೪. ಶಬರಿಯು ಅವಳ ಆ ಮಾತನ್ನು ಕೇಳಿ ಕೂಡಲೆ ಪತಿಗೆ ಅದನ್ನು ಹೇಳಿದಳು.

೭೫. "ಈ ದಿನ ಬಾಲವೃದ್ಧರು ಉಪವಾಸಮಾಡಿದ ಸಮಸ್ತಪಾಪಗಳನ್ನು ಪರಿಹರಿಸುವ ಪುಣ್ಯಕರವಾದ ಮದನ್ಯೈಕಾದಶಿಯು.

ನಿಯತಾ ಶ್ರೂಯತೇ ತತ್ರ ರಾಜಪುತ್ರೀ ಸುಶೋಭನಾ ।
ವ್ರತಸ್ಥಾ ನಿಯತಾಹಾರಾ ನಾಮ್ನಾ ಭಾನುಮತೀ ಸತೀ ॥ ೭೬ ॥
ನೈತಯಾ ಸದೃಶೀ ಕಾಚಿತ್ತ್ರಿಷು ಲೋಕೇಷು ವಿಶ್ರುತಾ ।
ದೃಶ್ಯತೇ ಸಾ ವರಾರೋಹಾ ಹ್ಯವತೀರ್ಣಾ ಮಹೀತಲೇ ॥ ೭೭ ॥
ಭಾರ್ಯಾಯಾ ವಚನಂ ಶ್ರುತ್ವಾ ಶಬರಸ್ತಾಂ ಜಗಾದ ಹ ।
ಕಮಲಾನಿ ಯಥಾಲಾಭಂ ದತ್ವಾ ಭುಂಕ್ಷ್ವ ಹಿ ಸತ್ವರಂ ॥ ೭೮ ॥
ಮಮೈಷಾ ವರ್ತತೇ ಬುದ್ಧಿರ್ನ ಭೋಕ್ತವ್ಯಂ ಮಯಾ ಧ್ರುವಂ ।
ನ ಮಯೋಪಾರ್ಜಿತಂ ಭದ್ರೇ ಪಾಪಬುದ್ಧ್ಯಾ ಶುಭಂ ಕ್ವಚಿತ್ ॥ ೭೯ ॥

ಶಬರ್ಯುವಾಚ :—

ನ ಪೂರ್ವಂ ತು ಮಯಾ ಭುಕ್ತಂ ಕಸ್ಮಿಂಶ್ಚೈವ ತು ವಾಸರೇ ।
ಭುಕ್ತಶೇಷಂ ಮಯಾ ಭುಕ್ತಂ ಯಾವತ್ಕಾಲಂ ಸ್ಮರಾಮ್ಯಹಂ ॥ ೮೦ ॥
ಭಾರ್ಯಾಯಾ ನಿಶ್ಚಯಂ ಜ್ಞಾತ್ವಾ ಸ್ನಾನಂ ಕರ್ತುಂ ಜಗಾಮ ಹ ।
ಅರ್ಧೋತ್ತರೀಯವಸ್ತ್ರೇಣ ಸ್ನಾನಂ ಕೃತ್ವಾ ತು ಭಕ್ತಿತಃ ॥ ೮೧ ॥
ಸರ್ವಾನ್ದೇವಾನ್ನಮಸ್ಕೃತ್ಯ ಗತೋ ದೇವಶಿಲಾಂ ಪ್ರತಿ ।
ತಸ್ಥೌ ಸ ಶಂಕಮಾನೋಽಪಿ ನಮಸ್ಕೃತ್ಯ ಜನಾರ್ದನಂ ॥ ೮೨ ॥

---

೭೬. ಅಲ್ಲಿ ಭಾನುಮತಿಯೆಂಬ ಓರ್ವ ರಾಜಪುತ್ರಿಯು ಉಪವಾಸಮಾಡಿ ವ್ರತವನ್ನಾಚರಿಸುತ್ತಿರುವಳು.

೭೭. ಮೂರು ಲೋಕಗಳಲ್ಲಿ ಇವಳಿಗೆ ಸಮಾನಳಾದ ಯಾವಳೂ ಇಲ್ಲ. ಅವಳು ಭೂಮಿಯಲ್ಲಿ ಅವತರಿಸಿದ ದೇವತೆಯಂತೆ ಕಾಣುತ್ತಾಳೆ.

೭೮–೭೯. ಬೇಡನು ಪತ್ನಿಯ ಆ ಮಾತನ್ನು ಕೇಳಿ ಅವಳನ್ನು ಕುರಿತು ನೀನು ಕಮಲಗಳನ್ನು ಕೊಟ್ಟು ಬಂದ ಹಣದಿಂದ ಬೇಗನೆ ಭೋಜನಮಾಡು. ನಾನು ಊಟಮಾಡುವುದಿಲ್ಲವೆಂದು ನಿಶ್ಚಯಿಸಿರುವೆನು. ಪಾಪಬುದ್ಧಿಯಾದ ನಾನು ಎಲ್ಲಿಯೂ ಪುಣ್ಯವನ್ನು ಸಂಪಾದಿಸಲಿಲ್ಲ.

೮೦. ಶಬರಿಯು ಹೇಳುತ್ತಾಳೆ.—ಯಾವ ದಿನವೂ ನಾನು ನಿನಗಿಂತ ಮೊದಲು ಊಟಮಾಡಲಿಲ್ಲ. ಇಷ್ಟು ದಿನವೂ ನಾನು ನಿನ್ನ ಭುಕ್ತಶೇಷವನ್ನು ಭುಂಜಿಸುತ್ತಿದ್ದುದನ್ನು ಸ್ಮರಿಸುತ್ತೇನೆ.

೮೧–೮೨. ಬೇಡನು ಪತ್ನಿಯ ನಿಶ್ಚಯವನ್ನು ಅರಿತು ಸ್ನಾನಮಾಡಲು ಹೋದನು. ಉತ್ತರೀಯಾರ್ಧವನ್ನುಟ್ಟು ಭಕ್ತಿಯಿಂದ ಮಿಂದು ಸಮಸ್ತ ದೇವತೆಗಳನ್ನೂ ವಂದಿಸಿ ದೇವಶಿಲೆಗೆ ಹೋಗಿ ಶಂಕಿಸುತ್ತ ವಿಷ್ಣುವನ್ನು ನಮಸ್ಕರಿಸಿ ನಿಂತನು.

ಯಸ್ಯಾಸ್ತು ಕುಮುದೇ ದತ್ತೇ ತಯಾ ರಾಜ್ಞ್ಯೈ ನಿವೇದಿತಂ ।
ತದ್ದೃಷ್ಟ್ವಾ ಪದ್ಮಯುಗಲಂ ತಾಂ ದಾಸೀಂ ಸಾಽಬ್ರವೀತ್ತದಾ ॥ ೮೩ ॥
ಕುತ್ರ ಪದ್ಮದ್ವಯಂ ಲಬ್ಧಂ ಕಥ್ಯತಾಮಗ್ರತೋ ಮಮ ।
ಶೀಘ್ರಂ ತತ್ರೈವ ಗತ್ವಾ ಚ ಪದ್ಮಾನ್ಯಾನಯ ಚಾಽಪರಾನ್ ॥ ೮೪ ॥
ಧಾನ್ಯೇನ ವಸುನಾ ವಾಽಪಿ ಕಮಲಾನಿ ಸಮಾನಯ ।
ಭಾನುಮತ್ಯಾ ವಚಃ ಶ್ರುತ್ವಾ ಗತಾ ಸಾ ಶಬರಂ ಪ್ರತಿ ॥ ೮೫ ॥
ಶ್ರೀಫಲಾನಿ ಚ ಪುಷ್ಪಾಣಿ ಬಹೂನ್ಯನ್ಯಾನಿ ದೇಹಿ ಮೇ ॥ ೮೬ ॥

ಶಬರ್ಯುವಾಚ :—

ಶ್ರೀಫಲಾನಿ ಸುಪುಷ್ಪಾಣಿ ದಾಸ್ಯಾಮಿ ಚ ವಿಶೇಷತಃ ।
ನ ಲೋಭೋ ನ ಸ್ಪೃಹಾ ಮೇಽಸ್ತಿ ಗತ್ವಾ ರಾಜ್ಞೀಂ ನಿವೇದಯ ॥ ೮೭ ॥
ತಯಾ ಚ ಸತ್ವರಂ ಗತ್ವಾ ಯಥಾವೃತ್ತಂ ನಿವೇದಿತಂ ।
ಶಬರ್ಯುಕ್ತಂ ಪುರಸ್ತಸ್ಯಾಃ ಸವಿಸ್ತರಪರಂ ವಚಃ ॥ ೮೮ ॥
ತಸ್ಯಾಸ್ತು ವಚನಂ ಶ್ರುತ್ವಾ ರಾಜ್ಞೀ ತತ್ರ ಸ್ವಯಂಗತಾ ।
ಉವಾಚ ಶಬರೀಂ ಪ್ರೀತ್ಯಾ ದೇಹಿ ಪದ್ಮಾನಿ ಮೂಲ್ಯತಃ ॥ ೮೯ ॥

---

೮೩. ಶಬರಿಯು ಯಾವಳಿಗೆ ನೈದಿಲೆ ಹೂವುಗಳನ್ನು ಕೊಟ್ಟಿದ್ದಳೊ, ಅವಳು ಅವುಗಳನ್ನು ರಾಜಪುತ್ರಿಗೆ ಕೊಟ್ಟಳು. ಆ ರಾಜಪುತ್ರಿಯು ಆ ಎರಡು ನೈದಿಲೆಗಳನ್ನು ನೋಡಿ ದಾಸಿಯನ್ನು ಕುರಿತು ಹೇಗೆಂದಳು.

೮೪. "ನಿನಗೆ ಈ ನೈದಿಲೆ ಹೂವುಗಳು ಎಲ್ಲಿ ದೊರಕಿದುವು? ನನ್ನ ಮುಂದೆ ಹೇಳು. ಶೀಘ್ರವಾಗಿ ಅಲ್ಲಿಗೆ ಹೋಗಿ ಇನ್ನೂ ಬೇರೆ ನೈದಿಲೆ ಹೂವುಗಳನ್ನು ತೆಗೆದುಕೊಂಡು ಬಾ

೮೫–೮೬. ಧಾನ್ಯವನ್ನಾಗಲಿ, ದ್ರವ್ಯವನ್ನಾಗಲಿ ಕೊಟ್ಟು ಕಮಲಗಳನ್ನು ತೆಗೆದುಕೊಂಡು ಬಾ." ಭಾನುಮತಿಯ ಮಾತನ್ನು ಕೇಳಿ ಆ ದಾಸಿಯು ಶಬರ ನೆಡೆಗೆ ಹೋಗಿ ಬಿಲ್ವಫಲಗಳನ್ನೂ ಬೇರೆ ಬಹು ಪುಷ್ಪಗಳನ್ನೂ ನನಗೆ ಕೊಡೆಂದು ಕೇಳಿದಳು.

೮೭. ಶಬರಿಯು ಹೇಳುತ್ತಾಳೆ —ಶ್ರೀಫಲಗಳನ್ನೂ, ಪುಷ್ಪಗಳನ್ನೂ ನಿನಗೆ ವಿಶೇಷವಾಗಿ ಕೊಡುವೆನು ನನಗೆ ಆಶೆಯಾಗಲಿ, ಅಪೇಕ್ಷೆಯಾಗಲಿ ಇಲ್ಲ. ಇದನ್ನು ರಾಜಕುಮಾರಿಗೆ ತಿಳಿಸು.

೮೮. ಆ ದಾಸಿಯು ಬೇಗನೆ ಹೋಗಿ ರಾಜಕುಮಾರಿಯ ಮುಂದೆ ಶಬರಿಯು ಹೇಳಿದ್ದನ್ನು ವಿಸ್ತಾರವಾಗಿ ತಿಳಿಸಿದಳು.

೮೯. ರಾಜಪುತ್ರಿಯು ದಾಸಿಯ ಆ ಮಾತನ್ನು ಕೇಳಿ ತಾನೇ ಶಬರಿಯೆಡೆಗೆ ಹೋಗಿ ಬೆಲೆಯನ್ನು ತೆಗೆದುಕೊಂಡು ಪದ್ಮಗಳನ್ನು ಕೊಡೆಂದು ಪ್ರೀತಿಯಿಂದ ಕೇಳಿದಳು.

ಶಬರ್ಯುವಾಚ :—

ನ ಮೂಲ್ಯಂ ಕಾಮಯೇ ದೇವಿ ಫಲಪುಷ್ಪಸಮುದ್ಭವಂ ।
ಶ್ರೀಫಲಾನಿ ಚ ಪುಷ್ಪಾಣಿ ಯಥೇಷ್ಟಂ ಮಮ ಗೃಹ್ಯತಾಂ ॥ ೯೦ ॥
ಅರ್ಚಾಂ ಕುರು ಯಥಾನ್ಯಾಯಂ ವಾಸುದೇವೇ ಜಗತ್ಪತೌ ॥ ೯೧ ॥

ರಾಜಪುತ್ರ್ಯುವಾಚ :—

ವಿನಾ ಮೂಲ್ಯಂ ನ ಗೃಹ್ಣಾಮಿ ಕಮಲಾನಿ ತವಾಽಧುನಾ ।
ಧಾನ್ಯಸ್ಯ ಖಾರಿಕಾಮೇಕಾಂ ದದಾಮಿ ಪ್ರತಿಗೃಹ್ಯತಾಂ ॥ ೯೨ ॥
ದಶ ವಿಂಶತ್ಯಥ ತ್ರಿಂಶಚ್ಚತ್ವಾರಿಂಶದಥಾಽಪಿ ವಾ ।
ಗೃಹಾಣ ವಾ ಖಾರಿಶತಂ ದುರ್ಭಿಕ್ಷಾಂಭೋಧಿಮುತ್ತರ ॥ ೯೩ ॥
ವಸು ರತ್ನಂ ಸುವರ್ಣಂ ಚ ಅನ್ಯತ್ತೇ ಯದಭೀಪ್ಸಿತಂ ।
ತತ್ಸರ್ವಂ ಸಂಪ್ರದಾಸ್ಯಾಮಿ ಕಮಲಾರ್ಥೇ ನ ಸಂಶಯಃ ॥ ೯೪ ॥

ಶಬರ್ಯುವಾಚ :—

ನಾಽಽಹಾರಂ ಚಿಂತಯಾಮ್ಯದ್ಯ ಮುಕ್ತ್ವಾ ದೇವಂ ವರಾನನೇ ।
ದೇವಕಾರ್ಯಂ ವಿನಾ ಭದ್ರೇ ನಾಽನ್ಯಾ ಬುದ್ಧಿಃ ಪ್ರವರ್ತತೇ ॥ ೯೫ ॥

---

೯೦. ಶಬರಿಯು ಹೇಳುತ್ತಾಳೆ —ದೇವಿ! ನಾನು ಈ ಹಣ್ಣು, ಪುಷ್ಪಗಳಿಗೆ ಬೆಲೆಯನ್ನು ಅಪೇಕ್ಷಿಸುವುದಿಲ್ಲ. ಈ ಬಿಲ್ವಫಲಗಳನ್ನೂ, ಪುಷ್ಪಗಳನ್ನೂ ಸ್ವೇಚ್ಛೆಯಾಗಿ ತೆಗೆದುಕೊ.

೯೧. ಜಗದೊಡೆಯನಾದ ವಿಷ್ಣುವನ್ನು ವಿಧಿಯಂತೆ ಅರ್ಚಿಸು.

೯೨. ರಾಜಕುಮಾರಿಯು ಹೇಳುತ್ತಾಳೆ —ನಾನು ಈಗ ನಿನ್ನಿಂದ ಬೆಲೆಯಿಲ್ಲದೆ ಕಮಲಗಳನ್ನು ತೆಗೆದುಕೊಳ್ಳುವುದಿಲ್ಲ. ಒಂದು ಖಾರಿ ಅಳತೆಯ ಧಾನ್ಯವನ್ನು ಕೊಡುವೆನು. ತೆಗೆದುಕೊ.

೯೩. ಹತ್ತು, ಇಪ್ಪತ್ತು, ಮೂವತ್ತು, ನಲವತ್ತು ಅಥವಾ ನೂರು ಖಾರಿ ಧಾನ್ಯಗಳನ್ನು ತೆಗೆದುಕೊಂಡು ಈ ದುರ್ಭಿಕ್ಷ ಸಮುದ್ರವನ್ನು ದಾಟು.

೯೪. ಕಮಲಕ್ಕಾಗಿ ದ್ರವ್ಯ, ರತ್ನ, ಸುವರ್ಣ ಅಥವಾ ನಿನಗಿಷ್ಟವಾದ ಇತರ ಯಾವುದನ್ನಾದರೂ ಕೊಡುವೆನು. ಅದನ್ನು ತೆಗೆದುಕೊ.

೯೫. ಶಬರಿಯು ಹೇಳುತ್ತಾಳೆ —ಸುಂದರಿಯೆ! ನಾನು ದೇವರನ್ನು ಬಿಟ್ಟು ಆಹಾರವನ್ನು ಕುರಿತು ಆಲೋಚಿಸುತ್ತಿಲ್ಲ. ನನಗೆ ದೇವಕಾರ್ಯವನ್ನು ಬಿಟ್ಟು ಬೇರೆ ಬುದ್ಧಿಯುಂಟಾಗುವುದಿಲ್ಲ.

ರಾಜ್ಞ್ಯುವಾಚ :—

ನ ತ್ವಯಾಽನ್ನಂ ಪರಿತ್ಯಾಜ್ಯಂ ಸರ್ವಮನ್ನೇ ಪ್ರತಿಷ್ಠಿತಂ ।
ತಸ್ಮಾತ್ಸರ್ವಪ್ರಯತ್ನೇನ ಮಮಾಽನ್ನಂ ಪ್ರತಿಗೃಹ್ಯತಾಂ ॥ ೯೬ ॥
ತಪಸ್ವಿನೋ ಮಹಾಭಾಗಾ ಯೇ ಚಾಽರಣ್ಯನಿವಾಸಿನಃ ।
ಗೃಹಸ್ಥದ್ವಾರಿ ತೇ ಸರ್ವೇ ಯಾಚಂತೇಽನ್ನಮತಂದ್ರಿತಾಃ ॥ ೯೭ ॥

ಶಬರ್ಯುವಾಚ :—

ನಿಷೇಧಶ್ಚ ಕೃತಃ ಪೂರ್ವಂ ಸರ್ವಂ ಸತ್ಯೇ ಪ್ರತಿಷ್ಠಿತಂ ।
ಸತ್ಯೇನ ತಪತೇ ಸೂರ್ಯಃ ಸತ್ಯೇನ ಜ್ವಲತೇಽನಲಃ ॥ ೯೮ ॥
ಸತ್ಯೇನ ತಿಷ್ಠತ್ಯುದಧಿರ್ವಾಯುಃ ಸತ್ಯೇನ ವಾತಿ ಹಿ ।
ಸತ್ಯೇನ ಪಚ್ಯತೇ ಸಸ್ಯಂ ಗಾವಃ ಕ್ಷೀರಂ ಸ್ರವಂತಿ ಚ ॥ ೯೯ ॥
ಸತ್ಯಾಧಾರಮಿದಂ ಸರ್ವಂ ಜಗತ್ ಸ್ಥಾವರಜಂಗಮಂ ।
ತಸ್ಮಾತ್ಸರ್ವಪ್ರಯತ್ನೇನ ಸತ್ಯಂ ಸತ್ಯೇನ ಪಾಲಯೇತ್ ॥ ೧೦೦ ॥
ದೇವಕಾರ್ಯಂ ತು ಮೇ ಮುಕ್ತ್ವಾ ನಾಽನ್ಯಾ ಬುದ್ಧಿಃ ಪ್ರವರ್ತತೇ ।
ಗೃಹಾಣ ರಾಜ್ಞಿ ಪುಷ್ಪಾಣಿ ಕುರು ಪೂಜಾಂ ಗದಾಭೃತಃ ॥ ೧೦೧ ॥
ಶ್ರೂಯತೇ ದ್ವಿಜವಾಕ್ಯೈಸ್ತು ನ ದೋಷೋ ವಿದ್ಯತೇ ಕ್ವಚಿತ್ ।
ಕುಶಾಃ ಶಾಕಂ ಪಯೋ ಮತ್ಸ್ಯಾ ಗಂಧಾಃ ಪುಷ್ಪಾಕ್ಷತಾ ದಧಿ ।
ಮಾಂಸಂ ಶಯ್ಯಾಸನಂ ಧಾನ್ಯಾಃ ಪ್ರತ್ಯಾಖ್ಯೇಯಾ ನ ವಾರಿ ಚ ॥ ೧೦೨ ॥

---

೯೬. ರಾಜಕುಮಾರಿಯು ಹೇಳುತ್ತಾಳೆ —ಅನ್ನದಲ್ಲಿ ಎಲ್ಲವೂ ಇರುವುದರಿಂದ ನೀನು ಅನ್ನವನ್ನು ಬಿಡಬೇಡ. ಆದ್ದರಿಂದ ನನ್ನ ಅನ್ನವನ್ನು ತೆಗೆದುಕೊ.

೯೭. ಮಹಾಭಾಗರಾದ ತಪಸ್ವಿಗಳೂ, ಅರಣ್ಯವಾಸಿಗಳೂ ಎಲ್ಲರೂ ಗೃಹಸ್ಥನ ಮನೆಯ ಬಾಗಿಲಿನಲ್ಲಿ ಅನ್ನವನ್ನು ಯಾಚಿಸುವರು.

೯೮–೯೯. ಶಬರಿಯು ಹೇಳುತ್ತಾಳೆ —ನಾನು ಹಿಂದೆಯೇ ಬೇಡವೆಂದು ಹೇಳಿರುವೆನು. ಎಲ್ಲವೂ ಸತ್ಯದಲ್ಲಿ ಪ್ರತಿಷ್ಠಿತವಾಗಿರುವುವು. ಸತ್ಯದಿಂದ ಸೂರ್ಯನು ಪ್ರಕಾಶಿಸುತ್ತಾನೆ. ಅಗ್ನಿಯು ಉರಿಯುತ್ತದೆ. ಸಮುದ್ರವು ನಿಂತಿದೆ. ಗಾಳಿಯು ಬೀಸುತ್ತದೆ. ಸಸ್ಯಗಳು ಬೆಳೆಯುತ್ತವೆ. ಹಸುಗಳು ಹಾಲನ್ನು ಕೊಡುತ್ತವ.

೧೦೦. ಸ್ಥಾವರಜಂಗಮಾತ್ಮಕವಾದ ಸಕಲ ಜಗತ್ತೂ ಸತ್ಯದಿಂದ ನಿಂತಿರುವುದು. ಆದ್ದರಿಂದ ಪ್ರಯತ್ನಿಸಿ ಸತ್ಯವನ್ನು ಸತ್ಯದಿಂದಲೇ ಕಾಪಾಡಬೇಕು.

೧೦೧. ನನಗೆ ದೇವಕಾರ್ಯವನ್ನು ಬಿಟ್ಟು ಇತರ ಬುದ್ಧಿಯುಂಟಾಗುವುದಿಲ್ಲ. ರಾಜಕುಮಾರಿಯೆ! ಹೂವುಗಳನ್ನು ತೆಗೆದುಕೊ. ವಿಷ್ಣುವಿನ ಪೂಜೆಯನ್ನು ಮಾಡು.

೧೦೨. ದರ್ಭೆ, ಶಾಕ, ಹಾಲು, ಮೀನು, ಗಂಧ, ಹೂವು, ಅಕ್ಷತೆ, ಮಾಂಸ, ಹಾಸಿಗೆ, ಆಸನ, ಅರಳು, ನೀರು ಇವುಗಳನ್ನು ತೆಗೆದುಕೊಳ್ಳಲು

ರಾಜ್ಞ್ಯುವಾಚ :—

ಆರಾಮೋಪಹೃತಂ ಪುಷ್ಪಮಾರಣ್ಯಂ ಪುಷ್ಪಮೇವ ಚ ।
ಕ್ರೀತಂ ಪ್ರತಿಗ್ರಹೇ ಲಬ್ಧಂ ಪುಷ್ಪಮೇವಂ ಚತುರ್ವಿಧಂ ॥ ೧೦೩ ॥
ಉತ್ತಮಂ ಪುಷ್ಪಮಾರಣ್ಯಂ ಗೃಹೀತಂ ಸ್ವಯಮೇವ ಚ ।
ಮಧ್ಯಮಂ ಫಲಮಾರಾಮೇ ತ್ವಧಮಂ ಕ್ರೀತಮೇವ ಚ ।
ಪ್ರತಿಗ್ರಹೇಣ ಯಲ್ಲಬ್ಧಂ ನಿಷ್ಫಲಂ ತದ್ವಿದುರ್ಬುಧಾಃ ॥ ೧೦೪ ॥

ಪುರೋಹಿತ ಉವಾಚ :—

ಗೃಹಾಣ ರಾಜ್ಞಿ ಪುಷ್ಪಾಣಿ ಕುರು ಪೂಜಾಂ ಗದಾಭೃತಃ ।
ಉಪಕಾರಃ ಪ್ರಕರ್ತವ್ಯೋ ವ್ಯಪದೇಶೇನ ಕರ್ಹಿಚಿತ್ ॥ ೧೦೫ ॥

ಈಶ್ವರ ಉವಾಚ :—

ಶ್ರೀಫಲಾನಿ ಸಪದ್ಮಾನಿ ದತ್ತಾನಿ ಶಬರೇಣ ತು ।
ಗೃಹೀತ್ವಾ ತಾನಿ ರಾಜ್ಞೀ ಸಾ ಪೂಜಾಂ ಚಕ್ರೇ ಸುಶೋಭನಾಂ ॥ ೧೦೬ ॥
ಕ್ಷಪಾಜಾಗರಣಂ ಚಕ್ರೇ ಶ್ರುತ್ವಾ ಪೌರಾಣಿಕೀಂ ಕಥಾಂ ।
ಶಬರಸ್ತು ತತೋ ಭಾರ್ಯಾಮಿದಂ ವಚನಮಬ್ರವೀತ್ ॥ ೧೦೭ ॥

---

ನಿರಾಕರಿಸಬಾರದು ಎಂದು ಬ್ರಾಹ್ಮಣರ ಮಾತಿರುವುದರಿಂದ ಯಾವ ದೋಷವೂ ಉಂಟಾಗುವುದಿಲ್ಲ.

೧೦೩. ರಾಜಕುಮಾರಿಯು ಹೇಳುತ್ತಾಳೆ:—ತೋಟದಿಂದ ತಂದುದು, ಕಾಡಿನಿಂದ ತಂದುದು, ಕ್ರಯಕ್ಕೆ ಕೊಂಡುಕೊಂಡುದು, ದಾನವಾಗಿ ತೆಗೆದು ಕೊಂಡುದು ಎಂದು ಪುಷ್ಪವು ನಾಲ್ಕು ಬಗೆಯಾಗಿರುವುದು.

೧೦೪. ಕಾಡಿನಿಂದ ತಾನೇ ತಂದ ಹೂವು ಉತ್ತಮವಾದುದು. ತೋಟ ದಿಂದ ತಂದುದು ಮಧ್ಯಮವು. ಕ್ರಯಕ್ಕೆ ಕೊಂಡುದು ಅಧಮವು. ದಾನದಿಂದ ತೆಗೆದುಕೊಂಡುದು ನಿಷ್ಫಲವು ಎಂದು ವಿದ್ವಾಂಸರು ತಿಳಿಯು ತ್ತಾರೆ.

೧೦೫. ಪುರೋಹಿತನು ಹೇಳುತ್ತಾನೆ —ರಾಜಪುತ್ರಿಯೆ! ಹೂವುಗಳನ್ನು ತೆಗೆದುಕೊಂಡು ವಿಷ್ಣುವಿನ ಪೂಜೆಯನ್ನು ಮಾಡು. ಯಾವುದಾದರೊಂದು ನೆಪದಿಂದ ಉಪಕಾರ ಮಾಡಬೇಕು.

೧೦೬. ಈಶ್ವರನು ಹೇಳುತ್ತಾನೆ:—ಆ ಬೇಡನು ಬಿಲ್ವಫಲಗಳನ್ನೂ, ಪದ್ಮ ಗಳನ್ನೂ ಕೊಟ್ಟನು. ರಾಜಕುಮಾರಿಯು ಅವುಗಳನ್ನು ತೆಗೆದುಕೊಂಡು ಮಂಗಳಕರವಾದ ಪೂಜೆಯನ್ನು ಮಾಡಿದಳು.

೧೦೭. ಪುರಾಣಕಥೆಯನ್ನು ಕೇಳುತ್ತ ರಾತ್ರಿ ಜಾಗರಣೆ ಮಾಡಿದಳು. ಬಳಿಕ ಬೇಡನು ಪತ್ನಿಯನ್ನು ಕುರಿತು ಹೀಗೆಂದನು.

ದೀಪಾರ್ಥಂ ಗೃಹ್ಯತಾಂ ಸ್ನೇಹೋ ಯಥಾಲಾಭೇನ ಸುಂದರಿ ।
ಕೃತ್ವಾ ದೀಪಂ ತತಸ್ತೌ ತು ಕೃತ್ವಾ ಪೂಜಾಂ ಹರೇಃ ಶುಭಾಂ ॥ ೧೦೮ ॥
ಚಕ್ರತುರ್ಜಾಗರಂ ರಾತ್ರೌ ಧ್ಯಾಯಂತೋ ಧರಣೀಧರಂ ।
ತತಃ ಪ್ರಭಾತಸಮಯೇ ದೃಷ್ಟ್ವಾ ಸ್ನಾನೋತ್ಸುಕಂ ಜನಂ ॥ ೧೦೯ ॥
ಸ್ನಾತಿ ವೈ ಶೂಲಭೇದೇ ತು ದೇವನದ್ಯಾಂ ತಥಾಽಪರೇ ।
ಸರಸ್ವತ್ಯಾಂ ನರಾಃ ಕೇಚಿನ್ಮಾರ್ಕಂಡಸ್ಯ ಹ್ರದೇಽಪರೇ ॥ ೧೧೦ ॥
ಚಕ್ರತೀರ್ಥಂ ಗತಾಶ್ಚಕ್ರುಃ ಸ್ನಾನಂ ಕೇಚಿದ್ವಿಧಾನತಃ ।
ಶುಚಯಸ್ತೇ ಜನಾಃ ಸರ್ವೇ ಸ್ನಾತ್ವಾ ದೇವಶಿಲೋಪರಿ ॥ ೧೧೧ ॥
ಶ್ರಾದ್ಧಂ ಚಕ್ರುಃ ಪ್ರಯತ್ನೇನ ಶ್ರದ್ಧಯಾ ಪೂತಚೇತಸಾ ।
ತಾನ್ದೃಷ್ಟ್ವಾ ಶಬರೋ ಬಿಲ್ವೈಃ ಪಿಂಡಾಂಶ್ಚಕ್ರೇ ಪ್ರಯತ್ನತಃ ॥ ೧೧೨ ॥
ಭಾನುಮತ್ಯಾ ತಥಾ ಭರ್ತುಃ ಪಿಂಡನಿರ್ವಪಣಂ ಕೃತಂ ।
ಅನಿಂದ್ಯಾ ಭೋಜಿತಾ ವಿಪ್ರಾ ದಂಭವಾರ್ಧುಷ್ಯವರ್ಜಿತಾಃ ॥ ೧೧೩ ॥
ಹವಿಷ್ಯಾನ್ನೈಸ್ತಥಾ ದಧ್ನಾ ಶರ್ಕರಾಮಧುಸರ್ಪಿಷಾ ।
ಪಾಯಸೇನ ತು ಗವ್ಯೇನ ಕೃತಾಽನ್ನೇನ ವಿಶೇಷತಃ ॥ ೧೧೪ ॥
ಭೋಜಯಿತ್ವಾ ತಥಾ ರಾಜ್ಞೀ ದದೌ ದಾನಂ ಯಥಾವಿಧಿ ।
ಪಾದುಕೋಪಾನಹೌ ಛತ್ರಂ ಶಯ್ಯಾಂ ಗೋವೃಷಮೇವ ಚ ॥ ೧೧೫ ॥

---

೧೦೮–೧೧೦. ಸುಂದರಿಯೆ ! ದೀಪಕ್ಕಾಗಿ ಸಿಕ್ಕಿದಷ್ಟು ಎಣ್ಣೆಯನ್ನು ತೆಗದು ಕೊಂಡು ಬಾ. ಬಳಿಕ ಅವರಿಬ್ಬರು ದೀಪವನ್ನು ಹೊತ್ತಿಸಿ ವಿಷ್ಣುವನ್ನು ಪೂಜಿಸಿ ರಾತ್ರಿ ಅವನನ್ನು ಧ್ಯಾನಿಸುತ್ತ ಜಾಗರಣೆಮಾಡಿದರು. ತರುವಾಯ ಬೆಳಗ್ಗೆ ಅವರು ಜನರೆಲ್ಲ ಸ್ನಾನಮಾಡಲು ಉತ್ಸುಕರಾಗಿರುವುದನ್ನು ನೋಡಿದರು. ಕೆಲವರು ಶೂಲಭೇದದಲ್ಲಿ ಮಿಂದರು. ಕೆಲವರು ಗಂಗೆಯಲ್ಲಿ ಮಿಂದರು. ಕೆಲವರು ಸರಸ್ವತೀ ನದಿಯಲ್ಲಿ ಮಿಂದರು. ಇನ್ನು ಕೆಲವರು ಮಾರ್ಕಂಡೇಯ ಹ್ರದದಲ್ಲಿ ಮಿಂದರು.

೧೧೧–೧೧೨. ಕೆಲವರು ಚಕ್ರತೀರ್ಥಕ್ಕೆ ಹೋಗಿ ವಿಧಿಯಂತೆ ಮಿಂದರು. ಆ ಜನರೆಲ್ಲ ಮಿಂದು ಶುದ್ಧರಾಗಿ ದೇವಶಿಲೆಯಮೇಲೆ ಶ್ರದ್ಧೆಯಿಂದ ಶ್ರಾದ್ಧಗೈದರು. ಬೇಡನು ಅವರನ್ನು ನೋಡಿ ಬಿಲ್ವಫಲಗಳಿಂದ ಪಿಂಡಗಳನ್ನು ಮಾಡಿದನು.

೧೧೩–೧೧೪. ಭಾನುಮತಿಯು ಪತಿಗೆ ಪಿಂಡಗಳನ್ನಿತ್ತು ಶ್ಲಾಘ್ಯರೂ, ದಂಭ, ವಾರ್ಧುಷ್ಯವಿಲ್ಲದವರೂ ಆದ ಬ್ರಾಹ್ಮಣರನ್ನು ಹವಿಷ್ಯಾನ್ನಗಳಿಂದಲೂ, ಮೊಸರಿನಿಂದಲೂ, ಸಕ್ಕರೆ, ಜೇನು, ಘೃತ, ಪಾಯಸ, ಹಾಲು, ಅನ್ನಗಳಿಂದಲೂ ಭೋಜನಮಾಡಿಸಿದಳು.

೧೧೫–೧೧೬. ರಾಜಪುತ್ರಿಯು ಹಾಗೆ ಬ್ರಾಹ್ಮಣರಿಗೆ ಭೋಜನಮಾಡಿಸಿ ಪಾದುಕೆ, ಪಾದರಕ್ಷೆ, ಛತ್ರ, ಹಾಸಿಗೆ, ವೃಷಭ, ಚಿನ್ನ, ರತ್ನ, ದ್ರವ್ಯ ಮೊದಲಾದ

ವಿವಿಧಾನಿ ಚ ದಾನಾನಿ ಹೇಮರತ್ನಧನಾನಿ ಚ ।
ಚಕ್ರತೀರ್ಥೇ ಮಹಾರಾಜ ಕಪಿಲಾಂ ಯಃ ಪ್ರಯಚ್ಛತಿ ।
ಪೃಥ್ವೀ ತೇನ ಭವೇದ್ದತ್ತಾ ಸಶೈಲವನಕಾನನಾ ॥ ೧೧೬ ॥

ಉತ್ತಾನಪಾದ ಉವಾಚ :—

ಯಾನಿ ಯಾನಿ ಚ ದತ್ತಾನಿ ಶಸ್ತಾನಿ ಜಗತೀಪತೇಃ ।
ತಾನಿ ಸರ್ವಾಣಿ ದೇವೇಶ ಕಥಯಸ್ವ ಪ್ರಸಾದತಃ ॥ ೧೧೭ ॥

ಈಶ್ವರ ಉವಾಚ :—

ತಿಲಪ್ರದಃ ಪ್ರಜಾಮಿಷ್ಟಾಂ ದೀಪದಶ್ಚಕ್ಷುರುತ್ತಮಂ ।
ಭೂಮಿದಃ ಸ್ವರ್ಗಮಾಪ್ನೋತಿ ದೀರ್ಘಮಾಯುರ್ಹಿರಣ್ಯದಃ ॥ ೧೧೮ ॥
ಗೃಹದೋ ರೋಗರಹಿತೋ ರೂಪ್ಯದೋ ರೂಪವಾನ್ ಭವೇತ್ ।
ವಾಸೋದಶ್ಚಂದ್ರಸಾಲೋಕ್ಯಮರ್ಕಸಾಯುಜ್ಯಮಶ್ವದಃ ॥ ೧೧೯ ॥
ವೃಷದಸ್ತು ಶ್ರಿಯಂ ಪುಷ್ಟಾಂ ಗೋದಾತಾ ಚ ತ್ರಿವಿಷ್ಟಪಂ ।
ಯಾನಶಯ್ಯಾಪ್ರದೋ ಭಾರ್ಯಾಮೈಶ್ವರ್ಯಮಭಯಪ್ರದಃ ॥ ೧೨೦ ॥
ಧಾನ್ಯದಃ ಶಾಶ್ವತಂ ಸೌಖ್ಯಂ ಬ್ರಹ್ಮದೋ ಬ್ರಹ್ಮಶಾಶ್ವತಂ ।
ವಾರ್ಯನ್ನಪೃಥಿವೀವಾಸಸ್ತಿಲಕಾಂಚನಸರ್ಪಿಷಾಂ ॥ ೧೨೧ ॥

---

ವಿವಿಧ ದಾನಗಳನ್ನಿತ್ತರೆ. ಚಕ್ರತೀರ್ಥದಲ್ಲಿ ಕಪಿಲೆಯನ್ನು ದಾನಮಾಡಿದವನು ಶೈಲವನಗಳಿಂದ ಸಹಿತವಾದ ಭೂಮಿಯನ್ನು ದಾನಮಾಡಿದವನಂತಾಗುವನು.

೧೧೭. ಉತ್ತಾನಪಾದನು ಕೇಳುತ್ತಾನೆ —ದೇವೇಶನೆ! ಆ ವಿಷ್ಣುವಿಗೆ ಕೊಡಲರ್ಹವಾದ ಉತ್ತಮ ವಸ್ತುಗಳನ್ನು ಅನುಗ್ರಹಿಸಿ ಸಂಪೂರ್ಣವಾಗಿ ಹೇಳು.

೧೧೮. ಈಶ್ವರನು ಹೇಳುತ್ತಾನೆ —ತಿಲದಾನಮಾಡಿದವನು ಇಷ್ಟವಾದ ಸಂತತಿಯನ್ನೂ, ದೀಪವನ್ನಿತ್ತವನು ಉತ್ತಮವಾದ ಕಣ್ಣನ್ನೂ, ಭೂಮಿಯನ್ನು ಕೊಟ್ಟವನು ಸ್ವರ್ಗವನ್ನೂ, ಹಿರಣ್ಯವನ್ನು ದಾನಮಾಡಿದವನು ದೀರ್ಘಾಯುಷ್ಯವನ್ನೂ ಹೊಂದುವರು.

೧೧೯. ಗೃಹದಾನಮಾಡಿದವನು ಆರೋಗ್ಯವನ್ನೂ, ರಜತವನ್ನಿತ್ತವನು ಸೌಂದರ್ಯವನ್ನೂ, ವಸ್ತ್ರವನ್ನು ದಾನಮಾಡಿದವನು ಚಂದ್ರಸಾಲೋಕ್ಯವನ್ನೂ, ಅಶ್ವವನ್ನು ದಾನಮಾಡಿದವನು ಸೂರ್ಯಸಾಯುಜ್ಯವನ್ನೂ ಹೊಂದುವರು.

೧೨೦–೧೨೬. ವೃಷಭವನ್ನು ದಾನಮಾಡಿದವನು ಅತಿಶಯೈಶ್ವರ್ಯವನ್ನೂ, ಗೋದಾನಮಾಡಿದವನು ಸ್ವರ್ಗವನ್ನೂ, ವಾಹನ, ಹಾಸಿಗೆಗಳನ್ನು ಕೊಟ್ಟವನು ಪತ್ನಿಯನ್ನೂ, ಅಭಯವನ್ನಿತ್ತವನು ಐಶ್ವರ್ಯವನ್ನೂ, ಧಾನ್ಯವನ್ನು ಕೊಟ್ಟವನು ಶಾಶ್ವತ ಸೌಖ್ಯವನ್ನೂ, ವಿದ್ಯೆಯನ್ನು ದಾನಮಾಡಿದವನು ಶಾಶ್ವತ ಬ್ರಹ್ಮನನ್ನೂ ಪಡೆಯುವರು. ನೀರು, ಅನ್ನ, ಭೂಮಿ, ವಸ್ತ್ರ, ಎಳ್ಳು, ಚಿನ್ನ, ತುಪ್ಪ

ಸರ್ವೇಷಾಮೇವ ದಾನಾನಾಂ ಬ್ರಹ್ಮದಾನಂ ವಿಶಿಷ್ಯತೇ ।
ಯೇನ ಯೇನ ಹಿ ಭಾವೇನ ಯದ್ಯದ್ದಾನಂ ಪ್ರಯಚ್ಛತಿ ॥ ೧೨೨ ॥
ತೇನ ತೇನ ಸ ಭಾವೇನ ಪ್ರಾಪ್ನೋತಿ ಪ್ರೀತಿಪೂಜಿತಂ ।
ದೃಷ್ಟ್ವಾ ದಾನಾನಿ ಸರ್ವಾಣಿ ರಾಜ್ಞೀದತ್ತಾನಿ ಯಾನಿ ಚ ॥ ೧೨೩ ॥
ಉವಾಚ ಶಬರೋ ಭಾರ್ಯಾಂ ಯತ್ತಚ್ಛೃಣು ನರೇಶ್ವರ ।
ಪುರಾಣಂ ಪಠಿತಂ ಭದ್ರೇ ಬ್ರಾಹ್ಮಣೈರ್ವೇದಪಾರಗೈಃ ॥ ೧೨೪ ॥
ಶ್ರುತಂ ಚ ತನ್ಮಯಾ ಸರ್ವಂ ದಾನಧರ್ಮಫಲಂ ಶುಭಂ ।
ಪೂರ್ವಜನ್ಮಾರ್ಜಿತಂ ಪಾಪಂ ಸ್ನಾನದಾನವ್ರತಾದಿಭಿಃ ॥ ೧೨೫ ॥
ಶರೀರಂ ದುಷ್ಟ್ಯಜಂ ಮುಕ್ತ್ವಾ ಲಭತೇ ಗತಿಮುತ್ತಮಾಂ ।
ಸಂಸಾರಸಾಗರಾದ್ಭೀತಃ ಸತ್ಯಂ ಭದ್ರೇ ವದಾಮಿ ತೇ ॥ ೧೨೬ ॥
ಅನೇಕಾನಿ ಚ ಪಾಪಾನಿ ಕೃತಾನಿ ಬಹುಶೋ ಮಯಾ ।
ಘಾತಿತಾ ಜಂತವೋ ಭದ್ರೇ ನಿರ್ದಗ್ಧಾಃ ಪರ್ವತಾಃ ಸದಾ ॥ ೧೨೭ ॥
ತೇನ ಪಾಪೇನ ದಗ್ಧೋಽಹಂ ದಾರಿದ್ರ್ಯಂ ನ ನಿವರ್ತತೇ ।
ತೀರ್ಥಾಽವಗಾಹನಂ ಪೂರ್ವಂ ಪಾಪೇನ ನ ಕೃತಂ ಮಯಾ ॥ ೧೨೮ ॥
ತೇನಾಽಹಂ ದುಃಖಿತೋ ಭದ್ರೇ ದಾರಿದ್ರ್ಯಮನಿವರ್ತಕಂ ।
ಮಾತುರ್ಗೃಹಂ ಪ್ರಯಾಹಿ ತ್ವಂ ತ್ಯಜ ಸ್ನೇಹಂ ಮಮೋಪರಿ ।
ನಗಶೃಂಗಂ ಸಮಾರುಹ್ಯ ಮೋಕ್ತುಮಿಚ್ಛಾಮ್ಯಹಂ ತನುಂ ॥ ೧೨೯ ॥

---

ಈ ಎಲ್ಲಾ ದಾನಗಳಿಗಿಂತಲೂ ವಿದ್ಯಾದಾನವು ಉತ್ತಮವಾದುದು. ಯಾವ ಯಾವ ಭಾವದಿಂದ ಯಾವ ಯಾವ ದಾನವನ್ನು ಕೊಡುವನೊ, ಆಯಾ ಭಾವಕ್ಕನುಗುಣವಾಗಿ ಪ್ರತಿಫಲವನ್ನು ಹೊಂದುವನು ದೊರೆಯೆ! ಬೇಡನು ರಾಜಪುತ್ರಿಯು ಕೊಟ್ಟ ಸಕಲ ದಾನಗಳನ್ನು ನೋಡಿ ಪತ್ನಿಯನ್ನು ಕುರಿತು ಏನನ್ನು ಹೇಳಿದನೆಂಬುವನ್ನು ಕೇಳು. "ಮಂಗಳಕರಳೆ! ವೇದಪಾರಂಗತರಾದ ಬ್ರಾಹ್ಮಣರು ಪುರಾಣವನ್ನು ಪಠಿಸಿದರು. ನಾನು ದಾನಧರ್ಮಗಳ ಶುಭಫಲಗಳನ್ನು ಕೇಳಿದೆನು. ಮನುಷ್ಯನು ಸ್ನಾನ ದಾನ ವ್ರತಾದಿಗಳಿಂದ ಪೂರ್ವಜನ್ಮಾರ್ಜಿತವಾದ ಪಾಪದಿಂದ ಬಂದ ದುಷ್ಟ್ಯಜವಾದ ಶರೀರವನ್ನು ತ್ಯಜಿಸಿ ಉತ್ತಮ ಗತಿಯನ್ನು ಹೊಂದುವನು. ನಾನು ಸಂಸಾರಸಾಗರದಿಂದ ಭಯಗೊಂಡವನಾಗಿ ನಿಜವಾಗಿಯೂ ನಿನಗೆ ಇದನ್ನು ಹೇಳುತ್ತೇನೆ.

೧೨೭ ನಾನು ಅನೇಕ ಪಾಪಗಳನ್ನು ಮಾಡಿರುವೆನು. ಪ್ರಾಣಿಗಳನ್ನು ಕೊಂದಿರುವೆನು. ಯಾವಾಗಲೂ ಪರ್ವತಗಳನ್ನು ಸುಟ್ಟಿನು.

೧೨೮. ಆ ಪಾಪದಿಂದ ದಗ್ಧನಾದ ನನ್ನ ಬಡತನವು ನೀಗುವುದಿಲ್ಲ ಹಿಂದೆ ಪಾಪಿಯಾದ ನಾನು ತೀರ್ಥದಲ್ಲಿ ಸ್ನಾನಮಾಡಲಿಲ್ಲ.

೧೨೯. ಆದರಿಂದ ದುಃಖಗೊಂಡ ನಾನು ನಿವೃತ್ತಿಯಾಗದ ಬಡತನವನ್ನು

ಶಬರ್ಯುವಾಚ :—

ಮಾತ್ರಾ ಪಿತ್ರಾ ನ ಮೇ ಕಾರ್ಯಂ ನಾಽಪಿ ಸ್ವಜನಬಾಂಧವೈಃ ।
ಯಾ ಗತಿಸ್ತವ ಜೀವೇಶ ಸಾ ಮಮಾಽಪಿ ಭವಿಷ್ಯತಿ ॥ ೧೩೦ ॥
ನ ಸ್ತ್ರೀಣಾಮೀದೃಶೋ ಧರ್ಮೋ ವಿನಾ ಭರ್ತ್ರಾ ಸ್ವಜೀವಿತಂ ।
ಶ್ರೂಯಂತೇ ಬಹವೋ ದೋಷಾ ಧರ್ಮಶಾಸ್ತ್ರೇಷ್ವನೇಕಧಾ ॥ ೧೩೧ ॥
ಪಾರಣಂ ಕುರು ಭೋಜೇಂದ್ರ ವ್ರತಂ ಯೇನ ನ ನಶ್ಯತಿ ।
ಯತ್ತೇಽಭಿವಾಂಛಿತಂ ಕಿಂಚಿದ್ವಿಷ್ಣವೇ ಕರ್ತುಮರ್ಹಸಿ ॥ ೧೩೨ ॥
ಭಾರ್ಯಾಯಾ ವಚನಂ ಶ್ರುತ್ವಾ ಮುಮುದೇ ಶಬರಸ್ತತಃ ।
ಗೃಹೀತ್ವಾ ಶ್ರೀಫಲಂ ಶೀಘ್ರಂ ಹೋಮಂ ಕೃತ್ವಾ ಯಥಾವಿಧಿ ॥ ೧೩೩ ॥
ಸರ್ವದೇವಾನ್ನಮಸ್ಕೃತ್ಯ ಭುಕ್ತ್ವೋಽಪಿ ಚ ತಯಾ ಸಹ ।
ಚೈತ್ರ್ಯಂ ತು ವಿಷುವಂ ಜ್ಞಾತ್ವಾ ತಸ್ಥೌ ತತ್ರ ದಿನತ್ರಯಂ ॥ ೧೩೪ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ದಾನಾದಿಫಲವರ್ಣನಂ" ನಾಮ ಷಟ್‌ಪಂಚಾಶತ್ತಮೋಽಧ್ಯಾಯಃ

---

ಹೊಂದಿದ್ದೇನೆ. ನೀನು ನನ್ನಲ್ಲಿರುವ ಪ್ರೀತಿಯನ್ನು ತ್ಯಜಿಸಿ ತವರು ಮನೆಗೆ ಹೋಗು. ನಾನು ಪರ್ವತದ ಶಿಖರವನ್ನೇರಿ ಶರೀರವನ್ನು ಬಿಡಲಿಚ್ಛಿಸುವೆನು.

೧೩೦. ಶಬರಿಯು ಹೇಳುತ್ತಾಳೆ.—ನನಗೆ ತಾಯಿತಂದೆಗಳಿಂದಲೂ, ಬಂಧುಬಾಂಧವರಿಂದಲೂ ಆಗಬೇಕಾದುದೇನೂ ಇಲ್ಲ. ಪ್ರಾಣಪ್ರಿಯನೆ! ನಿನಗಾಗುವಗತಿಯೇ ನನಗೂ ಆಗುವುದು.

೧೩೧. ಗಂಡನಿಲ್ಲದೆ ಬದುಕಿರುವುದು ಸ್ತ್ರೀಯರಿಗುಚಿತವಾದ ಧರ್ಮವಲ್ಲ. ಅದರಿಂದ ಅನೇಕ ದೋಷಗಳುಂಟಾಗುವುವು ಎಂದು ಧರ್ಮಶಾಸ್ತ್ರಗಳಲ್ಲಿ ಕೇಳುತ್ತೇನೆ.

೧೩೨. ಭೋಜೇಂದ್ರನೆ! ವ್ರತವು ಕೆಡದಂತೆ ಪಾರಣೆಯನ್ನು ಮಾಡು. ನಿನಗಿಷ್ಟವಾದ ಯಾವುದನ್ನಾದರೂ ವಿಷ್ಣುವಿಗೆ ಅರ್ಪಣೆ ಮಾಡಲರ್ಹನಾಗಿರುವೆ.

೧೩೩–೧೩೪. ಬೇಡನು ಪತ್ನಿಯ ಆ ಮಾತನ್ನು ಕೇಳಿ ಸಂತೋಷಗೊಂಡನು. ಅವನು ಶ್ರೀಫಲವನ್ನು ತೆಗೆದುಕೊಂಡು ವಿಧಿಯಂತೆ ಹೋಮಗೈದು ಸಮಸ್ತ ದೇವತೆಗಳನ್ನೂ ವಂದಿಸಿ ಆ ಪತ್ನಿಯೊಡನೆ ಭುಂಜಿಸಿ ಅಲ್ಲಿ ಚೈತ್ರಮಾಸದ ವಿಷುವತ್ಪುಣ್ಯಕಾಲವೆಂದರಿತು ಮೂರು ದಿನಗಳಿದ್ದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ದಾನಾದಿಫಲವರ್ಣನ"ವೆಂಬ ಐವತ್ತಾರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಸಪ್ತಪಂಚಾಶತ್ತಮೋಽಧ್ಯಾಯಃ

## ವ್ಯಾಧಸ್ವರ್ಗಗಮನವರ್ಣನಂ

**ಈಶ್ವರ ಉವಾಚ :—**

**ಭಾನುಮತೀ ದ್ವಿಜಾನ್ಭೋಜ್ಯ ಬುಭುಜೇ ಭುಕ್ತಶೇಷತಃ ।**
**ಭುಕ್ತ್ವಾ ಸುಸುಖಮಾಸ್ಥಾಯ ತದನ್ನಂ ಪರಿಣಾಮ್ಯ ಚ ॥ ೧ ॥**
**ತ್ರಯೋದಶ್ಯಾಂ ತತೋ ಗತ್ವಾ ಮದನಾಖ್ಯತಿಥೌ ತದಾ ।**
**ಮಾರ್ಕಂಡಸ್ಯ ಹ್ರದೇ ಸ್ನಾತ್ವಾಭ್ಯರ್ಚ್ಯ ದೇವಂ ಗುಹಾಶಯಂ ॥ ೨ ॥**
**ಕೃತೋಪವಾಸನಿಯಮಾ ಸ್ನಾಪಯಿತ್ವಾ ಮಹೇಶ್ವರಂ ।**
**ಪಂಚಾಮೃತಸುಗಂಧೇನ ಧೂಪದೀಪನಿವೇದನೈಃ ॥ ೩ ॥**
**ಅರ್ಚಯದ್ವಿವಿಧೈಃ ಪುಷ್ಪೈರ್ನೈವೇದ್ಯೈಶ್ಚ ಸುಶೋಭನೈಃ ।**
**ಕ್ಷಪಾಜಾಗರಣಂ ಕೃತ್ವಾ ಶ್ರುತ್ವಾ ಪೌರಾಣಿಕೀಂ ಕಥಾಂ ॥ ೪ ॥**
**ನೃತ್ಯಗೀತೈಸ್ತಥಾ ಸ್ತೋತ್ರೈರ್ಧ್ಯಾತ್ವಾ ದೇವಂ ಮಹೇಶ್ವರಂ ।**
**ಅನ್ನಂ ವಿಸ್ತಾರಿತಂ ಸರ್ವಂ ದೇವಸ್ಯಾಗ್ರೇ ಯಥಾವಿಧಿ ॥ ೫ ॥**
**ಚಾತುರ್ವರ್ಣ್ಯಸುತಾಃ ಸರ್ವೇ ಭೋಜಿತಾಃ ಸಪರಿಚ್ಛದಾಃ ।**
**ಚತುರ್ದಶ್ಯಾಂ ದಿನಂ ಯಾವತ್ಸಂಪೂಜ್ಯ ವೃಷಭಧ್ವಜಂ ॥ ೬ ॥**
**ಶಂಖವಾದಿತ್ರಭೇರೀಭಿಃ ಪಟಹಧ್ವನಿನಾದಿತಂ ।**
**ಕ್ಷಪಾಜಾಗರಣಂ ಕೃತ್ವಾ ಪ್ರಭೂತಜನಸಂಕುಲಂ ॥ ೭ ॥**

---

## ಕನ್ನಡದ ಅನುವಾದ

### ವ್ಯಾಧಸ್ವರ್ಗಗಮನವರ್ಣನ

೧–೫. ಈಶ್ವರನು ಹೇಳುತ್ತಾನೆ.—ಭಾನುಮತಿಯು ಬ್ರಾಹ್ಮಣರನ್ನು ಭೋಜನಮಾಡಿಸಿ ಉಳಿದ ಅನ್ನವನ್ನು ತಾನು ತಿಂದು ಸುಖವಾಗಿದ್ದು ಆ ಅನ್ನವು ಜೀರ್ಣವಾದ ತರುವಾಯ ಮದನವೆಂಬ ತ್ರಯೋದಶೀತಿಥಿಯಲ್ಲಿ ಮಾರ್ಕಂಡೇಯ ಸರಸ್ಸಿನಲ್ಲಿ ಮಿಂದು ಗುಹಾಶಾಯಿಯಾದ ಈಶ್ವರನನ್ನು ಪೂಜಿಸಿ ಉಪವಾಸವ್ರತ ವನ್ನಾಚರಿಸಿ ಈಶ್ವರನಿಗೆ ಪಂಚಾಮೃತದಿಂದ ಅಭಿಷೇಕಮಾಡಿ ಧೂಪ, ದೀಪ, ವಿವಿಧ ಪುಷ್ಪ, ನೈವೇದ್ಯಗಳಿಂದ ಶಂಕರನನ್ನು ಅರ್ಚಿಸಿದಳು. ರಾತ್ರಿ ಜಾಗರಣೆ ಗೈದು ಪುರಾಣ ಕಥೆಯನ್ನು ಕೇಳಿ ನೃತ್ಯ, ಗೀತ, ಸ್ತೋತ್ರಗಳಿಂದ ಶಂಕರನನ್ನು ಧ್ಯಾನಿಸಿ ಅವನ ಮುಂದೆ ವಿಧಿಯಂತೆ ಅನ್ನವನ್ನು ಬಡಿಸಿದಳು.

೬–೮. ನಾಲ್ಕು ವರ್ಣದ ಜನರನ್ನು ಉಪಕರಣಸಹಿತವಾಗಿ ಭೋಜನ ಮಾಡಿಸಿ ಚತುರ್ದಶೀದಿನ ಶಿವನನ್ನು ಆರಾಧಿಸಿ ಶಂಖ, ವಾದಿತ್ರ, ನಗಾರಿ,

ನೃತ್ಯಗೀತೈಸ್ತಥಾ ಸ್ತೋತ್ರೈಃ ಪ್ರೇರಿತಾ ಸಾ ನಿಶಾ ತದಾ ।
ಪ್ರಭಾತೇ ಭೋಜಿತಾ ವಿಪ್ರಾಃ ಪಾಯಸೈರ್ಮಧುಸರ್ಪಿಷಾ ॥ ೮ ॥
ದತ್ವಾ ದಾನಾನಿ ವಿಪ್ರೇಭ್ಯಃ ಶಕ್ತ್ಯಾ ವಿಪ್ರಾನುಸಾರತಃ ।
ಅರ್ಚಯಿತ್ವಾ ಮಹಾಪುಷ್ಪೈಃ ಸುಗಂಧೈರ್ಮರ್ದನೇನ ಚ ॥ ೯ ॥
ವಿಚಿತ್ರೈಃಸೂಕ್ಷ್ಮವಸ್ತ್ರೈಶ್ಚ ದೇವಃ ಸಂಪೂಜ್ಯ ವೇಷ್ಟಿತಃ ।
ಸ್ರಗ್ದಾಮೈರ್ಲಂಬಮಾನೈಶ್ಚ ಬಹುದೀಪಸಮುಜ್ವಲೈಃ ॥ ೧೦ ॥
ಪಕ್ವಾನ್ನೈರ್ವಿವಿಧೈರ್ಭಕ್ಷ್ಯೈಃ ಸುವೃತ್ತೈರ್ಮೋದಕಾದಿಭಿಃ ।
ತತಸ್ತೇ ಬ್ರಾಹ್ಮಣಾಃ ಸರ್ವೇ ವೇದಾಧ್ಯಯನತತ್ಪರಾಃ ॥ ೧೧ ॥
ತತ್ಪರ್ವ ಕೀರ್ತಯಾಂಚಕ್ರುಃ ಪದ್ಮಕಂನಾಮ ನಾಮತಃ ।
ಆದಿತ್ಯಸ್ಯ ದಿನಂ ತ್ವದ್ಯ ತಿಥಿಃ ಪಂಚದಶೀ ತಥಾ ॥ ೧೨ ॥
ತ್ವಾಷ್ಟ್ರಮೇವ ಚ ನಕ್ಷತ್ರಂ ಸಂಕ್ರಾಂತಿರ್ವಿಷುವಸ್ತಥಾ ।
ವ್ಯತೀಪಾತಸ್ತಥಾಯೋಗಃ ಕರಣಂ ವಿಷ್ಟಿರೇವ ಚ ॥ ೧೩ ॥
ಪದ್ಮಕಂ ನಾಮ ಪರ್ವೈತದಯನಾದಿ ಚತುರ್ಗುಣಂ ।
ಅತ್ರ ದತ್ತಂ ಹುತಂ ಜಪ್ತಂ ಸರ್ವಂ ಭವತಿ ಚಾಽಕ್ಷಯಂ ॥ ೧೪ ॥
ತೇ ದ್ವಿಜಾ ಭಾನುಮತ್ಯಾಽಥ ಶೂಲಭೇದಂಗತಾಃ ಸಹ ।
ದದೃಶುಃ ಶಬರಂ ಕುಂಡೇ ಭಾರ್ಯಯಾ ಸಹ ಸಂಸ್ಥಿತಂ ॥ ೧೫ ॥

---

ಪಟಹ ವಾದ್ಯಗಳ ಧ್ವನಿಗೈಯ್ಯುತ್ತ ಬಹುಜನರೊಡನೆ ರಾತ್ರಿ ಜಾಗರಣೆಗೈದು ನೃತ್ಯ, ಗೀತ, ಸ್ತೋತ್ರಗಳಿಂದ ಆ ರಾತ್ರಿಯನ್ನು ಕಳೆದಳು. ಬೆಳಗ್ಗೆ ಪಾಯಸ, ಮಧು, ಘೃತಗಳಿಂದ ಬ್ರಾಹ್ಮಣ ಭೋಜನವನ್ನು ಮಾಡಿಸಿದಳು.

೯. ತರುವಾಯ ಬ್ರಾಹ್ಮಣರ ಪಾಂಡಿತ್ಯವನ್ನನುಸರಿಸಿ ದಾನಗಳನ್ನಿತ್ತು ಮಹೇಶ್ವರನನ್ನು ಪುಷ್ಪ ಗಂಧಾದಿಗಳಿಂದ ಪೂಜಿಸಿದಳು.

೧೦–೧೪. ಬಳಿಕ ಶಂಕರನಿಗೆ ವಿಚಿತ್ರವಾದ ಸೂಕ್ಷ್ಮ ವಸ್ತ್ರಗಳನ್ನುಡಿಸಿ ಹೂವಿನ ಮಾಲೆಯಿಂದ ಕೂಡಿದ ಅನೇಕ ದೀಪಗಳಿಂದಲೂ, ವಿವಿಧ ಪಕ್ವಾನ್ನಗಳಿಂದಲೂ, ಮೋದಕಾದಿ ಭಕ್ಷ್ಯಗಳಿಂದಲೂ ಪೂಜಿಸಿದಳು. ಅನಂತರ ವೇದಾಧ್ಯಯನಸಂಪನ್ನರಾದ ಸಕಲಬ್ರಾಹ್ಮಣರು ಆ ದಿನ, "ಭಾನುವಾರ, ಹುಣ್ಣಿಮೆ, ತ್ವಷ್ಟೃದೇವತಾಕವಾದ ನಕ್ಷತ್ರ, ವಿಷುವತ್ಸಂಕ್ರಾಂತಿ, ವ್ಯತೀಪಾತಯೋಗ, ವಿಷ್ಟಿಕರಣ ಇವುಗಳು ಸೇರಿರುವುದರಿಂದ ಅಯನಸಂಕ್ರಾಂತಿಗಿಂತ ನಾಲ್ಮಡಿಯಾದ ಪದ್ಮಕವೆಂಬ ಯೋಗವಾಗಿರುವುದು. ಈ ದಿನ ಮಾಡಿದ ದಾನ, ಹೋಮ, ಜಪ ಇವುಗಳೆಲ್ಲ ಅಕ್ಷಯವಾಗುವುವು" ಎಂದರು.

೧೫. ಆ ಬ್ರಾಹ್ಮಣರು ಭಾನುಮತಿಯೊಡನೆ ಶೂಲಭೇದಕ್ಕೆ ಹೋಗಿ ಅಲ್ಲಿ ಪತ್ನಿಯೊಡನೆ ಇರುವ ಬೇಡನನ್ನು ಕಂಡರು.

ಐಶಾನೀಂ ಸ ದಿಶಂ ಗತ್ವಾ ಪರ್ವತೇ ಭೃಗುಮೂರ್ಧನಿ ।
ಪತಿತುಂ ಚ ಸಮಾರೂಢೋ ಭಾರ್ಯಯಾ ಸಹ ಪಾರ್ಥಿವ ॥ ೧೬ ॥

ಭಾನುಮತ್ಯುವಾಚ :—

ತಿಷ್ಠ ತಿಷ್ಠ ಮಹಾಸತ್ತ್ವ ಶೃಣುಷ್ವ ವಚನಂ ಮಮ ।
ಕಿಮರ್ಥಂ ತ್ಯಜಸಿ ಪ್ರಾಣಾನದ್ಯಾಽಪಿ ಚ ಯುವಾ ಭವಾನ್ ॥ ೧೭ ॥
ಕಃ ಸಂತಾಪಃ ಕ ಉದ್ವೇಗಃ ಕಿಂ ದುಃಖಂ ವ್ಯಾಧಿರೇವಚ ।
ಶಿಶುಃ ಸಂದೃಶ್ಯಸೇಽದ್ಯಾಪಿ ಕಾರಣಂ ಕಥ್ಯತಾಮಿದಂ ॥ ೧೮ ॥

ಶಬರ ಉವಾಚ :—

ಕಾರಣಂ ನಾಽಸ್ತಿ ಮೇ ಕಿಂಚಿನ್ನದುಃಖಂ ಕಿಂಚದೇವತು ।
ಸಂಸಾರಭಯಭೀತೋಽಹಂ ನಾಽನ್ಯಾ ಬುದ್ಧಿಃ ಪ್ರವರ್ತತೇ ॥ ೧೯ ॥
ದುಃಖೇನ ಲಭ್ಯತೇ ಯಸ್ಮಾನ್ಮಾನುಷ್ಯಂ ಜನ್ಮಭಾಗ್ಯತಃ ।
ಮಾನುಷ್ಯಂ ಜನ್ಮಚಾಸಾದ್ಯ ಯೋ ನ ಧರ್ಮಂ ಸಮಾಚರೇತ್ ॥ ೨೦ ॥
ಸ ಗಚ್ಛೇನ್ನಿರಯಂ ಘೋರಮಾತ್ಮದೋಷೇಣ ಸುಂದರಿ ।
ತಸ್ಮಾತ್ಪತಿತುಮಿಚ್ಛಾಮಿ ತೀರ್ಥೇಽಸ್ಮಿನ್ಪಾಪನಾಶನೇ ॥ ೨೧ ॥

---

೧೬. ಆ ಬೇಡನು ಪತ್ನಿಯೊಡನೆ ಈಶಾನ್ಯದಿಕ್ಕಿಗೆ ಹೋಗಿ ಕೆಳಗೆ ಬೀಳಲು ಪರ್ವತದ ಶಿಖರವನ್ನೇರಿದನು.

೧೭. ಭಾನುಮತಿಯು ಹೇಳುತ್ತಾಳೆ.—ಮಹಾಧೀರನೆ! ನಿಲ್ಲು ನಿಲ್ಲು. ನನ್ನ ಮಾತನ್ನು ಕೇಳು. ಯುವಕನಾದ ನೀನು ಈಗ ಪ್ರಾಣಗಳನ್ನು ಏಕೆ ತ್ಯಜಿಸುವೆ?

೧೮. ನಿನಗೆ ಯಾವ ವ್ಯಥೆಯುಂಟಾಗಿದೆ? ಯಾವ ಕಷ್ಟವೊದಗಿದೆ? ಯಾವ ವ್ಯಾಧಿಗಳು ಸಂಭವಿಸಿವೆ? ಈಗಲೂ ನೀನು ಚಿಕ್ಕವನಾಗಿಯೇ ಕಾಣುತ್ತಿರುವೆ. ಇದಕ್ಕೆ ಕಾರಣವನ್ನು ಹೇಳು.

೧೯. ಶಬರನು ಹೇಳುತ್ತಾನೆ:—ಇದಕ್ಕೆ ಯಾವ ಕಾರಣವೂ ಇಲ್ಲ. ಯಾವ ದುಃಖವೂ ಉಂಟಾಗಿಲ್ಲ. ನಾನು ಸಂಸಾರಭಯಗ್ರಸ್ತನಾಗಿರುವೆನು. ಬೇರೆ ಯಾವ ಬುದ್ಧಿಯೂ ನನಗೆ ಉಂಟಾಗಿರುವುದಿಲ್ಲ.

೨೦–೨೧. ಮನುಷ್ಯಜನ್ಮವು ದುಃಖದಿಂದಲೂ, ಪುಣ್ಯವಶದಿಂದಲೂ ಲಭಿಸುವುದು. ಸುಂದರಿ! ಇಂತಹ ಮಾನವಜನ್ಮವನ್ನು ಪಡೆದು ಧರ್ಮವನ್ನಾಚರಿಸಿದವನು ತನ್ನ ದೋಷದಿಂದಲೇ ನರಕಕ್ಕೆ ತೆರಳುವನು. ಆದ್ದರಿಂದ ನಾನು ಪಾಪವನ್ನು ಪರಿಹರಿಸುವ ಈ ತೀರ್ಥದಲ್ಲಿ ಬೀಳಲು ಇಚ್ಛಿಸಿರುವೆನು.

ರಾಜ್ಞ್ಯುವಾಚ :—

ಅದ್ಯಾಽಪಿ ವರ್ತತೇ ಕಾಲೋ ಧರ್ಮಸ್ಯೋಪಾರ್ಜನೇ ತವ ।
ಕೃತಾಽಪಕೃತಕರ್ಮಾ ವೈ ವ್ರತದಾನೈರ್ವಿಶುಧ್ಯತಿ ॥ ೨೨ ॥
ಅಹಂ ದಾಸ್ಯಾಮಿ ಧಾನ್ಯಂ ವಾ ವಾಸಾಂಸಿ ದ್ರವಿಣಂ ಬಹು ।
ನಿತ್ಯಮಾಚರ ಧರ್ಮಂ ತ್ವಂ ಧ್ಯಾಯನ್ನಿತ್ಯಂ ಮಹೇಶ್ವರಂ ॥ ೨೩ ॥

ಶಬರ ಉವಾಚ :—

ನೈವಾಽಹಂ ಕಾಮಯೇ ವಿತ್ತಂ ನ ಧಾನ್ಯಂ ವಸ್ತ್ರಮೇವಚ ।
ಯೋ ಯಸ್ಯೈವಾಽನ್ನಮಶ್ನಾತಿ ಸತಸ್ಯಾಶ್ನಾತಿ ಕಿಲ್ಬಿಷಂ ॥ ೨೪ ॥

ರಾಜ್ಞ್ಯುವಾಚ :—

ಕಂದಮೂಲಫಲಾಹಾರೋ ಭ್ರಮಿತ್ವಾ ಭೈಕ್ಷ್ಯಮುತ್ತಮಂ ।
ಅವಗಾಹ್ಯ ಸುತೀರ್ಥಾನಿ ಸರ್ವಪಾಪೈಃ ಪ್ರಮುಚ್ಯತೇ ॥ ೨೫ ॥
ತತೋ ವಿಮುಕ್ತಪಾಪಸ್ತು ಯತ್ಕಿಂಚಿತ್ಕುರುತೇ ಶುಚಿಃ ।
ಕರ್ಮಣಾ ತೇನ ಪೂತಸ್ತ್ವಂ ಸದ್ಗತಿಂ ಪ್ರಾಪ್ಸ್ಯತಿ ಧ್ರುವಂ ॥ ೨೬ ॥

ಶಬರ ಉವಾಚ :—

ಅನ್ನಮದ್ಯ ಮಯಾ ತ್ಯಕ್ತಂ ಪ್ರಾಣೇಭ್ಯೋಽಪಿ ಮಹತ್ತರಂ ।
ಸತ್ಯಂ ನ ಲೋಪಯೇ ದೇವಿ ನಿಶ್ಚಿತಾಽತ್ರ ಮತಿರ್ಮಮ ॥ ೨೭ ॥

---

೨೨. ರಾಜಕುಮಾರಿಯು ಹೇಳುತ್ತಾಳೆ —ಬೇಡ! ಈಗಲೂ ನಿನಗೆ ಧರ್ಮಾರ್ಜನೆಗೆ ಸಮಯವಿದೆ. ದುಷ್ಕಾರ್ಯವನ್ನು ಮಾಡಿದವನೂ ವ್ರತ ಮತ್ತು ದಾನಗಳಿಂದ ಶುದ್ಧನಾಗುವನು.

೨೩. ನಾನು ನಿನಗೆ ಧಾನ್ಯವನ್ನಾಗಲಿ, ವಸ್ತ್ರಗಳನ್ನಾಗಲಿ, ಬಹು ದ್ರವ್ಯಗಳನ್ನಾಗಲಿ ಕೊಡುವೆನು. ನಿತ್ಯವೂ ಈಶ್ವರನನ್ನು ಧ್ಯಾನಿಸುತ್ತ ಧರ್ಮವನ್ನಾಚರಿಸು.

೨೪. ಶಬರನು ಹೇಳುತ್ತಾನೆ:— ನಾನು ದ್ರವ್ಯವನ್ನಾಗಲಿ, ಧಾನ್ಯವನ್ನಾಗಲಿ, ವಸ್ತ್ರವನ್ನಾಗಲಿ ಅಪೇಕ್ಷಿಸುವುದಿಲ್ಲ. ಯಾವನು ಯಾವನ ಅನ್ನವನ್ನು ತಿನ್ನುವನೊ, ಅವನು ಅವನ ಪಾಪವನ್ನು ಅನುಭವಿಸುವನು.

೨೫. ರಾಜಕುಮಾರಿಯು ಹೇಳುತ್ತಾಳೆ.—ನೀನು ಭಿಕ್ಷಾಟನೆ ಮಾಡಿ ಗಡ್ಡೆ, ಗೆಣಸು, ಫಲಗಳನ್ನು ತಿನ್ನುತ್ತ ತೀರ್ಥದಲ್ಲಿ ಸ್ನಾನಗೈದರೆ ಸಕಲ ಪಾಪಗಳಿಂದಲೂ ಮುಕ್ತನಾಗುವೆ.

೨೬. ಬಳಿಕ ಪಾಪರಹಿತನಾಗಿ ಯಾವುದಾದರೂ ಕಾರ್ಯವನ್ನು ಮಾಡಿದರೆ ಅದರಿಂದ ಶುದ್ಧನಾಗಿ ಸದ್ಗತಿಯನ್ನು ಪಡೆಯುವೆ.

೨೭. ಬೇಡನು ಹೇಳುತ್ತಾನೆ:—ದೇವಿ! ಈ ದಿನ ನಾನು ಪ್ರಾಣಕ್ಕಿಂತ ಹೆಚ್ಚಾದ ಅನ್ನವನ್ನು ತ್ಯಜಿಸಿದ್ದೇನೆ. ನಿಜವಾಗಿಯೂ ಇದನ್ನು ಮಾಡದಿರಲಾರೆ. ಇದನ್ನು ಮಾಡುವುದಾಗಿ ನಿಶ್ಚಯಿಸಿರುವೆನು.

ಪ್ರಸಾದಃ ಕ್ರಿಯತಾಂ ದೇವಿ ಕ್ಷಮಸ್ವಾಽದ್ಯ ಜನೈಃಸಹ ।
ಅರ್ಧೋತ್ತರೀಯವಸ್ತ್ರೇಣ ಸಂಯಮ್ಯಾತ್ಮಾನಮುದ್ಯತಃ ॥ ೨೮ ॥
ಭಾರ್ಯಯಾ ಸಹಿತೋ ವ್ಯಾಧೋ ಹರಿಂ ಧ್ಯಾತ್ವಾ ಪಪಾತಹ ।
ನತಾರ್ಧಾತ್ಪತಿತೋ ಯಾವದ್ಗತಜೀವೋ ನರಾಧಿಪ ॥ ೨೯ ॥
ಚೂರ್ಣೀಭೂತೌ ಹಿ ತೌ ದೃಷ್ಟ್ವಾ ಕುಂಡಸ್ಯೋಪರಿ ಭೂಮಿಪ ।
ತ್ರಿಮುಹೂರ್ತೇ ಗತೇ ಕಾಲೇ ಶಬರೋ ಭಾರ್ಯಯಾ ಸಹ ॥ ೩೦ ॥
ದಿವ್ಯಂ ವಿಮಾನಮಾರೂಢೋ ಗತಶ್ಚಾಽನುತ್ತಮಾಂ ಗತಿಂ ॥ ೩೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ವ್ಯಾಧಸ್ವರ್ಗಗಮನವರ್ಣನಂ"
ನಾಮ ಸಪ್ತಪಂಚಾಶತ್ತಮೋಽಧ್ಯಾಯಃ

---

೨೮–೨೯. ದೇವಿ! ಅನುಗ್ರಹಮಾಡು. ಈ ಜನರೊಡನೆ ನನ್ನನ್ನು ಕ್ಷಮಿಸು. ಎಂದು ಹೇಳಿ ಉತ್ತರೀಯದ ಅರ್ಧಭಾಗದಿಂದ ತನ್ನನ್ನು ಕಟ್ಟಿಕೊಂಡ ಪತ್ನಿಯೊಡನೆ ಹರಿಯನ್ನು ಧ್ಯಾನಿಸಿ ಕೆಳಗೆ ಬಿದ್ದನು. ಅವನು ಪರ್ವತದ ಅರ್ಧಭಾಗದಿಂದ ಬೀಳುವಷ್ಟರಲ್ಲಿಯೆ ಮೃತನಾದನು.

೩೦–೩೧. ದೊರೆಯೆ! ಕುಂಡದ ಮೇಲೆ ಪುಡಿಯಾಗಿ ಬಿದ್ದಿರುವ ಅವರನ್ನು ನೋಡಿ ಮೂರು ಕ್ಷಣವಾದ ಮೇಲೆ ಬೇಡನು ಪತ್ನಿಯೊಡನೆ ದಿವ್ಯ ವಿಮಾನವನ್ನೇರಿ ಉತ್ತಮ ಗತಿಯನ್ನು ಪಡೆದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ವ್ಯಾಧಸ್ವರ್ಗಗಮನವರ್ಣನ"ವೆಂಬ
ಐವತ್ತೇಳನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥಾಷ್ಟಪಂಚಾಶತ್ತಮೋಽಧ್ಯಾಯಃ

## ಶೂಲಬೇಧತೀರ್ಥಮಾಹಾತ್ಮ್ಯವರ್ಣನಂ

ಉತ್ತಾನಪಾದ ಉವಾಚ :—

ಅಥಾತೋ ದೇವದೇವೇಶ ಭಾನುಮತ್ಯಕರೋಚ್ಚ ಕಿಂ ।
ಏಷ ಮೇ ಸಂಶಯೋ ದೇವ ಕಥಯಸ್ವ ಪ್ರಸಾದತಃ ॥ ೧ ॥

ಈಶ್ವರ ಉವಾಚ :—

ಚಿಂತಯಿತ್ವಾ ಮುಹೂರ್ತಂ ಸಾ ಗತಾ ಕುಂಡಸ್ಯ ಸನ್ನಿಧೌ ।
ದೃಷ್ಟ್ವಾ ಕುಂಡಸ್ಯ ಮಾಹಾತ್ಮ್ಯಂ ರಾಜ್ಞೀ ಹರ್ಷೇಣ ಪೂರಿತಾ ॥ ೨ ॥
ವಿಪ್ರಾನ್ಬಹೂನ್ ಸಮಾಹೂಯ ಪೂಜಯಾಮಾಸ ತತ್ಕ್ಷಣಾತ್ ।
ದತ್ವಾತು ವಿಧಿವದ್ದಾನಂ ಬ್ರಾಹ್ಮಣೇಭ್ಯೋ ನೃಪಾತ್ಮಜ ॥ ೩ ॥
ನಿಶ್ಚಯಂ ಪರಮಂ ಕೃತ್ವಾ ಸ್ಥಿತಾ ಶಾಂತೇನ ಚೇತಸಾ ।
ತತಃ ಸಂಪೂಜ್ಯ ವಿಧಿವತ್ಪಿತೄನ್ದೇವಾನ್ನರಾಧಿಪ ॥ ೪ ॥
ಕ್ಷಪಯಿತ್ವಾ ಪಕ್ಷಮೇಕಂ ಮಧುಮಾಸಸ್ಯ ಸಾ ಸ್ಥಿತಾ ।
ಅಮಾವಾಸ್ಯಾಂ ತತೋ ರಾಜ್ಞೀ ಗತಾ ಪರ್ವತಸನ್ನಿಧೌ ॥ ೫ ॥
ನಗಶೃಂಗಂ ಸಮಾರುಹ್ಯ ಕೃತ್ವಾ ಮುಕುಲಿತೌ ಕರೌ ।
ವಿಜ್ಞಾಪ್ಯ ಬ್ರಾಹ್ಮಣಾನ್ ಸರ್ವಾನಿದಂ ವಚನಮಬ್ರವೀತ್ ॥ ೬ ॥

---

## ಕನ್ನಡದ ಅನುವಾದ

### ಶೂಲಭೇದತೀರ್ಥಮಾಹಾತ್ಮ್ಯವರ್ಣನ

೧. ಉತ್ತಾನಪಾದನು ಹೇಳುತ್ತಾನೆ.–ದೇವೇಶ! ಅನಂತರ ಭಾನುಮತಿಯು ಏನನ್ನು ಮಾಡಿದಳು? ಈ ವಿಷಯದಲ್ಲಿ ನನಗೆ ಸಂಶಯವುಂಟಾಗಿದೆ. ಅನುಗ್ರಹಿಸಿ ಹೇಳು.

೨. ಈಶ್ವರನು ಹೇಳುತ್ತಾನೆ —ಆ ರಾಜಪುತ್ರಿಯು ಸ್ವಲ್ಪ ಹೊತ್ತು ಚಿಂತಿಸಿ ಕುಂಡದ ಹತ್ತಿರ ಹೋಗಿ ಅದರ ಮಾಹಾತ್ಮ್ಯವನ್ನು ನೋಡಿ ಸಂತೋಷಗೊಂಡಳು.

೩–೬. ಕೂಡಲೆ ಬಹು ಮಂದಿ ಬ್ರಾಹ್ಮಣರನ್ನು ಕರೆದು ಪೂಜಿಸಿ ವಿಧಿಯಂತೆ ದಾನಮಾಡಿ ನಿಶ್ಚಯಿಸಿ ಶಾಂತಮನಸ್ಸಿನಿಂದ ನಿಂತು ವಿಧಿಯಂತೆ ಪಿತೃದೇವತೆಗಳನ್ನಾರಾಧಿಸಿ ಒಂದು ಪಕ್ಷವನ್ನು ಕಳೆದು ವೈಶಾಖ ಬಹುಳ ಅಮಾವಾಸ್ಯೆಯ ದಿನ ಪರ್ವತದ ಹತ್ತಿರ ಹೋದಳು. ಪರ್ವತದ ಶಿಖರವನ್ನೇರಿ ಕೈಮುಗಿದುಕೊಂಡು ಬ್ರಾಹ್ಮಣರಿಗೆ ವಿಜ್ಞಾಪಿಸಿಕೊಂಡು ಇಂತೆಂದಳು.

ಮಮ ಮಾತಾ ಪಿತಾ ಭ್ರಾತಾ ಯೇಚಾನ್ಯೇ ಸಖಿಬಾಂಧವಾಃ ।
ಕ್ಷಮಾಪಯಿತ್ವಾ ಸರ್ವಾಂಸ್ತಾನ್ವಚನಂ ಮಮ ಕಥ್ಯತಾಂ ॥ ೭ ॥
ತ್ವತ್ಪುತ್ರೀ ಶೂಲಭೇದೇತು ತಪಃಕೃತ್ವಾ ಸ್ವಶಕ್ತಿತಃ ।
ವಿಸೃಜ್ಯ ಚೈವ ಸಾತ್ಮಾನಂ ತಸ್ಮಿಂಸ್ತೀರ್ಥೇ ದಿವಂ ಯಯೌ ॥ ೮ ॥

ಬ್ರಾಹ್ಮಣಾ ಊಚುಃ:—

ಸಂದೇಶಂ ಕಥಯಿಷ್ಯಾಮಸ್ತ್ವಯೋಕ್ತಂ ಶೋಭನವ್ರತೇ ।
ಮಾತಾ ಪಿತೃಭ್ಯಾಂ ಸುಶ್ರೋಣಿ ಮಾ ತೇಭೂದತ್ರ ಸಂಶಯಃ ॥ ೯ ॥
ತತೋ ವಿಸೃಜ್ಯ ತಾಂಲ್ಲೋಕಾನ್ ಸ್ಥಿತಾಃ ಪರ್ವತಮೂರ್ಧನಿ ।
ಅರ್ಧೋತ್ತರೀಯವಸ್ತ್ರೇಣ ಗಾಢಂ ಬದ್ಧ್ವಾ ಪುನಃ ಪುನಃ ॥ ೧೦ ॥
ತತಶ್ಚಿಕ್ಷೇಪ ಸಾತ್ಮಾನಮೇಕಚಿತ್ತಾ ನರಾಧಿಪ ।
ನಗಾರ್ಧೇ ಪತಿತಾ ಯಾವತ್ತಾವದ್ದೃಷ್ಟಾಃ ಸುರಾಂಗನಾಃ ॥ ೧೧ ॥
ಭೋ ಭೋ ವತ್ಸೇ ಮಹಾಭಾಗೇ ಭಾನುಮತ್ಯತಿತಾಪಸಿ ।
ದಿವ್ಯಂ ವಿಮಾನಮಾರುಹ್ಯ ಕೈಲಾಸಂ ಪ್ರತಿಗಮ್ಯತಾಂ ॥ ೧೨ ॥
ತತಃ ಸಾ ಪಶ್ಯತಾಂ ತೇಷಾಂ ಜನಾನಾಂ ತ್ರಿದಿವಂಗತಾ ॥ ೧೩ ॥

ಮಾರ್ಕಂಡೇಯ ಉವಾಚ:—

ಇತಿ ತೇ ಕಥಿತಃ ಸರ್ವಃ ಶೂಲಭೇದಸ್ಯ ವಿಸ್ತರಃ ।
ಯಃ ಶ್ರುತಃ ಶಂಕರಾತ್ಪೂರ್ವಮೃಷಿದೇವ ಸಮಾಗಮೇ ॥ ೧೪ ॥

---

೭. “ನನ್ನ ತಾಯಿ, ತಂದೆ, ಸಹೋದರರು, ಮಿತ್ರರು, ಬಾಂಧವರು ಇವರನ್ನು ಕುರಿತು ಕ್ಷಮೆಬೇಡಿ ನುಡಿಯುತ್ತಿರುವ ನನ್ನೀ ಮಾತನ್ನು ಅವರಿಗೆ ಹೇಳಿರಿ.

೮. “ನಿಮ್ಮ ಮಗಳು ಶೂಲಭೇದದಲ್ಲಿ ಶಕ್ತ್ಯನುಸಾರ ತಪವನ್ನಾಚರಿಸಿ ಪ್ರಾಣವನ್ನು ತ್ಯಜಿಸಿ ಸ್ವರ್ಗಕ್ಕೆ ಹೋದಳು.”

೯. ಬ್ರಾಹ್ಮಣರು ಹೇಳುತ್ತಾರೆ —ಎಲೌ ಶುಭವ್ರತಳೆ! ನಿನ್ನ ಸಂದೇಶವನ್ನು ತಾಯಿತಂದೆಗಳಿಗೆ ಹೇಳುವೆವು. ಈ ವಿಷಯದಲ್ಲಿ ನಿನಗೆ ಸಂಶಯಬೇಡ.

೧೦–೧೨. ಬಳಿಕ ಅವಳು ಆ ಜನರನ್ನು ತ್ಯಜಿಸಿ ಪರ್ವತದ ಶಿಖರವನ್ನೇರಿ ಉತ್ತರೀಯದ ಅರ್ಧದಿಂದ ತನ್ನನ್ನು ಗಟ್ಟಿಯಾಗಿ ಬಿಗಿದುಕೊಂಡು ಒಮ್ಮನಸ್ಸಿನಿಂದ ತೀರ್ಥಕ್ಕೆ ಬಿದ್ದಳು. ಅವಳು ಪರ್ವತದ ಅರ್ಧಭಾಗದಲ್ಲಿ ಬೀಳುವಷ್ಟರಲ್ಲಿ ಸುರನಾರಿಯರು ಕಾಣಿಸಿಕೊಂಡು “ತಪಸ್ವಿನಿಯಾದ ಎಲೌ ಮಗಳೆ! ಭಾನುಮತಿ! ದಿವ್ಯ ವಿಮಾನವನ್ನೇರಿ ಕೈಲಾಸಕ್ಕೆ ತೆರಳು” ಎಂದರು.

೧೩. ಬಳಿಕ ಆ ಜನರು ನೋಡುತ್ತಿರುವಾಗಲೆ ಅವಳು ಸ್ವರ್ಗಕ್ಕೆ ಹೋದಳು.

೧೪. ಮಾರ್ಕಂಡೇಯನು ಹೇಳುತ್ತಾನೆ—ಹೀಗೆ ನಿನಗೆ ನಾನು ಋಷಿದೇವತೆಗಳ ಸಭೆಯಲ್ಲಿ ಶಂಕರನಿಂದ ಕೇಳಿದ ಶೂಲಭೇದದ ಮಾಹಾತ್ಮ್ಯವನ್ನು ವಿಸ್ತಾರವಾಗಿ ಹೇಳಿರುವೆನು.

ಯ ಇದಂ ಪಠತೇ ಭಕ್ತ್ಯಾ ತೀರ್ಥೇ ದೇವ ಕುಲೇಽಪಿ ವಾ ।
ಸ ಮುಚ್ಯತೇ ಮಹಾಪಾಪಾದಪಿ ಜನ್ಮಶತಾರ್ಜಿತಾತ್ ॥ ೧೫ ॥
ಬ್ರಹ್ಮಹಾ ಚ ಸುರಾಪೀ ಚ ಸ್ತೇಯೀ ಚ ಗುರುತಲ್ಪಗಃ ।
ಗೋಘಾತೀ ಸ್ತ್ರೀವಿಘಾತೀ ಚ ದೇವಬ್ರಹ್ಮಸ್ವಹಾರಕಃ ॥ ೧೬ ॥
ಸ್ವಾಮಿದ್ರೋಹೀ ಮಿತ್ರಘಾತೀ ತಥಾ ವಿಶ್ವಾಸಘಾತಕಃ ।
ಪರನ್ಯಾಸಾಪಹಾರೀ ಚ ಪರನಿಕ್ಷೇಪಲೋಪಕಃ ॥ ೧೭ ॥
ರಸಭೇದೀ ತುಲಾಭೇದೀ ತಥಾ ವಾರ್ಧುಷಿಕಸ್ತು ಯಃ ।
ಯಃ ಕನ್ಯಾವಿಘ್ನಕರ್ತಾ ಚ ತಥಾ ವಿಕ್ರಯಕಾರಕಃ ॥ ೧೮ ॥
ಪರಭಾರ್ಯಾ ಭ್ರಾತೃಭಾರ್ಯಾ ಗೌಃಸ್ನುಷಾ ಕನ್ಯಕಾ ತಥಾ ।
ಅಭಿಗಾಮೀ ಪರದ್ವೇಷೀ ತಥಾ ಧರ್ಮಪ್ರದೂಷಕಃ ॥ ೧೯ ॥
ಮುಚ್ಯಂತೇ ಸರ್ವ ಏವೈತೇ ಶೂಲಭೇದಪ್ರಭಾವತಃ ॥ ೨೦ ॥
ಯ ಇದಂ ಶ್ರಾವಯೇಚ್ಛ್ರಾದ್ಧೇ ವಿಪ್ರಾಣಾಂ ಭುಂಜತಾಂ ನೃಪ ।
ಮುದಂ ಪ್ರಯಾಂತಿ ಸಂಹೃಷ್ಟಾಃ ಪಿತರಸ್ತಸ್ಯ ಸರ್ವಶಃ ॥ ೨೧ ॥
ಯಶ್ಚೇದಂ ಶೃಣುಯಾದ್ಭಕ್ತ್ಯಾ ಪಠ್ಯಮಾನಂ ನರೋ ವಶೀ ।
ಸ ಮುಕ್ತಃ ಸರ್ವಪಾಪೇಭ್ಯಃ ಸರ್ವಕಲ್ಯಾಣಭಾಗ್ಭವೇತ್ ॥ ೨೨ ॥

---

೧೫. ಈ ಮಾಹಾತ್ಮ್ಯವನ್ನು ತೀರ್ಥದಲ್ಲಾಗಲಿ, ದೇವಾಲಯದಲ್ಲಾಗಲಿ ಭಕ್ತಿಯಿಂದ ಪಠಿಸುವವನು ಅನೇಕ ಜನ್ಮಗಳಲ್ಲೆಸಗಿದ ಮಹಾಪಾಪದಿಂದ ಮುಕ್ತನಾಗುವನು.

೧೬–೨೦. ಬ್ರಹ್ಮಹತ್ಯೆ ಮಾಡಿದವನು, ಮದ್ಯವನ್ನು ಕುಡಿದವನು, ಕಳ್ಳನು, ಗುರುಪತ್ನಿಯನ್ನು ಸೇರಿದವನು, ಸ್ತ್ರೀ ಮತ್ತು ಗೋವುಗಳನ್ನು ಕೊಂದವನು, ದೇವಬ್ರಾಹ್ಮಣರ ಸ್ವತ್ತನ್ನು ಅಪಹರಿಸಿದವನು, ಸ್ವಾಮಿದ್ರೋಹಿಯು, ಮಿತ್ರಘ್ನನು, ವಿಶ್ವಾಸಘಾತಕನು, ಪರರ ನಿಧಿ ನ್ಯಾಸಗಳನ್ನು ಅಪಹರಿಸಿದವನು, ರಸವನ್ನೂ, ತಕ್ಕಡಿಯನ್ನೂ ಭೇದಿಸಿದವನು, ಬಡ್ಡಿಯಿಂದ ಜೀವಿಸುವವನು, ಕನ್ಯಾದಾನಕ್ಕೆ ವಿಘ್ನವನ್ನುಂಟುಮಾಡುವವನು, ಕನ್ಯೆಯನ್ನು ಮಾರುವವನು, ಪರರ ಪತ್ನಿ, ಸಹೋದರರ ಪತ್ನಿ, ಗೋವು, ಸೊಸೆ, ಕನ್ಯೆ ಇವರ ಸಂಗವನ್ನು ಮಾಡುವವನು, ಇತರರನ್ನು ದ್ವೇಷಿಸುವವನು, ಧರ್ಮದೂಷಕನು ಇವರೆಲ್ಲರೂ ಶೂಲಭೇದದ ಪ್ರಭಾವದಿಂದ ಪಾಪಮುಕ್ತರಾಗುವರು.

೨೧. ಶ್ರಾದ್ಧದಲ್ಲಿ ಬ್ರಾಹ್ಮಣರು ಭೋಜನಮಾಡುವಾಗ ಇದನ್ನು ಪಠಿಸಿದರೆ ಅವರ ಪಿತೃಗಳು ಆನಂದಗೊಳ್ಳುವರು.

೨೨. ಹೇಳುತ್ತಿರುವ ಇದನ್ನು ಚಿತ್ತೈಕಾಗ್ರ್ಯದಿಂದ ಕೇಳಿದ ಮಾನವನು ಸಮಸ್ತ ಪಾಪಗಳಿಂದಲೂ ಮುಕ್ತನಾಗಿ ಮಂಗಳಭಾಗಿಯಾಗುವನು.

ಇದಂ ಯಶಸ್ಯಮಾಯುಷ್ಯಮಿದಂ ಪಾವನಮುತ್ತಮಂ ।
ಪಠತಾಂ ಶೃಣ್ವತಾಂ ನೄಣಾಮಾಯುಃ ಕೀರ್ತಿವಿವರ್ಧನಂ ॥ ೨೩ ॥
ಇತಿ ಕಥಿತಮಿದಂ ತೇ ಶೂಲಭೇದಸ್ಯ ಪುಣ್ಯಂ
ಮಹಿಮ ನಹಿ ಮನುಷ್ಯೈಃ ಶ್ರೂಯತೇ ಯತ್ಸಪಾಪೈಃ ।
ಮದನರಿಪುತಟಿನ್ಯಾ ಯಾಮ್ಯಕೂಲಸ್ಥಿತಸ್ಯ
ಪ್ರಬಲದುರಿತಕಂದೋಚ್ಛೇದಕುದ್ದಾಲಕಲ್ಪಂ ॥ ೨೪ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಅವಂತ್ಯಖಂಡೇ ತೃತೀಯೇ ರೇವಾಖಂಡೇ
" ಶೂಲಭೇದತೀರ್ಥಮಾಹಾತ್ಮ್ಯವರ್ಣನಂ "
ನಾಮಾಷ್ಟಪಂಚಾಶತ್ತಮೋಽಧ್ಯಾಯಃ

---

೨೩. ಇದು ಯಶಸ್ಸು, ಆಯುಸ್ಸುಗಳನ್ನುಂಟುಮಾಡುವುದೂ, ಪವಿತ್ರವೂ, ಉತ್ತಮವೂ, ಹೇಳುವ ಮತ್ತು ಕೇಳುವ ಮಾನವರಿಗೆ ಆಯುಸ್ಸು, ಕೀರ್ತಿ ಇವುಗಳನ್ನು ಹೆಚ್ಚಿಸುವುದೂ ಆಗಿರುವುದು.

೨೪. ಮಹಾದೇವನನದಿಯ ದಕ್ಷಿಣತಟದಲ್ಲಿರುವ ಈ ಶೂಲಭೇದದ ಪುಣ್ಯಕರವೂ, ಪಾಪಿಗಳಾದ ಮಾನವರು ಕೇಳದಿರುವುದೂ, ಪ್ರಬಲವಾದ ಪಾಪವೆಂಬ ಗಡ್ಡೆಯನ್ನು ಕೀಳುವುದರಲ್ಲಿ ಗುದ್ದಲಿಯಂತಿರುವುದೂ ಆದ ಈ ಶೂಲಭೇದ ತೀರ್ಥದ ಮಹಿಮೆಯನ್ನು ನಿನಗೆ ಹೇಳಿರುವೆನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
" ಶೂಲಭೇದತೀರ್ಥಮಾಹಾತ್ಮ್ಯವರ್ಣನ "ವೆಂಬ
ಐವತ್ತೆಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥೈಕೋನಷಷ್ಠಿತಮೋಽಧ್ಯಾಯಃ

## ಆದಿತ್ಯತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ತತಃ ಪುಷ್ಕರಿಣೀಂ ಗಚ್ಛೇತ್ಸರ್ವಪಾಪಪ್ರಣಾಶಿನೀಂ ।
ಶ್ರುತೇ ಯಸ್ಯಾಃ ಪ್ರಭಾವೇತು ಸರ್ವಪಾಪೈಃಪ್ರಮುಚ್ಯತೇ ॥ ೧ ॥
ರೇವಾಯಾ ಉತ್ತರೇ ಕೂಲೇ ತೀರ್ಥಂ ಪರಮಶೋಭನಂ ।
ಯತ್ರಾಸ್ತೇ ಸರ್ವದಾ ದೇವೋ ವೇದಮೂರ್ತಿರ್ದಿವಾಕರಃ ॥ ೨ ॥
ಕುರುಕ್ಷೇತ್ರಂ ಯಥಾ ಪುಣ್ಯಂ ಸಾರ್ವಕಾಮಿಕಮುತ್ತಮಂ ।
ಇದಂ ತೀರ್ಥಂ ತಥಾ ಪುಣ್ಯಂ ಸರ್ವಕಾಮಫಲಪ್ರದಂ ॥ ೩ ॥
ಕುರುಕ್ಷೇತ್ರೇ ಯಥಾ ವೃದ್ಧಿರ್ದಾನಸ್ಯ ಜಗತೀಪತೇ ।
ಪುಷ್ಕರಿಣ್ಯಾಂ ತಥಾ ದಾನಂ ವರ್ಧತೇ ನಾಽತ್ರಸಂಶಯಃ ॥ ೪ ॥
ಯವಮೇಕಂ ತು ಯೋ ದದ್ಯಾತ್ಸೌವರ್ಣಂ ಮಸ್ತಕೇ ನೃಪ ।
ಪುಷ್ಕರಿಣ್ಯಾಂ ತಥಾ ಸ್ಥಾನಂ ಯಥಾ ಸ್ಥಾನಂ ನರೈಃ ಸ್ಮೃತಂ ॥ ೫ ॥

---

## ಕನ್ನಡದ ಅನುವಾದ

### ಆದಿತ್ಯತೀರ್ಥಮಾಹಾತ್ಮ್ಯವರ್ಣನ

೧. ಶ್ರೀ ಮಾರ್ಕಂಡೇಯನು ಹೇಳುತ್ತಾನೆ –ಬಳಿಕ ಸಕಲ ಪಾಪಗಳನ್ನೂ ಪರಿಹರಿಸುವ ಪುಷ್ಕರಿಣಿಗೆ ಹೋಗಬೇಕು. ಇದರ ಮಾಹಾತ್ಮ್ಯವನ್ನು ಕೇಳಿದರೆ ಸಮಸ್ತ ಪಾಪಗಳೂ ಪರಿಹಾರವಾಗುವುವು.

೨. ನರ್ಮದಾನದಿಯ ಉತ್ತರತಟದಲ್ಲಿ ಉತ್ತಮವಾದೊಂದು ತೀರ್ಥವಿದೆ. ಈ ತೀರ್ಥದಲ್ಲಿ ಯಾವಾಗಲೂ ವೇದಸ್ವರೂಪನಾದ ಸೂರ್ಯನು ಸನ್ನಿಹಿತನಾಗಿರುವನು.

೩. ಸಮಸ್ತೇಷ್ಟಾರ್ಥಗಳನ್ನೀಯುವ ಕುರುಕ್ಷೇತ್ರವು ಪುಣ್ಯಕರವಾಗಿರುವಂತೆ ಈ ತೀರ್ಥವೂ ಸಕಲೇಷ್ಟಾರ್ಥಗಳನ್ನು ಕೊಡುವುದೂ, ಪುಣ್ಯಕರವೂ ಆಗಿರುವುದು.

೪. ದೊರೆಯೆ! ಕುರುಕ್ಷೇತ್ರದಲ್ಲಿ ದಾನವು ವೃದ್ಧಿಯಾಗುವಂತೆ ಪುಷ್ಕರಿಣಿಯಲ್ಲಿಯೂ ದಾನವು ನಿಶ್ಚಯವಾಗಿಯೂ ವೃದ್ಧಿಗೊಳ್ಳುವುದು.

೫. ಪುಷ್ಕರಿಣಿಯಲ್ಲಿ ಚಿನ್ನದ ಯವವನ್ನು ದಾನಮಾಡಿದ ನರನ ಮಸ್ತಕದಲ್ಲಿ ಚಿನ್ನದ ಯವವೇ ನೆಲಸುವುದು.

ಸೂರ್ಯಗ್ರಹೇ ತು ಯಃ ಸ್ನಾತ್ವಾ ದದ್ಯಾದ್ದಾನಂ ಯಥಾವಿಧಿ ।
ಹಸ್ತ್ಯಶ್ವ ರಥರತ್ನಾದಿ ಗೃಹಂ ಗಾಶ್ಚ ಯುಗಂಧರಾನ್ ॥ ೬ ॥
ಸುವರ್ಣಂ ರಜತಂ ವಾಽಪಿ ಬ್ರಾಹ್ಮಣೇಭ್ಯೋ ದದಾತಿ ಯಃ ।
ತ್ರಯೋದಶಗುಣಂ ಯಾವತ್ತ್ರಯೋದಶಗುಣಂ ಭವೇತ್ ॥ ೭ ॥
ತಿಲಮಿಶ್ರೇಣ ತೋಯೇನ ತರ್ಪಯೇತ್ಪಿತೃದೇವತಾಃ ।
ದ್ವಾದಶಾಬ್ದೇ ಭವೇತ್ಪ್ರೀತಿಸ್ತತ್ರ ತೀರ್ಥೇ ಮಹೀಪತೇ ॥ ೮ ॥
ಯಸ್ತತ್ರ ಕುರುತೇ ಶ್ರಾದ್ಧಂ ಪಾಯಸೈರ್ಮಧು ಸರ್ಪಿಷಾ ।
ಶ್ರಾದ್ಧದೋ ಲಭತೇ ಸ್ವರ್ಗಂ ಪಿತೄಣಾಂ ದತ್ತಮಕ್ಷಯಂ ॥ ೯ ॥
ಅಕ್ಷತೈರ್ಬದರೈರ್ಬಿಲ್ವೈರಿಂಗುದೈರ್ವಾ ತಿಲೈಃ ಸಹ ।
ಅಕ್ಷಯಂ ಫಲಮಾಪ್ನೋತಿ ತಸ್ಮಿಂಸ್ತೀರ್ಥೇ ನ ಸಂಶಯಃ ॥ ೧೦ ॥
ತತ್ರ ಸ್ನಾತ್ವಾ ತು ಯೋ ದೇವಂ ಪೂಜಯೇಚ್ಚ ದಿವಾಕರಂ ।
ಆದಿತ್ಯಹೃದಯಂ ಜಪ್ತ್ವಾ ಪುನರಾದಿತ್ಯಮರ್ಚಯೇತ್ ।
ಸ ಗಚ್ಛೇತ್ಪರಮಂ ಲೋಕಂ ತ್ರಿದಶೈರಪಿ ವಂದಿತಂ ॥ ೧೧ ॥
ಋಚಮೇಕಾಂ ಜಪೇದ್ಯಸ್ತು ಯಜುರ್ವಾ ಸಾಮ ಏವ ಚ ।
ಸ ಸಮಗ್ರಸ್ಯ ವೇದಸ್ಯ ಫಲಮಾಪ್ನೋತಿ ವೈ ನೃಪ ॥ ೧೨ ॥

---

೬–೭. ಸೂರ್ಯಗ್ರಹಣ ಕಾಲದಲ್ಲಿ ವಿಧಿಯಂತೆ ದಾನಮಾಡಿದವನೂ, ಹದಿಮೂರು ದಿನ ಆನೆ, ಕುದುರೆ, ರಥ, ರತ್ನ, ಮನೆ, ಗೋವು, ಎತ್ತು, ಚಿನ್ನ, ಬೆಳ್ಳಿ ಇವುಗಳಲ್ಲಿ ಯಾವುದನ್ನಾದರೂ ದಾನಮಾಡಿದವನೂ ಆದ ಮಾನವನು ಹದಿಮೂರರಷ್ಟು ಹೆಚ್ಚಾದ ಪುಣ್ಯವನ್ನು ಪಡೆಯುವನು.

೮. ದೊರೆಯೆ! ಆ ತೀರ್ಥದಲ್ಲಿ ಪಿತೃದೇವತೆಗಳಿಗೆ ತಿಲಸಹಿತವಾಗಿ ತರ್ಪಣಮಾಡಿದರೆ ಹನ್ನೆರಡು ವರ್ಷಕಾಲ ಪಿತೃದೇವತೆಗಳು ಸಂತುಷ್ಟರಾಗಿ ರುವರು.

೯. ಅಲ್ಲಿ ಪಿತೃಗಳಿಗೆ ಪಾಯಸ, ಜೇನು, ತುಪ್ಪಗಳಿಂದ ಶ್ರಾದ್ಧಮಾಡಿದವನು ಸ್ವರ್ಗವನ್ನು ಹೊಂದುವನು. ಪಿತೃಗಳಿಗೆ ಅಕ್ಷಯ ತೃಪ್ತಿಯಾಗುವುದು.

೧೦. ಕೆಡದ ಬದರಿಯ ಹಣ್ಣು, ಬಿಲ್ವಫಲ, ಇಂಗಳದ ಹಣ್ಣು ಇವುಗಳಿಂದ ಶ್ರಾದ್ಧಮಾಡಿದವನು ಅಕ್ಷಯಫಲವನ್ನು ಪಡೆಯುವನು.

೧೧. ಆ ಪುಷ್ಕರಣಿಯಲ್ಲಿ ಮಿಂದು ಸೂರ್ಯನನ್ನು ಅರ್ಚಿಸಿ ಆದಿತ್ಯ ಹೃದಯವನ್ನು ಜಪಿಸಿ ಮರಳಿ ಸೂರ್ಯನನ್ನು ಆರಾಧಿಸಿದವನು ದೇವವಂದ್ಯವಾದ ಉತ್ತಮಲೋಕಕ್ಕೆ ತೆರಳುವನು.

೧೨. ಅಲ್ಲಿ ಯಜುರ್ವೇದ ಅಥವಾ ಸಾಮವೇದದ ಒಂದು ಋಕ್ಕನ್ನು ಜಪಿಸುವವನು ಸಮಗ್ರವೇದದ ಫಲವನ್ನು ಪಡೆಯುವನು.

ಯಸ್ತ್ರ್ಯಕ್ಷರಂ ಜಪೇನ್ಮಂತ್ರಂ ಧ್ಯಾಯಮಾನೋ ದಿವಾಕರಂ ।
ಆದಿತ್ಯಹೃದಯಂ ಜಪ್ತ್ವಾ ಮುಚ್ಯತೇ ಸರ್ವಪಾತಕೈಃ ॥ ೧೩ ॥
ಯಸ್ತತ್ರ ವಿಧಿವತ್ಪ್ರಾಣಾಂಸ್ತ್ಯಜತೇ ನೃಪಸತ್ತಮ ।
ಸ ಗಚ್ಛೇತ್ಪರಮಂ ಸ್ಥಾನಂ ಯತ್ರ ದೇವೋ ದಿವಾಕರಃ ॥ ೧೪ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಽಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
" ಆದಿತ್ಯತೀರ್ಥಮಾಹಾತ್ಮ್ಯವರ್ಣನಂ "
ನಾಮೈಕೋನಷಷ್ಟಿತಮೋಽಧ್ಯಾಯಃ

---

೧೩. ಸೂರ್ಯನನ್ನು ಧ್ಯಾನಿಸುತ್ತ ಮೂರಕ್ಷರದ ಆದಿತ್ಯ ಮಂತ್ರವನ್ನೂ, ಆದಿತ್ಯಹೃದಯವನ್ನೂ ಜಪಿಸಿದವನು ಸಮಸ್ತಪಾಪಗಳಿಂದಲೂ ಮುಕ್ತನಾಗುವನು.

೧೪. ಅಲ್ಲಿ ವಿಧಿಯಂತೆ ಪ್ರಾಣವನ್ನು ತ್ಯಜಿಸಿದವನು ಸೂರ್ಯನಿರುವ ಉತ್ತಮಲೋಕಕ್ಕೇ ಹೋಗಿ ಸೇರುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
" ಆದಿತ್ಯತೀರ್ಥಮಾಹಾತ್ಮ್ಯವರ್ಣನ "ನೆಂಬ
ಐವತ್ತೊಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಷಷ್ಟಿತಮೋಽಧ್ಯಾಯಃ

## ಆದಿತ್ಯೇಶ್ವರತೀರ್ಥಮಾಹಾತ್ಮ್ಯವರ್ಣನಂ

**ಶ್ರೀ ಮಾರ್ಕಂಡೇಯ ಉವಾಚ :—**

**ಭೂಯೋಽಪ್ಯಹಂ ಪ್ರವಕ್ಷ್ಯಾಮಿ ಆದಿತ್ಯೇಶ್ವರಮುತ್ತಮಂ ।**
**ಸರ್ವದುಃಖಹರಂ ಪಾರ್ಥ ಸರ್ವವಿಘ್ನವಿನಾಶನಂ ॥ ೧ ॥**
**ಆಯುಃ ಶ್ರೀವರ್ಧನಂ ನಿತ್ಯಂ ಪುತ್ರದಂ ಸ್ವರ್ಗದಂ ಶಿವಂ ।**
**ಯಸ್ಯ ತೀರ್ಥಸ್ಯ ಚಾಽನ್ಯಾನಿ ತೀರ್ಥಾನಿ ಕುರುನಂದನ ॥ ೨ ॥**
**ನಾಽಲಭಂತ ಶ್ರಿಯಂ ನಾಕೇ ಮರ್ತ್ಯೇ ಪಾತಾಲಗೋಚರೇ ।**
**ಕುರುಕ್ಷೇತ್ರಂ ಗಯಾ ಗಂಗಾ ನೈಮಿಷಂ ಪುಷ್ಕರಂ ತಥಾ ॥ ೩ ॥**
**ವಾರಾಣಸೀಚ ಕೇದಾರಂ ಪ್ರಯಾಗಂ ರುದ್ರನಂದನಂ ।**
**ಮಹಾಕಾಲಂ ಸಹಸ್ರಾಕ್ಷಂ ಶುಕ್ಲತೀರ್ಥಂ ನೃಪೋತ್ತಮ ॥ ೪ ॥**
**ರವಿತೀರ್ಥಸ್ಯ ಸರ್ವಾಣಿ ಕಲಾಂ ನಾರ್ಹಂತಿ ಷೋಡಶೀಂ ।**
**ರವಿತೀರ್ಥೇ ಹಿ ಯದ್ವೃತ್ತಂ ತಚ್ಛೃಣುಷ್ವ ನೃಪೋತ್ತಮ ॥ ೫ ॥**
**ಸ್ನೇಹಾತ್ತೇ ಕಥಯಿಷ್ಯಾಮಿ ಪಾರ್ಥಕೇನಾಽತಿಪೀಡಿತಃ ।**
**ಶೃಣ್ವಂತು ಋಷಯಃ ಸರ್ವೇ ತಪೋನಿಷ್ಠಾ ಮಹೌಜಸಃ ॥ ೬ ॥**

---

### ಕನ್ನಡದ ಅನುವಾದ

#### ಆದಿತ್ಯೇಶ್ವರತೀರ್ಥಮಾಹಾತ್ಮ್ಯವರ್ಣನ

೧–೫. ಶ್ರೀ ಮಾರ್ಕಂಡೇಯನು ಹೇಳುತ್ತಾನೆ.—ನಾನು ಮರಳಿ ಸಕಲ ದುಃಖವನ್ನು ನಿವಾರಿಸುವವನೂ, ಸಕಲವಿಘ್ನಗಳನ್ನು ಪರಿಹರಿಸುವವನೂ, ಯಾವಾಗಲೂ ಆಯುಸ್ಸು, ಸಂಪತ್ತುಗಳನ್ನು ಹೆಚ್ಚಿಸುವವನೂ, ಪುತ್ರಲಾಭ, ಸ್ವರ್ಗಸೌಖ್ಯಗಳನ್ನು ಕೊಡುವವನೂ ಆದ ಆದಿತ್ಯೇಶ್ವರನ ಮಾಹಾತ್ಮ್ಯವನ್ನು ಹೇಳುವೆನು. ಸ್ವರ್ಗ, ಮರ್ತ್ಯ, ಪಾತಾಳಲೋಕಗಳಲ್ಲಿರುವ ಇತರ ತೀರ್ಥಗಳು ಈ ತೀರ್ಥದ ಸಂಪತ್ತನ್ನು ಹೊಂದಿರುವುದಿಲ್ಲ. ಕುರುಕ್ಷೇತ್ರ, ಗಯೆ, ಗಂಗೆ, ನೈಮಿಷ, ಪುಷ್ಕರ, ವಾರಾಣಸೀ, ಕೇದಾರ, ಪ್ರಯಾಗ, ರುದ್ರನಂದನ, ಮಹಾಕಾಲ, ಸಹಸ್ರಾಕ್ಷ, ಶುಕ್ಲತೀರ್ಥ ಇವುಗಳು ರವಿತೀರ್ಥದ ಹದಿನಾರನೆಯ ಒಂದು ಕಲೆಗೂ ಸರಿದೊರೆಯಲ್ಲ. ಅರಸ! ರವಿತೀರ್ಥದಲ್ಲಿ ನಡೆದ ಸಮಾಚಾರವೊಂದನ್ನು ಕೇಳು.

೬. ಮುದುಕನಾದ ನಾನು ಪ್ರೀತಿಯಿಂದ ನಿನಗೆ ಹೇಳುವೆನು. ತಪೋನಿರತರೂ, ಮಹೋಜಸ್ವಿಗಳೂ ಆದ ಮುನಿಗಳೆಲ್ಲರೂ ಕೇಳಲಿ.

ಶ್ರುತಂ ಮೇ ರುದ್ರಸಾನ್ನಿಧ್ಯೇ ನಂದಿಸ್ಕಂದಗಣೈಃ ಸಹ ।
ಪಾರ್ವತ್ಯಾ ಪೃಷ್ಟಃ ಶಂಭುಶ್ಚ ರವಿತೀರ್ಥಸ್ಯ ಯತ್ಫಲಂ ॥ ೭ ॥
ಶಂಭುನಾ ಚ ಯದಾಖ್ಯಾತಂ ಗಿರಿಜಾಯಾಃ ಸಸಂಭ್ರಮಂ ।
ತತ್ಸರ್ವಮೇಕಚಿತ್ತೇನ ರುದ್ರೋದ್ಗೀತಂ ಶ್ರುತಂ ಮಯಾ ॥ ೮ ॥
ತತ್ತೇಽಹಂ ಸಂಪ್ರವಕ್ಷ್ಯಾಮಿ ಶೃಣು ಯತ್ನೇನ ಪಾಂಡವ ।
ದುರ್ಭಿಕ್ಷೋಪಹತಾ ವಿಪ್ರಾ ನರ್ಮದಾಂ ತು ಸಮಾಶ್ರಿತಾಃ ॥ ೯ ॥
ಉದ್ದಾಲಕೋ ವಸಿಷ್ಠಶ್ಚ ಮಾಂಡವ್ಯೋ ಗೌತಮಸ್ತಥಾ ।
ಯಾಜ್ಞವಲ್ಕ್ಯೋಽಥ ಗರ್ಗಶ್ಚ ಶಾಂಡಿಲ್ಯೋ ಗಾಲವಸ್ತಥಾ ॥ ೧೦ ॥
ನಾಚಿಕೇತೋ ವಿಭಾಂಡಶ್ಚ ವಾಲಖಿಲ್ಯಾದಯಸ್ತಥಾ ।
ಶಾತಾತಪಶ್ಚ ಶಂಖಶ್ಚ ಜೈಮಿನಿರ್ಗೋಭಿಲಸ್ತಥಾ ॥ ೧೧ ॥
ಜೈಗೀಷವ್ಯಃ ಶತಾನೀಕಃ ಸರ್ವ ಏವ ಸಮಾಗತಾಃ ।
ತೀರ್ಥಯಾತ್ರಾ ಕೃತಾ ತೈಸ್ತು ನರ್ಮದಾಯಾಃ ಸಮಂತತಃ ॥ ೧೨ ॥
ಆದಿತ್ಯೇಶ್ವರಮಾಯಾತಾಃ ಪ್ರಸಂಗಾದೃಷಿಪುಂಗವಾಃ ।
ವೃಕ್ಷೈಃ ಸಂಛಾದಿತಂ ಶುಭ್ರಂ ಧವತಿಂದುಕಪಾಟಲೈಃ ॥ ೧೩ ॥
ಜಂಬೀರೈರರ್ಜುನೈಃ ಕುಬ್ಜೈಃ ಶಮೀಕೇಸರಕಿಂಶುಕೈಃ ।
ತಸ್ಮಿಂಸ್ತೀರ್ಥೇ ಮಹಾಪುಣ್ಯೇ ಸುಗಂಧಿಕುಸುಮಾಕುಲೇ ॥ ೧೪ ॥
ಪುನ್ನಾಗನಾಲಿಕೇರೈಶ್ಚ ಖದಿರೈಃ ಕಲ್ಪಪಾದಪೈಃ ।
ಅನೇಕ ಶ್ವಾಪದಾಕೀರ್ಣಂ ಮೃಗಮಾರ್ಜಾರಸಂಕುಲಂ ॥ ೧೫ ॥
ಋಕ್ಷಹಸ್ತಿಸಮಾಕೀರ್ಣಂ ಚಿತ್ರಕೈಶ್ಚೋಪಶೋಭಿತಂ ।
ಪ್ರವಿಷ್ಟಾ ಋಷಯಃ ಸರ್ವೇ ವನೇ ಪುಷ್ಪಸಮಾಕುಲೇ ॥ ೧೬ ॥

---

೭–೧೬. ಪಾರ್ವತಿಯು ಪರಮೇಶ್ವರನನ್ನು ಕುರಿತು ರವಿತೀರ್ಥದ ಫಲವನ್ನು ಕೇಳಲು ಅವನು ಆಕೆಗೆ ಹೇಳಿದನು. ರುದ್ರನ ಬಳಿಯಲ್ಲಿ ನಂದಿ, ಸ್ಕಂದ, ಪ್ರಮಥಗಣಗಳು ಇವರೊಡನೆ ಚಿತ್ತೈಕಾಗ್ರ್ಯದಿಂದ ನಾನು ಕೇಳಿದ ಆ ಫಲವನ್ನು ನಿನಗೆ ಹೇಳುವೆನು. ಉದ್ದಾಲಕ, ವಸಿಷ್ಠ, ಮಾಂಡವ್ಯ, ಗೌತಮ, ಯಾಜ್ಞವಲ್ಕ್ಯ, ಗರ್ಗ, ಶಾಂಡಿಲ್ಯ, ಗಾಲವ, ನಾಚಿಕೇತ, ವಿಭಾಂಡ, ವಾಲಖಿಲ್ಯ, ಶಾತಾತಪ, ಶಂಖ, ಜೈಮಿನಿ, ಗೋಭಿಲ, ಜೈಗೀಷವ್ಯ, ಶತಾನೀಕ ಮೊದಲಾದ ಮಹರ್ಷಿಗಳು ದುರ್ಭಿಕ್ಷದಿಂದ ಪೀಡಿತರಾಗಿ ತೀರ್ಥಯಾತ್ರಾ ನಿಮಿತ್ತದಿಂದ ನರ್ಮದೆಯ ಹತ್ತಿರವಿರುವುದಾಗಿ, ಧವ, ತಿಂದುಕ, ಪಾಟಲ, ಜಂಬೀರ, ಅರ್ಜುನ, ಕುಬ್ಜ, ಶಮೀ, ಕೇಸರ, ಕಿಂಶುಕ, ಶುಕ, ಪುನ್ನಾಗ, ತೆಂಗು, ಖದಿರ, ಕಲ್ಪವೃಕ್ಷವೇ ಮೊದಲಾದ ವೃಕ್ಷಗಳಿಂದ ತುಂಬಿರುವುದೂ, ಅನೇಕ ಹಿಂಸ್ರ ಮೃಗಗಳಿಂದ ಕೂಡಿರುವುದೂ, ಬೆಕ್ಕು, ಕರಡಿ, ಆನೆ, ಚಿತ್ರಕ

ವನಾಂತೇ ಚ ಸ್ತ್ರಿಯೋ ದೃಷ್ಟ್ವಾ ರಕ್ತಾ ರಕ್ತಾಂಬರಾನ್ವಿತಾಃ ।
ರಕ್ತಮಾಲ್ಯಾನುಶೋಭಾಢ್ಯಾ ರಕ್ತಚಂದನಚರ್ಚಿತಾಃ ॥ ೧೭ ॥
ರಕ್ತಾಭರಣಸಂಯುಕ್ತಾಃ ಪಾಶಹಸ್ತಾ ಭಯಾವಹಾಃ ।
ತಾಸಾಂ ಸಮೀಪಗಾ ದೃಷ್ಟ್ವಾಃ ಕೃಷ್ಣಜೀಮೂತಸನ್ನಿಭಾಃ ॥ ೧೮ ॥
ಮಹಾಕಾಯಾ ಭೀಮವಕ್ತ್ರಾಃ ಪಾಶಹಸ್ತಾ ಭಯಾವಹಾಃ ।
ಅನಾವೃಷ್ಟ್ಯುಪಮಾ ದೃಷ್ಟಾ ಆತುರಾಃ ಪಿಂಗಲೋಚನಾಃ ॥ ೧೯ ॥
ದೀರ್ಘಜಿಹ್ವಾ ಕರಾಲಾಸ್ಯಾ ತೀಕ್ಷ್ಣದಂಷ್ಟ್ರಾ ದುರಾಸದಾ ।
ವೃದ್ಧಾ ನಾರೀ ಕುರುಶ್ರೇಷ್ಠ ದೃಷ್ಟ್ವಾಽನ್ಯಾ ಋಷಿಪುಂಗವೈಃ ॥ ೨೦ ॥
ತತಃ ಸಮೀಪಗಾ ವೃದ್ಧಾ ತಸ್ಯ ವೃಂದಸ್ಯ ಭಾರತ ।
ಸ್ವಾಧ್ಯಾಯನಿರತಾ ವಿಪ್ರಾ ದೃಷ್ಟ್ವಾಸ್ತೈಃ ಪಾಪಕರ್ಮಭಿಃ ॥ ೨೧ ॥
ಊಚುಸ್ತೇ ತು ಸಮೂಹೇನ ಬ್ರಾಹ್ಮಣಾಂಸ್ತಪಸಿ ಸ್ಥಿತಾನ್ ।
ಅಸ್ಮಾಕಂ ಸ್ವಾಮಿನಃ ಸರ್ವೇ ತಿಷ್ಠಂತೇ ತೀರ್ಥಮಧ್ಯತಃ ।
ತೇ ಪ್ರಸ್ಥಾಪ್ಯಾ ಮಹಾಭಾಗಾಃ ಸರ್ವಥೈವ ತ್ವರಾನ್ವಿತಾಃ ॥ ೨೨ ॥
ತಚ್ಛ್ರುತ್ವಾ ವಚನಂ ತೇಷಾಂ ಸರ್ವೇ ಚೈವ ತ್ವರಾನ್ವಿತಾಃ ।
ಜಗ್ಮುಸ್ತೇ ನರ್ಮದಾಕಕ್ಷಂ ದೃಷ್ಟ್ವಾ ರೇವಾಂ ದ್ವಿಜೋತ್ತಮಾಃ ॥ ೨೩ ॥

---

ಮೃಗಗಳಿಂದ ವಿರಾಜಿಸುವುದೂ ಆದ ಆದಿತ್ಯೇಶ್ವರ ತೀರ್ಥಕ್ಕೆ ಬಂದು ಅಲ್ಲಿರುವ ಸುವಾಸನೆಯಾದ ಕುಸುಮಗಳಿಂದ ತುಂಬಿರುವ ವನವನ್ನು ಹೊಕ್ಕರು.

೧೭–೨೨ ಆ ವನದ ಕೊನೆಯಲ್ಲಿ ಆ ಮಹರ್ಷಿಗಳು ಕೆಂಪುವಸ್ತ್ರವನ್ನುಟ್ಟವರೂ, ಕೆಂಪು ಮಾಲೆಗಳಿಂದ ವಿರಾಜಿಸುವವರೂ, ಕೆಂಪು ಗಂಧವನ್ನು ಹಚ್ಚಿಕೊಂಡಿರುವವರೂ, ಕೆಂಪು ಒಡವೆಗಳಿಂದ ಕೂಡಿದವರೂ, ಪಾಶವನ್ನು ಹಿಡಿದವರೂ, ಭಯಂಕರರೂ ಆದ ಸ್ತ್ರೀಯರನ್ನೂ, ಅವರ ಹತ್ತಿರದಲ್ಲಿಯೆ ನೀಲ ಮೇಘಕ್ಕೆ ಸಮಾನರೂ, ದೊಡ್ಡ ಶರೀರವುಳ್ಳವರೂ, ಭಯಂಕರ ಮುಖವುಳ್ಳವರೂ, ಪಾಶವನ್ನು ಹಿಡಿದವರೂ, ಅನಾವೃಷ್ಟಿಯಂತಿರುವವರೂ, ಹಳದಿಯ ಕಣ್ಣುಳ್ಳವರೂ, ಆದ ಪುರುಷರನ್ನೂ, ಅವರ ಬಳಿ ಉದ್ದವಾದ ನಾಲಿಗೆಯುಳ್ಳವಳೂ, ಭಯಂಕರಮುಖವುಳ್ಳವಳೂ, ಹರಿತವಾದ ಹಲ್ಲುಳ್ಳವಳೂ, ಹೊಂದಲಶಕ್ಯಳೂ ವೃದ್ಧಳೂ ಆದ ಮತ್ತೊಬ್ಬ ಸ್ತ್ರೀಯನ್ನೂ ಕಂಡರು. ಪಾಪಕರ್ಮಿಗಳಾದ ಆ ಸ್ತ್ರೀಯರು ಗುಂಪಾಗಿರುವ ತಪಸ್ವಿಗಳಾದ ಆ ಮಹರ್ಷಿಗಳನ್ನು ಕಂಡು, "ನಮ್ಮ ನಾಥರು ತೀರ್ಥದನಡುವೆ ಇರುವರು. ಮಹಾಭಾಗರೆ! ನೀವು ತ್ವರೆಯಿಂದ ಅಲ್ಲಿ ಹೋಗಿರಿ" ಎಂದರು.

೨೩. ಆ ಮಹರ್ಷಿಗಳೆಲ್ಲರೂ ಅವರ ಆ ಮಾತನ್ನು ಕೇಳಿ ನರ್ಮದಾನದಿಯನ್ನು ನೋಡಿ ಅದರ ಮಧ್ಯಕ್ಕೆ ಹೋದರು.

ತತಃ ಕೇಚಿತ್ಸ್ತುವಂತ್ಯನ್ಯೇ ಜಯ ದೇವಿ ನಮೋಽಸ್ತುತೇ ॥ ೨೪ ॥
ನಮೋಽಸ್ತುತೇ ಸಿದ್ಧಗಣೈರ್ನಿಷೇವಿತೇ
ನಮೋಽಸ್ತುತೇ ಸರ್ವಪವಿತ್ರಮಂಗಲೇ ।
ನಮೋಽಸ್ತುತೇ ವಿಪ್ರಸಹಸ್ರಸೇವಿತೇ
ನಮೋಽಸ್ತು ರುದ್ರಾಂಗಸಮುದ್ಭವೇ ವರೇ ॥ ೨೫ ॥
ನಮೋಽಸ್ತು ತೇ ಸರ್ವಪವಿತ್ರಪಾವನೇ
ನಮೋಽಸ್ತು ತೇ ದೇವಿ ವರಪ್ರದೇ ಶಿವೇ ।
ನಮಾಮಿ ತೇ ಶೀತಜಲೇ ಸುಖಪ್ರದೇ
ಸರಿದ್ವರೇ ಪಾಪಹರೇ ವಿಚಿತ್ರಿತೇ ॥ ೨೬ ॥
ಅನೇಕಭೂತೌಘಸುಸೇವಿತಾಂಗೇ
ಗಂಧರ್ವಯಕ್ಷೋರಗ ಪಾವಿತಾಂಗೇ ।
ಮಹಾಗಜೌಘೈರ್ಮಹಿಷೈರ್ವರಾಹೈ
ರಾಪೀಯಸೇ ತೋಯಮಹೋರ್ಮಿಮಾಲೇ ॥ ೨೭ ॥
ನಮಾಮಿ ತೇ ಸರ್ವವರೇ ಸುಖಪ್ರದೇ
ವಿಮೋಚಯಾಸ್ಮಾನಘಪಾಶಬದ್ಧಾನ್ ।
ಭ್ರಮಂತಿ ತಾವನ್ನರಕೇಷು ಮರ್ತ್ಯಾ
ಯಾವತ್ತವಾಂಭೋ ನಹಿ ಸಂಶ್ರಯಂತಿ ॥ ೨೮ ॥

---

೨೪–೨೫. ಅನಂತರ ಅವರು ಹೀಗೆ ಸ್ತುತಿಸಿದರು. "ದೇವಿ! ನಿನಗೆ ನಮಸ್ಕಾರವಿರಲಿ. ಸಿದ್ಧರ ಸಮೂಹದಿಂದ ಸೇವಿಸಲ್ಪಟ್ಟವಳೂ, ಸರ್ವಪವಿತ್ರಳೂ, ಅನೇಕ ವಿಪ್ರರಿಂದ ಸೇವಿತಳೂ, ರುದ್ರನ ಅಂಗದಿಂದ ಹುಟ್ಟಿದವಳೂ ಆದ ದೇವಿಯೆ! ನಿನಗೆ ನಮಸ್ಕಾರವು.

೨೬. ಪಾವನಳೂ, ವರಪ್ರದಳೂ, ತಣ್ಣಗಿರುವ ನೀರುಳ್ಳವಳೂ, ಸುಖದಾಯಗಳೂ, ನದಿಗಳಲ್ಲಿ ಶ್ರೇಷ್ಠಳೂ, ಪಾಪನಿವಾರಕಳೂ, ವಿಚಿತ್ರಳೂ ಆದ ಓ ದೇವಿಯೆ! ನಿನಗೆ ನಮಸ್ಕಾರವು.

೨೭. ಅನೇಕ ಪ್ರಾಣಿಗಳು ಸೇವಿಸುವ ಅಂಗಗಳುಳ್ಳವಳೂ, ಗಂಧರ್ವ, ಯಕ್ಷ, ಉರಗರಿಂದ ಶುದ್ಧವಾದ ಅಂಗಗಳುಳ್ಳವಳೂ, ದೊಡ್ಡ ಅಲೆಗಳ ಸಮೂಹವುಳ್ಳವಳೂ ಆದ ದೇವಿಯೆ! ನಿನ್ನ ಜಲವನ್ನು ಮಹಾಗಜಗಳೂ, ಕೋಣಗಳೂ, ಹಂದಿಗಳೂ ಕುಡಿದು ತೃಪ್ತಿಗೊಳ್ಳುವುವು.

೨೮. ಸರ್ವೋತ್ತಮಳೂ, ಸುಖಪ್ರದಳೂ ಆದ ದೇವಿಯೆ! ಪಾಪವೆಂಬ ಪಾಶದಿಂದ ಬದ್ಧರಾದ ನಮ್ಮನ್ನು ಬಿಡಿಸು. ಮಾನವರು ನಿನ್ನ ನೀರನ್ನು ಆಶ್ರಯಿಸುವವರೆಗೆ ಮಾತ್ರ ನರಕಗಳಲ್ಲಿ ಸಂಚರಿಸುವರು.

ಸ್ಪೃಷ್ಟಂ ಕರೈಶ್ಚಂದ್ರಮಸೋ ರವೇಸ್ತೇ
ತದ್ದೇವಿ ದದ್ಯಾತ್ಪರಮಂ ಪದಂತು ॥ ೨೯ ॥
ಅನೇಕ ಸಂಸಾರ ಭಯಾರ್ದಿತಾನಾಂ
ಪಾಪೈರನೇಕೈರಭಿವೇಷ್ಟಿತಾನಾಂ ।
ಗತಿಸ್ತ್ವಮಂಭೋಜಸಮಾನವಕ್ತ್ರೇ
ದ್ವಂದ್ವೈರನೇಕೈರಭಿಸಂವೃತಾನಾಂ ॥ ೩೦ ॥
ನದ್ಯಶ್ಚ ಪೂತಾ ವಿಮಲಾ ಭವಂತಿ
ತ್ವಾಂ ದೇವಿ ಸಂಪ್ರಾಪ್ಯ ನ ಸಂಶಯೋಽತ್ರ ।
ದುಃಖಾತುರಾಣಾಮಭಯಂ ದದಾಸಿ
ಶಿಷ್ಟೈರನೇಕೈರಭಿಪೂಜಿತಾಽಸಿ ॥ ೩೧ ॥
ವಿಣ್ಮೂತ್ರದೇಹಾಶ್ಚ ನಿಮಗ್ನದೇಹಾ
ಭ್ರಮಂತಿ ತಾವನ್ನರಕೇಷು ಮರ್ತ್ಯಾಃ ।
ಮಹಾಬಲಧ್ವಸ್ತತರಂಗಭಂಗಂ
ಜಲಂ ನ ಯಾವತ್ತವ ಸಂಸ್ಪೃಶಂತಿ ॥ ೩೨ ॥
ಮ್ಲೇಚ್ಛಾಃ ಪುಲಿಂದಾಸ್ತ್ವಥ ಯಾತುಧಾನಾಃ
ಪಿಬಂತಿ ಯೇಽಂಭಸ್ತವ ದೇವಿ ಪುಣ್ಯಂ ।
ತೇಽಪಿ ಪ್ರಮುಚ್ಯಂತಿ ಭಯಾಚ್ಚ ಘೋರಾ
ತ್ಕಿಮತ್ರ ವಿಪ್ರಾ ಭವಪಾಶಭೀತಾಃ ॥ ೩೩ ॥

---

೨೯. ಆ ನಿನ್ನ ನೀರು ಚಂದ್ರಸೂರ್ಯರ ಕಿರಣಗಳ ಸ್ಪರ್ಶದಿಂದಲೇ ಉತ್ತಮ ಸ್ಥಾನವನ್ನು ಕೊಡುವುದು.

೩೦. ಪದ್ಮಮುಖಿಯೆ! ಸಂಸಾರದ ಅನೇಕ ಭಯಗಳಿಂದ ಪೀಡಿತರೂ, ಅನೇಕ ಪಾಪಗಳಿಂದ ವ್ಯಾಪ್ತರೂ, ಶೀತೋಷ್ಣಾದಿ ಅನೇಕ ದ್ವಂದ್ವಗಳಿಂದ ಕೂಡಿದವರೂ ಆದ ಮಾನವರಿಗೆ ನೀನೇ ಗತಿಯು.

೩೧. ದೇವಿ! ನದಿಗಳು ನಿನ್ನನ್ನುಹೊಂದಿ ಪವಿತ್ರವಾಗುವುದರಲ್ಲಿ ಸಂದೇಹ ವಿಲ್ಲ. ದುಃಖಗೊಂಡವರಿಗೆ ಅಭಯವನ್ನು ನೀಡುವೆ. ಅನೇಕ ಶಿಷ್ಟರಿಂದ ಪೂಜೆಗೊಳ್ಳುವೆ.

೩೨–೩೩. ಮಲಮೂತ್ರಗಳ ಶರೀರವುಳ್ಳ ಈ ಮಾನವರು ನಿನ್ನ ಅತಿಬಲ ದಿಂದ ನಾಶವಾದ ಅಲೆಗಳುಳ್ಳ ನೀರನ್ನು ಮುಟ್ಟದಿರುವವರೆಗೆ ನರಕಗಳಲ್ಲಿ ಅಲೆಯುತ್ತಾರೆ. ನಿನ್ನ ನೀರನ್ನು ಕುಡಿಯುವ ಮ್ಲೇಚ್ಛರೂ, ಬೇಡರೂ, ರಾಕ್ಷಸರೂ ಘೋರಭಯದಿಂದ ಮುಕ್ತರಾಗುವರು. ಸಂಸಾರವೆಂಬ ಪಾಶದಿಂದ ಭೀತರಾದ ವಿಪ್ರರಿನ್ನೇನು.

ಸರಾಂಸಿ ನದ್ಯಃ ಕ್ಷಯಮಭ್ಯುಪೇತಾ
ಘೋರೇ ಯುಗೇಽಸ್ಮಿನ್ಕಲಿನಾವಸೃಷ್ಟೇ ।
ತ್ವಂ ಭ್ರಾಜಸೇ ದೇವಿ ಜಲೌಘಪೂರ್ಣಾ
ದಿವೀವ ನಕ್ಷತ್ರಪಥೇ ಚ ಗಂಗಾ ॥ ೩೪ ॥
ತವ ಪ್ರಸಾದಾದ್ವರದೇ ವಿಶಿಷ್ಟೇ
ಕಾಲಂ ಯಥೇಮಂ ಪರಿಪಾಲಯಿತ್ವಾ ।
ಯಾಸ್ಯಾಮ ಮೋಕ್ಷಂ ತವ ಸುಪ್ರಸಾದಾ
ದ್ವಯಂ ಯಥಾ ತ್ವಂ ಕುರು ನಃ ಪ್ರಸಾದಂ ॥ ೩೫ ॥
ತ್ವಾಮಾಶ್ರಿತಾ ಯೇ ಶರಣಂ ಗತಾಶ್ಚ
ಗತಿಸ್ತ್ವಮಂಬೇವ ಪಿತೇವ ಪುತ್ರಾನ್ ।
ತ್ವತ್ಪಾಲಿತಾ ಯಾವದಿಮಂ ಸುಘೋರಂ
ಕಾಲಂ ತ್ವನಾವೃಷ್ಟಿಹತಂ ಕ್ಷಿಪಾಮಃ ॥ ೩೬ ॥
ಏವಂ ಸ್ತುತಾ ತದಾ ದೇವೀ ನರ್ಮದಾ ಸರಿತಾಂ ವರಾ ।
ಪ್ರತ್ಯಕ್ಷಾ ಸಾ ಪರಾ ಮೂರ್ತಿರ್ಬ್ರಾಹ್ಮಣಾನಾಂ ಯುಧಿಷ್ಠಿರ ॥ ೩೭ ॥
ಶ್ರೀ ಮಾರ್ಕಂಡೇಯ ಉವಾಚ:—
ಪಠಂತಿ ಯೇ ಸ್ತೋತ್ರಮಿದಂ ನರೇಂದ್ರ
ಶೃಣ್ವಂತಿ ಭಕ್ತ್ಯಾ ಪರಯಾ ಪ್ರಶಾಂತಾಃ ।
ತೇ ಯಾಂತಿ ರುದ್ರಂ ವೃಷಸಂಯುತೇನ
ಯಾನೇನ ದಿವ್ಯಾಂಬರಭೂಷಿತಾಂಗಾಃ ॥ ೩೮ ॥

---

೩೪. ಕಲಿಯು ಆವರಿಸಿರುವ ಘೋರವಾದ ಈ ಕಲಿಯುಗದಲ್ಲಿ ಸರಸ್ಸುಗಳೂ, ನದಿಗಳೂ ನಾಶವಾದುವು. ದೇವಿ! ನೀನು ನೀರಿನಿಂದ ತುಂಬಿದವಳಾಗಿ ಆಕಾಶದಲ್ಲಿ ಗಂಗೆಯಂತೆ ಪ್ರಕಾಶಗೊಳ್ಳುತ್ತಿರುವೆ.

೩೫. ವರದಾಯಕಳೂ, ಉತ್ತಮಳೂ ಆದ ದೇವಿಯೆ! ನಾವು ಈ ಕಾಲವನ್ನು ನಿರೀಕ್ಷಿಸಿ ಮೋಕ್ಷಕ್ಕೆ ಹೋಗುವಂತೆ ಅನುಗ್ರಹಮಾಡು.

೩೬. ನಿನ್ನನ್ನು ಮರೆಹೊಕ್ಕವರಿಗೆ ನೀನೇ ಗತಿಯು. ನಾವು ತಾಯಿ ತಂದೆಗಳು ಮಕ್ಕಳನ್ನು ಕಾಪಾಡುವಂತೆ ನಿನ್ನಿಂದಪಾಲಿತರಾಗಿ ಅನಾವೃಷ್ಟಿಯಿಂದ ತೊಂದರೆಗೀಡಾಗದಂತೆ ಈ ಘೋರಕಾಲವನ್ನು ಕಳೆಯುವೆವು.

೩೭. ಬ್ರಾಹ್ಮಣರು ಹೀಗೆ ಸ್ತುತಿಸಲು ನದಿಗಳಲ್ಲಿ ಉತ್ತಮವಾದ ನರ್ಮದಾ ನದಿಯು ಅವರಿಗೆ ಪ್ರತ್ಯಕ್ಷಳಾದಳು.

೩೮. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:—ದೊರೆಯೆ! ಈ ಸ್ತೋತ್ರವನ್ನು ಪಠಿಸುವವರೂ, ಭಕ್ತಿಯಿಂದ ಕೇಳುವವರೂ ದಿವ್ಯಾಂಬರಗಳಿಂದ ಅಲಂಕಾರಗೊಂಡವರಾಗಿ ವೃಷಭವಾಹನದಿಂದ ಮಹೇಶ್ವರನನ್ನು ಸೇರುವರು.

ಯೇ ಸ್ತೋತ್ರಮೇತತ್ಸತತಂ ಜಪಂತಿ
ಸ್ನಾತ್ವಾ ಚ ತೋಯೇನ ಚ ನರ್ಮದಾಯಾಃ ।
ತೇಭ್ಯೋಽಂತಕಾಲೇ ಸರಿದುತ್ತಮೇಯಂ
ಗತಿಂ ವಿಶುದ್ಧಾಮಚಿರಾದ್ದದಾತಿ ॥ ೩೯ ॥
ಪ್ರಾತಃ ಸಮುತ್ಥಾಯ ತಥಾ ಶಯಾನೋ
ಯಃ ಕೀರ್ತಯೇತಾನುದಿನಂ ಸ್ತವೇಂದ್ರಂ ।
ದೇಹಕ್ಷಯಂ ಸಲಿಲೇ ದದಾತಿ
ಸಮಾಶ್ರಯಂ ತಸ್ಯ ಮಹಾನುಭಾವ ॥ ೪೦ ॥
ಪಾಪೈರ್ವಿಮುಕ್ತಾ ದಿವಿ ಮೋದಮಾನಾಃ ।
ಸಂಭೋಗಿನಶ್ಚೈವ ತು ನಾನ್ಯಥಾ ಚ ॥ ೪೧ ॥
ಪ್ರಸನ್ನಾ ನರ್ಮದಾದೇವೀ ಸ್ತೋತ್ರೇಣಾನೇನ ಭಾರತ ।
ಜಲೇನಾಪ್ಯಾಯಿತಾನ್ವಿಪ್ರಾನ್ದಕ್ಷಿಣಾಪಥವಾಹಿನೀ ॥ ೪೨ ॥
ಅಮೃತತ್ವಂ ತು ವೋ ದದ್ಮಿ ಯೋಗಿಭಿರ್ಯನ್ನ ಗಮ್ಯತೇ ।
ದುರ್ಲಭಂ ಯತ್ಸುರೈಃ ಸರ್ವೈರ್ಮತ್ಪ್ರಸಾದಾಲ್ಲಭಿಷ್ಯಥ ॥ ೪೩ ॥
ಇತಿ ತೇ ಬ್ರಾಹ್ಮಣಾ ರಾಜಂಲ್ಲಬ್ಧ್ವಾ ವರಮನುತ್ತಮಂ ।
ಗಮಿಷ್ಯಂತಃ ಪ್ರೀತಚಿತ್ತಾ ದದೃಶುಶ್ಚಿತ್ರಮದ್ಭುತಂ ॥ ೪೪ ॥

---

೩೯. ನರ್ಮದಾನದಿಯ ನೀರಿನಿಂದ ಮಿಂದು ಈ ಸ್ತೋತ್ರವನ್ನು ಯಾವಾಗಲೂ ಜಪಿಸುವವರಿಗೆ ಈ ಉತ್ತಮ ನದಿಯು ಅವಸಾನಕಾಲದಲ್ಲಿ ಶೀಘ್ರವಾಗಿ ಪವಿತ್ರವಾದ ಗತಿಯನ್ನೀಯುವುದು.

೪೦. ಪ್ರತಿದಿನವೂ ಬೆಳಗ್ಗೆ ಎದ್ದಕೂಡಲೆ ಮತ್ತು ಮಲಗುವಾಗಲೂ ಈ ಉತ್ತಮ ಸ್ತೋತ್ರವನ್ನು ಹೇಳುವವನಾನವನಿಗೆ ನರ್ಮದೆಯು ತನ್ನ ನೀರಿನಲ್ಲಿ ಶರೀರವು ನಾಶವಾಗುವಂತೆ ಮಾಡುವಳು.

೪೧. ಅವರು ಪಾಪಮುಕ್ತರಾಗಿ, ದೇವಲೋಕದಲ್ಲಿ ಆನಂದಗೊಳ್ಳುತ್ತ ಸುಖವನ್ನನುಭವಿಸುವರು. ಇದು ವ್ಯತ್ಯಾಸಗೊಳ್ಳುವುದಿಲ್ಲ

೪೨–೪೪. ದಕ್ಷಿಣಾಪಥದಲ್ಲಿ ಹರಿಯುವ ನರ್ಮದಾನದಿಯು ಬ್ರಾಹ್ಮಣರ ಈ ಸ್ತೋತ್ರದಿಂದ ಪ್ರಸನ್ನಳಾಗಿ ತನ್ನ ನೀರಿನಿಂದ ಸುಖಗೊಂಡ ಅವರನ್ನು ಕುರಿತು, "ಯೋಗಿಗಳಿಗೂ, ದೇವತೆಗಳಿಗೂ ದುರ್ಲಭವಾದ ಮೋಕ್ಷವನ್ನು ನಿಮಗೆ ಕೊಡುವೆನು. ನೀವು ನನ್ನ ಅನುಗ್ರಹದಿಂದ ಅದನ್ನು ಪಡೆಯುವಿರಿ" ಎಂದಳು. ಅರಸ! ಬ್ರಾಹ್ಮಣರು ಹೀಗೆ ಉತ್ತಮವಾದ ವರವನ್ನುಪಡೆದು ಸಂತೋಷಗೊಂಡು ಹೋಗುತ್ತ ಆಶ್ಚರ್ಯಕರವಾದ ಒಂದು ವಿಷಯವನ್ನು ಕಂಡರು.

ಶ್ರೀ ಮಾರ್ಕಂಡೇಯ ಉವಾಚ :—

ದೃಷ್ಟ್ವಾಸ್ತ್ರೈಃ ಪುರುಷಾಃ ಪಾರ್ಥ ನರ್ಮದಾತಟಸಂಸ್ಥಿತಾಃ ।
ಸ್ನಾನದೇವಾರ್ಚನಾಸಕ್ತಾಃ ಪಂಚ ಏವ ಮಹಾಬಲಾಃ ॥ ೪೫ ॥
ತೇ ದೃಷ್ಟ್ವಾ ಬ್ರಾಹ್ಮಣೈಃ ಸರ್ವೈರ್ವೇದವೇದಾಂಗಪಾರಗೈಃ ।
ಸಂಪೃಷ್ಟಾಸ್ತ್ರೈರ್ಮಹಾರಾಜ ಯಥಾ ತದವಧಾರಯ ॥ ೪೬ ॥

ವಿಪ್ರಾ ಊಚುಃ :—

ವನಾಂತೇ ಸ್ತ್ರೀಯುಗಂ ದೃಷ್ಟ್ವಾ ಮಹಾರೌದ್ರಂ ಭಯಾವಹಂ ।
ವೃದ್ಧಾಶ್ಚ ಪುರುಷಾಸ್ತತ್ರ ಪಾಶಹಸ್ತಾ ಭಯಾವಹಾಃ ॥ ೪೭ ॥
ದುರ್ಧರ್ಷಾ ದುರ್ನಿರೀಕ್ಷ್ಯಾಶ್ಚ ಇತಶ್ಚೇತಶ್ಚ ಚಂಚಲಾಃ ।
ವ್ಯಾಹರಂತಃ ಶುಭಾಂ ವಾಚಂ ನ ತತ್ರ ಗತಿರಸ್ತಿ ವೈ ॥ ೪೮ ॥
ಅಪರಸ್ಪರಯೋಃ ಸರ್ವೇ ನಿರೀಕ್ಷಂತಃ ಪುನಃ ಪುನಃ ।
ತೈಸ್ತು ಯದ್ವಚನಂ ಪ್ರೋಕ್ತಂ ತತ್ಸರ್ವಂ ಕಥ್ಯತಾಮಿತಿ ॥ ೪೯ ॥
ಅಸ್ಮಾಕಂ ಪುರುಷಾಃ ಪಂಚ ತಿಷ್ಠಂತಿ ತತ್ರ ಸತ್ತಮಾಃ ।
ತೇ ಪ್ರಸ್ಥಾಪ್ಯಾ ಮಹಾಭಾಗಾಃ ಸರ್ವಥೈವ ತ್ವರಾನ್ವಿತಾಃ ॥ ೫೦ ॥

---

೪೫. ಶ್ರೀ ಮಾರ್ಕಂಡೇಯನು ಹೇಳುತ್ತಾನೆ :—ಆ ಬ್ರಾಹ್ಮಣರು ನರ್ಮದಾ ನದಿಯ ದಡದಲ್ಲಿ ಸ್ನಾನದೇವಾರ್ಚನೆಗಳಲ್ಲಿ ಆಸಕ್ತರೂ, ಮಹಾಬಲಿಷ್ಠರೂ ಆದ ಐದು ಜನರನ್ನು ನೋಡಿದರು.

೪೬. ಮಹಾರಾಜ! ವೇದವೇದಾಂಗ ಪಾರಂಗತರಾದ ಆ ಬ್ರಾಹ್ಮಣರು ಅವರನ್ನು ನೋಡಿ ಹೇಗೆ ಪ್ರಶ್ನೆಮಾಡಿದರೆಂಬುದನ್ನು ತಿಳಿ.

೪೭–೪೮. ವಿಪ್ರರು ಹೇಳುತ್ತಾರೆ :—ನಾವು ಕಾಡಿನ ಕೊಟ್ಟಕೊನೆಯಲ್ಲಿ ಭಯಂಕರವಾದ ಇಬ್ಬರು ಸ್ತ್ರೀಯರನ್ನೂ, ವೃದ್ಧರೂ, ಪಾಶವನ್ನು ಹಿಡಿದವರೂ, ಭಯಂಕರರೂ, ನೋಡಲಾಗದವರೂ, ತಿರಸ್ಕರಿಸಲಾಗದವರೂ, ಇಲ್ಲಿ ಅಲ್ಲಿ ತಿರುಗುತ್ತಿರುವವರೂ, ಅಲ್ಲಿ ಹೋಗಲಾಗದೆಂದು ಹೇಳುತ್ತಿರುವವರೂ ಆದ ಕೆಲವು ಪುರುಷರನ್ನೂ ನೋಡಿದೆವು.

೪೯. ಅದನ್ನು ಕೇಳಿ ಪಂಚಪುರುಷರು ಒಬ್ಬರನ್ನೊಬ್ಬರು ಸಂಬಂಧವಿಲ್ಲದೆ ನೋಡುತ್ತ, "ಆ ಪುರುಷರು ಏನು ಹೇಳಿದರೆಂಬುದನ್ನು ನಮಗೆ ಹೇಳಿರಿ" ಎಂದರು.

೫೦. ಬ್ರಾಹ್ಮಣರು "ನಮಗೆ ಸಂಬಂಧಪಟ್ಟ ಮಹಾಭಾಗರಾದ ಐದು ಮಂದಿ ಪುರುಷರು ಅಲ್ಲಿರುವರು. ನೀವು ಅಲ್ಲಿಗೆ ಶೀಘ್ರವಾಗಿ ಹೋಗಿರಿ" ಎಂದಿರುವರು ಎಂದು ನುಡಿದರು.

ಅಥ ತೇ ಪುರುಷಾಃ ಪಂಚ ಶ್ರುತ್ವಾ ವಾಕ್ಯಮಿದಂ ಶುಭಂ ।
ಪರಸ್ಪರಂ ನಿರೀಕ್ಷಂತೋ ವದಂತಿ ಚ ಪುನಃ ಪುನಃ ॥ ೫೧ ॥
ಕ್ವ ತೇ ಕಸ್ಯ ಕುತೋ ಯಾತಾಃ ಕಿಮುಕ್ತಂ ತೈರ್ಭಯಾವಹೈಃ ॥ ೫೨ ॥

ಪುರುಷಾ ಊಚುಃ:—

ತೀರ್ಥಾವಗಾಹನಂ ಸರ್ವೈಃ ಪೂರ್ವದಕ್ಷಿಣಪಶ್ಚಿಮೈಃ ।
ಉತ್ತರೈಶ್ಚ ಕೃತಂ ಭಕ್ತ್ಯಾ ನ ಪಾಪಂ ತೈರ್ವ್ಯಪೋಹಿತಂ ॥ ೫೩ ॥
ನಿಷ್ಪಾಪಾಶ್ಚಾಽಥ ಸಂಜಾತಾಸ್ತೀರ್ಥಸ್ಯಾಸ್ಯ ಪ್ರಭಾವತಃ ।
ಶೃಣ್ವಂತು ಋಷಯಃ ಸರ್ವೇ ವಹ್ನಿಕಾಲೋಪಮಾ ದ್ವಿಜಾಃ ॥ ೫೪ ॥
ಪಾತಕಾನಿ ಚ ಘೋರಾಣಿ ಯಾನ್ಯಚಿಂತ್ಯಾನಿ ದೇಹಿನಾಂ ।
ಪಾಪಿಷ್ಠೇನ ತು ಚೈಕೇನ ಗುರುದಾರಾ ನಿಷೇವಿತಾ ॥ ೫೫ ॥
ಹೃತಂ ಚಾಽನ್ಯೇನ ಮಿತ್ರಸ್ವಂ ಸುವರ್ಣಂ ಚ ಧನಂ ತಥಾ ।
ಬ್ರಹ್ಮಹತ್ಯಾ ಮಹಾರೌದ್ರಾ ಕೃತಾಚಾಽನ್ಯೇನ ಪಾತಕಂ ॥ ೫೬ ॥
ಸುರಾಪಾನಂ ತು ಚಾನ್ಯಸ್ಯ ಸಂಜಾತಂ ಚಾಪ್ಯಕಾಮತಃ ।
ಗೋವಧ್ಯಾಚಾಪ್ಯಕಾಮೇನ ಕೃತಾ ಚೈಕೇನ ಪಾಪಿನಾ ॥ ೫೭ ॥
ಅಕಾಮತೋಽಪಿ ಸರ್ವೇಷಾಂ ಪಾತಕಾನಿ ನರಾಧಿಪ ।
ಬ್ರಾಹ್ಮಣಾನಾಂ ತು ತೇ ಶ್ರುತ್ವಾ ವಾಕ್ಯಂ ತದ್ವಿಸ್ಮಯಾನ್ವಿತಾಃ ॥ ೫೮ ॥

---

೫೧. ಬಳಿಕ ಆ ಪಂಚಪುರುಷರು ಶುಭಕರವಾದ ಈ ಮಾತನ್ನು ಕೇಳಿ ಪರಸ್ಪರ ನೋಡುತ್ತ ಹೀಗೆಂದರು.

೫೨. "ಅವರೆಲ್ಲಿರುವರು? ಯಾರ ಸಂಬಂಧೀಕರು? ಎಲ್ಲಿಗೆ ಹೋದರು? ಭಯಂಕರರಾದ ಅವರು ಏನನ್ನು ಹೇಳಿದರು?" ಎಂದು ಕೇಳಿದರು.

೫೩–೫೪. ಪುರುಷರು ಹೇಳುತ್ತಾರೆ —ಅಗ್ನಿಯಮರಂತಿರುವ ಬ್ರಹ್ಮರ್ಷಿಗಳೆ! ಕೇಳಿರಿ. ಅವರೆಲ್ಲರೂ ಪೂರ್ವ, ದಕ್ಷಿಣ, ಪಶ್ಚಿಮ, ಉತ್ತರ ತೀರ್ಥಗಳಲ್ಲಿ ಮಿಂದರೂ ಅವರ ಪಾಪವು ತೊಲಗಲಿಲ್ಲ. ಬಳಿಕ ಈ ತೀರ್ಥದ ಪ್ರಭಾವದಿಂದ ಪಾಪರಹಿತರಾದರು.

೫೫–೫೬. ಮಾನವರಿಗೆ ಯಾವ ಪಾಪಗಳು ಘೋರವೂ, ಅಚಿಂತ್ಯವೂ ಆಗಿರುವವೂ, ಅವುಗಳಲ್ಲಿ ಗುರುಪತ್ನೀಗಮನರೂಪವಾದ ಒಂದನ್ನು ಒಬ್ಬನು ಮಾಡಿರುವನು. ಮತ್ತೊಬ್ಬನು ಮಿತ್ರನ ಚಿನ್ನವನ್ನೂ ದ್ರವ್ಯವನ್ನೂ ಅಪಹರಿಸಿದನು. ಇನ್ನೊಬ್ಬನು ಭಯಂಕರವಾದ ಬ್ರಹ್ಮಹತ್ಯೆಯನ್ನೆಸಗಿರುವನು.

೫೭. ಇನ್ನೊಬ್ಬನಿಗೆ ಇಚ್ಛೆಯಿಲ್ಲದೆ ಸುರಾಪಾನ ದೋಷವುಂಟಾಯಿತು. ಮತ್ತೊಬ್ಬನು ತಿಳಿಯದೆ ಗೋವನ್ನು ಕೊಂದನು.

೫೮. ಎಲ್ಲರಿಗೂ ಇಚ್ಛೆಯಿಲ್ಲದೆ ಪಾಪಗಳುಂಟಾಗಿರುವುವು. ಆ ಪಂಚಪುರುಷರು ಬ್ರಾಹ್ಮಣರ ಆ ಮಾತನ್ನುಕೇಳಿ ಆಶ್ಚರ್ಯಗೊಂಡರು.

ಸದ್ಯ ಏವ ತದಾ ಜಾತಾಃ ಪಾಪಿಷ್ಠಾ ಗತಕಲ್ಮಷಾಃ ।
ತೀರ್ಥಸ್ಯಾಸ್ಯ ಪ್ರಭಾವೇನ ನರ್ಮದಾಯಾಃ ಪ್ರಭಾವತಃ ॥ ೫೯ ॥
ನಕ್ವಚಿತ್ಪಾತಕಾನಾಂ ತು ಪ್ರವೇಶಶ್ಚಾಽತ್ರಜಾಯತೇ ।
ಏವಂ ಸಂಚಿಂತ್ಯ ತೇ ಸರ್ವೇ ಪಾಪಿಷ್ಠಾಶ್ಚ ಪರಸ್ಪರಂ ॥ ೬೦ ॥
ಚಿತ್ರಭಾನುಃ ಸ್ಮೃತಸ್ತೈಸ್ತು ವಿಚಿಂತ್ಯ ಹೃದಯೇ ಹರಿಂ ।
ಸ್ನಾತ್ವಾ ರೇವಾಜಲೇ ಪುಣ್ಯೇ ತರ್ಪಿತಾಃ ಪಿತೃದೇವತಾಃ ॥ ೬೧ ॥
ನತ್ವಾ ತು ಭಾಸ್ಕರಂ ದೇವಂ ಹೃದಿ ಧ್ಯಾತ್ವಾ ಜನಾರ್ದನಂ ।
ಪ್ರದಕ್ಷಿಣಂ ತು ತಂ ಭಕ್ತ್ಯಾ ಜ್ವಲಂತಂ ಜಾತವೇದಸಂ ॥ ೬೨ ॥
ಪತಿತಾಃ ಪಾಂಡವಶ್ರೇಷ್ಠ ಪಾಪ್ಪೋದ್ವಿಗ್ನಾ ಮಹೀಪತೇ ।
ಸಾತ್ವಿಕೀಂ ವಾಸನಾಂ ಕೃತ್ವಾ ತ್ಯಕ್ತ್ವಾ ರಜಸ್ತಮಸ್ತಥಾ ॥ ೬೩ ॥
ಹತಂ ತೈಃ ಪಾವಕೇ ಸರ್ವಂ ರೇವಾಯಾ ಉತ್ತರೇ ತಟೇ ।
ವಿಮಾನಸ್ಥಾಸ್ತದಾ ದೃಷ್ಟ್ವಾ ಬ್ರಾಹ್ಮಣೈಸ್ತೇ ಯುಧಿಷ್ಠಿರ ॥ ೬೪ ॥
ಆಶ್ಚರ್ಯಮತುಲಂ ದೃಷ್ಟ್ವಮೃಷಿಭಿರ್ನರ್ಮದಾತಟೇ ।
ತದಾ ಪ್ರಭೃತಿ ತೇ ಸರ್ವೇ ರಾಗದ್ವೇಷವಿವರ್ಜಿತಾಃ ॥ ೬೫ ॥
ರವಿತೀರ್ಥಂ ದ್ವಿಜಾ ದೃಷ್ಟ್ವಾಃ ಸೇವಂತೇ ಮೋಕ್ಷಕಾಂಕ್ಷಯಾ ।
ತೀರ್ಥಸ್ಯಾಽಸ್ಯ ಚ ಯತ್ಪುಣ್ಯಂ ತಚ್ಛೃಣುಷ್ವ ನರಾಧಿಪ ॥ ೬೬ ॥

---

೫೯. ಕೂಡಲೆ ಆ ಪಾಪಿಗಳು ಈ ತೀರ್ಥದ ಮತ್ತು ನರ್ಮದಾನದಿಯ ಪ್ರಭಾವದಿಂದ ಪಾಪರಹಿತರಾದರು.

೬೦–೬೧. ಪಾಪಿಷ್ಠರಾದ ಅವರೆಲ್ಲರೂ ಇಲ್ಲಿ ಪಾಪಗಳಿಗೆ ಪ್ರವೇಶವಿಲ್ಲವೆಂದಾಲೋಚಿಸಿ ಹರಿಯನ್ನು ಧ್ಯಾನಿಸುತ್ತ ಅಗ್ನಿಯನ್ನು ಸ್ಮರಿಸಿ ಪುಣ್ಯಕರವಾದ ನರ್ಮದಾ ಜಲದಲ್ಲಿ ಮಿಂದು ಪಿತೃದೇವತೆಗಳಿಗೆ ತರ್ಪಣಮಾಡಿದರು.

೬೨–೬೩. ಅವರು ಸೂರ್ಯನನ್ನು ವಂದಿಸಿ ಹರಿಯನ್ನು ಸ್ಮರಿಸಿ ಉರಿಯುತ್ತಿರುವ ಅಗ್ನಿಯನ್ನು ಭಕ್ತಿಯಿಂದ ಪ್ರದಕ್ಷಿಣೆಗೈದು ರಜಸ್ತಮೋಗುಣಗಳನ್ನು ತ್ಯಜಿಸಿ ಸಾತ್ವಿಕರಾಗಿ ಆ ಅಗ್ನಿಯಲ್ಲಿ ಬಿದ್ದರು.

೬೪. ರೇವಾನದಿಯ ಉತ್ತರತೀರದಲ್ಲಿ ಅವರ ಪಾಪವೆಲ್ಲವೂ ಪರಿಹಾರವಾಯಿತು. ಆ ಬ್ರಾಹ್ಮಣರು ವಿಮಾನದಲ್ಲಿ ಕುಳಿತಿರುವ ಅವರನ್ನು ನೋಡಿದರು.

೬೫–೬೬. ನರ್ಮದಾತಟದಲ್ಲಿ ದ್ವಿಜರು ಆ ಆಶ್ಚರ್ಯವನ್ನು ನೋಡಿ ಅದು ಮೊದಲ್ಗೊಂಡು ರಾಗದ್ವೇಷರಹಿತರಾಗಿ ಮೋಕ್ಷಾಪೇಕ್ಷೆಯಿಂದ ಆ ನದಿಯನ್ನು ಸಂತೋಷದಿಂದ ಸೇವಿಸುತ್ತಿದ್ದರು. ದೊರೆಯೆ! ಈ ತೀರ್ಥದಲ್ಲಿ ಉಂಟಾಗುವ ಪುಣ್ಯವನ್ನು ಕೇಳು.

ಪೀಡಿತೋ ವೃದ್ಧಭಾವೇನ ಭಕ್ತ್ಯಾ ಪ್ರೀತೋ ನರೇಶ್ವರ ।
ಉದ್ದೇಶಂ ಕಥಯಿಷ್ಯಾಮಿ ದ್ವಿಕೋಶಾಭ್ಯಂತರೇ ಸ್ಥಿತಃ ॥ ೬೭ ॥
ಕುರುಕ್ಷೇತ್ರಂ ಯಥಾ ಪುಣ್ಯಂ ರವಿತೀರ್ಥಂ ಶ್ರುತಂ ಮಯಾ ।
ಈಶ್ವರೇಣ ಪುರಾಖ್ಯಾತಂ ಷಣ್ಮುಖಸ್ಯ ನರಾಧಿಪ ॥ ೬೮ ॥
ಶ್ರುತಂ ರುದ್ರಾಚ್ಚ ತೈಃ ಸರ್ವೈರಹಂ ತತ್ರ ಸಮೀಪಗಃ ॥ ೬೯ ॥
ಈಶ್ವರ ಉವಾಚ :—
ಮಾರ್ತಂಡಗ್ರಹಣೇ ಪ್ರಾಪ್ತೇ ಯೇ ವ್ರಜಂತಿ ಷಡಾನನ ।
ರವಿತೀರ್ಥೇ ಕುರುಕ್ಷೇತ್ರೇ ತುಲ್ಯಮೇತತ್ಫಲಂ ಲಭೇತ್ ।
ಸ್ನಾನೇ ದಾನೇ ತಥಾ ಜಪ್ಯೇ ಹೋಮೇ ಚೈವ ವಿಶೇಷತಃ ।
ಕುರುಕ್ಷೇತ್ರೇ ಸಮಂ ಪುಣ್ಯಂ ನಾಽತ್ರ ಕಾರ್ಯಾ ವಿಚಾರಣಾ ॥ ೭೦ ॥
ಗ್ರಾಮೇ ವಾ ಯದಿವಾಽರಣ್ಯೇ ಪುಣ್ಯಾ ಸರ್ವತ್ರ ನರ್ಮದಾ ।
ರವಿತೀರ್ಥೇ ವಿಶೇಷೇಣ ರೇವಾ ಪುಣ್ಯಫಲಪ್ರದಾ ॥ ೭೧ ॥
ಷಷ್ಠ್ಯಾಂ ಸೂರ್ಯದಿನೇ ಭಕ್ತ್ಯಾ ವ್ಯತೀಪಾತೇ ಚ ವೈಧೃತೌ ।
ಸಂಕ್ರಾಂತೌ ಗ್ರಹಣೇಽಮಾಯಾಂ ಯೇ ವ್ರಜಂತಿ ಜಿತೇಂದ್ರಿಯಾಃ॥ ೭೨ ॥
ಕಾಮಕ್ರೋಧೈರ್ವಿಮುಕ್ತಾಶ್ಚ ರಾಗದ್ವೇಷೈಸ್ತಥೈವ ಚ ।
ಉಪೋಷ್ಯ ಪರಯಾ ಭಕ್ತ್ಯಾ ದೇವಸ್ಯಾಗ್ರೇ ನರಾಧಿಪ ॥ ೭೩ ॥

---

೬೭. ದೊರೆಯೆ ! ನಾನು ವಾರ್ಧಕ್ಯಪೀಡಿತನಾಗಿದ್ದರೂ ನಿನ್ನ ಭಕ್ತಿಯಿಂದ ಪ್ರೀತನಾಗಿ ನಾಲ್ಕುಮೈಲಿಯ ದೂರದಲ್ಲಿರುವ ಪ್ರದೇಶವನ್ನು ಹೇಳುತ್ತೇನೆ.

೬೮. ಹಿಂದೆ ಈಶ್ವರನು ಸ್ಕಂದನಿಗೆ ಕುರುಕ್ಷೇತ್ರದಂತೆಯೇ ಸೂರ್ಯಕ್ಷೇತ್ರವು ಪುಣ್ಯಕರವಾದುದೆಂದು ಹೇಳಿದ್ದನ್ನು ಕೇಳಿದ್ದೇನೆ.

೬೯. ಸ್ಕಂದನೇ ಮೊದಲಾದವರೆಲ್ಲರೂ ರುದ್ರನಿಂದ ಈ ವಿಷಯವನ್ನೇ ಕೇಳಿದರು. ನಾನು ಆಗ ಹತ್ತಿರದಲ್ಲಿದ್ದೆನು.

೭೦. ಈಶ್ವರನು ಹೇಳುತ್ತಾನೆ —ಸೂರ್ಯಗ್ರಹಣಕಾಲದಲ್ಲಿ ರವಿತೀರ್ಥಕ್ಕೆ ಹೋದವರಿಗೆ ಕುರುಕ್ಷೇತ್ರದಂತೆಯೇ ಫಲವುಂಟಾಗುವುದು. ಸ್ನಾನ ದಾನ, ಜಪ, ಹೋಮ ಇವುಗಳಿಂದ ಕುರುಕ್ಷೇತ್ರದಂತೆಯೇ ಇಲ್ಲಿ ಪುಣ್ಯವುಂಟಾಗುವುದು. ಈ ವಿಷಯದಲ್ಲಿ ವಿಚಾರವಿಲ್ಲ.

೭೧–೭೨. ನರ್ಮದಾನದಿಯು ಗ್ರಾಮದಲ್ಲಾಗಲಿ, ಅರಣ್ಯದಲ್ಲಾಗಲಿ ಎಲ್ಲೆಡೆಯಲ್ಲಿಯೂ ಪುಣ್ಯಕರವಾಗಿರುವುದು. ಆದು ಭಾನುವಾರ, ಷಷ್ಠೀ, ವ್ಯತೀಪಾತ, ವೈಧೃತಿ, ಸಂಕ್ರಾಂತಿ, ಗ್ರಹಣ, ಅಮಾವಾಸ್ಯೆಗಳಲ್ಲಿ ಜಿತೇಂದ್ರಿಯರಾಗಿ ರವಿತೀರ್ಥಕ್ಕೆ ಹೋದವರಿಗೆ ಅತಿಶಯಪುಣ್ಯವನ್ನು ಕೊಡುವುದು.

೭೩–೭೪. ಕಾಮ, ಕ್ರೋಧ, ರಾಗ, ದ್ವೇಷ ಇವುಗಳನ್ನು ತ್ಯಜಿಸಿ

ರಾತ್ರೌ ಜಾಗರಣಂ ಕೃತ್ವಾ ದೀಪಂ ದೇವಸ್ಯ ಬೋಧಯೇತ್ ।
ಕಥಾಂ ವೈ ವೈಷ್ಣವೀಂ ಪಾರ್ಥ ವೇದಾಭ್ಯಸನಮೇವ ಚ ॥ ೭೪ ॥
ಋಗ್ವೇದಂ ವಾ ಯಜುರ್ವೇದಂ ಸಾಮವೇದಮಥರ್ವಣಂ ।
ಋಚಮೇಕಾಂ ಜಪೇದ್ಯಸ್ತು ಸ ವೇದಫಲಮಾಪ್ನುಯಾತ್ ॥ ೭೫ ॥
ಗಾಯತ್ರ್ಯಾ ಚ ಚತುರ್ವೇದಫಲಮಾಪ್ನೋತಿ ಮಾನವಃ ।
ಪ್ರಭಾತೇ ಪೂಜಯೇದ್ವಿಪ್ರಾನನ್ನದಾನಹಿರಣ್ಯತಃ ॥ ೭೬ ॥
ಭೂಮಿದಾನೇನ ವಸ್ತ್ರೇಣ ಅನ್ನದಾನೇನ ಶಕ್ತಿತಃ ।
ಛತ್ರೋಪಾನಹಶಯ್ಯಾದಿ ಗೃಹದಾನೇನ ಪಾಂಡವ ॥ ೭೭ ॥
ಗ್ರಾಮಧೂರ್ವಹದಾನೇನ ಗಜಕನ್ಯಾಹಯೇನ ಚ ।
ವಿದ್ಯಾಶಕಟದಾನೇನ ಸರ್ವೇಷಾಮಭಯಂ ಭವೇತ್ ॥ ೭೮ ॥
ಶತ್ರುಶ್ಚ ಮಿತ್ರತಾಂ ಯಾತಿ ವಿಷಂ ಚೈವಾಽಮೃತಂ ಭವೇತ್ ।
ಗ್ರಹಾ ಭವಂತಿ ಸುಪ್ರೀತಾಃ ಪ್ರೀತಸ್ತಸ್ಯ ದಿವಾಕರಃ ॥ ೭೯ ॥
ಏತತ್ತೇ ಸರ್ವಮಾಖ್ಯಾತಂ ರವಿತೀರ್ಥಫಲಂ ನೃಪ ।
ಯೇ ಶೃಣ್ವಂತಿ ನರಾ ಭಕ್ತ್ಯಾ ರವಿತೀರ್ಥಫಲಂ ಶುಭಂ ॥ ೮೦ ॥
ತೇಽಪಿ ಪಾಪವಿನಿರ್ಮುಕ್ತಾ ರವಿಲೋಕೇ ವಸಂತಿ ಹಿ ।
ಗೋದಾನೇ ಚ ಯತ್ಪುಣ್ಯಂ ಯತ್ಪುಣ್ಯಂ ಭೃಗುದರ್ಶನೇ ॥ ೮೧ ॥

---

ಉಪವಾಸಮಾಡಿ ದೇವರ ಮುಂದೆ ರಾತ್ರಿ ದೀಪವನ್ನು ಹೊತ್ತಿಸಿ ಜಾಗರಣೆಗೈದು ವಿಷ್ಣುಕಥೆಯನ್ನು ಬೋಧಿಸಿ ವೇದಪಾರಾಯಣಮಾಡಬೇಕು.

೭೫. ಋಗ್ಯಜುಸ್ಸಾಮಾಥರ್ಣವೇದಗಳ ಒಂದು ಋಕ್ಕನ್ನು ಜಪಿಸಿದವನೂ ಸಮಸ್ತವೇದ ಪಾರಾಯಣಮಾಡಿದ ಫಲವನ್ನು ಪಡೆಯುವನು.

೭೬–೭೮. ನರನು ಗಾಯತ್ರೀಜಪದಿಂದ ನಾಲ್ಕುವೇದಗಳ ಫಲವನ್ನು ಪಡೆಯುವನು. ಬೆಳಗ್ಗೆ ಬ್ರಾಹ್ಮಣರಿಗೆ ಅನ್ನ, ಸುವರ್ಣ, ಭೂಮಿ, ವಸ್ತ್ರ, ಛತ್ರ, ಪಾದರಕ್ಷೆ, ಹಾಸಿಗೆ, ಮನೆ, ಗ್ರಾಮ, ಎತ್ತು, ಆನೆ, ಕನ್ಯೆ, ವಿದ್ಯೆ, ಗಾಡಿ ಇವುಗಳನ್ನು ದಾನಮಾಡಿ ಪೂಜಿಸಬೇಕು. ಇದರಿಂದ ಎಲ್ಲರಿಗೂ ಅಭಯ ವುಂಟಾಗುವುದು.

೭೯. ಶತ್ರುವು ಮಿತ್ರನಾಗುವನು, ವಿಷವು ಅಮೃತವಾಗುವುದು. ಗ್ರಹ ಗಳು ಸಂತುಷ್ಟವಾಗುವುವು. ಸೂರ್ಯನು ಪ್ರೀತನಾಗುವನು.

೮೦–೮೩. ದೊರೆಯೆ! ನಿನಗೆ ಈ ರವಿತೀರ್ಥದ ಫಲವನ್ನೆಲ್ಲ ಹೇಳಿರು ವೆನು. ಈ ರವಿತೀರ್ಥದ ಫಲವನ್ನು ಭಕ್ತಿಯಿಂದ ಶ್ರವಣಮಾಡಿದ ಮಾನವರು ಪಾಪಮುಕ್ತರಾಗಿ ಸೂರ್ಯಲೋಕದಲ್ಲಿ ವಾಸಮಾಡುವರು. ಗೋದಾನ ಮಾಡುವುದರಿಂದಲೂ, ಭೃಗುತೀರ್ಥದ ದರ್ಶನದಿಂದಲೂ, ಕೇದಾರದಲ್ಲಿ ಜಲ

ಕೇದಾರ ಉದಕಂ ಪೀತ್ವಾ ತತ್ಪುಣ್ಯಂ ಜಾಯತೇ ನೃಣಾಂ ।
ಅಬ್ದಮಶ್ವತ್ಥಸೇವಾಯಾಂ ತಿಲಪಾತ್ರಪ್ರದೋ ಭವೇತ್ ॥ ೮೨ ॥
ತತ್ಫಲಂ ಸಮವಾಪ್ನೋತಿ ಆದಿತ್ಯೇಶ್ವರ ಕೀರ್ತನಾತ್ ।
ಶ್ರುತೇ ಯಸ್ಯ ಪ್ರಭಾವೇನ ಜಾಯತೇ ಯನ್ನೃಪಾತ್ಮಜ ॥ ೮೩ ॥
ತತ್ಸರ್ವಂ ಕಥಯಿಷ್ಯಾಮಿ ಭಕ್ತ್ಯಾ ತವ ಮಹೀಪತೇ ।
ಪಾಪಾನಿ ಚ ಪ್ರಲೀಯಂತೇ ಭಿನ್ನಪಾತ್ರೇ ಯಥಾ ಜಲಂ ॥ ೮೪ ॥
ತೀರ್ಥಸ್ಯಾಭಿಮುಖೋ ನಿತ್ಯಂ ಜಾಯತೇ ನಾಽತ್ರ ಸಂಶಯಃ ।
ಗುಹ್ಯಾದ್ಗುಹ್ಯತರಂ ತೀರ್ಥಂ ಕಥಿತಂ ತವ ಪಾಂಡವ ॥ ೮೫ ॥
ಪಾಪಿಷ್ಠಾನಾಂ ಕೃತಘ್ನಾನಾಂ ಸ್ವಾಮಿಮಿತ್ರಾವಘಾತಿನಾಂ ।
ತೀರ್ಥಾಖ್ಯಾನಂ ಶುಭಂ ತೇಷಾಂ ಗೋಪಿತವ್ಯಂ ಸದಾ ಬುಧೈಃ ॥ ೮೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ಆದಿತ್ಯೇಶ್ವರತೀರ್ಥಮಾಹಾತ್ಮ್ಯವರ್ಣನಂ" ನಾಮ ಷಷ್ಟಿತಮೋಽಧ್ಯಾಯಃ

---

ದಾನಮಾಡುವುದರಿಂದಲೂ ಉಂಟಾಗುವ ಫಲವೆಲ್ಲವೂ ಇದರಿಂದ ದೊರಕುವುದು. ಈ ಆದಿತ್ಯೇಶ್ವರನ ನಾಮಸಂಕೀರ್ತನದಿಂದ ಒಂದುವರ್ಷ ಅಶ್ವತ್ಥವೃಕ್ಷವನ್ನು ಸೇವಿಸುವುದರಿಂದಲೂ, ತಿಲಪಾತ್ರೆಯನ್ನು ದಾನಮಾಡುವುದರಿಂದಲೂ ಉಂಟಾಗುವ ಫಲವನ್ನು ಹೊಂದುವನು. ಇದರ ಪ್ರಭಾವವನ್ನು ಶ್ರವಣ ಮಾಡುವುದರಿಂದ ಮಾನವನು ಮತ್ತೆ ಜನಿಸುವುದಿಲ್ಲ.

೮೪. ದೊರೆಯೆ! ಆದ್ದರಿಂದ ನಾನು ಭಕ್ತಿಯಿಂದ ಅದನ್ನೆಲ್ಲ ನಿನಗೆ ಹೇಳುವೆನು. ಅದರಿಂದ ಒಡೆದ ಪಾತ್ರೆಯಲ್ಲಿ ನೀರು ಸುರಿದುಹೋಗುವಂತೆ ಪಾಪಗಳು ಪರಿಹಾರವಾಗುವುವು.

೮೫. ನಿತ್ಯವೂ ತೀರ್ಥಕ್ಕೆ ಅಭಿಮುಖನಾಗುವನು. ಯುಧಿಷ್ಠಿರ! ನಾನು ನಿನಗೆ ಅತಿರಹಸ್ಯವಾದ ತೀರ್ಥವನ್ನು ಹೇಳಿದ್ದೇನೆ.

೮೬. ಪಾಪಿಷ್ಠರೂ, ಕೃತಘ್ನರೂ, ಸ್ವಾಮಿ, ಮಿತ್ರರನ್ನುಕೊಂದವರೂ ಆದ ದುಷ್ಟರಿಗೆ ಬುಧರು ಈ ಶುಭಕರವಾದ ತೀರ್ಥದ ಕಥೆಯನ್ನು ಹೇಳಕೂಡದು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಆದಿತ್ಯೇಶ್ವರತೀರ್ಥಮಾಹಾತ್ಮ್ಯವರ್ಣನ"ವೆಂಬ
ಅರುವತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥೈಕಷಷ್ಟಿತಮೋಽಧ್ಯಾಯಃ

### ಶಕ್ರೇಶ್ವರತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ:—

ತತೋ ಗಚ್ಛೇತ್ಪರಂ ಪುಣ್ಯಂ ನರ್ಮದಾ ದಕ್ಷಿಣೇ ತಟೇ ।
ಶಕ್ರತೀರ್ಥಂ ಸುವಿಖ್ಯಾತಮಶೇಷಾಘವಿನಾಶನಂ ॥ ೧ ॥
ಪುರಾ ಶಕ್ರೇಣ ತತ್ರೈವ ತಪೋ ವೈ ದುರತಿಕ್ರಮಂ ।
ಪ್ರಾರಬ್ಧಂ ಪರಯಾ ಭಕ್ತ್ಯಾ ದೇವಂ ಪ್ರತಿ ಮಹೇಶ್ವರಂ ॥ ೨ ॥
ತತಃ ಸಂತೋಷಿತೋ ದೇವ ಉಮಾಪತಿರ್ನರಾಧಿಪ ।
ದೇವೇಂದ್ರತ್ವಂ ವರಂ ರಾಜ್ಯಂ ದಾನವಾನಾಂ ವಧಂ ದದೌ ॥ ೩ ॥
ಲಬ್ಧಂ ಶಕ್ರೇಣ ನೃಪತೇ ನರ್ಮದಾತೀರ್ಥಭಾವತಃ ।
ತತಃ ಪುಣ್ಯತಮಂ ತೀರ್ಥಂ ಸಂಜಾತಂ ವಸುಧಾತಲೇ ॥ ೪ ॥
ಕಾರ್ತಿಕಸ್ಯ ತು ಮಾಸಸ್ಯ ಕೃಷ್ಣಪಕ್ಷೇ ತ್ರಯೋದಶೀಂ ।
ಉಪೋಷ್ಯ ವೈ ನರೋ ಭಕ್ತ್ಯಾ ಸರ್ವಪಾಪೈಃ ಪ್ರಮುಚ್ಯತೇ ॥ ೫ ॥

---

### ಕನ್ನಡದ ಅನುವಾದ

#### ಶಕ್ರೇಶ್ವರತೀರ್ಥಮಾಹಾತ್ಮ್ಯವರ್ಣನ

೧. ಶ್ರೀ ಮಾರ್ಕಂಡೇಯನು ಹೇಳುತ್ತಾನೆ —ಬಳಿಕ ನರ್ಮದಾನದಿಯ ದಡದಲ್ಲಿರುವುದೂ, ಪ್ರಸಿದ್ಧವೂ, ಸಮಸ್ತ ಪಾಪಗಳನ್ನು ಪರಿಹರಿಸುವುದೂ ಆದ ಶಕ್ರತೀರ್ಥಕ್ಕೆ ಹೋಗಬೇಕು.

೨. ಹಿಂದೆ ಇಂದ್ರನು ಅಲ್ಲಿ ಈಶ್ವರನನ್ನು ಕುರಿತು ಅತಿಭಕ್ತಿಯಿಂದ ಅಸಾಧ್ಯವಾದ ತಪವನ್ನಾಚರಿಸಿದನು.

೩. ಮಹಾರಾಜ! ಬಳಿಕ ಅದರಿಂದ ಸಂತೋಷಗೊಂಡ ಮಹೇಶ್ವರನು ಆ ಇಂದ್ರನಿಗೆ ದೇವಾಧಿಪತ್ಯವನ್ನೂ, ಉತ್ತಮ ರಾಜ್ಯವನ್ನೂ, ದಾನವರ ವಧೆಯನ್ನೂ ವರವನ್ನಾಗಿ ಕೊಟ್ಟನು.

೪. ದೊರೆಯೆ! ಇಂದ್ರನು ನರ್ಮದಾತೀರ್ಥದ ಪ್ರಭಾವದಿಂದ ಇದನ್ನು ಪಡೆದನು. ಬಳಿಕ ಅದು ಭೂಮಿಯಲ್ಲಿ ಪುಣ್ಯಕರವಾದ ತೀರ್ಥವಾಯಿತು.

೫. ಇಲ್ಲಿ ಕಾರ್ತಿಕಮಾಸದ ಕೃಷ್ಣಪಕ್ಷದ ತ್ರಯೋದಶಿಯದಿನ ಭಕ್ತಿಯಿಂದ ಉಪವಾಸ ಮಾಡಿದವನು ಸಕಲ ಪಾಪಗಳಿಂದಲೂ ಮುಕ್ತನಾಗುವನು.

ದುಃಸ್ವಪ್ನಸಂಭವೈಃ ಪಾಪೈರ್ದುರ್ನಿಮಿತ್ತಸಮುದ್ಭವೈಃ ।
ಗ್ರಹಶಾಕಿನಿಸಂಭೂತೈರ್ಮುಚ್ಯತೇ ಪಾಂಡುನಂದನ ॥ ೬ ॥
ಶಕ್ರೇಶ್ವರಂ ನೃಪಶ್ರೇಷ್ಠ ಯೇ ಪ್ರಪಶ್ಯಂತಿ ಭಕ್ತಿತಃ ।
ತೇಷಾಂ ಜನ್ಮಕೃತಂ ಪಾಪಂ ನಶ್ಯತೇ ನಾಽತ್ರ ಸಂಶಯಃ ॥ ೭ ॥
ಅಗಮ್ಯಾಗಮನೇ ಚೈವ ಅವಾಹ್ಯೇ ಚೈವ ವಾಹಿತೇ ।
ಸ್ವಾಮಿಮಿತ್ರ ವಿಘಾತೇ ಯನ್ನಶ್ಯತೇ ನಾಽತ್ರ ಸಂಶಯಃ ॥ ೮ ॥
ಗೋಪ್ರದಾನಂ ಪ್ರಕರ್ತವ್ಯಂ ಶುಭಂ ಬ್ರಾಹ್ಮಣಪುಂಗವೇ ।
ಧುರ್ಯಂ ವಾ ದಾಪಯೇತ್ತಸ್ಮಿನ್ ಸರ್ವಾಂಗರುಚಿರಂ ನೃಪ ॥ ೯ ॥
ದಾತವ್ಯಂ ಪರಯಾ ಭಕ್ತ್ಯಾ ಸ್ವರ್ಗೇ ವಾಸಮಭೀಪ್ಸತಾ ।
ಏತತ್ತೇ ಸರ್ವಮಾಖ್ಯಾತಂ ಶಕ್ರೇಶ್ವರಫಲಂ ನೃಪ ॥ ೧೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ಶಕ್ರೇಶ್ವರತೀರ್ಥಮಾಹಾತ್ಮ್ಯವರ್ಣನಂ"
ನಾಮೈಕಷಷ್ಟಿತಮೋಽಧ್ಯಾಯಃ

---

೬. ಯುಧಿಷ್ಠಿರ! ಮಾನವನು ಇಲ್ಲಿ ದುಸ್ಸ್ವಪ್ನ, ದುಶ್ಶಕುನ, ಪಿಶಾಚ, ಶಾಕಿನಿಗಳಿಂದುಂಟಾದ ತಾಪಗಳಿಂದ ಮುಕ್ತನಾಗುವನು.

೭. ನರೇಂದ್ರ! ಇಲ್ಲಿ ಶಕ್ರೇಶ್ವರನನ್ನು ಭಕ್ತಿಯಿಂದ ದರ್ಶನ ಮಾಡಿದವರ ಹುಟ್ಟಿದ ಮೊದಲ್ಗೊಂಡು ಮಾಡಿದ ಪಾಪವೆಲ್ಲವೂ ಪರಿಹಾರವಾಗುವುದು.

೮. ಅಗಮ್ಯಾನಗಮನ, ವಿವಾಹಾನರ್ಹಳನ್ನು ಮದುವೆಮಾಡಿಕೊಳ್ಳುವುದು, ಸ್ವಾಮಿ, ಮಿತ್ರರ ವಧೆ ಇವುಗಳಿಂದುಂಟಾಗುವ ಪಾಪವು ಪರಿಹಾರವಾಗುವುದು.

೯–೧೦. ಅಲ್ಲಿ ಸ್ವರ್ಗವಾಸವನ್ನು ಬಯಸುವವನು ಉತ್ತಮ ಬ್ರಾಹ್ಮಣನಿಗೆ ಗೋವನ್ನಾಗಲಿ, ಸರ್ವಾಂಗಸುಂದರವಾದ ಎತ್ತನ್ನಾಗಲಿ ಅತಿಭಕ್ತಿಯಿಂದ ದಾನಮಾಡಬೇಕು. ದೊರೆಯೆ! ಈ ಶಕ್ರೇಶ್ವರತೀರ್ಥದ ಮಾಹಾತ್ಮ್ಯವನ್ನು ಸಂಪೂರ್ಣವಾಗಿ ಹೇಳಿರುವೆನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಶಕ್ರೇಶ್ವರತೀರ್ಥಮಾಹಾತ್ಮ್ಯವರ್ಣನ"ವೆಂಬ
ಅರುವತ್ತೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ದ್ವಿಷಷ್ಟಿತಮೋಽಧ್ಯಾಯಃ

## ಕರೋಡೀಶ್ವರತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ತತೋ ಗಚ್ಛೇತ್ತು ರಾಜೇಂದ್ರ ಕರೋಡೀಶ್ವರಮುತ್ತಮಂ ।
ಯತ್ರ ವೈ ನಿಹತಾಸ್ತಾತ ದಾನವಾಃ ಸಪದಾನುಗಾಃ ॥ ೧ ॥
ಇಂದ್ರಾದಿದೇವೈಃ ಸಂಹೃಷ್ಟೈಃ ಸತತಂ ಜಯಬುದ್ಧಿಭಿಃ ।
ತೇಷಾಂ ಯೇ ಪುತ್ರಪೌತ್ರಾಶ್ಚ ಪೂರ್ವವೈರಮನುಸ್ಮರನ್ ॥ ೨ ॥
ಕ್ರುದ್ಧೈರ್ದೇವಸಮೂಹೈಶ್ಚ ದಾನವಾ ನಿಹತಾ ರಣೇ ।
ತೇಷಾಂ ಶಿರಾಂಸಿ ಸಂಗೃಹ್ಯ ಸರ್ವೇ ದೇವಾಃ ಸವಾಸವಾಃ ॥ ೩ ॥
ನಿಕ್ಷಿಪ್ಯ ನರ್ಮದಾತೋಯೇ ಬಂಧುಭಾವಮನುಸ್ಮರನ್ ।
ತತ್ರ ಸ್ನಾತ್ವಾ ಸುರಾಃ ಸರ್ವೇ ಸ್ಥಾಪಯಿತ್ವಾ ಉಮಾಪತಿಂ ॥ ೪ ॥
ಇಂದ್ರೇಣ ಸಹಿತಾಃ ಸರ್ವೇಽಪೂಜಯಂಲ್ಲೋಕಸಿದ್ಧಯೇ ।
ಹೃಷ್ಟಚಿತ್ತಾಃ ಸುರಾಃ ಸರ್ವೇ ಜಗ್ಮುರಾಕಾಶಮಂಡಲಂ ॥ ೫ ॥
ದಾನವಾನಾಂ ಮಹಾಭಾಗ ಸೂದಿತಾ ಕೋಟಿರುತ್ತಮಾ ।
ತದಾ ಪ್ರಭೃತಿ ತತ್ತೀರ್ಥಂ ಕರೋಡೀತಿ ಮಹೀತಲೇ ॥ ೬ ॥

---

## ಕನ್ನಡದ ಅನುವಾದ

### ಕರೋಡೀಶ್ವರತೀರ್ಥಮಾಹಾತ್ಮ್ಯವರ್ಣನ

೧-೫. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:—ರಾಜೇಂದ್ರ! ಬಳಿಕ ಉತ್ತಮವಾದ ಕರೋಡೀಶ್ವರಕ್ಷೇತ್ರಕ್ಕೆ ಹೋಗಬೇಕು. ಅಲ್ಲಿ ಜಯವನ್ನಪೇಕ್ಷಿಸುವವರೂ, ಕ್ರುದ್ಧರೂ ಆದ ಇಂದ್ರಾದಿ ದೇವತೆಗಳು ಪರಿವಾರ ಸಹಿತರಾದ ದಾನವರನ್ನೂ, ಅವರ ಪುತ್ರಪೌತ್ರರನ್ನೂ ಹಿಂದಿನ ದ್ವೇಷವನ್ನು ಸ್ಮರಿಸುತ್ತ ಸಂತೋಷದಿಂದ ಕೊಂದಿರುವರು. ಇಂದ್ರಾದಿ ದೇವತೆಗಳು ಆ ದಾನವರು ತಮಗೆ ಬಂಧುಗಳೆಂಬುದನ್ನು ಜ್ಞಾಪಿಸಿಕೊಂಡು ಆ ದಾನವರ ತಲೆಗಳನ್ನು ಒಟ್ಟುಗೂಡಿಸಿ ನರ್ಮದಾ ಜಲದಲ್ಲಿ ಹಾಕಿ ಅಲ್ಲಿ ಮಿಂದು ಮಹೇಶ್ವರನಿಗೆ ಅಭಿಷೇಕಮಾಡಿ ಪೂಜಿಸಿ ಸಂತೋಷದಿಂದ ಎಲ್ಲರೂ ಆಕಾಶಕ್ಕೆ ತೆರಳಿದರು.

೬-೯. ಅಲ್ಲಿ ದಾನವರನ್ನು ಕೊಂದಿರುವುದರಿಂದ ಅದು ಮೊದಲ್ಗೊಂಡು **ಆ ತೀರ್ಥವು ಭೂಮಿಯಲ್ಲಿ ಕರೋಡಿ ಎಂದು ಪ್ರಖ್ಯಾತವಾಯಿತು. ಆ ಪಾಪ**

ವಿಖ್ಯಾತಂ ತು ತದಾ ಲೋಕೇ ಪಾಪಘ್ನಂ ಪಾಂಡುನಂದನ ।
ಅಷ್ಟಮ್ಯಾಂ ಚ ಚತುರ್ದಶ್ಯಾಮುಭೌ ಪಕ್ಷೌ ಚ ಭಕ್ತಿತಃ ।
ಉಪೋಷ್ಯ ಶೂಲಿನಶ್ಚಾಗ್ರೇ ರಾತ್ರೌ ಕುರ್ವೀತ ಜಾಗರಂ ॥ ೭ ॥
ಸತ್ಕಥಾಪಾಠಸಂಯುಕ್ತೋ ವೇದಾಧ್ಯಯನಸಂಯುತಃ ।
ಪ್ರಭಾತೇ ವಿಮಲೇ ಪ್ರಾಪ್ತೇ ಪೂಜಯೇತ್ತ್ರಿದಶೇಶ್ವರಂ ॥ ೮ ॥
ಪಂಚಾಮೃತೇನ ಸಂಸ್ನಾಪ್ಯ ಶ್ರೀಖಂಡೇನ ಚ ಗುಂಠಯೇತ್ ।
ಶಸ್ತೈಃ ಪಲ್ಲವಪುಷ್ಪೈಶ್ಚ ಪೂಜಯೇತ್ತು ಪ್ರಯತ್ನತಃ ॥ ೯ ॥
ಬಹುರೂಪಂ ಜಪನ್ಮಂತ್ರಂ ದಕ್ಷಿಣಾಶಾಂ ವ್ಯವಸ್ಥಿತಃ ।
ಯಥೋಕ್ತೇನ ವಿಧಾನೇನ ನಾಭಿಮಾತ್ರೇ ಜಲೇ ಕ್ಷಿಪೇತ್ ॥ ೧೦ ॥
ತಿಲಾಂಜಲಿಂ ತು ಪ್ರೇತಾಯ ದಕ್ಷಿಣಾಶಾಮುಪಸ್ಥಿತಃ ।
ಶ್ರಾದ್ಧಂ ತತ್ರೈವ ವಿಪ್ರಾಯ ಕಾರಯೇದ್ವಿಜಿತೇಂದ್ರಿಯಃ ॥ ೧೧ ॥
ವಿಷಮೈರಗ್ರಜಾತೈಶ್ಚ ವೇದಾಭ್ಯಸನತತ್ಪರೈಃ ।
ಗೋಹಿರಣ್ಯೇನ ಸಂಪೂಜ್ಯ ತಾಂಬೂಲೈರ್ಭೋಜನೈಸ್ತಥಾ ॥ ೧೨ ॥
ಭೂಷಣೈಃ ಪಾದುಕಾಭಿಶ್ಚ ಬ್ರಾಹ್ಮಣಾನ್ಪಾಂಡುನಂದನ ।
ಭವೇತ್ಕೋಟಿಗುಣಂ ತಸ್ಯ ನಾಽತ್ರ ಕಾರ್ಯಾ ವಿಚಾರಣಾ ॥ ೧೩ ॥
ತಸ್ಮಿಂಸ್ತೀರ್ಥೇ ತು ಯಃ ಕಶ್ಚಿತ್ತ್ಯಜೇದ್ದೇಹಂ ವಿಧಾನತಃ ।
ತಸ್ಯ ಭವತಿ ಯತ್ಪುಣ್ಯಂ ತಚ್ಛೃಣುಷ್ವ ನರಾಧಿಪ ॥ ೧೪ ॥

---

ವನ್ನು ನಿವಾರಿಸುವ ತೀರ್ಥದಲ್ಲಿ ಎರಡು ಪಕ್ಷಗಳ ಅಷ್ಟಮೀ ಚತುರ್ದಶೀ ದಿನಗಳಲ್ಲಿ ಉಪವಾಸಮಾಡಿ ಈಶ್ವರನ ಮುಂದೆ ರಾತ್ರಿ ಸತ್ಕಥ, ವೇದಾಧ್ಯಯನಗಳಲ್ಲಿ ನಿರತನಾಗಿ ಜಾಗರಣೆಗೈಯ್ದು ಬೆಳಗಾಗಲು ಈಶ್ವರನನ್ನು ಪಂಚಾಮೃತದಿಂದ ಅಭಿಷೇಕಮಾಡಿ ಗಂಧವನ್ನು ಲೇಪಿಸಿ ಉತ್ತಮ ಪಲ್ಲವ, ಫಲ ಪುಷ್ಪಗಳಿಂದ ಅರ್ಚಿಸಬೇಕು.

೧೦–೧೩. ನಾಭಿಮಾತ್ರಜಲದಿಂದ ದಕ್ಷಿಣಾಭಿಮುಖವಾಗಿ ನಿಂತು ಬಹುರೂಪೇತ್ಯಾದಿ ಮಂತ್ರಗಳನ್ನು ಜಪಿಸುತ್ತ ವಿಧಿಯಂತೆ ಪ್ರೇತಕ್ಕೆ ತಿಲತರ್ಪಣ ಮಾಡಿ ಜಿತೇಂದ್ರಿಯನಾಗಿ ವಿಷಮಸಂಖ್ಯೆಯವರೂ, ವೇದಾಭ್ಯಾನನಿರತರೂ ಅತ್ಯುತ್ತಮರೂ ಆದ ಬ್ರಾಹ್ಮಣರಿಂದ ಶ್ರಾದ್ಧಮಾಡಿಸಿ ಆ ಬ್ರಾಹ್ಮಣರಿಗೆ ಗೋವು, ಹಿರಣ್ಯ, ತಾಂಬೂಲ, ಭೋಜನ, ಒಡವೆ, ಪಾದುಕೆಗಳನ್ನಿತ್ತು ಪೂಜಿಸಿದರೆ ಕೋಟಿಯಷ್ಟು ಹೆಚ್ಚು ಪುಣ್ಯವು ಲಭಿಸುವುದು. ಇದರಲ್ಲಿ ವಿಚಾರವಿಲ್ಲ.

೧೪. ದೊರೆಯೆ! ಆ ತೀರ್ಥದಲ್ಲಿ ವಿಧಿಯಿಂದ ದೇಹವನ್ನು ತ್ಯಜಿಸಿದವನಿಗೆ ಉಂಟಾಗುವ ಪುಣ್ಯವನ್ನು ಕೇಳು.

ಯಾವದಸ್ಥೀನಿ ತಿಷ್ಠಂತಿ ಮರ್ತ್ಯಸ್ಯ ನರ್ಮದಾಜಲೇ ।
ತಾವದ್ವಸತಿ ಧರ್ಮಾತ್ಮಾ ಶಿವಲೋಕೇ ಸುದುರ್ಲಭೇ ॥ ೧೫ ॥
ತತಃ ಕಾಲಾಚ್ಚ್ಯುತಸ್ತಸ್ಮಾದಿಹ ಮಾನುಷತಾಂ ಗತಃ ।
ಕೋಟೀ ಧನಪತಿಃ ಶ್ರೀಮಾಂಜಾಯತೇ ರಾಜಪೂಜಿತಃ ॥ ೧೬ ॥
ಸರ್ವಧರ್ಮಸಮಾಯುಕ್ತೋ ಮೇಧಾವೀ ಬೀಜಪುತ್ರಕಃ ।
ವಿಖ್ಯಾತೋ ವಸುಧಾಪೃಷ್ಠೇ ದೀರ್ಘಾಯುರ್ಮಾನವೋ ಭವೇತ್ ॥೧೭॥
ಪುನಃ ಸ್ಮರತಿ ತತ್ತೀರ್ಥಂ ತತ್ರ ಗತ್ವಾ ನೃಪೋತ್ತಮ ।
ಕರೋಡೀಶ್ವರಮಭ್ಯರ್ಚ್ಯ ಪ್ರಾಪ್ನೋತಿ ಪರಮಾಂ ಗತಿಂ ॥ ೧೮ ॥
ಇಂದ್ರ ಚಂದ್ರಯಮೈ ರುದ್ರೈರಾದಿತ್ಯೈರ್ವಸುಭಿಸ್ತಥಾ ।
ವಿಶ್ವೇದೇವೈಸ್ತಥಾ ಸರ್ವೈಃ ಸ್ಥಾಪಿತಸ್ತ್ರಿದಶೇಶ್ವರಃ ॥ ೧೯ ॥
ರೇವಾಯಾ ಉತ್ತರೇ ಕೂಲೇ ಲೋಕಾನಾಂ ಹಿತಕಾಮ್ಯಯಾ ।
ಮಾನವೋ ಭಕ್ತಿಸಂಯುಕ್ತಃ ಪ್ರಾಸಾದಂ ಕಾರಯೇತ್ತು ಯಃ ॥ ೨೦ ॥
ತಸ್ಮಿಂಸ್ತೀರ್ಥೇ ನರಶ್ರೇಷ್ಠ ಸದ್ಗತಿಂ ಸಮವಾಪ್ನುಯಾತ್ ।
ನ್ಯಾಯೋಪಾತ್ತಧನೇನೈವ ದಾರುಪಾಷಾಣಕೇಷ್ಟಕೈಃ ॥ ೨೧ ॥
ಬ್ರಾಹ್ಮಣೈಃ ಕ್ಷತ್ರಿಯೈರ್ವೈಶ್ಯೈಃ ಶೂದ್ರೈಃ ಸ್ತ್ರೀಭಿಶ್ಚ ಶಕ್ತಿತಃ ।
ತೇಽಪಿ ಯಾಂತಿ ನರಾ ಲೋಕೇ ಶಾಂಕರೇ ಸುರಪೂಜಿತೇ ॥ ೨೨ ॥

---

೧೫. ಅವನ ಅಸ್ಥಿಗಳು ಎಷ್ಟರವರೆಗೆ ನರ್ಮದಾನದಿಯ ನೀರಿನಲ್ಲಿರುವುವೊ ಅಷ್ಟರವರೆಗೆ ಧರ್ಮಿಷ್ಠನಾದ ಅವನು ದುರ್ಲಭವಾದ ಶಿವಲೋಕದಲ್ಲಿ ವಾಸ ಮಾಡುತ್ತಾನೆ.

೧೬–೧೭. ಅನಂತರ ಬಹುಕಾಲದಮೇಲೆ ಆ ಲೋಕದಿಂದ ತಪ್ಪಿದವನಾಗಿ ಈ ಲೋಕದಲ್ಲಿ ಮನುಷ್ಯನಾಗಿ ಹುಟ್ಟಿ, ಕೋಟ್ಯಧೀಶನೂ, ಸಂಪತ್ತುಳ್ಳವನೂ, ರಾಜಪೂಜಿತನೂ, ಸಕಲ ಧರ್ಮಗಳಿಂದ ಕೂಡಿದವನೂ, ಬುದ್ಧಿಶಾಲಿಯೂ, ಸಂತತಿಯುಳ್ಳವನೂ, ಪ್ರಸಿದ್ಧನೂ, ದೀರ್ಘಾಯುಷ್ಮಂತನೂ ಆಗುವನು.

೧೮. ಮರಳಿ ಆ ಕರೋಡೀಶ್ವರತೀರ್ಥವನ್ನು ಸ್ಮರಿಸಿ ಅಲ್ಲಿಗೆ ಹೋಗಿ ಆ ಪರಮೇಶ್ವರನನ್ನು ಅರ್ಚಿಸಿ ಉತ್ತಮಗತಿಯನ್ನು ಹೊಂದುವನು.

೧೯–೨೨. ನರ್ಮದಾನದಿಯ ಉತ್ತರದಡದಲ್ಲಿ ಇಂದ್ರ, ಚಂದ್ರ, ಯಮ, ರುದ್ರ, ಆದಿತ್ಯ, ವಸು, ವಿಶ್ವೇದೇವತೆಗಳು ಲೋಕದಹಿತಕ್ಕಾಗಿ ಶಂಕರನನ್ನು ಸ್ಥಾಪಿಸಿದರು. ಆ ಕರೋಡೀಶ್ವರನಿಗೆ ಮನುಷ್ಯನು ಭಕ್ತಿಯಿಂದ ಪ್ರಾಸಾದವನ್ನು ಕಟ್ಟಿಸಿದರೆ ಸದ್ಗತಿಯನ್ನು ಪಡೆಯುವನು. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೂ, ಸ್ತ್ರೀಯರೂ ತಮ್ಮ ಶಕ್ತ್ಯನುಸಾರ ನ್ಯಾಯಾರ್ಜಿತವಾದ ಧನದಿಂದಲೇ ಮರ, ಕಲ್ಲು, ಇಟ್ಟಿಗೆಗಳಿಂದ ಪ್ರಾಸಾದವನ್ನು ಕಟ್ಟಿಸಿದರೆ ಅವರು ದೇವಪೂಜಿತವಾದ ಶಿವಲೋಕಕ್ಕೆ ತೆರಳುವರು.

**ಯಃ ಶೃಣೋತಿ ನರೋ ಭಕ್ತ್ಯಾ ಮಾಹಾತ್ಮ್ಯಂ ತೀರ್ಥಜಂ ನೃಪ ।**
**ತಸ್ಯ ಪಾಪಂ ಪ್ರಣಶ್ಯೇತ ಷಣ್ಮಾಸಾಭ್ಯಂತರಂ ಚ ಯತ್ ॥ ೨೩ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ**
**ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ**
**"ಕರೋಡೀಶ್ವರತೀರ್ಥಮಾಹಾತ್ಮ್ಯವರ್ಣನಂ"**
**ನಾಮ ದ್ವಿಷಷ್ಟಿತಮೋಽಧ್ಯಾಯಃ**

---

೨೩. ದೊರೆಯೆ! ಈ ತೀರ್ಥದ ಮಾಹಾತ್ಮ್ಯವನ್ನು ಭಕ್ತಿಯಿಂದ ಯಾವಾಗಲೂ ಕೇಳಿದವನ ಪಾಪವು ಆರು ತಿಂಗಳಲ್ಲಿಯೇ ಪರಿಹಾರವಾಗುವುದು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಕರೋಡೀಶ್ವರತೀರ್ಥಮಹಾತ್ಮ್ಯವರ್ಣನ"ವೆಂಬ
ಅರುವತ್ತೆರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ತ್ರಿಷಷ್ಟಿತಮೋಽಧ್ಯಾಯಃ

## ಕುಮಾರೇಶ್ವರತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ತತೋ ಗಚ್ಛೇತ್ತು ರಾಜೇಂದ್ರ ಕುಮಾರೇಶ್ವರಮುತ್ತಮಂ ।
ಪ್ರಸಿದ್ಧಂ ಸರ್ವತೀರ್ಥಾನಾಮಗಸ್ತ್ಯೇಶ್ವರ ಸನ್ನಿಧೌ ॥ ೧ ॥
ಷಣ್ಮುಖೇನ ಪುರಾ ತಾತ ಸರ್ವಪಾತಕನಾಶನಂ ।
ಆರಾಧ್ಯ ಪರಯಾ ಭಕ್ತ್ಯಾ ಸಿದ್ಧಿಃ ಪ್ರಾಪ್ತಾ ನರಾಧಿಪ ॥ ೨ ॥
ದೇವ ಸೈನ್ಯಾಧಿಪೋ ಜಾತಃ ಸರ್ವಶತ್ರುನಿಬರ್ಹಣಃ ।
ಉಗ್ರತೇಜಾ ಮಹಾತ್ಮಾಽಸೌ ಸಂಜಾತಸ್ತೀರ್ಥಸೇವನಾತ್ ॥ ೩ ।
ತದಾಪ್ರಭೃತಿ ತತ್ತೀರ್ಥಂ ಸಂಜಾತಂ ನರ್ಮದಾತಟೇ ।
ತತ್ರ ತೀರ್ಥೇ ತು ಯೋ ಗತ್ವಾ ಏಕಚಿತ್ತೋ ಜಿತೇಂದ್ರಿಯಃ ॥ ೪ ॥
ಕಾರ್ತಿಕಸ್ಯ ಚತುರ್ದಶ್ಯಾಮಷ್ಟಮ್ಯಾಂ ಚ ವಿಶೇಷತಃ ।
ಸ್ನಾಪಯೇದ್ಗಿರಿಜಾನಾಥಂ ದಧಿದುಗ್ಧೇನ ಸರ್ಪಿಷಾ ॥ ೫ ।
ಗೀತಂ ತತ್ರ ಪ್ರಕರ್ತವ್ಯಂ ಪಿಂಡದಾನಂ ಯಥಾ ವಿಧಿ ।
ಬ್ರಾಹ್ಮಣೈಃ ಶ್ರೋತ್ರಿಯೈಃ ಪಾರ್ಥ ಷಟ್ಕರ್ಮನಿರತೈಃ ಶುಭೈಃ ॥ ೬ ।

---

## ಕನ್ನಡದ ಅನುವಾದ

### ಕುಮಾರೇಶ್ವರತೀರ್ಥಮಾಹಾತ್ಮ್ಯವರ್ಣನ

೧. ಶ್ರೀ ಮಾರ್ಕಂಡೇಯನು ಹೇಳುತ್ತಾನೆ —ದೊರೆಯೆ! ಬಳಿಕ ಸಕಲ ತೀರ್ಥಗಳಲ್ಲಿಯೂ ಪ್ರಸಿದ್ಧವಾದ ಅಗಸ್ತ್ಯೇಶ್ವರನ ಬಳಿಯಿರುವ ಕುಮಾರೇಶ್ವ ನೆಡೆಗೆ ಹೋಗಬೇಕು.

೨. ವತ್ಸ! ಹಿಂದೆ ಷಣ್ಮುಖನು ಸಕಲ ಪಾಪಗಳನ್ನೂ ನಾಶಮಾಡುವ ಈ ಕುಮಾರೇಶ್ವರನನ್ನು ಅತಿಭಕ್ತಿಯಿಂದ ಆರಾಧಿಸಿ ಸಿದ್ಧಿಯನ್ನು ಹೊಂದಿರುವನು

೩. ಈ ತೀರ್ಥದ ಸೇವನೆಯಿಂದ ಸ್ಕಂದನು ದೇವಸೈನ್ಯಾಧಿಪನೂ, ಸಕಲ ಶತ್ರುನಾಶಕನೂ, ಕಠಿನವಾದ ತೇಜಸ್ಸುಳ್ಳವನೂ, ಮಹಾತ್ಮನೂ ಆದನು.

೪–೭. ಅದು ಮೊದಲ್ಗೊಂಡು ನರ್ಮದಾತಟದಲ್ಲಿ ಆ ತೀರ್ಥವುಂಟಾ ಯಿತು. ಕಾರ್ತಿಕಮಾಸದ ಅಷ್ಟಮೀ ಚತುರ್ದಶೀ ದಿನಗಳಲ್ಲಿ ನರನ ಒಮ್ಮನಸ್ಸುಳ್ಳವನೂ, ಜಿತೇಂದ್ರಿಯನೂ ಆಗಿ ಆ ತೀರ್ಥಕ್ಕೆ ಹೋಗಿ ಹಾಲು ಮೊಸರು, ತುಪ್ಪಗಳಿಂದ ಶಂಕರನಿಗೆ ಅಭಿಷೇಕಮಾಡಬೇಕು. ಮತ್ತು ಸಂಗೀ

ಯತ್ಕಿಂಚಿದ್ದೀಯತೇ ತತ್ರ ಅಕ್ಷಯಂ ಪಾಂಡುನಂದನ ।
ಸರ್ವತೀರ್ಥಮಯಂ ತೀರ್ಥಂ ನಿರ್ಮಿತಂ ಶಿಖಿನಾ ನೃಪ ॥ ೭ ॥
ಏತತ್ತೇ ಸರ್ವಮಾಖ್ಯಾತಂ ಕುಮಾರೇಶ್ವರಜಂ ಫಲಂ ।
ಕುಮಾರದರ್ಶನಾತ್ಪುಣ್ಯಂ ಪ್ರಾಪ್ಯತೇ ಪಾಂಡುನಂದನ ॥ ೮ ॥
ಮೃತಃ ಸ್ವರ್ಗಮವಾಪ್ನೋತಿ ಸತ್ಯಮೀಶ್ವರಭಾಷಿತಂ ॥ ೯ ॥

ಇತೀ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ಕುಮಾರೇಶ್ವರತೀರ್ಥಮಾಹಾತ್ಮ್ಯವರ್ಣನಂ"
ನಾಮ ತ್ರಿಷಷ್ಟಿತಮೋಽಧ್ಯಾಯಃ

---

ವನ್ನು ಹಾಡಿ ವಿಧಿಯಂತೆ ಪಿಂಡಪ್ರದಾನಮಾಡಬೇಕು. ಷಟ್ಕರ್ಮನಿರತವಾದ ಶ್ರೋತ್ರಿಯಬ್ರಾಹ್ಮಣರು ಅಲ್ಲಿ ಕೊಟ್ಟ ಅಲ್ಪವಸ್ತುವೂ ಅಕ್ಷಯವಾಗುವುದು. ಇಂತಹ ಸಕಲ ತೀರ್ಥರೂಪವಾದ ತೀರ್ಥವನ್ನು ಸ್ಕಂದನು ನಿರ್ಮಿಸಿರುವನು.

೮–೯. ನಿನಗೆ ಈ ಕುಮಾರೇಶ್ವರನಿಂದಾಗುವ ಫಲವನ್ನೆಲ್ಲ ಹೇಳಿದ್ದೇನೆ. ಕುಮಾರ ದರ್ಶನದಿಂದಲೂ ಪುಣ್ಯವು ಲಭಿಸುವುದು. ಅಂತಹ ಮಾನವನು ಮಡಿದು ಸ್ವರ್ಗವನ್ನು ಹೊಂದುವನು ಈ ಶಂಕರನ ಮಾತು ನಿಶ್ಚಯವಾದುದು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಕುಮಾರೇಶ್ವರತೀರ್ಥಮಾಹಾತ್ಮ್ಯವರ್ಣನ"ವೆಂಬ
ಅರುವತ್ತಮೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಚತುಃಷಷ್ಠಿತಮೋಽಧ್ಯಾಯಃ

### ಅಗಸ್ತ್ಯೇಶ್ವರತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ತತೋ ಗಚ್ಛೇತ್ತು ರಾಜೇಂದ್ರ ತೀರ್ಥಂ ಪರಮಶೋಭನಂ ।
ನರಾಣಾಂ ಪಾಪನಾಶಾಯ ಅಗಸ್ತ್ಯೇಶ್ವರಮುತ್ತಮಂ ॥ ೧ ॥
ತತ್ರ ಸ್ನಾತ್ವಾ ನರೋ ರಾಜನ್ಮುಚ್ಯತೇ ಬ್ರಹ್ಮಹತ್ಯಯಾ ।
ಕಾರ್ತಿಕಸ್ಯ ತು ಮಾಸಸ್ಯ ಕೃಷ್ಣಪಕ್ಷೇ ಚತುರ್ದಶೀ ॥ ೨ ॥
ಘೃತೇನ ಸ್ನಾಪಯೇದ್ದೇವಂ ಸಮಾಧಿಸ್ಥೋ ಜಿತೇಂದ್ರಿಯಃ ।
ಏಕವಿಂಶತಿ ಕುಲೋಪೇತೋ ನಚ್ಯವೇದೈಶ್ವರಾತ್ಪದಾತ್ ॥ ೩ ॥
ಧನಂ ಚೋಪಾನಹೌ ಛತ್ರಂ ದದ್ಯಾಚ್ಚ ಘೃತಕಂಬಲಂ ।
ಭೋಜನಂ ಚೈವ ಸರ್ವೇಷಾಂ ಸರ್ವಂ ಕೋಟಿಗುಣಂ ಭವೇತ್ ॥ ೪ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ಅಗಸ್ತ್ಯೇಶ್ವರತೀರ್ಥಮಾಹಾತ್ಮ್ಯವರ್ಣನಂ" ನಾಮ ಚತುಃಷಷ್ಠಿತಮೋಽಧ್ಯಾಯಃ

---

## ಕನ್ನಡದ ಅನುವಾದ

### ಅಗಸ್ತ್ಯೇಶ್ವರತೀರ್ಥಮಾಹಾತ್ಮ್ಯವರ್ಣನ

೧. ಶ್ರೀ ಮಾರ್ಕಂಡೇಯನು ಹೇಳುತ್ತಾನೆ —ರಾಜೇಂದ್ರ! ಬಳಿಕ ಪಾಪನಾಶಕ್ಕಾಗಿ ಉತ್ತಮವಾದ ಅಗಸ್ತ್ಯೇಶ್ವರಕ್ಕೆ ಹೋಗಬೇಕು.

೨-೩. ಅಲ್ಲಿ ಮನುಷ್ಯನು ಮಿಂದರೆ ಬ್ರಹ್ಮಹತ್ಯೆಯಿಂದ ಮುಕ್ತನಾಗುವನು. ಕಾರ್ತೀಕಮಾಸದ ಕೃಷ್ಣ ಚತುರ್ದಶಿಯ ದಿನ ಮನುಷ್ಯನು ಧ್ಯಾನಸ್ಥನೂ, ಜಿತೇಂದ್ರಿಯನೂ ಆಗಿ ಘೃತಾಭಿಷೇಕಮಾಡಿದರೆ ಇಪ್ಪತ್ತೊಂದು ಕುಲಗಳೊಡನೆ ಈಶ್ವರನ ಸ್ಥಾನದಲ್ಲಿ ನೆಲೆಸಿರುವನು.

೪. ಅಲ್ಲಿ ದ್ರವ್ಯ, ಪಾದರಕ್ಷೆ, ಛತ್ರ, ಘೃತಕಂಬಲ, ಸರ್ವರಿಗೂ ಭೋಜನ ಇವುಗಳನ್ನಿತ್ತವನ ಪುಣ್ಯವು ಕೋಟಿಯಷ್ಟು ಹೆಚ್ಚುವುದು.

ಇಲ್ಲಿಗೆ ಎಂಬತ್ತೊಂದುಸಾಸಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಅಗಸ್ತ್ಯೇಶ್ವರತೀರ್ಥಮಾಹಾತ್ಮ್ಯವರ್ಣನ" ವೆಂಬ
ಅರುವತ ನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಪಂಚಷಷ್ಠಿತಮೋಽಧ್ಯಾಯಃ

### ಆನಂದೇಶ್ವರತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ತತೋ ಗಚ್ಛೇತ್ತು ರಾಜೇಂದ್ರ ಆನಂದೇಶ್ವರಮುತ್ತಮಂ ।
ರುದ್ರಸ್ಯ ಪರಮಾನಂದೋ ಯತ್ರ ಜಾತೋ ಯುಧಿಷ್ಠಿರ ।
ತತ್ತೀರ್ಥಂ ಕಥಯಿಷ್ಯಾಮಿ ಸರ್ವಪಾಪಕ್ಷಯಂಕರಂ ॥ ೧ ॥

ಯುಧಿಷ್ಠಿರ ಉವಾಚ :—

ಆನಂದಶ್ಚೈವ ಸಂಜಾತೋ ರುದ್ರಸ್ಯ ದ್ವಿಜಸತ್ತಮ ।
ಕಥ್ಯತಾಂ ಮೇ ಚ ತತ್ಸರ್ವಂ ಸಂಕ್ಷೇಪಾತ್ಸಹಬಾಂಧವೈಃ ॥ ೨ ॥

ಶ್ರೀ ಮಾರ್ಕಂಡೇಯ ಉವಾಚ :—

ಕಥಯಾಮಿ ನೃಪಶ್ರೇಷ್ಠ ಆನಂದೇಶ್ವರಮುತ್ತಮಂ ।
ದಾನವಾನಾಂ ವಧಂ ಕೃತ್ವಾ ದೇವದೇವೋ ಮಹೇಶ್ವರಃ ॥ ೩ ॥
ಪೂಜಿತೋ ದೇವತೈಃ ಸರ್ವೈಃ ಕಿನ್ನರೈರ್ಯಕ್ಷಪನ್ನಗೈಃ ।
ಆನಂದಸಂಯುತೋ ದೇವೋ ನನರ್ತ ವೃಷವಾಹನಃ ॥ ೪ ॥
ಭೈರವಂ ರೂಪಮಾಸ್ಥಾಯ ಗೌರ್ಯಾ ಚಾರ್ಧಾಂಗ ಸಂಸ್ಥಿತಃ ।
ಭೂತವೇತಾಲಕಂಕಾಲೈರ್ಭೈರವೈರ್ಭೈರವೋ ವೃತಃ ॥ ೫ ॥
ನನರ್ತ ನರ್ಮದಾತೀರೇ ದಕ್ಷಿಣೇ ಪಾಂಡುನಂದನ ।
ತುಷ್ಟೈರ್ಮರುದ್ಗಣೈಃ ಸರ್ವೈಃ ಸ್ಥಾಪಿತಃ ಕಮಲಾಸನಃ ॥ ೬ ॥

---

### ಕನ್ನಡದ ಅನುವಾದ

#### ಆನಂದೇಶ್ವರತೀರ್ಥಮಾಹಾತ್ಮ್ಯವರ್ಣನ

೧–೨. ಶ್ರೀ ಮಾರ್ಕಂಡೇಯನು ಹೇಳುತ್ತಾನೆ —ದೊರೆಯೆ! ಅನಂತರ ಉತ್ತಮವಾದ ಆನಂದೇಶ್ವರಕ್ಕೆ ಹೋಗಬೇಕು. ಹಿಂದೆ ಇಲ್ಲಿ ರುದ್ರನಿಗೆ ಅತ್ಯಂತ ಆನಂದವುಂಟಾಯಿತಷ್ಟೆ! ಸಕಲಪಾಪಗಳನ್ನೂ ನೀಗಿಸುವ ಆ ತೀರ್ಥವನ್ನು ಹೇಳುವೆನು. ಯುಧಿಷ್ಠಿರನು ಹೇಳುತ್ತಾನೆ —ದ್ವಿಜವರ್ಯನೆ! ಅಲ್ಲಿ ರುದ್ರನಿಗೆ ಹೇಗೆ ಆನಂದವುಂಟಾಯಿತು. ಬಂಧುಗಳಿಂದ ಕೂಡಿರುವ ನನಗೆ ಅದನ್ನೆಲ್ಲ ಸಂಕ್ಷೇಪವಾಗಿ ಹೇಳು.

೩–೬. ಶ್ರೀ ಮಾರ್ಕಂಡೇಯನು ಹೇಳುತ್ತಾನೆ –ನೃಪವರ್ಯನೆ! ಉತ್ತಮವಾದ ಆನಂದೇಶ್ವರತೀರ್ಥವನ್ನು ಹೇಳುತ್ತೇನೆ. ಮಹೇಶ್ವರನು ದಾನವರನ್ನು ವಧಿಸಿ ಸಮಸ್ತ ದೇವತೆಗಳಿಂದಲೂ, ಯಕ್ಷ, ಕಿನ್ನರ, ಪನ್ನಗರಿಂದಲೂ ಪೂಜೆಗೊಂಡು ಭಯಂಕರವಾದ ಭೂತ, ಬೇತಾಳ, ಕಪಾಲಗಳಿಂದ ಭಯಂಕರ

ತದಾ ಪ್ರಭೃತಿ ತತ್ತೀರ್ಥಮಾನಂದೇಶ್ವರಮುಚ್ಯತೇ ।
ಅಷ್ಟಮ್ಯಾಂ ಚ ಚತುರ್ದಶ್ಯಾಂ ಪೌರ್ಣಮಾಸ್ಯಾಂ ನರಾಧಿಪ ॥ ೭ ॥
ವಿಧಿವಚ್ಚಾರ್ಚಯೇದ್ದೇವಂ ಸುಗಂಧೇನ ವಿಲೇಪಯೇತ್ ।
ಬ್ರಾಹ್ಮಣಾನ್ಪೂಜಯೇತ್ತತ್ರ ಯಥಾಶಕ್ತ್ಯಾ ಯುಧಿಷ್ಠಿರ ॥ ೮ ॥
ಗೋದಾನಂ ತತ್ರ ಕರ್ತವ್ಯಂ ವಸ್ತ್ರದಾನಂ ಶುಭಾವಹಂ ।
ವಸಂತಸ್ಯ ತ್ರಯೋದಶ್ಯಾಂ ಶ್ರಾದ್ಧಂ ತತ್ರೈವ ಕಾರಯೇತ್ ॥ ೯ ॥
ಇಂಗುದ್ಯೈರ್ಬದರ್ಯೈರ್ಬಿಲ್ವೈರಕ್ಷತೈಶ್ಚ ಜಲೇನ ವಾ ।
ಪ್ರೇತಾನಾಂ ಕಾರಯೇಚ್ಛ್ರಾದ್ಧಮಾನಂದೇಶ್ವರ ಉತ್ತಮೇ ॥ ೧೦ ॥
ಆನಂದಿತಾ ಭವೇಯುಸ್ತೇ ಯಾವದಾಭೂತಸಂಪ್ಲವಂ ।
ಸಂತತೇರ್ನೈವ ವಿಚ್ಛೇದಃ ಸಪ್ತಜನ್ಮಸು ಜಾಯತೇ ।
ಆನಂದೋಹಿ ಭವೇತ್ತೇಷಾಂ ಪ್ರತಿಜನ್ಮನಿ ಭಾರತ ॥ ೧೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ಆನಂದೇಶ್ವರತೀರ್ಥಮಾಹಾತ್ಮ್ಯವರ್ಣನಂ"ನಾಮ ಪಂಚಷಷ್ಟಿತಮೋಽಧ್ಯಾಯಃ

---

ರೂಪವನ್ನು ತಾಳಿ ಅರ್ಧಾಂಗಿಯಾದ ಗೌರಿಯೊಡನೆ ನರ್ಮದಾ ನದಿಯ ದಕ್ಷಿಣ ತೀರದಲ್ಲಿ ಆನಂದದಿಂದ ಕುಣಿದನು. ಸಂತೋಷಗೊಂಡ ಸಮಸ್ತ ಮರುದ್ಗಣಗಳೂ ಅಲ್ಲಿ ಬ್ರಹ್ಮನನ್ನು ಪ್ರತಿಷ್ಠೆಮಾಡಿದರು.

೭–೮. ಅದು ಮೊದಲ್ಗೊಂಡು ಆ ತೀರ್ಥವು ಆನಂದೇಶ್ವರವೆನ್ನಿಸಿಕೊಂಡಿತು. ದೊರೆಯೆ! ಅಷ್ಟಮಿ, ಚತುರ್ದಶೀ, ಹುಣ್ಣಿಮೆಯ ದಿನಗಳಲ್ಲಿ ಆನಂದೇಶ್ವರನನ್ನು ವಿಧಿಯಂತೆ ಅರ್ಚಿಸಿ, ಗಂಧವನ್ನು ಲೇಪಿಸಿ, ಶಕ್ತ್ಯನುಸಾರ ಬ್ರಾಹ್ಮಣರನ್ನು ಪೂಜಿಸಬೇಕು.

೯–೧೦. ಅಲ್ಲಿ ಗೋದಾನವನ್ನೂ, ಶುಭಕರವಾದ ವಸ್ತ್ರದಾನವನ್ನೂ ಮಾಡಬೇಕು. ವೈಶಾಖಮಾಸದ ತ್ರಯೋದಶಿಯದಿನ ಇಂಗುದ, ಬದರ, ಬಿಲ್ವ ಫಲ ಅಥವಾ ನೀರಿನಿಂದ ಪ್ರೇತಗಳಿಗೆ ಶ್ರಾದ್ಧಗೈಯ್ಯಬೇಕು.

೧೧. ಆ ಪ್ರೇತಗಳು ಪ್ರಳಯಕಾಲದವರೆಗೆ ಸಂತೋಷಗೊಳ್ಳುವುವು. ಏಳು ಜನ್ಮಗಳಲ್ಲಿ ಸಂತತಿಯು ವಿಚ್ಛಿನ್ನವಾಗುವುದಿಲ್ಲ. ಪ್ರತಿಜನ್ಮಗಳಲ್ಲಿಯೂ ಅವರಿಗೆ ಆನಂದವುಂಟಾಗುವುದು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಆನಂದೇಶ್ವರತೀರ್ಥಮಾಹಾತ್ಮ್ಯವರ್ಣನ"ವೆಂಬ
ಅರುವತ್ತೈದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಷಟ್‌ಷಷ್ಟಿತಮೋಽಧ್ಯಾಯಃ

### ಮಾತೃತೀರ್ಥಮಾಹಾತ್ಮ್ಯವರ್ಣನಂ

**ಶ್ರೀ ಮಾರ್ಕಂಡೇಯ ಉವಾಚ :—**

**ತತೋ ಗಚ್ಛೇತ್ತು ರಾಜೇಂದ್ರ ಮಾತೃತೀರ್ಥಮನುತ್ತಮಂ ।**
**ಸಂಗಮಸ್ಯ ಸಮೀಪಸ್ಥಂ ನರ್ಮದಾದಕ್ಷಿಣೇ ತಟೇ ॥ ೧ ॥**
**ಮಾತರಸ್ತತ್ರ ರಾಜೇಂದ್ರ ಸಂಜಾತಾ ನರ್ಮದಾ ತಟೇ ।**
**ಉಮಾರ್ಧಧಾರಿದೇವೇಶೋ ವ್ಯಾಲಯಜ್ಞೋಪವೀತಧೃಕ್ ॥ ೨ ॥**
**ಉವಾಚ ಯೋಗಿನೀವೃಂದಂ ಕಷ್ಟಂ ಕಷ್ಟಮಹೋ ಹರ ।**
**ಅಜೇಯಾಃ ಸರ್ವದೇವಾನಾಂ ತ್ವತ್ಪ್ರಸಾದಾನ್ಮಹೇಶ್ವರ ॥ ೩ ॥**
**ತೀರ್ಥಮತ್ರ ವಿಧಾನೇನ ಪ್ರಖ್ಯಾತಂ ವಸುಧಾತಲೇ ।**
**ಏವಂ ಭವತು ಯೋಗಿನ್ಯ ಇತ್ಯುಕ್ತ್ವಾಂತರಧಾಚ್ಛಿವಃ ॥ ೪ ॥**

**ಶ್ರೀ ಮಾರ್ಕಂಡೇಯ ಉವಾಚ :—**

**ತತ್ರ ತೀರ್ಥೇ ತು ಯೋ ಭಕ್ತ್ಯಾ ನವಮ್ಯಾಂ ನಿಯತಃ ಶುಚಿಃ ।**
**ಉಪೋಷ್ಯ ಪರಯಾ ಭಕ್ತ್ಯಾ ಪೂಜಯೇನ್ಮಾತೃಗೋಚರಂ ॥ ೫ ॥**

---

## ಕನ್ನಡದ ಅನುವಾದ

### ಮಾತೃತೀರ್ಥಮಾಹಾತ್ಮ್ಯವರ್ಣನ

೧. ಶ್ರೀ ಮಾರ್ಕಂಡೇಯನು ಹೇಳುತ್ತಾನೆ –ಅರಸ! ಅನಂತರ ನರ್ಮದಾ ನದಿಯ ದಕ್ಷಿಣ ತೀರದಲ್ಲಿ ಸಂಗಮದ ಹತ್ತಿರದಲ್ಲಿರುವ ಉತ್ತಮವಾದ ಮಾತೃ ತೀರ್ಥಕ್ಕೆ ಹೋಗಬೇಕು.

೨–೪. ಆ ನರ್ಮದಾತಟದಲ್ಲಿ ಮಾತೆಯರು ಹುಟ್ಟಿರುವರು. ಆ ಯೋಗಿನಿಯರು "ಅರ್ಧನಾರೀಶ್ವರನೂ, ಸರ್ಪಯಜ್ಞೋಪವೀತನೂ, ಆದ ಹರನೆ! ನಮ್ಮನ್ನು ನಿನ್ನ ಅನುಗ್ರಹದಿಂದ ಸಕಲ ದೇವತೆಗಳಿಗೂ ಅಜೇಯರನ್ನಾಗಿಸು" ಎಂದರು. ಶಿವನು, "ಯೋಗಿನಿಯರೆ! ಹಾಗೆಯೇ ಆಗಲೆ"ಂದು ಹೇಳಿ ಅದೃಶ್ಯನಾದನು. ಅಂದಿನಿಂದ ಈ ತೀರ್ಥವು ಭೂಮಿಯಲ್ಲಿ ಪ್ರಸಿದ್ಧಿಗೊಂಡಿತು.

೫. ಶ್ರೀ ಮಾರ್ಕಂಡೇಯನು ಹೇಳುತ್ತಾನೆ —ಆ ತೀರ್ಥದಲ್ಲಿ ನವಮಿಯ ದಿನ ನರನು ಉಪವಾಸಮಾಡಿ, ಶುದ್ಧನಾಗಿ ಭಕ್ತಿಯಿಂದ ಶಿವನನ್ನು ಪೂಜಿಸಿದರೆ ಅವನಲ್ಲಿ ಮಾತೆಯರೂ, ಶಿವನೂ ಸಂತುಷ್ಟರಾಗುವರು.

ತಸ್ಯ ಸ್ಯುರ್ಮಾತರಃ ಪ್ರೀತಾಃ ಪ್ರೀತೋಽಯಂ ವೃಷವಾಹನಃ ।
ವಂಧ್ಯಾಯಾ ಮೃತವತ್ಸಾಯಾ ಅಪುತ್ರಾಯಾ ಯುಧಿಷ್ಠಿರ ॥ ೬ ॥
ಸ್ನಾಪನಂ ಚಾರಭೇತ್ತತ್ರ ಮಂತ್ರಶಾಸ್ತ್ರವಿದುತ್ತಮಃ ।
ಸಹಿರಣ್ಯೇನ ಕುಂಭೇನ ಪಂಚರತ್ನಫಲಾನ್ವಿತಃ ॥ ೭ ॥
ಸ್ನಾಪಯೇತ್ಪುತ್ರಕಾಮಾಯಾಃ ಕಾಂಸ್ಯಪಾತ್ರೇಣ ದೇಶಿಕಃ ।
ಪುತ್ರಂ ಸಾ ಲಭತೇ ನಾರೀ ವೀರ್ಯವಂತಂ ಗುಣಾನ್ವಿತಂ ॥ ೮ ॥
ಯೋ ಯಂ ಕಾಮಮಭಿಧ್ಯಾಯೇತ್ತತಃ ಸ ಲಭತೇ ನೃಪ ।
ಮಾತೃತೀರ್ಥಾತ್ಪರಂ ತೀರ್ಥಂ ನ ಭೂತಂ ನ ಭವಿಷ್ಯತಿ ॥ ೯ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ಮಾತೃತೀರ್ಥಮಾಹಾತ್ಮ್ಯವರ್ಣನಂ"
ನಾಮ ಷಟ್‌ಷಷ್ಟಿತಮೋಽಧ್ಯಾಯಃ

---

೬–೮. ಅಲ್ಲಿ ಮಂತ್ರಶಾಸ್ತ್ರವನ್ನರಿತ ಮಾನವನು, ಪುತ್ರರನ್ನು ಬಯಸುವ ಬಂಜೆಗೂ, ಮೃತ ಶಿಶುವುಳ್ಳವಳಿಗೂ, ಮಕ್ಕಳಿಲ್ಲದವಳಿಗೂ ಚಿನ್ನ, ಪಂಚರತ್ನ, ಫಲಗಳಿಂದ ತುಂಬಿರುವ ಕಂಚಿನ ಕಲಶದಿಂದ ಸ್ನಾನಮಾಡಿಸಿದರೆ ಅವರು ವೀರನೂ, ಗುಣವಂತನೂ ಆದ ಪುತ್ರನನ್ನು ಪಡೆಯುವರು.

೯. ಅಲ್ಲಿ ಯಾವನು ಯಾವ ಇಷ್ಟಾರ್ಥವನ್ನು ಬಯಸುವನೊ, ಅದನ್ನು ಹೊಂದುವನು. ಮಾತೃತೀರ್ಥಕ್ಕಿಂತಲೂ ಉತ್ತಮ ತೀರ್ಥವು ಹಿಂದಿರಲಿಲ್ಲ. ಮುಂದೆ ಉಂಟಾಗುವುದಿಲ್ಲ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಮಾತೃತೀರ್ಥಮಾಹಾತ್ಮ್ಯವರ್ಣನ"ವೆಂಬ
ಅರುವತ್ತಾರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಸಪ್ತಷಷ್ಟಿತಮೋಽಧ್ಯಾಯಃ

## ಲುಂಕೇಶ್ವರತೀರ್ಥಮಾಹಾತ್ಮ್ಯವರ್ಣನಂ

**ಶ್ರೀ ಮಾರ್ಕಂಡೇಯ ಉವಾಚ :—**

**ತಸ್ಯೈವಾಽನಂತರಂ ತಾತ ಜಲಮಧ್ಯೇ ವ್ಯವಸ್ಥಿತಂ ।**
**ಲುಂಕೇಶ್ವರಮಿತಿ ಖ್ಯಾತಂ ಸುರಾಸುರನಮಸ್ಕೃತಂ ॥ ೧ ॥**
**ಇದಂ ತೀರ್ಥಂ ಮಹಾಪುಣ್ಯಂ ನಾನಾಶ್ಚರ್ಯಂ ಮಹೀತಲೇ ।**
**ಅಸ್ಯ ತೀರ್ಥಸ್ಯ ಮಾಹಾತ್ಮ್ಯಮುತ್ಪತ್ತಿಂ ಶೃಣು ಭಾರತ ॥ ೨ ॥**
**ಆಸೀತ್ಪುರಾ ಮಹಾವೀರ್ಯೋ ದಾನವೋ ಬಲದರ್ಪಿತಃ ।**
**ಕಾಲಪೃಷ್ಠ ಇತಿ ಖ್ಯಾತಃ ಸುತೋ ಬ್ರಹ್ಮಸುತಸ್ಯ ಚ ॥ ೩ ॥**
**ಗಂಗಾತಟಂ ಸಮಾಶ್ರಿತ್ಯ ಚಚಾರ ವಿಪುಲಂ ತಪಃ ।**
**ಅಧೋಮುಖೋಽಪಿ ಸಂಸ್ಥಿತ್ವಾಽಪಿಬದ್ಧೂಮಮಹರ್ನಿಶಂ ॥ ೪ ॥**
**ತತಶ್ಚಾನಂತರಂ ದೇವಸ್ತಿಷ್ಠತೇಽಹ್ಯುಮಯಾ ಸಹ ।**
**ದೃಷ್ಟ್ವಾ ತಂ ಪಾರ್ವತೀ ಸಾ ತು ತಪಸ್ಯುಗ್ರೇ ವ್ಯವಸ್ಥಿತಂ ॥ ೫ ॥**
**ಪಶ್ಯಪಶ್ಯ ಮಹಾದೇವ ಧೂಮಾಶೀ ತಿಷ್ಠತೇ ನರಃ ।**
**ಪ್ರಸೀದ ತ್ವಂ ಕುರುಷ್ವಾಽಸ್ಯ ದೇಹಿ ಶೀಘ್ರಂ ವರಂ ವಿಭೋ ॥ ೬ ॥**

---

### ಕನ್ನಡದ ಅನುವಾದ

#### ಲುಂಕೇಶ್ವರತೀರ್ಥಮಾಹಾತ್ಮ್ಯವರ್ಣನ

೧–೨. ಶ್ರೀ ಮಾರ್ಕಂಡೇಯನು ಹೇಳುತ್ತಾನೆ.—ಆ ತೀರ್ಥದ ಅನಂತರದಲ್ಲಿ ನೀರಿನ ನಡುವೆ ಸುರಾಸುರರಿಂದ ವಂದಿತವಾದ ಲುಂಕೇಶ್ವರವೆಂಬ ತೀರ್ಥಕ್ಷೇತ್ರವಿದೆ. ಈ ತೀರ್ಥವು ಭೂಮಿಯಲ್ಲಿಯೆ ಅತ್ಯಾಶ್ಚರ್ಯಕರವೂ, ಬಹುಪುಣ್ಯಕರವೂ ಆಗಿದೆ. ಇದರ ಮಾಹಾತ್ಮ್ಯವನ್ನೂ, ಉತ್ಪತ್ತಿಯನ್ನೂ ಕೇಳು.

೩. ಹಿಂದೆ ಅತ್ಯಂತ ವೀರನೂ, ದೇಹಬಲದಿಂದ ಅಹಂಕಾರಗೊಂಡವನೂ ಬ್ರಹ್ಮನ ಮೊಮ್ಮಗನೂ ಆದ ಕಾಲಪೃಷ್ಠನೆಂಬ ದಾನವನಿದ್ದನು.

೪. ಅವನು ಗಂಗಾನದಿಯ ದಡವನ್ನಾಶ್ರಯಿಸಿ ಅತಿಶಯವಾದ ತಪಸ್ಸನ್ನಾಚರಿಸಿದನು. ಅಧೋಮುಖನಾಗಿ ಹೊಗೆಯನ್ನು ಹಗಲುರಾತ್ರಿಗಳಲ್ಲಿಯೂ ಕುಡಿಯುತ್ತಿದ್ದನು.

೫–೬. ಮಹೇಶ್ವರನೊಡನಿದ್ದ ಪಾರ್ವತಿಯು, ಉಗ್ರತಪಸ್ಸನ್ನು ಮಾಡುತ್ತಿರುವ ಅವನನ್ನು ನೋಡಿ, '' ಮಹಾದೇವ! ಧೂಮವನ್ನು ಕುಡಿಯುತ್ತಿರುವ ಈ ದಾನವನನ್ನು ನೋಡು. ಇವನಿಗೆ ಅನುಗ್ರಹಮಾಡಿ ಬೇಗನೆ ವರವನ್ನು ಕೊಡು '' ಎಂದಳು.

ಈಶ್ವರ ಉವಾಚ :—
ಯದುಕ್ತಂ ವಚನಂ ದೇವಿ ನ ತನ್ಮೇ ರೋಚತೇ ಪ್ರಿಯೇ ।
ಸ್ವಕಾರ್ಯಂ ಚ ಸದಾ ಚಿಂತ್ಯಂ ಪರಕಾರ್ಯಂ ವಿಸರ್ಜಯೇತ್ ॥ ೭ ॥
ಮೂರ್ಖಸ್ತ್ರೀಬಾಲಶತ್ರೂಣಾಂ ಯಶ್ಛಂದೇನಾನುವರ್ತತೇ ।
ವ್ಯಸನೇ ಪತತೇ ಘೋರೇ ಸತ್ಯಮೇತದುದೀರಿತಂ ॥ ೮ ॥
ದೇವ್ಯುವಾಚ :—
ಭಾರ್ಯಯಾಽಭ್ಯರ್ಥಿತೋ ಭರ್ತಾ ಕಾರಣಂ ಬಹು ಭಾಷತೇ ।
ಲಘುತ್ವಂ ಯಾತಿ ಸಾ ನಾರೀ ಏವಂ ಶಾಸ್ತ್ರೇಷು ಪಠ್ಯತೇ ॥ ೯ ॥
ಪ್ರಾಣತ್ಯಾಗಂ ಕರಿಷ್ಯಾಮಿ ಯದಿ ಮಾಂ ತ್ವಂ ನ ಮನ್ಯಸೇ ।
ಪಾರ್ವತ್ಯಾ ಪ್ರೇರಿತೋ ದೇವೋ ಗತೋಽಸೌ ದಾನವಂ ಪ್ರತಿ ॥ ೧೦ ॥
ಈಶ್ವರ ಉವಾಚ :—
ಕಿಮರ್ಥಂ ಪಿಬಸೇ ಧೂಮಂ ಕಿಮರ್ಥಂ ತಪ್ಯಸೇ ತಪಃ ।
ಕಿಂ ದುಃಖಂ ಕಿಂ ನು ಸಂತಾಪೋ ವದ ಕಾರ್ಯಮಭೀಪ್ಸಿತಂ ॥ ೧೧ ॥
ಯುವಾ ತ್ವಂ ದೃಶ್ಯಸೇಽದ್ಯಾಽಪಿ ವರ್ಷವಿಂಶತಿರೇವ ಚ ।
ತದಾಚಕ್ಷ್ವ ಹಿ ಮೇ ಸರ್ವಂ ತಪಸಃ ಕಾರಣಂ ಮಹತ್ ॥ ೧೨ ॥

---

೭. ಈಶ್ವರನು ಹೇಳುತ್ತಾನೆ.—ದೇವಿ! ನೀನು ಆಡಿದ ಮಾತು ನನಗೆ ರುಚಿಸುವುದಿಲ್ಲ. ಯಾವಾಗಲೂ ತಮ್ಮ ಕಾರ್ಯವನ್ನು ತಾವು ಮೊದಲು ಯೋಚಿಸಬೇಕು. ಮತ್ತೊಬ್ಬರ ಕೆಲಸವನ್ನು ಬಿಡಬೇಕು.

೮. ಮೂರ್ಖ, ಸ್ತ್ರೀ, ಬಾಲಕ ಮತ್ತು ಶತ್ರುಗಳ ಅಭಿಪ್ರಾಯವನ್ನನುಸರಿಸುವವನು ಘೋರವಾದ ವ್ಯಸನದಲ್ಲಿ ಬೀಳುವನು. ನಾನು ಹೇಳಿರುವುದು ನಿಜ.

೯. ದೇವಿಯು ಹೇಳುತ್ತಾಳೆ :—"ಪತ್ನಿಯು ಬೇಡಿಕೊಳ್ಳಲು ಅದಕ್ಕೆ ಪತಿಯು ಬಹುಕಾರಣಗಳನ್ನು ಹೇಳಬಾರದು. ಅದರಿಂದ ಆ ಸ್ತ್ರೀಯು ಲಾಘವವನ್ನು ಹೊಂದುವಳು. ಶಾಸ್ತ್ರವು ಹೀಗೆ ಸಾರುವುದು.

೧೦. ಈಗ ನೀನು ನನ್ನ ಮಾತನ್ನು ಮಾನಿಸದಿದ್ದರೆ ನಾನು ಪ್ರಾಣವನ್ನು ತ್ಯಜಿಸುವೆನು." ಹೀಗೆ ಪಾರ್ವತಿಯು ಪ್ರೇರಿಸಲು ಶಂಕರನು ಆ ದಾನವನೆಡೆಗೆ ಹೋದನು.

೧೧. ಈಶ್ವರನು ಹೇಳುತ್ತಾನೆ :—ದಾನವ! ನೀನು ಹೀಗೇಕೆ ಹೊಗೆಯನ್ನು ಕುಡಿಯುತ್ತಿರುವೆ? ಏಕೆ ತಪಸ್ಸನ್ನು ಮಾಡುತ್ತಿರುವೆ? ನಿನಗೆ ಯಾವ ದುಃಖ ಅಥವಾ ಸಂತಾಪವುಂಟಾಗಿದೆ? ನಿನಗಿಷ್ಟವಾದ ಕಾರ್ಯವನ್ನು ಹೇಳು.

೧೨. ನೀನು ಈಗಲೂ ಇಪ್ಪತ್ತುವರ್ಷದ ಯುವಕನಾಗಿ ಕಾಣುತ್ತೀಯೆ. ಆದುದರಿಂದ ತಪಸ್ಸನ್ನು ಮಾಡಲು ಇರುವ ಮಹತ್ಕಾರಣವೇನು? ಹೇಳು.

ದಾನವ ಉವಾಚ :—

ಅಚಲಾ ದೀಯತಾಂ ಭಕ್ತಿರ್ಮಮ ಸ್ಥೈರ್ಯಂ ತವೋಪರಿ ।
ಅಪರಂ ವರ್ಷಸಾಹಸ್ರಂ ನಿರ್ವಿಘ್ನಂ ಮೇ ಗತಂ ವಿಭೋ ॥ ೧೩ ॥
ದಿವಸಾನಾಂ ಸಹಸ್ರೇ ದ್ವೇ ಪೂರ್ಣೇ ತ್ವತ್ತಪಸಾ ಮಮ ॥ ೧೪ ॥

ಈಶ್ವರ ಉವಾಚ :—

ಯಾಚಸ್ವಾಭೀಪ್ಸಿತಂ ಕಾರ್ಯಂ ತುಷ್ಟೋಽಹಂ ತವ ಸುವ್ರತ ।
ದೇವಸ್ಯ ವಚನಂ ಶ್ರುತ್ವಾ ಚಿಂತಯಾಮಾಸ ದಾನವಃ ॥ ೧೫ ॥
ಕಿಂ ನಾಕಂ ಯಾಚಯಾಮ್ಯದ್ಯ ಕಿಮುದ್ಯ ಸಕಲಾಂ ಮಹೀಂ ।
ಏವಂ ಸ ಚಿಂತಯಾಮಾಸ ಕಾಮಬಾಣೇನ ಪೀಡಿತಃ ॥ ೧೬ ॥

ದಾನವ ಉವಾಚ :—

ಯದಿ ತುಷ್ಟೋಽಸಿ ಮೇ ದೇವ ವರಂ ದಾಸ್ಯಸಿ ಮೇ ಪ್ರಭೋ ।
ಸಂಗ್ರಾಮೈಸ್ತು ನ ತುಷ್ಟೋಽಹಂ ಬಲಂ ನಾಸ್ತೀತಿ ಕಿಂಚನ ॥ ೧೭ ॥
ಯಸ್ಯ ಮೂರ್ಧನ್ಯಹಂ ದೇವ ಪಾಣಿನಾ ಸಮುಪಸ್ಪೃಶೇ ।
ದೇವದಾನವಗಂಧರ್ವೋ ಭಸ್ಮಸಾದ್ಯಾತು ತತ್ಕ್ಷಣಾತ್ ॥ ೧೮ ॥

ಈಶ್ವರ ಉವಾಚ :—

ಯತ್ತ್ವಯಾ ಚಿಂತಿತಂ ಕಿಂಚಿತ್ತತ್ಸರ್ವಂ ಸಫಲಂ ತವ ।
ಉತ್ತಿಷ್ಠ ಗಚ್ಛ ಶೀಘ್ರಂ ತ್ವಂ ಭವನಂ ಪ್ರತಿ ದಾನವ ॥ ೧೯ ॥

---

೧೩–೧೪. ದಾನವನು ಹೇಳುತ್ತಾನೆ —ನಿನ್ನಲ್ಲಿ ನನಗೆ ಸ್ಥಿರಭಕ್ತಿಯನ್ನು ಕೊಡು. ನಿನ್ನನ್ನು ಕುರಿತು ತಪಸ್ಸನ್ನು ಮಾಡುತ್ತಿರುವ ನನಗೆ ಒಂದು ಸಾವಿರ ವರ್ಷಗಳೂ ಒಂದು ಸಾವಿರ ದಿನಗಳೂ ಕಳೆದುವು.

೧೫–೧೬. ಈಶ್ವರನು ಹೇಳುತ್ತಾನೆ —ಸುವ್ರತನಾದ ದಾನವನೆ! ನಾನು ನಿನ್ನಲ್ಲಿ ಸಂತುಷ್ಟನಾಗಿರುವೆನು. ನಿನಗೆ ಯಾವ ಅಭೀಷ್ಟವನ್ನು ಕೊಡಲಿ. ಕಾಮಬಾಣದಿಂದ ಪೀಡಿತನಾದ ಆ ದಾನವನು ಶಂಕರನ ಮಾತನ್ನು ಕೇಳಿ ಈಗ ಸ್ವರ್ಗವನ್ನು ಬೇಡಲೊ, ಅಥವಾ ಸಮಸ್ತ ಭೂಮಿಯನ್ನೊ ಯಾಚಿಸಲೊ? ಎಂದು ಆಲೋಚಿಸಿ ಆ ತರುವಾಯ ಹೀಗೆ ಹೇಳಿದನು.

೧೭. ದಾನವನು ಹೇಳುತ್ತಾನೆ:—ಸ್ವಾಮಿ! ನೀನು ಸಂತುಷ್ಟನಾಗಿದ್ದರೆ ನನಗೆ ವರವನ್ನು ಕೊಡುವುದಾದರೆ ನಾನು ಸಮರದಿಂದ ಸಂತುಷ್ಟನಾಗುವುದಿಲ್ಲ. ನನಗೆ ಬಲವಿಲ್ಲವೆಂದಲ್ಲ.

೧೮. ನಾನು ಯಾವನ ತಲೆಯನ್ನು ಕೈಯಿಂದ ಮುಟ್ಟುವೆನೊ; ಅವನು ದೇವ, ದಾನವ, ಗಂಧರ್ವನಾಗಿದ್ದರೂ ಕೂಡಲೆ ಬೂದಿಯಾಗಲಿ.

೧೯. ಈಶ್ವರನು ಹೇಳುತ್ತಾನೆ:—ದಾನವ! ನೀನು ಆಲೋಚಿಸಿದ್ದೆಲ್ಲ ಸಫಲವಾಗುವುದು. ಏಳು, ಬೇಗನೆ ಮನೆಗೆ ಹೋಗು.

ದಾನವ ಉವಾಚ :—

ಸ್ಥೀಯತಾಂ ದೇವದೇವೇಶ ಯಾವಜ್ಜಾನಾಮಿ ತೇ ವರಂ ।
ಯುಷ್ಮನ್ಮೂರ್ಧ್ನಿ ನ್ಯಸೇ ಪಾಣಿಂ ಪ್ರತ್ಯಯೋ ಮೇ ಭವೇದ್ಯಥಾ ॥ ೨೦ ॥
ತತಶ್ಚಾನಂತರಂ ದೇವಶ್ಚಿಂತಯಾನೋ ಮಹೇಶ್ವರಃ ।
ನ ಸ್ಕಂದೋ ನ ಹರಿರ್ಬ್ರಹ್ಮಾ ಯಃ ಕಾರ್ಯೇಷು ಕ್ಷಮೋಽಧುನಾ॥೨೧॥
ಜ್ಞಾತ್ವಾ ಚೈವಾಪದಾಂ ಪ್ರಾಪ್ತಾಂ ದೇವಃ ಪ್ರಾರ್ಥಯತೇ ವೃಷಂ ।
ಅನೇನ ಸಹ ಪಾಪೇನ ಯುಧ್ಯಸ್ವ ಸಾಂಪ್ರತಂ ಕ್ಷಣಂ ॥ ೨೨ ॥
ಕರಂ ಪ್ರಾಸಾರಯದ್ದೈತ್ಯೋ ದೇವಂ ಮೂರ್ಧ್ನಿ ಕಿಲ ಸ್ಪೃಶೇತ್ ।
ಲಾಂಗೂಲೇನಾಹತೋ ದೈತ್ಯೋ ವಿಷಣ್ಣಃ ಪತಿತೋ ಭುವಿ ॥ ೨೩ ॥
ದೇವಸ್ತು ದಕ್ಷಿಣಾಮಾಶಾಂ ಗತಶ್ಚೈವೋಮಯಾ ಸಹ ।
ಭಯಭೀತೋ ನಿರೀಕ್ಷೇತ ಗ್ರೀವಾಂ ಭಜ್ಯ ಪುನಃ ಪುನಃ ॥ ೨೪ ॥
ಗತೇಚಾದರ್ಶನಂ ದೇವೇ ಯುಯುಧೇ ವೃಷಭೇಣ ಸಃ ।
ದ್ವಾವೇತೌ ಬಲಿನಾಂ ಶ್ರೇಷ್ಠೌ ಯುಯುಧಾತೇ ಮಹಾಬಲೌ ॥ ೨೫ ॥
ಪ್ರಹಾರೈರ್ವಜ್ರಸದೃಶೈಃ ಕೋಪೇನ ಘಟಿಕಾತ್ರಯಂ ।
ಪಾಣಿಭ್ಯಾಂ ನ ಸ್ಪೃಶೇದ್ದೈತ್ಯೋ ವೈ ವೃಷಭಸ್ಯ ಶಿರಸ್ತಥಾ ॥ ೨೬ ॥
ಹತ್ವಾ ಲಾಂಗೂಲಪಾತೇನ ಆಗತೋ ವೃಷಭಸ್ತದಾ ।
ಉತ್ಥಿತಶ್ಚಾಽಪ್ಯಸೌ ದೈತ್ಯೋ ವ್ರಜತೇ ವೃಷಪೃಷ್ಠತಃ ॥ ೨೭ ॥

---

೨೦. ದಾನವನು ಹೇಳುತ್ತಾನೆ:—ದೇವೇಶ! ನಿನ್ನ ವರವನ್ನು ನಾನು ತಿಳಿಯುವವರೆಗೆ ನಿಲ್ಲು. ನನ್ನ ನಂಬಿಕೆಗೋಸ್ಕರ ನಿನ್ನ ತಲೆಯಮೇಲೆ ಕೈಯನ್ನು ಇಡುವೆನು.

೨೧–೨೨. ಅನಂತರ ಮಹೇಶ್ವರನು ತನಗೆ ಬಂದ ಆಪತ್ತನ್ನು ಕುರಿತು ಈ ಕಾರ್ಯದಲ್ಲಿ ಸ್ಕಂದ, ಹರಿ, ಬ್ರಹ್ಮರು ಸಮರ್ಥರಲ್ಲವೆಂದು ಆಲೋಚಿಸಿ ವೃಷಭನನ್ನು ಪ್ರಾರ್ಥಿಸಿ ಈಗ ನೀನು ಈ ಪಾಪಿಯೊಡನೆ ಯುದ್ಧಮಾಡೆಂದನು.

೨೩. ದಾನವನು ಕೈಯನ್ನು ಚಾಚಿ ಈಶ್ವರನ ತಲೆಯನ್ನು ಮುಟ್ಟುವಷ್ಟರಲ್ಲಿ ವೃಷಭದ ಬಾಲದಿಂದ ತಾಡಿತನಾಗಿ ಖೇದಕೊಂಡು ನೆಲದಮೇಲೆ ಬಿದ್ದನು.

೨೪–೨೫. ಶಂಕರನು ಭೀತನಾಗಿ ಉಮೆಯೊಡನೆ ದಕ್ಷಿಣದಿಕ್ಕಿಗೆ ಹೊರಟು ಹೋಗಲು ಆ ದಾನವನು ಮರಳಿಮರಳಿ ಕುತ್ತಿಗೆಯನ್ನು ತಿರುಗಿಸಿಕೊಂಡು ನೋಡಿದನು. ಶಂಕರನು ಅದೃಶ್ಯನಾಗಲು ಅವನು ವೃಷಭನೊಡನೆ ಕಾಳಗ ಮಾಡಿದನು.

೨೬–೨೭. ಅತಿ ಬಲಿಷ್ಠರಾದ ಇವರಿಬ್ಬರೂ ಕೋಪದಿಂದ ವಜ್ರಕ್ಕೆ ಸಮಾನವಾದ ಹೊಡೆತಗಳಿಂದ ಮೂರು ಘಳಿಗೆಗಳ ಕಾಲ ಯುದ್ಧಮಾಡಿದರು. ವೃಷಭ

ವಾಯುವೇಗೇನ ಸಂಪ್ರಾಪ್ತೋ ಯತ್ರ ದೇವೋ ಮಹೇಶ್ವರಃ ।
ಆಗತಂ ದಾನವಂ ದೃಷ್ಟ್ವಾ ವೃಷೋ ವಚನಮಬ್ರವೀತ್ ॥ ೨೮ ॥
ಆರುಹ್ಯ ಪೃಷ್ಠೇ ಮೇ ದೇವ ಶೀಘ್ರಮೇವ ಹಿ ಗಮ್ಯತಾಂ ।
ಆರುಹ್ಯ ವೃಷಭಂ ದೇವೋ ಜಗಾಮ ಚೋಮಯಾ ಸಹ ॥ ೨೯ ॥
ನಾಕಂ ಪ್ರಾಪ್ತಸ್ತತೋ ದೇವೋ ಗತಃ ಶಕ್ರಸ್ಯ ಮಂದಿರಂ ।
ನಾತ್ಯಜದ್ದೇವಪೃಷ್ಠಂ ತು ದಾನವೋ ಬಲದರ್ಪಿತಃ ॥ ೩೦ ॥
ಇಂದ್ರಲೋಕಂ ಪರಿತ್ಯಜ್ಯ ಬ್ರಹ್ಮಲೋಕಂ ಗತಸ್ತದಾ ।
ಯತ್ರ ಯತ್ರ ಗತೋ ದೇವೋ ಭಯಾತ್ಸಹ ದಿವೌಕಸೈಃ ॥ ೩೧ ॥
ಅಪಶ್ಯತ್ತತ್ರ ತತ್ರೈವ ಪೃಷ್ಠೇ ಲಗ್ನಂ ತು ದಾನವಂ ।
ಸರ್ವಾಂಲ್ಲೋಕಾನ್ಭ್ರಮಿತ್ವಾತು ದೇವೋ ವಿಸ್ಮಯಮಾಗತಃ ॥ ೩೨ ॥
ನ ಸ್ಥಾನಂ ವಿದ್ಯತೇ ಕಿಂಚಿದ್ಯತ್ರ ವಿಶ್ರಮ್ಯತೇ ಕ್ಷಣಂ ।
ದೇವದಾನವಯೋಸ್ತತ್ರ ಯುದ್ಧಂ ಜ್ಞಾತ್ವಾ ಸುದಾರುಣಂ ॥ ೩೩ ॥
ಹರ್ಷಿತಾತ್ಮಾ ಮುನಿಸ್ತತ್ರ ಚಿರಂ ನೃತ್ಯತಿ ನಾರದಃ ।
ಧನ್ಯೋಽಹಮದ್ಯ ಮೇ ಜನ್ಮ ಜೀವಿತಂ ಚ ಸುಜೀವಿತಂ ॥ ೩೪ ॥

---

ನಂದಿಯು ಆ ದಾನವನು ತನ್ನ ತಲೆಯನ್ನು ಮುಟ್ಟದಿರುವಂತೆ ಬಾಲದಿಂದ ಅವನನ್ನು ಹೊಡೆದನು. ದೈತ್ಯನು ಮೇಲಕ್ಕೆದ್ದು ವೃಷಭನನ್ನು ಹಿಂದಟ್ಟಿ ಹೋದನು.

೨೮–೨೯. ಅವನು ವಾಯುವೇಗದಿಂದ ಮಹೇಶ್ವರನೆಡೆಗೆ ಬಂದನು. ಅದನ್ನು ನೋಡಿ ವೃಷಭನು ಮಹೇಶ್ವರನನ್ನು ಕುರಿತು, "ದೇವ! ನನ್ನ ಬೆನ್ನಿನ ಮೇಲೆ ಕುಳಿತು ಬೇಗನೆ ಪ್ರಯಾಣಮಾಡು" ಎಂದನು. ಶಂಕರನು ಅದರಂತೆ ಪಾರ್ವತಿಯೊಡನೆ ವೃಷಭವನ್ನೇರಿ ಹೊರಟನು.

೩೦. ಶಂಕರನು ಸ್ವರ್ಗವನ್ನು ಸೇರಿ ಇಂದ್ರನ ಮನೆಗೆ ಹೋದನು. ಬಲದಿಂದ ಅಹಂಕಾರಗೊಂಡ ದಾನವನು ಅವನ ಬೆನ್ನನ್ನು ಬಿಡಲಿಲ್ಲ.

೩೧–೩೪. ಆಗ ಶಿವನು ಇಂದ್ರಲೋಕವನ್ನು ತ್ಯಜಿಸಿ ದೇವತೆಗಳೊಡನೆ ಬ್ರಹ್ಮಲೋಕಕ್ಕೆ ತೆರಳಿ ಭಯದಿಂದ ತಾನು ಹೋದೆಡೆಗೆಲ್ಲ ದಾನವನು ಹಿಂಬಾಲಿಸಿ ಬರುತ್ತಿರುವುದನ್ನು ಕಂಡನು. ಅವನು ಎಲ್ಲ ಲೋಕಗಳಲ್ಲಿಯೂ ಸಂಚರಿಸಿ ಆಶ್ಚರ್ಯಗೊಂಡನು. ಅವನಿಗೆ ಕ್ಷಣಕಾಲ ವಿಶ್ರಾಂತಿಗೊಳ್ಳಲು ಯಾವ ಸ್ಥಳವೂ ಇಲ್ಲವಾಯಿತು. ಇಷ್ಟರಲ್ಲಿ ನಾರದನು ದೇವದಾನವರಿಗೆ ದಾರುಣಸಮರವಾಗುವುದೆಂದರಿತು, "ನಾನು ಈ ದಿನ ಧನ್ಯನಾದೆನು. ನನ್ನ ಜೀವನವು ಸುಜೀವನವಾಯಿತು" ಎಂದು ಆನಂದದಿಂದ ಹಿಗ್ಗಿ ಕುಣಿದನು.

ಮಹಾಂತಂ ಚ ಕಲಿಂ ದೃಷ್ಟ್ವಾ ಸಂತೋಷಃ ಪರಮೋಽಭವತ್ ।
ದೇವದಾನವಯೋಸ್ತತ್ರ ಯುದ್ಧಂ ತ್ಯಕ್ತ್ವಾ ಚ ನಾರದಃ ॥ ३४ ॥
ಆಜಗಾಮ ತತೋ ವಿಪ್ರೋ ಯತ್ರ ದೇವೋ ಮಹೇಶ್ವರಃ ।
ದೃಷ್ಟ್ವಾ ದೇವೋಽಥ ತಂ ವಿಪ್ರಂ ಪ್ರತಿಪೂಜ್ಯಾಽಬ್ರವೀದಿದಂ ॥ ३೬ ॥
ಭೋ ನಾರದ ಮುನಿಶ್ರೇಷ್ಠ ಜಾನೀಷೇ ಕೇಶವಂ ಕ್ವಚಿತ್ ।
ಗತ್ವಾ ತತ್ರ ಚ ಶೀಘ್ರಂ ತ್ವಂ ಕೇಶವಾಯ ನಿವೇದಯ ॥ ३೭ ॥

ನಾರದ ಉವಾಚ :—

ದೇವದಾನವಸಿದ್ಧಾನಾಂ ಗಂಧರ್ವೋರಗರಕ್ಷಸಾಂ ।
ಸರ್ವೇಷಾಮೇವ ದೇವೇಶೋ ಹರತೇ ಧ್ರುವಮಾಪದಂ ॥ ३೮ ॥
ಅಸಂಭಾವ್ಯಂ ನ ವಕ್ತವ್ಯಂ ಮನಸಾಽಪಿ ನ ಚಿಂತಯೇತ್ ।
ಈದೃಶೀಂ ನೈವ ಬುಧ್ಯಾಮಿ ಆಪದಂ ಚ ವಿಭೋ ತವ ॥ ३೯ ॥

ಈಶ್ವರ ಉವಾಚ :—

ಗಚ್ಛ ನಾರದ ಶೀಘ್ರಂ ತ್ವಂ ಯತ್ರ ದೇವೋ ಜನಾರ್ದನಃ ।
ವಿದಿತಂ ಚ ತ್ವಯಾ ಸರ್ವಂ ಯತ್ಕೃತಂ ದಾನವೇನ ತು ॥ ೪೦ ॥
ಅವಧ್ಯೋ ದಾನವೋಹ್ಯೇಷ ಸೇಂದ್ರೈರಪಿ ಮರುದ್ಗಣೈಃ ।
ಗತ್ವಾ ತು ಕೇಶವಂ ದೇವಂ ನಿವೇದಯ ಮಹಾಮುನೇ ॥ ೪೧ ॥

---

३४–३೬. ದೊಡ್ಡ ಜಗಳವನ್ನು ನೋಡಿ ಅವನಿಗೆ ಅತ್ಯಾನಂದವಾಯಿತು. ಅವನು ಆ ದೇವದಾನವರ ಯುದ್ಧವನ್ನು ತ್ಯಜಿಸಿ ಶಿವನೆಡೆಗೆ ಬಂದನು. ಶಿವನು ಅವನನ್ನು ನೋಡಿ ಪೂಜಿಸಿ ಹೀಗೆಂದನು.

३೭. "ಎಲೈ ಮುನಿವರ್ಯನಾದ ನಾರದನೆ! ವಿಷ್ಣುವು ಎಲ್ಲಿರುವನೆಂಬುದನ್ನು ತಿಳಿದಿದ್ದೀಯೆ. ಶೀಘ್ರವಾಗಿ ಅಲ್ಲಿಗೆ ಹೋಗಿ ಆತನಿಗೆ ಈ ಯುದ್ಧದ ಸುದ್ದಿಯನ್ನು ತಿಳಿಸು."

३೮–३೯. ನಾರದನು ಹೇಳುತ್ತಾನೆ·—ಎಲೈ ಹರನೇ! ದೇವತೆಗಳು, ದಾನವರು, ಸಿದ್ಧರು, ಗಂಧರ್ವರು, ನಾಗರು, ರಾಕ್ಷಸರು ಇವರೆಲ್ಲರಿಗೂ ಒಡೆಯನಾದ ನಿನಗೆ ಆಪತ್ತು ಉಂಟಾಗಿರುವುದೆಂದರೇನು? ನಿನಗೆ ಆಪತ್ತು ಅಸಂಭಾವ್ಯವೂ, ಹೇಳಲಾಗದಿರುವುದೂ, ಆಲೋಚಿಸಲನರ್ಹವೂ ಆಗಿರುವುದು. ಇಂತಹ ಆಪತ್ತು ನಿನಗುಂಟಾಗಿರುವುದೆಂದು ಅರಿಯೆನು.

೪೦. ಈಶ್ವರನು ಹೇಳುತ್ತಾನೆ:—ನಾರದ! ನೀನು ಬೇಗನೆ ವಿಷ್ಣುವಿನೆಡೆಗೆ ಹೋಗು. ಈ ದಾನವನು ಏನನ್ನು ಮಾಡಿರುವನೆಂಬುದನ್ನು ನೀನು ತಿಳಿದಿರುವೆ.

೪೧. ಇವನು ಇಂದ್ರಾದಿ ದೇವತೆಗಳಿಗೂ ಅವಧ್ಯನಾಗಿರುವನು. ವಿಷ್ಣುವಿನೆಡೆಗೆ ಹೋಗಿ ತಿಳಿಸು.

ನಾರದ ಉವಾಚ :—

ನ ತು ಗಚ್ಛಾಮ್ಯಹಂ ದೇವ ಸುಪ್ತಃ ಕ್ಷೀರೋದಧೌ ಸುಖೀ ।
ಕೇಶವಃ ಪ್ರೇರಣೇಹ್ಯೇಷಾಮಾದೇಶೋ ದೀಯತಾಂ ಪ್ರಭೋ ॥ ೪೨ ॥
ಮಾತ್ರಾ ಸ್ವಸ್ರಾ ದುಹಿತ್ರಾ ವಾ ರಾಜಾನಂ ಚ ತಥಾ ಪ್ರಭುಂ ।
ಗುರುಂ ಚೈವಾದಿತಃ ಕೃತ್ವಾ ಶಯಾನಂ ನ ಪ್ರಬೋಧಯೇತ್ ॥ ೪೩ ॥

ಈಶ್ವರ ಉವಾಚ :—

ಯದಿ ಕ್ವಚಿದಗಾರೇಷು ವಹ್ನಿರುತ್ಪದ್ಯತೇ ಮಹಾನ್ ।
ನಿಧನಂ ಯಾಂತಿ ತತ್ರಸ್ಥಾ ಯದ್ಬುದ್ಧ್ಯೇರನ್ನ ಸೂರಯಃ ॥ ೪೪ ॥

ನಾರದ ಉವಾಚ :—

ಶೀಘ್ರಂ ಗಚ್ಛ ಮಹಾದೇವ ಆತ್ಮಾನಂ ರಕ್ಷ ಸುಪ್ರಭೋ ।
ಗಚ್ಛಾಮ್ಯಹಂ ನ ಸಂದೇಹೋ ಯತ್ರ ದೇವೋ ಜನಾರ್ದನಃ ॥ ೪೫ ॥
ತತೋ ನಂದಿಮಹಾಕಾಲೌ ಸ್ತಂಭಹಸ್ತೌ ಭಯಾನಕೌ ।
ಜಘ್ನತುರ್ದಾನವಂ ತತ್ರ ಮುದ್ಗರಾದಿಭಿರಾಯುಧೈಃ ॥ ೪೬ ॥
ತ್ರಯೋಽಪಿ ಚ ಮಹಾಕಾಯಾಃ ಸಪ್ತತಾಲಪ್ರಮಾಣಕಾಃ ।
ಸ ಶಮೋ ಜಾಯತೇ ತೇಷಾಂ ಯುಧ್ಯತಾಂ ಚ ಪರಸ್ಪರಂ ॥ ೪೭ ॥

---

೪೨. ನಾರದನು ಹೇಳುತ್ತಾನೆ;—ಶಂಕರ! ನಾನು ಕೇಶವನೆಡೆಗೆ ಹೋಗಲಾರೆ. ಆತನು ಕ್ಷೀರಸಮುದ್ರದಲ್ಲಿ ಸುಖವಾಗಿ ಮಲಗಿರುವನು. ಆತನನ್ನು ಎಬ್ಬಿಸಲು ಇವರಿಗೆ ಅಪ್ಪಣೆಮಾಡು.

೪೩. ತಾಯಿಯಾಗಲಿ, ಸಹೋದರಿಯಾಗಲಿ ಅಥವಾ ಮಗಳೇ ಆಗಲಿ ದೊರೆಯನ್ನೂ, ಸ್ವಾಮಿಯನ್ನೂ, ಗುರುವನ್ನೂ ಮಲಗಿರುವಾಗ ಎಬ್ಬಿಸಬಾರದು.

೪೪. ಈಶ್ವರನು ಹೇಳುತ್ತಾನೆ —ಯಾವುದಾದರೊಂದು ಮನೆಗೆ ಬೆಂಕಿಯು ಹೊತ್ತಿಕೊಂಡರೆ ಆ ಮನೆಯಲ್ಲಿರುವವರು ಸಾಯುವರೆಂಬುದನ್ನು ವಿದ್ವಾಂಸರು ತಿಳಿಯುವುದಿಲ್ಲವೆ?

೪೫ ನಾರದನು ಹೇಳುತ್ತಾನೆ:—ಶಂಕರ! ಬೇಗನೆ ಹೋಗು. ನಿನ್ನನ್ನು ರಕ್ಷಿಸಿಕೊ. ನಿಶ್ಚಯವಾಗಿಯೂ ನಾನು ವಿಷ್ಣುವಿನೆಡೆಗೆ ಹೋಗುವೆನು.

೪೬. ಬಳಿಕ ಸ್ತಂಭವನ್ನು ಹಿಡಿದವರೂ, ಭಯಂಕರರೂ ಆದ ನಂದಿ ಮಹಾಕಾಲರು ಮುದ್ಗರ ಮೊದಲಾದ ಆಯುಧಗಳಿಂದ ಆ ದಾನವನನ್ನು ಹೊಡೆದರು.

೪೭. ದೊಡ್ಡ ಶರೀರವುಳ್ಳವರೂ, ಏಳು ತಾಳೆಮರಗಳ ಪ್ರಮಾಣವುಳ್ಳವರೂ ಆದ ಆ ಮೂವರೂ ಪರಸ್ಪರವಾಗಿ ಯುದ್ಧಮಾಡುತ್ತಿರಲು ಅದು ಶಾಂತವಾಗಲಿಲ್ಲ.

ತತಶ್ಚಾನಂತರಂ ವಿಪ್ರೋಽಗಚ್ಛತ್ತಂ ಕೇಶವಂ ಪ್ರತಿ ।
ಸುಪ್ತಂ ಕ್ಷೀರಾರ್ಣವೇಽಪಶ್ಯಚ್ಛೇಷಪರ್ಯಂಕಸಂಸ್ಥಿತಂ ॥ ೪೮ ॥
ಲಕ್ಷ್ಮ್ಯಾ ಪಾದಯುಗಂ ಗೃಹ್ಯ ಊರೂಪರಿ ನಿವೇಶಿತಂ ।
ಅಪ್ಸರೋಗೀಯಮಾನಂ ತು ಭಕ್ತ್ಯಾನಮ್ಯ ಚ ಕೇಶವಂ ॥ ೪೯ ॥
ಅದ್ಯ ಮೇ ಸಫಲಂ ಜನ್ಮ ಜೀವಿತಂ ಚ ಸುಜೀವಿತಂ ।
ಉತ್ಥಾಪಯಸ್ವ ದೇವೇಶಂ ಲಕ್ಷ್ಮಿ ತ್ವಮವಿಶಂಕಿತಾ ॥ ೫೦ ॥
ನಾರದಸ್ಯ ವಚಃ ಶ್ರುತ್ವಾ ಪಾದಾಂಗುಷ್ಠಂ ವ್ಯಮರ್ದಯತ್ ।
ನಾರದಸ್ತಿಷ್ಠತೇ ದ್ವಾರಿ ಉತ್ತಿಷ್ಠ ಮಧುಸೂದನ ॥ ೫೧ ॥
ದೇವೋಽಪಿ ನಾರದಂ ದೃಷ್ಟ್ವಾ ಪರಂ ಹರ್ಷಮುಪಾಗತಃ ।
ಸ್ವಾಗತಂ ತು ಮುನಿಶ್ರೇಷ್ಠ ಸುಪ್ರಭಾತಾಽದ್ಯ ಶರ್ವರೀ ॥ ೫೨ ॥

ನಾರದ ಉವಾಚ :—

ಅದ್ಯ ಮೇ ಸಫಲಂ ದೇವ ಪ್ರಭಾತಂ ತವ ದರ್ಶನಾತ್ ।
ಕುಶಲಂ ಚ ನ ದೇವಾನಾಂ ಶೀಘ್ರಮುತ್ತಿಷ್ಠ ಗಮ್ಯತಾಂ ॥ ೫೩ ॥

ಶ್ರೀ ವಿಷ್ಣುರುವಾಚ :—

ಬ್ರಹ್ಮಾಚೇಂದ್ರಶ್ಚ ರುದ್ರಶ್ಚ ಯೇ ಚಾನ್ಯೇ ತು ಮರುದ್ಗಣಾಃ ।
ಆಪದಃ ಕಾರಣಂ ಯಚ್ಚ ತತ್ಸಮಾಖ್ಯಾತುಮರ್ಹಸಿ ॥ ೫೪ ॥

---

೪೮. ಅನಂತರ ನಾರದನು ಕ್ಷೀರಸಮುದ್ರಕ್ಕೆ ಹೋಗಿ ಅಲ್ಲಿ ಶೇಷತಲ್ಪದಲ್ಲಿ ಮಲಗಿರುವ ನಾರಾಯಣನನ್ನು ಕಂಡನು.

೪೯–೫೦. ಲಕ್ಷ್ಮಿಯು ತನ್ನ ತೊಡೆಯಮೇಲೆ ಇಟ್ಟುಕೊಂಡಿರುವ ಕಾಲುಗಳುಳ್ಳವನೂ, ಅಪ್ಸರೆಯರಿಂದ ಸ್ತುತಿಸಲ್ಪಟ್ಟವನೂ ಆದ ನಾರಾಯಣನನ್ನು ಭಕ್ತಿಯಿಂದ ವಂದಿಸಿ, "ಈ ದಿನ ನನ್ನ ಜನ್ಮವು ಸಫಲವಾಯಿತು. ಜೀವನವು ಸುಜೀವನವಾಯಿತು" ಎಂದಾಲೋಚಿಸಿ, "ಎಲೌ ಲಕ್ಷ್ಮಿಯೆ! ನೀನು ಶಂಕೆಯಿಲ್ಲದೆ ವಿಷ್ಣುವನ್ನು ಎಚ್ಚರಿಸು" ಎಂದನು.

೫೧. ಲಕ್ಷ್ಮಿಯು ನಾರದನ ಮಾತನ್ನು ಕೇಳಿ ಕಾಲಿನ ಬೆರಳನ್ನು ಒತ್ತಿ, "ನಾರದನು ಬಾಗಿಲಿನಲ್ಲಿರುವನು. ಕೇಶವ! ಏಳು" ಎಂದಳು.

೫೨. ಕೇಶವನು ನಾರದನನ್ನು ನೋಡಿ ಅತ್ಯಂತ ಸಂತೋಷಗೊಂಡು, "ಮುನಿವರ್ಯನೆ! ಸುಖಾಗಮನವೆ? ರಾತ್ರಿಯು ಸುಪ್ರಭಾತವಾಯಿತೆ?" ಎಂದು ಪ್ರಶ್ನಿಸಿದನು.

೫೩. ನಾರದನು ಹೇಳುತ್ತಾನೆ —"ಸ್ವಾಮಿ! ನಿನ್ನನ್ನು ನೋಡಿದಕೂಡಲೆ ಈ ದಿನದ ಪ್ರಾತಃಕಾಲವು ಸಫಲವಾಯಿತು. ದೇವತೆಗಳು ಕುಶಲರಾಗಿಲ್ಲ. ಬೇಗನೆ ಏಳು. ಅಲ್ಲಿಗೆ ಹೋಗು."

೫೪. ಶ್ರೀವಿಷ್ಣುವು ಹೇಳುತ್ತಾನೆ:— ಬ್ರಹ್ಮ, ಇಂದ್ರ, ರುದ್ರರಿಗೂ

ನಾರದ ಉವಾಚ :—

ದಾನವೇನ ಮಹಾತೀವ್ರಂ ತಪಸ್ತಪ್ತಂ ಸುದಾರುಣಂ ।
ರುದ್ರೇಣ ಚ ವರೋ ದತ್ತೋ ಭಸ್ಮತ್ವಂ ಮನಸೇಪ್ಸಿತಂ ॥ ೫೫ ॥
ವರದಾನಬಲೇನೈವ ಸ ದೇವಂ ಹಂತುಮರ್ಹತಿ ।
ಈದೃಶಂ ಚೇಷ್ಟಿತಂ ಜ್ಞಾತ್ವಾ ನೀತೋ ದೇವೋಽಮರೈಃ ಸಹ ॥ ೫೬ ॥
ನಾರದಸ್ಯ ವಚಃ ಶ್ರುತ್ವಾ ಜಗಾಮ ಸ ಮುನಿರ್ಹರಿಃ ।
ದೃಷ್ಟ್ವಾ ದೇವಸ್ತಮೀಶಾನಂ ಗಚ್ಛಂತಂ ದಿಶಮುತ್ತರಾಂ ॥ ೫೭ ॥
ದೃಷ್ಟ್ವಾ ದೇವಂ ಚ ರುದ್ರೋಽಥ ಪರಿಷ್ವಜ್ಯ ಪುನಃ ಪುನಃ ।
ನಮಸ್ಕೃತ್ಯ ಜಗನ್ನಾಥಂ ದೇವಂ ಚ ಮಧುಸೂದನಃ ॥ ೫೮ ॥

ವಿಷ್ಣುರುವಾಚ :—

ಭಯಸ್ಯ ಕಾರಣಂ ದೇವ ಕಥ್ಯತಾಂ ಚ ಮಹೇಶ್ವರ ।
ದೇವದಾನವಯಕ್ಷಾಣಾಂ ಪ್ರೇಷಯೇಯಂ ಯಮಾಲಯಂ ॥ ೫೯ ॥
ಲಲಾಟೇ ಚ ಕೃತೋ ಘರ್ಮೋ ಯುಷ್ಮಾಕಂ ಚ ಮಹೇಶ್ವರ ।
ಛಿತ್ವಾ ಶಿರಸ್ತಥಾಂಗಾನಿ ಇಂದ್ರಿಯಾಣಿ ನ ಸಂಶಯಃ ॥ ೬೦ ॥

---

ಇತರ ದೇವತೆಗಳಿಗೂ ಆಪತ್ತುಂಟಾಗಲು ಕಾರಣವೇನು? ಅದನ್ನು ಕೇಳಲರ್ಹ ನಾಗಿರುವೆನು.

೫೫–೫೬. ನಾರದನು ಹೇಳುತ್ತಾನೆ — ದಾನವನೋರ್ವ ಕಠಿನವಾದ ತಪವನ್ನಾಚರಿಸಿದನು. ರುದ್ರನು ಅವನಿಗೆ ಇಷ್ಟವಾದ ಮುಟ್ಟಿದವರನ್ನೆಲ್ಲ ಭಸ್ಮಸಾತ್ಕರಿಸುವ ಸಾಮರ್ಥ್ಯವನ್ನು ವರವಾಗಿತ್ತನು. ದಾನವನು ಆ ವರದಾನದ ಬಲದಿಂದಲೇ ಶಂಕರನನ್ನು ಕೊಲ್ಲಲು ಬಯಸುತ್ತಾನೆ. ಇಂತಹ ಅವನ ಕಾರ್ಯವನ್ನರಿತು ದೇವತೆಗಳು ಶಂಕರನನ್ನು ಕರೆದುಕೊಂಡುಹೋದರು

೫೭. ವಿಷ್ಣುವು ನಾರದನ ಮಾತನ್ನು ಕೇಳಿ ಅವನೊಡನೆಯೆ ಹೊರಟು, ಉತ್ತರದಿಕ್ಕಿಗೆ ಹೋಗುತ್ತಿರುವ ಈಶ್ವರನನ್ನು ಕಂಡನು.

೫೮. ರುದ್ರನೂ ವಿಷ್ಣುವನ್ನು ನೋಡಿ ಬಾರಿಬಾರಿಗೂ ಅವನನ್ನು ತಬ್ಬಿಕೊಂಡನು. ನಾರಾಯಣನು ಜಗದೊಡೆಯನಾದ ಶಂಕರನನ್ನು ನಮಸ್ಕರಿಸಿ ಹೀಗೆಂದನು.

೫೯. ವಿಷ್ಣುವು ಹೇಳುತ್ತಾನೆ:—ಮಹೇಶ್ವರ! ನಿನಗೆ ಭಯವುಂಟಾಗಲು ಕಾರಣವೇನು? ಹೇಳು. ನಿನಗೆ ಭಯವನ್ನುಂಟುಮಾಡಿರುವ ದೇವ, ದಾನವ ಯಕ್ಷರೆಲ್ಲರನ್ನೂ ಯಮಪುರಿಗೆ ಕಳುಹಿಸುವೆನು.

೬೦. ತಲೆ, ಅಂಗಗಳು, ಇಂದ್ರಿಯಗಳನ್ನು ಭೇದಿಸಿ ಬೆವರು ನಿನ್ನ ಹಣೆಯಲ್ಲಿ ನೆಲೆಸಿರುವುದಲ್ಲ!

ಈಶ್ವರ ಉವಾಚ :—

ನಾಸ್ತಿ ಸೌಖ್ಯಂ ಚ ಮೂರ್ಖೇಷು ನಾಸ್ತಿ ಸೌಖ್ಯಂ ಚ ರೋಗಿಷು ।
ಪರಾಧೀನೇನ ಸೌಖ್ಯಂ ತು ಸ್ತ್ರೀಜಿತೇ ಚ ವಿಶೇಷತಃ ॥ ೬೧ ॥
ಸ್ತ್ರೀಜಿತೇನ ಮಯಾ ವಿಷ್ಣೋ ವರೋ ದತ್ತಸ್ತು ದಾನವೇ ।
ಯಸ್ಯ ಮೂರ್ಧ್ನಿ ನ್ಯಸೇತ್ಪಾಣಿಂ ಸ ಭವೇದ್ಭಸ್ಮಪುಂಜವತ್ ॥ ೬೨ ॥
ಅಜೇಯಶ್ಚಾಽಮರಶ್ಚೈವ ಮಯಾ ಹ್ಯುಕ್ತಃ ಸ ಕೇಶವ ।
ಹಂತುಮಿಚ್ಛತಿ ಮಾಂ ಪಾಪ ಉಪಾಯಸ್ತ್ವವ ವಿದ್ಯತೇ ॥ ೬೩ ॥

ವಿಷ್ಣುರುವಾಚ :—

ಗಚ್ಛಂತು ಅಮರಾಃ ಸರ್ವೇ ಯುಷ್ಮಾಭಿಃ ಸಹ ಶಂಕರ ।
ಉಪಾಯಂ ಸರ್ಜಯಾಮ್ಯದ್ಯ ವಧಾರ್ಥಂ ದಾನವಸ್ಯ ಚ ॥ ೬೪ ॥
ರೇವಾಯಾಶ್ಚ ತಟೇ ತಿಷ್ಠ ದೇವ ತ್ವಮಮರೈಃ ಸಹ ।
ಕಾಲಕ್ಷಯೋ ನ ಕರ್ತವ್ಯೋ ಗಮ್ಯತಾಂ ತ್ವರಿತಂ ಪ್ರಭೋ ॥ ೬೫ ॥
ದಕ್ಷಿಣಾ ಯತ್ರ ಗಂಗಾ ಚ ರೇವಾ ಚೈವ ಮಹಾನದೀ ।
ಯತ್ರ ಯತ್ರ ಚ ದೃಶ್ಯೇತ ಪ್ರಾಚೀ ಚೈವ ಸರಸ್ವತೀ ॥ ೬೬ ॥
ತತ್ಸಮಂ ಚ ಮಹಾತೀರ್ಥಂ ನ ಮರ್ತ್ಯೇ ಚೈವ ದೃಶ್ಯತೇ ।
ಸ್ನಾನಂ ಯೇ ತತ್ರ ಕುರ್ವಂತಿ ದಾನಂ ಚೈವ ತು ಭಕ್ತಿತಃ ॥ ೬೭ ॥
ಸಪ್ತಜನ್ಮಕೃತಂ ಪಾಪಂ ನಶ್ಯತೇ ನಾಽತ್ರ ಸಂಶಯಃ ।
ಏತತ್ತೀರ್ಥಂ ಮಹಾಪುಣ್ಯಂ ಸರ್ವಪಾತಕನಾಶನಂ ॥ ೬೮ ॥

---

೬೧. ಮೂರ್ಖರಿಗೂ, ರೋಗಿಗಳಿಗೂ, ಪರಾಧೀನನಾದವನಿಗೂ, ಸ್ತ್ರೀವಶನಾದವನಿಗೂ ಸೌಖ್ಯವಿರುವುದಿಲ್ಲ.

೬೨–೬೩. ಸ್ತ್ರೀವಶನಾದ ನಾನು ಈ ದಾನವನಿಗೆ, "ನೀನು ಯಾರ ತಲೆಯಲ್ಲಿ ಕೈಯನ್ನು ಇಡುವೆಯೊ ಅವನು ಬೂದಿಯಾಗುವನು. ಅಜೇಯನೂ, ಅಮರನೂ ಆಗುವೆ" ಎಂದು ವರವನ್ನು ಕೊಟ್ಟೆನು. ಪಾಪಿಯಾದ ಇವನು ನನ್ನನ್ನೇ ಕೊಲ್ಲಲು ಬಯಸುವನು. ಇದಕ್ಕೆ ಉಪಾಯವು ನಿನ್ನಲ್ಲಿದೆ.

೬೪. ವಿಷ್ಣುವು ಹೇಳುತ್ತಾನೆ.—ಶಂಕರ! ದೇವತೆಗಳೆಲ್ಲ ನಿನ್ನೊಡನೆ ಹೊರಡಲಿ. ಆ ದಾನವನನ್ನು ಕೊಲ್ಲಲು ಉಪಾಯವನ್ನು ಸೃಜಿಸುವೆನು.

೬೫. ಶಂಕರ! ನೀನು ದೇವತೆಗಳೊಡನೆ ನರ್ಮದಾನದಿಯ ದಡದಲ್ಲಿರು. ಕಾಲವಿಳಂಬಮಾಡಬೇಡ. ಶೀಘ್ರವಾಗಿ ಹೋಗು.

೬೬–೭೦. ದಕ್ಷಿಣಗಂಗೆ, ರೇವಾನದೀ, ಪ್ರಾಚೀಸರಸ್ವತೀ ಇವುಗಳು ಎಲ್ಲಿ ಕಾಣಿಸುವುವೊ, ಅದಕ್ಕೆ ಸಮಾನವಾದ ಮಹಾತೀರ್ಥವು ಭೂಲೋಕದಲ್ಲಿ ಕಾಣಿಸುವುದಿಲ್ಲ. ಅಲ್ಲಿ ಸ್ನಾನ ದಾನಗಳನ್ನು ಭಕ್ತಿಯಿಂದ ಮಾಡಿದವರ ಏಳು

ಗಮ್ಯತಾಂ ತತ್ರ ದೇವೇಶ ಲುಂಕೇಶಂ ತ್ವಂ ಸಹಾಽಮರೈಃ ।
ವಿಷ್ಣೋಽಸ್ತು ವಚನಾದೇವ ಪ್ರವಿಷ್ಟೋ ಹ್ರದಮುತ್ತಮಂ ॥ ೬೯ ॥
ರತಿಂ ಸುಮಹತೀಂ ಚಕ್ರೇ ಸಹ ತತ್ರ ಮರುದ್ಗಣೈಃ ।
ತತಶ್ಚಾನಂತರಂ ದೇವೋ ಮಾಯಾಂ ಕೃತ್ವಾ ಹ್ಯನೇಕಧಾ ॥ ೭೦ ॥
ವಸಂತಮಾಸಂ ಸಂಸೃಜ್ಯ ಉದ್ಯಾನವನಶೋಭಿತಂ ।
ಅಶೋಕೈರ್ಬಕುಲೈಶ್ಚೈವ ಬ್ರಹ್ಮವೃಕ್ಷೈಃ ಸುಶೋಭನೈಃ ॥ ೭೧ ॥
ಶ್ರೀವೃಕ್ಷೈಶ್ಚ ಕಪಿತ್ಥೈಶ್ಚ ಶಿರೀಷೈ ರಾಜಚಂಪಕೈಃ ।
ಶ್ರೀಫಲೈಶ್ಚ ತಥಾ ತಾಲೈಃ ಕದಂಬೋದುಂಬರೈಸ್ತಥಾ ॥ ೭೨ ॥
ಅಶ್ವತ್ಥಾದಿದ್ರುಮಶ್ಚೈವ ನಾನಾವೃಕ್ಷೈರನೇಕಶಃ ।
ನಾನಾಪುಷ್ಪೈಃ ಸುಗಂಧಾಢ್ಯೈರ್ಭ್ರಮರೈಶ್ಚ ನಿನಾದಿತಂ ॥ ೭೩ ॥
ತಸ್ಮಿನ್ಮಧ್ಯೇ ಮಹಾವೃಕ್ಷೋ ನ್ಯಗ್ರೋಧಶ್ಚ ಸುಶೋಭನಃ ।
ಬಹುಪಕ್ಷಿಸಮಾಯುಕ್ತಃ ಕೋಕಿಲಾರಾವ ನಾದಿನಃ ॥ ೭೪ ॥
ಕೃಷ್ಣೇನ ಚ ಕೃತಂ ತಸ್ಮಿನ್ಕನ್ಯಾರೂಪಂ ಚ ತತ್ಕ್ಷಣಾತ್ ।
ನ ತಸ್ಯಾಃ ಸದೃಶೀ ಕನ್ಯಾ ತ್ರೈಲೋಕ್ಯೇ ಸ ಚರಾಚರೇ ॥ ೭೫ ॥
ಅನ್ಯಾಶ್ಚ ಕನ್ಯಕಾಃ ಸಪ್ತ ಸುರೂಪಾಃ ಶುಭಲೋಚನಾಃ ।
ದಿವ್ಯರೂಪಧರಾಃ ಸರ್ವಾ ದಿವ್ಯಾಭರಣಭೂಷಿತಾಃ ॥ ೭೬ ॥

---

ಜನ್ಮಗಳ ಪಾಪವು ನಾಶವಾಗುವುದು. ಇದರಲ್ಲಿ ಸಂಶಯವಿಲ್ಲ. ಈ ಲುಂಕೇಶ ತೀರ್ಥವು ಮಹಾ ಪುಣ್ಯಕರವೂ, ಸಮಸ್ತ ಪಾಪಪರಿಹಾರಕವೂ ಆಗಿರುವುದು. ದೇವೇಶ! ನೀನು ದೇವತೆಗಳೊಡನೆ ಅಲ್ಲಿಗೆ ಹೋಗು.'' ಶಂಕರನು ವಿಷ್ಣುವಿನ ಮಾತಿನಿಂದಲೇ ಉತ್ತಮವಾದ ಆ ಸರೋವರವನ್ನು ಪ್ರವೇಶಿಸಿ ದೇವತೆಗಳೊಡನೆ ಅಲ್ಲಿ ಅತ್ಯಂತ ಪ್ರೀತಿಯನ್ನು ಹೊಂದಿದನು. ಬಳಿಕ ಆ ವಿಷ್ಣುವು ಅನೇಕಪ್ರಕಾರವಾಗಿ ಮಾಯೆಯನ್ನು ಕಲ್ಪಿಸಿದನು.

೭೧–೭೪. ಅಶೋಕ, ಬಕುಲ, ಬ್ರಹ್ಮವೃಕ್ಷ, ಶ್ರೀವೃಕ್ಷ, ಬೇಲ, ಬಾಗೆ, ರಾಜಚಂಪಕ, ಶ್ರೀಫಲ, ತಾಳೆ, ಈಚಲ, ಅತ್ತಿ, ಅಶ್ವತ್ಥ ಮೊದಲಾದ ವೃಕ್ಷಗಳಿಂದಲೂ, ಸುವಾಸನೆಯಾದ ಅನೇಕ ಪುಷ್ಪಗಳಿಂದಲೂ ವಿರಾಜಿಸುವುದಾಗಿ ತುಂಬಿಗಳಿಂದ ಧ್ವನಿಗೊಂಡ ಉದ್ಯಾನದಿಂದ ಪ್ರಕಾಶಿಸುವ ವಸಂತಮಾಸವನ್ನು ಸೃಜಿಸಿದನು. ಆ ಉದ್ಯಾನದ ನಡುವೆ ಸುಂದರವೂ, ಅನೇಕ ಪಕ್ಷಿಗಳಿಂದ ಕೂಡಿರುವುದೂ, ಕೋಗಿಲೆಯ ಧ್ವನಿಯುಳ್ಳುದೂ ಆದ ದೊಡ್ಡ ಆಲದಮರವಿದ್ದಿತು.

೭೫. ಅದರಡಿಯಲ್ಲಿ ವಿಷ್ಣುವು ಕೂಡಲೆ ಕನ್ಯಾರೂಪವನ್ನು ಧರಿಸಿದನು. ಅವಳಿಗೆ ಸಮಾನಳಾದ ಕನ್ಯೆಯು ಮೂರು ಲೋಕಗಳಲ್ಲಿರಲಿಲ್ಲ.

೭೬–೭೮. ಅಲ್ಲದೆ ಸುಂದರಿಯರೂ, ಸುಂದರ ನೇತ್ರಗಳುಳ್ಳವರೂ, ದಿವ

**ಪುಮಾಂಸಮಭಿಕಾಂಕ್ಷಂತ್ಯೋ ಯದ್ಯೇಕಃ ಕಾಮಯೇತ್ಸ್ತ್ರಿಯಃ ।**
**ಮೌಕ್ತಿಕೈ ರತ್ನಮಾಣಿಕ್ಯೈರ್ವೈಡೂರ್ಯೈಶ್ಚ ಸುಶೋಭನೈಃ ॥ ೭೭ ॥**
**ಕಾಮಹಾರೈಶ್ಚ ವಂಶೈಶ್ಚ ಬದ್ಧೋ ಹಿಂದೋಲಕಃ ಕೃತಃ ।**
**ಆರೂಢಾಶ್ಚ ಮಹಾಕನ್ಯಾ ಗಾಯಂತೇ ಸುಸ್ವರಂ ತದಾ ॥ ೭೮ ॥**
**ಮಾರುತಃ ಶೀತಲೋ ವಾತಿ ವನಂ ಸ್ಪೃಷ್ಟ್ವಾ ಸುಶೋಭನಂ ।**
**ವಾತೇನ ಪ್ರೇರಿತೋ ಗಂಧೋ ದಾನವೋ ಘ್ರಾಣಪೀಡಿತಃ ॥ ೭೯ ॥**
**ತತಃ ಕುಸುಮಗಂಧೇನ ವಿಸ್ಮಯಂ ಪರಮಂ ಗತಃ ।**
**ಆಘ್ರಾಯ ಚೇದೃಶಂ ಪುಣ್ಯಂ ನ ದೃಷ್ಟಂ ನ ಶ್ರುತಂ ಮಯಾ ॥ ೮೦ ॥**
**ವನೇ ಚಿಂತಯತಃ ಕಿಂಚಿದ್ಧ್ವನಿಗೀತಂ ಸುಶೋಭನಂ ।**
**ಗೀತಸ್ಯ ಚ ಧ್ವನಿಂ ಶ್ರುತ್ವಾ ಮೋಹಿತೋ ಮಾಯಯಾ ಹರೇಃ ॥ ೮೧ ॥**
**ವ್ಯಾಧಸ್ಯೈವ ಮಹಾಕೂಟೇ ಪತಂತಿ ಚ ಯಥಾ ಮೃಗಾಃ ।**
**ಕಾಲಸ್ಪೃಷ್ಟಸ್ತಥಾ ಕೃಷ್ಣೇ ಪತಿತಶ್ಚ ನರಾಧಿಪ ॥ ೮೨ ॥**
**ದೃಷ್ಟ್ವಾ ಕನ್ಯಾಂ ಚ ತಾಂ ದೈತ್ಯೋ ಮೂರ್ಛಯಾ ಪತಿತೋ ಭುವಿ ।**
**ಪತಿತೇನ ತು ದೃಷ್ಟೈಕಾ ಕನ್ಯಾ ವಟತಲೇ ಸ್ಥಿತಾ ॥ ೮೩ ॥**

---

ರೂಪವನ್ನು ಧರಿಸಿದವರೂ, ದಿವ್ಯಾಭರಣಗಳಿಂದ ಅಲಂಕಾರಗೊಂಡವರೂ, ಸ್ತ್ರೀಯರನ್ನು ಕಾಮಿಸುವ ಪುರುಷನನ್ನು ವ್ಯಾಮೋಹಗೊಳಿಸುವವರೂ ಆದ ಇತರ ಏಳು ಮಂದಿ ಕನ್ಯೆಯರನ್ನೂ ಸೃಜಿಸಿದನು. ಮುತ್ತು, ರತ್ನ, ಮಾಣಿಕ್ಯ, ವೈಡೂರ್ಯ, ಕಾಮಹಾರ, ಕೊಳಲುಗಳಿಂದ ಕೂಡಿದ ಉಯ್ಯಾಲೆಯನ್ನು ಸೃಷ್ಟಿ ಮಾಡಿದನು. ಅವರೆಲ್ಲರೂ ಅದರಲ್ಲಿ ಕುಳಿತು ಇಂಪಾಗಿ ಹಾಡಿದರು.

೭೯. ಗಾಳಿಯು ಶೋಭನವಾದ ವನವನ್ನು ಸ್ಪರ್ಶಮಾಡಿ ತಣ್ಣಗೆ ಬೀಸಿತು. ಗಾಳಿಯಿಂದ ಬಂದ ಸುವಾಸನೆಯು ದಾನವನ ಮೂಗನ್ನು ಮುಟ್ಟಿತು.

೮೦–೮೧. ಆ ಹೂವಿನ ಸುವಾಸನೆಯಿಂದ ಆಶ್ಚರ್ಯಗೊಂಡ ದಾನವನು ಅದನ್ನು ಮೂಸಿ ಇಂತಹ ಪರಿಮಳವನ್ನು ನಾನು ಎಂದೂ ಆಘ್ರಾಣಿಸಲಿಲ್ಲ. ಕೇಳಲೂ ಇಲ್ಲ ಎಂದು ಆಲೋಚಿಸುತ್ತಿರಲು ಇಂಪಾದ ಹಾಡು ಕೇಳಿಸಿತು. ಅದನ್ನು ಕೇಳಿ ದಾನವನು ಹರಿಯ ಮಾಯೆಯಿಂದ ಮೋಹಗೊಂಡನು.

೮೨. ಕಾಲಪುಷ್ಟದಾನವನು ಆ ಪರ್ವತದಲ್ಲಿ ಬೇಡನಿಂದ ಮೃಗಗಳು ಬಲೆಯಲ್ಲಿ ಬೀಳುವಂತೆ ವಿಷ್ಣುವಿನಮೇಲೆ ಬಿದ್ದನು.

೮೩. ಭೂಮಿಯಲ್ಲಿ ಬಿದ್ದ ಅವನು ಆಲದಮರದ ಬುಡದಲ್ಲಿ ಓರ್ವ ಕನ್ಯೆಯನ್ನು ಕಂಡನು.

ಆಸ್ಯಂ ದೃಷ್ಟ್ವಾ ತು ನಾರೀಣಾಂ ಪುನಃ ಕಾಮೇನ ಪೀಡಿತಃ ।
ಗೃಹೀತ್ವಾ ಹೇಮದಂಡಂ ತು ತಾಂ ಪಾತಯಿತುಮಿಚ್ಛತಿ ॥ ೮೪ ॥

ಕನ್ಯೋವಾಚ :—

ಮಾ ಮಾಽನುಸ್ಪರ್ಶಯ ತ್ವಂ ಹಿ ಕುಮಾರ್ಯಹಂ ಕುಲೋತ್ತಮ ।
ಭೋ ಮುಂಚ ಮುಂಚ ಮಾಂ ಶೀಘ್ರಂ ಯಾವದ್ಗಚ್ಛಾಮ್ಯಹಂ ಗೃಹಂ ॥

ದಾನವ ಉವಾಚ :—

ಅಹಂ ವಿವಾಹಮಿಚ್ಛಾಮಿ ತ್ವಯಾ ಸಹ ಸುಶೋಭನೇ ।
ಭೂಪೃಷ್ಠೇ ಸಕಲೇ ರಾಜ್ಞೀ ಭವಸ್ಯೇವಂ ನ ಸಂಶಯಃ ॥ ೮೬ ॥

ಕನ್ಯೋವಾಚ :—

ಪಿತಾ ರಕ್ಷತಿ ಕೌಮಾರೇ ಭರ್ತಾ ರಕ್ಷತಿ ಯೌವನೇ ।
ಪುತ್ರೋ ರಕ್ಷತಿ ವೃದ್ಧತ್ವೇ ನ ಸ್ತ್ರೀ ಸ್ವಾತಂತ್ರ್ಯಮರ್ಹತಿ ॥ ೮೭ ॥
ನ ಸ್ವಾತಂತ್ರ್ಯಂ ಮನ್ಯೆವಾಸ್ತಿ ಉತ್ಪನ್ನಾಹಂ ಮಹತ್ಕುಲೇ ।
ಯಾಚ್ಯಸ್ತು ಮತ್ಪಿತಾ ಭ್ರಾತಾ ಮಾತಾಽಪಿ ಹಿ ತಥೈವ ಚ ॥ ೮೮ ॥

ದಾನವ ಉವಾಚ :—

ಯದಿ ಮಾಂ ನೇಚ್ಛಸೇ ತ್ವದ್ಯ ಸ್ವಾತಂತ್ರ್ಯಂ ನಾಽವಲಂಬಸೇ ।
ಮಮಾಽಪಿ ಚ ತದಾ ಹತ್ಯಾ ಸತ್ಯಂ ಚ ಶುಭಲೋಚನೇ ॥ ೮೯ ॥

---

೮೪. ಆ ದಾನವನು ನಾರಿಯರ ಮುಖವನ್ನು ನೋಡಿ ಕಾಮಪೀಡಿತನಾಗಿ ಚಿನ್ನದ ಕೋಲನ್ನು ತೆಗೆದುಕೊಂಡು ಆ ಕನ್ಯೆಯನ್ನು ಬೀಳಿಸಲು ಅಪೇಕ್ಷಿಸಿದನು.

೮೫. ಕನ್ಯೆಯು ಹೇಳುತ್ತಾಳೆ — ಎಲೈ ಕುಲೀನನೆ! ನೀನು ನನ್ನನ್ನು ಮುಟ್ಟಬೇಡ ನಾನು ಕನ್ಯೆಯು. ಬೇಗನೆ ನನ್ನನ್ನು ಬಿಡು. ಶೀಘ್ರವಾಗಿ ನಾನು ಮನೆಗೆ ತೆರಳುವೆನು.

೮೬. ದಾನವನು ಹೇಳುತ್ತಾನೆ —ಸುಂದರಿ! ನಾನು ನಿನ್ನನ್ನು ವಿವಾಹ ಮಾಡಿಕೊಳ್ಳಲು ಬಯಸುವೆನು ಸಕಲ ಭೂಮಂಡಲಕ್ಕೂ ನೀನು ನಿಶ್ಚಯವಾಗಿ ರಾಣಿಯಾಗುವೆ.

೮೭. ಕನ್ಯೆಯು ಹೇಳುತ್ತಾಳೆ —ಸ್ತ್ರೀಯನ್ನು ಬಾಲ್ಯದಲ್ಲಿ ತಂದೆಯೂ, ಯೌವನದಲ್ಲಿ ಗಂಡನೂ, ಮುಪ್ಪಿನಲ್ಲಿ ಮಗನೂ ರಕ್ಷಿಸುವರು. ಸ್ತ್ರೀಯು ಸ್ವಾತಂತ್ರ್ಯಕ್ಕೆ ಅರ್ಹಳಲ್ಲ.

೮೮. ನಾನು ದೊಡ್ಡ ವಂಶದಲ್ಲಿ ಹುಟ್ಟಿರುವೆನು. ನನಗೆ ಸ್ವಾತಂತ್ರ್ಯವಿಲ್ಲ. ನೀನು ನನ್ನ ತಂದೆ, ತಾಯಿ, ಸಹೋದರರನ್ನು ಯಾಚಿಸಬೇಕು.

೮೯. ದಾನವನು ಹೇಳುತ್ತಾನೆ:—ಸುಂದರಿ! ನೀನು ಸ್ವಾತಂತ್ರ್ಯವನ್ನು ವಹಿಸಿ ನನ್ನನ್ನು ಅಪೇಕ್ಷಿಸದೆ ಇದ್ದರೆ ನಾನು ನಿಜವಾಗಿಯೂ ಸಾಯುವೆನು.

ಕನ್ಯಾ ಉವಾಚ :—

ವಿಶ್ವಾಸೋ ನೈವ ಕರ್ತವ್ಯೋ ಯಾದೃಶೇ ತಾದೃಶೇ ನರೇ ।
ನರಾಃ ಸ್ತ್ರೀಷು ವಿಚಿತ್ರಾಶ್ಚ ಲಂಪಟಾಃ ಕಾಮಮೋಹಿತಾಃ ॥ ೯೦ ॥
ಪರಿಣೀಯ ತು ಮಾಂ ತ್ವಂ ಹಿ ಭುಂಕ್ಷ್ವ ಭೋಗಾನ್ಮಯಾ ಸಹ ।
ಜನ್ಮನಾಶೋ ಭವೇತ್ಪಶ್ಚಾನ್ನತ್ವಂ ನಾನ್ಯೋ ಭವೇನ್ಮಮ ॥ ೯೧ ॥
ಬ್ರಾಹ್ಮಣೀ ಕ್ಷತ್ರಿಣೀ ವೈಶ್ಯಾ ಶೂದ್ರೀ ಯಾವತ್ತಥೈವ ಚ ।
ದ್ವಿತೀಯೋ ನ ಭವೇದ್ಭರ್ತಾ ಏಕಾಕೀಚೇಹ ಜನ್ಮನಿ ॥ ೯೨ ॥

ದಾನವ ಉವಾಚ :—

ಯತ್ತ್ವಯಾ ಗದಿತಂ ವಾಕ್ಯಂ ತನ್ಮಯಾ ಧಾರಿತಂ ಹೃದಿ ।
ಪ್ರತ್ಯಯಂ ಮೇ ಕುರುಷ್ವಾಽದ್ಯ ಯತ್ತೇ ಮನಸಿ ರೋಚತೇ ॥ ೯೩ ॥

ಕನ್ಯೋವಾಚ :—

ಜಾನೀಷ್ವ ಗೋಪಕನ್ಯಾಂ ಮಾಂ ಕ್ರೀಡಾಮಿ ಸಖಿಭಿಃ ಸಹ ।
ಅಸ್ಮತ್ಕುಲೇಷು ಯದ್ದಿವ್ಯಂ ತತ್ಕುರುಷ್ವ ಯಥಾವಿಧಿ ॥ ೯೪ ॥
ನ ತದ್ದಿವ್ಯಂ ಕುಲೇಽಸ್ಮಾಕಂ ವಿಷಂ ಕೋಶಂ ನ ತತ್ತುಲಾ ।
ಗೋಪಾನ್ವಯೇಷು ಸರ್ವೇಷು ಹಸ್ತಃ ಶಿರಸಿ ಧೀಯತೇ ॥ ೯೫ ॥

---

೯೦. ಕನ್ಯೆಯು ಹೇಳುತ್ತಾಳೆ:—ಹೇಗಾದರೂ ಇರಲಿ; ಯಾವ ಮನುಷ್ಯನಲ್ಲಿಯೂ ನಂಬಿಕೆಯಿಡಬಾರದು. ಕಾಮಮೋಹಿತರಾದ ಪುರುಷರು ಸ್ತ್ರೀಯರಲ್ಲಿ ಲಂಪಟರೂ, ವಿಚಿತ್ರರೂ ಆಗಿರುವರು.

೯೧–೯೨. ನೀನು ನನ್ನನ್ನು ಮದುವೆಮಾಡಿಕೊಂಡು ನನ್ನೊಡನೆ ಸುಖವನ್ನನುಭವಿಸು. ನೀನು ಮೃತನಾದರೆ ನನಗೆ ನೀನೂ ಇಲ್ಲ. ಇತರರೂ ಪತಿಯಾಗುವಂತಿಲ್ಲ. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರಸ್ತ್ರೀಯರಿಗೆ ಎರಡನೆ ಗಂಡನಾಗಬಾರದು (ಪುನರ್ವಿವಾಹವಾಗಬಾರದು). ಅವರು ಈ ಜನ್ಮದಲ್ಲಿ ಒಬ್ಬಂಟಿಗರಾಗಿಯೇ ಇರಬೇಕು.

೯೩. ದಾನವನು ಹೇಳುತ್ತಾನೆ:—ಎಲೆ ಕನ್ಯೆಯೆ! ನೀನು ಹೇಳಿದ ಮಾತನ್ನು ನಾನು ತಿಳಿದುಕೊಂಡೆನು. ಈಗ ನಿನ್ನ ಮನಸ್ಸಿನಲ್ಲಿರುವಂತೆ ನನಗೆ ನಂಬಿಕೆಯನ್ನುಂಟುಮಾಡು.

೯೪. ಕನ್ಯೆಯು ಹೇಳುತ್ತಾಳೆ:— ನಾನು ಗೊಲ್ಲರಕನ್ಯೆಯೆಂದು ತಿಳಿ. ಸಖಿಯರೊಡನೆ ಇಲ್ಲಿ ಆಡುತ್ತಿದ್ದೇನೆ. ನಮ್ಮ ವಂಶಕ್ಕೆ ವಿಹಿತವಾದ ದಿವ್ಯವಿಧಿಯೊಂದಿದೆ. ಆ ವಿಧಿಯನ್ನು ನೀನೀಗ ಆಚರಿಸು.

೯೫. ನಮ್ಮ ವಂಶದಲ್ಲಿ ವಿಷ, ಬೊಕ್ಕಸ, ತಕ್ಕಡಿಗಳು ದಿವ್ಯಗಳಲ್ಲ. ಗೊಲ್ಲರ ವಂಶದಲ್ಲಿ ಕೈಯನ್ನು ತಲೆಯಮೇಲಿಟ್ಟುಕೊಳ್ಳುತ್ತಾರೆ.

ಕಾಮಾಂಧೇನೈವ ರಾಜೇಂದ್ರ ನಿಕ್ಷಿಪ್ತೋ ಮಸ್ತಕೇ ಕರಃ ।
ತತ್ಕ್ಷಣಾದ್ಭಸ್ಮಸಾದ್ಭೂತೋ ದಗ್ಧಸ್ತೃಣಚಯೋ ಯಥಾ ॥ ೯೬ ॥
ಕೇಶವೋಪರಿ ದೇವೈಸ್ತು ಪುಷ್ಪವೃಷ್ಟಿಃ ಶುಭಾ ಕೃತಾ ।
ಹೃಷ್ಟಾಃ ಸರ್ವೇऽಗಮನ್ದೇವಾಃ ಸ್ವಸ್ಥಾನಂ ವಿಗತಜ್ವರಾಃ ॥ ೯೭ ॥
ಕ್ಷೀರೋದಂ ಕೇಶವೋऽಗಚ್ಛತ್ಕಾಲಪೃಷ್ಠೇ ನಿಪಾತಿತೇ ।
ಯ ಇದಂ ಶೃಣುಯಾದ್ಭಕ್ತ್ಯಾ ಚರಿತಂ ದಾನವಸ್ಯ ಚ ॥ ೯೮ ॥
ಸ ಜಯೀ ಜಾಯತೇ ನಿತ್ಯಂ ಶಂಕರಸ್ಯ ವಚೋ ಯಥಾ ।
ಏತಸ್ಮಾತ್ಕಾರಣಾದ್ರಾಜಂಲ್ಲಿಂಗೇಶ್ವರಮಿತಿ ಶ್ರುತಂ ॥ ೯೯ ॥
ಲೀನಂ ಚ ಪಾತಕಂ ಯಸ್ಮಾತ್ಸ್ನಾನಮಾತ್ರೇಣ ನಶ್ಯತಿ ।
ತ್ವಗಸ್ಥಿಶೋಣಿತಂ ಮಾಂಸಂ ಮೇದಸ್ನಾಯುಸ್ತಥೈವ ಚ ॥ ೧೦೦ ॥
ಮಜ್ಜಾಶುಕ್ರಗತಂ ಪಾಪಂ ನಶ್ಯತೇ ಜನ್ಮಕೋಟಿಜಂ ।
ಲುಂಕೇಶ್ವರೇ ಮಹಾರಾಜ ತೋಯಂ ಪಿಬತಿ ಭಕ್ತಿತಃ ॥ ೧೦೧ ॥
ತ್ರಿಭಿಃ ಪ್ರಸೃತಿ ಮಾತ್ರಾಭಿಃ ಪಾಪಂ ಯಾಂತಿ ಸಹಸ್ರಧಾ ।
ವಿಶೇಷೇಣ ಚತುರ್ದಶ್ಯಾಮುಭೌ ಪಕ್ಷೌ ತು ಚಾಷ್ಟಮೀ ॥ ೧೦೨ ॥
ಉಪೋಷ್ಯ ಯೋ ನರೋ ಭಕ್ತ್ಯಾ ಪಿತೄಣಾಂ ಪಾಂಡುನಂದನ ।
ಉದ್ಧೃತಾಸ್ತೇನ ತೇ ಸರ್ವೇ ನಾರಕೀಯಾಃ ಪಿತಾಮಹಾಃ ॥ ೧೦೩ ॥

---

೯೬. ಅರಸ! ಕಾಮಾಂಧನಾದ ಅವನು ತನ್ನ ತಲೆಯಮೇಲೆ ಕೈಯನ್ನು ಇಟ್ಟನು. ಕೂಡಲೆ ಅವನು ಒಣಗಿದ ಹುಲ್ಲಿನ ರಾಶಿಯಂತೆ ಬೂದಿಯಾದನು.

೯೭. ಆಗ ದೇವತೆಗಳು ವಿಷ್ಣುವಿನಮೇಲೆ ಶುಭಕರವಾದ ಹೂಮಳೆಗರೆದರು. ಅವರೆಲ್ಲರೂ ಸಂತೋಷಗೊಂಡು ನಿರಾತಂಕವಾಗಿ ತಮ್ಮ ಸ್ಥಾನಕ್ಕೆ ತೆರಳಿದರು.

೯೮–೧೦೩. ಆ ಕಾಲಪೃಷ್ಠದಾನವನು ಮಡಿಯಲು ವಿಷ್ಣುವು ಕ್ಷೀರಸಮುದ್ರಕ್ಕೆ ಹೋದನು. ಈ ದಾನವನ ಚರಿತ್ರೆಯನ್ನು ಭಕ್ತಿಯಿಂದ ಕೇಳಿದವನು ಶಂಕರನ ಮಾತಿನಂತೆ ಜಯಶಾಲಿಯಾಗುವನು. ಅಲ್ಲಿ ಸ್ನಾನಮಾತ್ರದಿಂದ ದೇಹದಲ್ಲಿ ಲೀನವಾಗಿರುವ ಪಾತಕವು ನಾಶವಾಗುವುದರಿಂದ ಅದು ಲಿಂಗೇಶ್ವರವೆಂದು ಪ್ರಸಿದ್ಧವಾಯಿತು. ಅಲ್ಲಿ ಚರ್ಮ, ಮೂಳೆ, ರಕ್ತ, ಮಾಂಸ, ಮೇದಸ್ಸು, ಸ್ನಾಯು, ಮಜ್ಜ, ಶುಕ್ರ ಇವುಗಳಲ್ಲಿರುವ ಅನೇಕ ಜನ್ಮಗಳಲ್ಲಿ ಮಾಡಿದ ಪಾಪವು ನಾಶವಾಗುವುದು. ಮಹಾರಾಜ! ಲುಂಕೇಶ್ವರದಲ್ಲಿ ಮೂರುಬೊಗಸೆ ನೀರನ್ನು ಕುಡಿದರೆ ಪಾಪವು ಸಾವಿರವಿಧವಾಗಿ ಪರಿಹಾರವಾಗುವುದು. ಮಾನವನು ಎರಡು ಪಕ್ಷಗಳ ಚತುರ್ದಶೀ, ಅಷ್ಟಮಿಗಳಲ್ಲಿ ಉಪವಾಸಮಾಡಿ ಭಕ್ತಿಯಿಂದ ಪಿತೃಗಳಿಗೆ ತರ್ಪಣಮಾಡಿದರೆ ಅವನಿಂದ ನರಕದಲ್ಲಿ ವಾಸಿಸುವ ಪಿತಾಮಹರೆಲ್ಲ ಉದ್ಧೃತರಾಗುವರು.

ಕಾಕಿಣೀಂ ಚೈವ ಯೋ ದದ್ಯಾದ್ಬ್ರಾಹ್ಮಣೇ ವೇದಪಾರಗೇ ।
ತೇನ ದಾನಫಲಂ ಸರ್ವಂ ಕುರುಕ್ಷೇತ್ರಾದಿಕಂ ಚ ಯತ್ ॥ ೧೦೪ ॥
ಪ್ರಾಪ್ತಂ ತು ನಾನ್ಯಥಾ ರಾಜಂ ಛಂಕರೋ ವದತೇ ತ್ವಿದಂ ।
ಸ್ಪರ್ಶಲಿಂಗಮಿದಂ ರಾಜಂ ಛಂಕರೇಣ ತು ನಿರ್ಮಿತಂ ॥ ೧೦೫ ॥
ಸ್ಪರ್ಶಮಾತ್ರೇ ಮನುಷ್ಯಾಣಾಂ ರುದ್ರವಾಸೋಽಭಿಜಾಯತೇ ।
ತೇನ ದಾನಫಲಂ ಸರ್ವಂ ಕುರುಕ್ಷೇತ್ರಾದಿಕಂ ಚ ಯತ್ ॥ ೧೦೬ ॥
ಏತಸ್ಮಾತ್ಕಾರಣಾದ್ರಾಜಂಲ್ಲೋಕಪಾಲಾಶ್ಚ ರಕ್ಷಕಾಃ ।
ದುರ್ಗಾ ಚ ರಕ್ಷಣೇ ಸೃಷ್ಟಾ ಚತುರ್ಹಸ್ತಧರಾ ಶುಭಾ ॥ ೧೦೭ ॥
ಧನದೋ ಲೋಕಪಾಲೇಶೋ ರಕ್ಷಕಶ್ಚೇಶ್ವರಸ್ಯ ಚ ।
ರಕ್ಷತೀಹ ಸದಾಕಾಲಂ ಗೃಹವ್ಯಾಪಾರರೂಪತಃ ॥ ೧೦೮ ॥
ಪುತ್ರಭ್ರಾತೃಸಮಾರೂಪೈಃ ಸ್ವಾಮಿಸಂಬಂಧರೂಪಿಭಿಃ ।
ಲುಂಕೇಶ್ವರಂ ಚ ರಾಜೇಂದ್ರ ದೇವೈರ್ನಾಽದ್ಯಾಪಿ ಮುಚ್ಯತೇ ॥ ೧೦೯ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ಲುಂಕೇಶ್ವರತೀರ್ಥಮಾಹಾತ್ಮ್ಯವರ್ಣನಂ" ನಾಮ ಸಪ್ತಷಷ್ಠಿತಮೋಽಧ್ಯಾಯಃ

---

೧೦೪–೧೦೫. ಅಲ್ಲಿ ನರನು ವೇದಪಾರಂಗತನಾದ ಬ್ರಾಹ್ಮಣನಿಗೆ ಒಂದು ಕಾಸನ್ನಿತ್ತರೂ ಅದರಿಂದ ಅವನು ಕುರುಕ್ಷೇತ್ರಾದಿಗಳಲ್ಲಿ ಲಭಿಸುವ ಫಲವನ್ನು ಪಡೆಯುವನು ಎಂದು ಶಂಕರನು ಹೇಳಿರುವನು. ಅಯ್ಯಾ ರಾಜನೆ! ಶಂಕರನು ಇದನ್ನು ಸ್ಪರ್ಶಲಿಂಗವನ್ನಾಗಿ ನಿರ್ಮಿಸಿರುವನು.

೧೦೬. ಇದರ ಸ್ಪರ್ಶದಿಂದಲೇ ಮಾನವರಿಗೆ ರುದ್ರಲೋಕವಾಸವು ಲಭಿಸುವುದು. ಮತ್ತು ಕುರುಕ್ಷೇತ್ರಾದಿಗಳನ್ನೆಸಗಿದ ದಾನಗಳ ಫಲವು ದೊರೆಯುವುದು.

೧೦೭. ಶಂಕರನು ಈ ಲಿಂಗದ ರಕ್ಷಣೆಗಾಗಿ ಲೋಕಪಾಲಕರನ್ನೂ, ಚತುರ್ಭುಜಳಾದ ದುರ್ಗೆಯನ್ನೂ ಸೃಷ್ಟಿಸಿರುವನು.

೧೦೮. ಲೋಕಪಾಲಕರಿಗೆ ಒಡೆಯನಾದ ಕುಬೇರನೂ ಈ ಲಿಂಗವನ್ನು ರಕ್ಷಿಸುವನು. ಅವನು ಯಾವಾಗಲೂ ತನ್ನ ಮನೆಯ ಕೆಲಸದಂತೆ ಇದನ್ನು ರಕ್ಷಿಸುತ್ತಿರುವನು.

೧೦೯. ಈ ಲುಂಕೇಶ್ವರನನ್ನು ದೇವತೆಗಳು ಪುತ್ರಭ್ರಾತೃರೂಪದಿಂದಲೂ, ಸ್ವಾಮಿಸಂಬಂಧರೂಪದಿಂದಲೂ ರಕ್ಷಿಸುತ್ತ ಈಗಲೂ ತ್ಯಜಿಸುವುದಿಲ್ಲ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಲುಂಕೇಶ್ವರಮಾಹಾತ್ಮ್ಯವರ್ಣನ"ವೆಂಬ ಅರುವತ್ತೇಳನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥಾಷ್ಟಷಷ್ಠಿತಮೋಽಧ್ಯಾಯಃ

## ಧನದತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ:—

ಧನದಸ್ಯ ತು ತತ್ತೀರ್ಥಂ ತತೋ ಗಚ್ಛೇದ್ಯುಧಿಷ್ಠಿರ ।
ನರ್ಮದಾದಕ್ಷಿಣೇ ಕೂಲೇ ಸರ್ವಪಾಪಕ್ಷಯಂಕರಂ ॥ ೧ ॥
ಸರ್ವತೀರ್ಥಫಲಂ ತತ್ರ ಪ್ರಾಪ್ಯತೇ ನಾಽತ್ರ ಸಂಶಯಃ ।
ಚೈತ್ರಮಾಸತ್ರಯೋದಶ್ಯಾಂ ಶುಕ್ಲಪಕ್ಷೇ ಜಿತೇಂದ್ರಿಯಃ ॥ ೨ ॥
ಉಪೋಷ್ಯ ಪರಯಾ ಭಕ್ತ್ಯಾ ರಾತ್ರೌ ಕುರ್ವೀತ ಜಾಗರಂ ।
ಪಂಚಾಮೃತೇನ ರಾಜೇಂದ್ರ ಸ್ನಾಪಯೇದ್ಧನದಂ ಬುಧಃ ॥ ೩ ॥
ದೀಪಂ ಘೃತೇನ ದಾತವ್ಯಂ ಗೀತಂ ವಾದ್ಯಂ ಚ ಕಾರಯೇತ್ ।
ಪ್ರಭಾತೇ ಪೂಜಯೇದ್ವಿಪ್ರಾನಾತ್ಮನಃ ಶ್ರೇಯ ಇಚ್ಛತಿ ॥ ೪ ॥
ಪ್ರತಿಗ್ರಹಸಮರ್ಥಾಂಶ್ಚ ವಿದ್ಯಾಸಿದ್ಧಾಂತವಾದಿನಃ ।
ಶ್ರೌತಸ್ಮಾರ್ತಕ್ರಿಯಾಯುಕ್ತಾನ್ಪರದಾರಪರಾಙ್ಮುಖಾನ್ ॥ ೫ ॥
ಪೂಜಯೇದ್ಗೋಹಿರಣ್ಯೇನ ವಸ್ತ್ರೌಪಾನಹಭೋಜನೈಃ ।
ಛತ್ರಶಯ್ಯಾಪ್ರದಾನೇನ ಸರ್ವಪಾಪಕ್ಷಯೋ ಭವೇತ್ ॥ ೬ ॥

---

## ಕನ್ನಡದ ಅನುವಾದ

### ಧನದತೀರ್ಥಮಾಹಾತ್ಮ್ಯವರ್ಣನ

೧. ಶ್ರೀ ಮಾರ್ಕಂಡೇಯನು ಹೇಳುತ್ತಾನೆ.—ಯುಧಿಷ್ಠಿರ! ಬಳಿಕ ನರ್ಮದಾನದಿಯ ದಕ್ಷಿಣತೀರದಲ್ಲಿರುವ ಸಕಲಪಾಪಗಳನ್ನೂ ಪರಿಹರಿಸುವ ಧನದತೀರ್ಥಕ್ಕೆ ಹೋಗಬೇಕು.

೨–೩. ಅಲ್ಲಿ ಸಕಲತೀರ್ಥಗಳ ಫಲವು ದೊರೆಯುವುದು. ಅಲ್ಲಿ ಚೈತ್ರ ಶುಕ್ಲತ್ರಯೋದಶಿಯ ದಿನ ಜಿತೇಂದ್ರಿಯನಾಗಿ ಅತಿ ಭಕ್ತಿಯಿಂದ ಉಪವಾಸಮಾಡಿ ರಾತ್ರಿ ಜಾಗರಣೆಗೈದು ಧನದನಿಗೆ ಪಂಚಾಮೃತದಿಂದ ಅಭಿಷೇಕಮಾಡಬೇಕು.

೪–೬. ತುಪ್ಪದ ದೀಪವನ್ನು ಹೊತ್ತಿಸಿ ಗೀತವಾದ್ಯಗಳನ್ನು ಮಾಡಬೇಕು. ಬೆಳಗ್ಗೆ ತನಗೆ ಶ್ರೇಯಸ್ಸನ್ನು ಬಯಸುವ ಮಾನವನು ಪ್ರತಿಗ್ರಹಸಮರ್ಥರೂ, ವಿದ್ಯಾಸಿದ್ಧಾಂತವಾದಿಗಳೂ, ಶ್ರೌತಸ್ಮಾರ್ತಕ್ರಿಯಾನಿರತರೂ, ಪರಪತ್ನೀ ಪರಾಙ್ಮುಖರೂ ಆದ ಬ್ರಾಹ್ಮಣರನ್ನು ಗೋವು, ಚಿನ್ನ, ವಸ್ತ್ರ, ಪಾದರಕ್ಷೆ, ಭೋಜನ ಇವುಗಳಿಂದ ಪೂಜಿಸಬೇಕು. ಕೊಡೆ, ಹಾಸಿಗೆಗಳನ್ನು ಇಲ್ಲಿ ದಾನ ಮಾಡುವುದರಿಂದ ಸಕಲಪಾಪಗಳೂ ಪರಿಹಾರವಾಗುವುವು.

ತ್ರಿಜನ್ಮಜನಿತಂ ಪಾಪಂ ಧನದಸ್ಯ ಪ್ರಭಾವತಃ ।
ಸ್ವರ್ಗದಂ ದುರ್ವಿನೀತಾನಾಂ ವಿನೀತಾನಾಂ ಚ ಮೋಕ್ಷದಂ ॥ ೭ ॥
ಅನ್ನದಂ ಚ ದರಿದ್ರಾಣಾಂ ಭವೇಜ್ಜನ್ಮನಿ ಜನ್ಮನಿ ।
ಕುಲೀನತ್ವಂ ದುಃಖಹಾನಿಃ ಸ್ವಭಾವಾಜ್ಜಾಯತೇ ನರೇ ॥ ೮ ॥
ವ್ಯಾಧಿಧ್ವಂಸೋ ಭವೇತ್ತೇಷಾಂ ನರ್ಮದೋದಕಸೇವನಾತ್ ।
ಧನದಸ್ಯ ತು ಯಸ್ತೀರ್ಥೇ ವಿದ್ಯಾದಾನಂ ಪ್ರಯಚ್ಛತಿ ॥ ೯ ॥
ಸ ಯಾತಿ ಭಾಸ್ಕರೇ ಲೋಕೇ ಸರ್ವವ್ಯಾಧಿವಿವರ್ಜಿತೇ ।
ದೇವದ್ರೋಣೀಂ ಚ ತತ್ರೈವ ಸ್ವಶಕ್ತ್ಯಾ ಪಾಂಡುನಂದನ ॥ ೧೦ ॥
ಯೇ ಪ್ರಕುರ್ವಂತಿ ಭೂಯಿಷ್ಠಾಂ ರೇವಾಯಾ ದಕ್ಷಿಣೇ ತಟೇ ।
ತೇ ಯಾಂತಿ ಶಾಂಕರೇ ಲೋಕೇ ಸರ್ವದುಃಖವಿವರ್ಜಿತೇ ॥ ೧೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಅವಂತ್ಯಖಂಡೇ ತೃತೀಯೇ ರೇವಾಖಂಡೇ
"ಧನದತೀರ್ಥಮಾಹಾತ್ಮ್ಯವರ್ಣನಂ" ನಾಮಷ್ಟಷಷ್ಟಿತಮೋಽಧ್ಯಾಯಃ

---

೭–೮. ಮತ್ತು ಧನದನ ಪ್ರಭಾವದಿಂದ ಮೂರು ಜನ್ಮಗಳ ಪಾಪಗಳು ಪರಿಹಾರವಾಗುವುವು. ಆ ತೀರ್ಥವು ದುರ್ವಿನೀತರಿಗೆ ಸ್ವರ್ಗವನ್ನೂ, ವಿನೀತರಿಗೆ ಮೋಕ್ಷವನ್ನೂ, ದರಿದ್ರರಿಗೆ ಅನ್ನವನ್ನೂ ಪ್ರತಿಜನ್ಮದಲ್ಲಿಯೂ ಕೊಡುವುದು. ಮಾನವನಿಗೆ ಸ್ವಭಾವದಿಂದ ಕುಲೀನತೆಯೂ, ದುಃಖನಾಶವೂ ಆಗುವುದು.

೯–೧೧. ನರ್ಮದಾನದಿಯ ನೀರನ್ನು ಸೇವಿಸುವುದರಿಂದ ವ್ಯಾಧಿಯು ಪರಿಹಾರವಾಗುವುದು. ಆ ತೀರ್ಥದಲ್ಲಿ ವಿದ್ಯಾದಾನಮಾಡುವವನು ಸಮಸ್ತ ವ್ಯಾಧಿರಹಿತವಾದ ಸೂರ್ಯಲೋಕಕ್ಕೆ ಹೋಗುವನು. ಯುಧಿಷ್ಠಿರ! ನರ್ಮದಾನದಿಯ ದಕ್ಷಿಣದಡದಲ್ಲಿ ಬಹುವಾಗಿ ದೇವದ್ರೋಣಿಯನ್ನು ರಚಿಸುವವರು ಸಕಲ ದುಃಖರಹಿತವಾದ ಶಂಕರಲೋಕಕ್ಕೆ ತೆರಳುವರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಅವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಧನದತೀರ್ಥಮಾಹಾತ್ಮ್ಯವರ್ಣನ"ವೆಂಬ ಅರುವತ್ತೆಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥೈಕೋನಸಪ್ತತಿತಮೋಽಧ್ಯಾಯಃ

## ಮಂಗಲೇಶ್ವರತೀರ್ಥಮಾಹಾತ್ಮ್ಯವರ್ಣನಂ

**ಶ್ರೀ ಮಾರ್ಕಂಡೇಯ ಉವಾಚ :—**

ತತೋ ಗಚ್ಛೇತ್ತು ರಾಜೇಂದ್ರ ಮಂಗಲೇಶ್ವರಮುತ್ತಮಂ ।
ಸ್ಥಾಪಿತಂ ಭೂಮಿಪುತ್ರೇಣ ಲೋಕಾನಾಂ ಹಿತಕಾಮ್ಯಯಾ ॥ ೧ ॥
ತೋಷಿತಃ ಪರಯಾ ಭಕ್ತ್ಯಾ ಶಂಕರಃ ಶಶಿಶೇಖರಃ ।
ಚತುರ್ದಶ್ಯಾಂ ಗುರುರ್ದೇವಃ ಪ್ರತ್ಯಕ್ಷೋ ಮಂಗಲೇಶ್ವರಃ ॥ ೨ ॥
ಬ್ರೂಹಿ ಪುತ್ರ ವರಂ ಶುಭ್ರಂ ತಂ ತೇ ದಾಸ್ಯಾಮಿ ಮಂಗಲ ॥ ೩ ॥

**ಮಂಗಲ ಉವಾಚ :—**

ಪ್ರಸಾದಂ ಕುರು ಮೇ ಶಂಭೋ ಪ್ರತಿಜನ್ಮನಿ ಶಂಕರ ।
ತ್ವದಂಗಸ್ವೇದಸಂಭೂತೋ ಗ್ರಹಮಧ್ಯೇ ವಸಾಮ್ಯಹಂ ॥ ೪ ॥
ತ್ವತ್ಪ್ರಸಾದೇನ ಈಶಾನ ಪೂಜ್ಯೋಽಹಂ ಸರ್ವದೇವತೈಃ ।
ಕೃತಾರ್ಥೋಽಹ್ಯದ್ಯಸಂಜಾತಸ್ತವ ದರ್ಶನಭಾಷಣಾತ್ ॥ ೫ ॥
ಸ್ಥಾನೇಽಸ್ಮಿನ್ದೇವದೇವೇಶ ಮಮ ನಾಮ್ನಾ ಮಹೇಶ್ವರಃ ।
ಏವಂ ಭವತು ತೇ ಪುತ್ರೇತ್ಯುಕ್ತ್ವಾ ಚಾಽಂತರಧೀಯತ ॥ ೬ ॥

---

## ಕನ್ನಡದ ಅನುವಾದ

### ಮಂಗಲೇಶ್ವರತೀರ್ಥಮಾಹಾತ್ಮ್ಯವರ್ಣನ

೧. ಶ್ರೀ ಮಾರ್ಕಂಡೇಯನು ಹೇಳುತ್ತಾನೆ :—ನರೇಂದ್ರ! ಅನಂತರ ಲೋಕದ ಹಿತಕ್ಕಾಗಿ ಅಂಗಾರಕನು ಸ್ಥಾಪಿಸಿರುವ ಉತ್ತಮವಾದ ಮಂಗಲೇಶ್ವರಕ್ಕೆ ಹೋಗಬೇಕು.

೨. ಚತುರ್ದಶಿಯ ದಿನವೆ ಮಂಗಳನ ಮಹಾಭಕ್ತಿಯಿಂದ ಸಂತೋಷಗೊಂಡ ಚಂದ್ರಮೌಳೀಶ್ವರನು ಪ್ರತ್ಯಕ್ಷನಾದನು.

೩. ಅವನು, "ಮಗು! ಉತ್ತಮವಾದ ವರವನ್ನು ಕೇಳು ಕೊಡುವೆನು" ಎಂದನು.

೪-೬. ಮಂಗಳನು ಹೇಳುತ್ತಾನೆ:—"ಶಂಕರ! ನೀನು ಪ್ರತಿಜನ್ಮದಲ್ಲಿಯೂ ನನಗೆ ಅನುಗ್ರಹಮಾಡುತ್ತಿರು. ನಿನ್ನ ಅವಯವಗಳ ಬೆವರಿನಿಂದುಂಟಾದ ನಾನು ನಿನ್ನ ಅನುಗ್ರಹದಿಂದಲೇ ಸಮಸ್ತ ದೇವತೆಗಳಿಂದಲೂ ಪೂಜ್ಯನಾಗಿ ಗ್ರಹಗಳ ನಡುವೆ ವಾಸಮಾಡುವೆನು. ಈಗ ನಿನ್ನ ದರ್ಶನ ಮತ್ತು ಭಾಷಣದಿಂದ ನಾನು ಧನ್ಯನಾದೆನು. ಈ ಸ್ಥಾನದಲ್ಲಿ ನೀನು ನೆಲಸು." ಶಂಕರನು, "ಮಗು! ಹಾಗೆಯೇ ಆಗಲಿ" ಎಂದು ಅದೃಶ್ಯನಾದನು.

ಮಂಗಲೋಽಪಿ ಮಹಾತ್ಮಾ ವೈ ಸ್ಥಾಪಯಿತ್ವಾ ಮಹೇಶ್ವರಂ ।
ಆತ್ಮಯೋಗಬಲೇನೈವ ಶೂಲಿನಾಽಪೂಜಯತ್ತತಃ ॥ ೭ ॥
ಸರ್ವದುಃಖಹರಂ ಲಿಂಗಂ ನಾಮ್ನಾ ವೈ ಮಂಗಲೇಶ್ವರಂ ।
ತತ್ರ ತೀರ್ಥೇ ತು ವೈ ರಾಜನ್ಬ್ರಾಹ್ಮಣಾನ್ಪ್ರೀಣಯೇತ್ಸುಧೀಃ ॥ ೮ ॥
ಸಪತ್ನೀಕಾನ್ನೃಪಶ್ರೇಷ್ಠ ಚತುರ್ಥ್ಯಂಗಾರಕೇ ವ್ರತೇ ।
ಪತ್ನೀ ಭರ್ತಾರಸಂಯುಕ್ತಂ ವಿದ್ವಾಂಸಂ ಶ್ರೋತ್ರಿಯಂ ದ್ವಿಜಂ ॥ ೯ ॥
ವ್ರತಾಂತೇ ಚೈವ ಗೌರ್ದೇಯೈಃ ಶಿವಮುದ್ದಿಶ್ಯ ದೀಯತೇ ।
ಪ್ರೀಯತಾಂ ಮೇ ಮಹಾದೇವಃ ಸಪತ್ನೀಕೋ ವೃಷಧ್ವಜಃ ॥ ೧೦ ॥
ವಸ್ತ್ರಯುಗ್ಮಂ ಪ್ರದಾತವ್ಯಂ ಲೋಹಿತಂ ಪಾಂಡುನಂದನ ।
ಧೂರ್ವಹೌ ರಕ್ತವರ್ಣೌ ಚ ಶುಭ್ರಂ ಕೃಷ್ಣಂ ತಥೈವ ಚ ॥ ೧೧ ॥
ಛತ್ರಂ ಶಯ್ಯಾಂ ಶುಭಾಂ ಚೈವ ರಕ್ತಮಾಲ್ಯಾನುಲೇಪನಂ ।
ದಾತವ್ಯಂ ಪಾಂಡವಶ್ರೇಷ್ಠ ವಿಶುದ್ಧೇನಾಂತರಾತ್ಮನಾ ॥ ೧೨ ॥
ಚತುರ್ಥ್ಯಾಂ ತು ತಥಾಷ್ಟಮ್ಯಾಂ ಪಕ್ಷಯೋಃ ಶುಕ್ಲಕೃಷ್ಣಯೋಃ ।
ಶ್ರಾದ್ಧಂ ತತ್ರೈವ ಕರ್ತವ್ಯಂ ವಿತ್ತಶಾಠ್ಯೇನ ವರ್ಜಿತಃ ॥ ೧೩ ॥
ಪ್ರೇತಾ ಭವಂತಿ ಸುಪ್ರೀತಾ ಯುಗಮೇಕಂ ಮಹೀಪತೇ ।
ಸಪುತ್ರೋ ಜಾಯತೇ ಮರ್ತ್ಯಃ ಪ್ರತಿಜನ್ಮ ನೃಪೋತ್ತಮ ॥ ೧೪ ॥

---

೭–೯. ಮಹಾತ್ಮನಾದ ಅಂಗಾರಕನೂ ತನ್ನ ಯೋಗಬಲದಿಂದ ಸರ್ವ ದುಃಖಗಳನ್ನೂ ನಿವಾರಿಸುವ ಮಹೇಶ್ವರಲಿಂಗವನ್ನು ಸ್ಥಾಪಿಸಿ ಪೂಜಿಸಿದನು. ದೊರೆಯೆ! ಆ ತೀರ್ಥದಲ್ಲಿ ಚತುರ್ಥ್ಯಂಗಾರಕವ್ರತದಲ್ಲಿ ವಿದ್ವಾಂಸನೂ, ಶ್ರೋತ್ರಿಯನೂ ಆದ ಬ್ರಾಹ್ಮಣನನ್ನು ಪತ್ನಿಯೊಡನೆ ಸಂತೋಷಗೊಳಿಸಬೇಕು.

೧೦–೧೨. ವ್ರತದ ಕೊನೆಯಲ್ಲಿ ಶಿವನನ್ನುದ್ದೇಶಿಸಿ ಮಹಾದೇವನು ಪತ್ನಿಯೊಡನೆ ಸಂತುಷ್ಟನಾಗಲಿ ಎಂದು ಎರಡು ಕೆಂಪುಬಟ್ಟೆಗಳನ್ನೂ, ಕೆಂಪು, ಬಿಳಿ, ಅಥವಾ ಕರಿಯ ಬಣ್ಣದ ಎರಡು ಎತ್ತುಗಳನ್ನೂ ಛತ್ರ, ಹಾಸಿಗೆ, ಕೆಂಪು ಹೂವಿನಹಾರ, ಗಂಧ, ಇವುಗಳನ್ನೂ ಶುದ್ಧವಾದ ಮನಸ್ಸಿನಿಂದ ದಾನಮಾಡಬೇಕು.

೧೩. ಅಲ್ಲಿ ಶುಕ್ಲ ಕೃಷ್ಣಪಕ್ಷಗಳ ಚತುರ್ಥಿ, ಅಷ್ಟಮೀ ದಿನಗಳಲ್ಲಿ ವಿತ್ತಶಾಠ್ಯವಿಲ್ಲದೆ ಶ್ರಾದ್ಧಗೈಯಬೇಕು.

೧೪. ದೊರೆಯೆ! ಪ್ರೇತಗಳು ಇದರಿಂದ ಒಂದು ಯುಗಕಾಲ ತೃಪ್ತಿಗೊಳ್ಳುವುವು. ಆ ಮಾನವನು ಪ್ರತಿಜನ್ಮದಲ್ಲಿಯೂ ಪುತ್ರರಿಂದ ಕೂಡಿರುತ್ತಾನೆ.

**ತಸ್ಯ ತೀರ್ಥಪ್ರಭಾವೇನ ಸರ್ವಾಂಗರುಚಿರೋ ನೃಪ ।**
**ಮಂಗಲಂ ಭವತೇ ವಂಶೇ ನಾಽಶುಭಂ ವಿದ್ಯತೇ ಕ್ವಚಿತ್ ॥ ೧೫ ॥**
**ಭಕ್ತ್ಯಾ ಯಃ ಕೀರ್ತಯೇನ್ನಿತ್ಯಂ ತಸ್ಯ ಪಾಪಂ ವ್ಯಪೋಹತಿ ॥ ೧೬ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ**
**ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ**
**"ಮಂಗಲೇಶ್ವರತೀರ್ಥಮಾಹಾತ್ಮ್ಯವರ್ಣನಂ"**
**ನಾಮೈಕೋನಸಪ್ತತಿತಮೋಽಧ್ಯಾಯಃ**

---

೧೫. ಆ ತೀರ್ಥದ ಪ್ರಭಾವದಿಂದ ಅಲ್ಲಿ ಮಿಂದವನು ಸರ್ವಾಂಗಸುಂದರನಾಗುವನು. ಅವನ ವಂಶದಲ್ಲಿ ಮಂಗಳವುಂಟಾಗುವುದು. ಎಲ್ಲಿಯೂ ಅಮಂಗಳವುಂಟಾಗುವುದಿಲ್ಲ.

೧೬. ಭಕ್ತಿಯಿಂದ ಇದನ್ನು ಹೇಳಿದವನ ಪಾಪವು ಪರಿಹಾರವಾಗುವುದು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಮಂಗಲೇಶ್ವರತೀರ್ಥಮಾಹಾತ್ಮ್ಯವರ್ಣನ"ವೆಂಬ
ಅರುವತ್ತೊಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಸಪ್ತತಿತಮೋಽಧ್ಯಾಯಃ

### ರವಿತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ರೇವಾಯಾ ಉತ್ತರೇ ಕೂಲೇ ತೀರ್ಥಂ ಪರಮಶೋಭನಂ ।
ರವಿಣಾ ನಿರ್ಮಿತಂ ಪಾರ್ಥ ಸರ್ವಪಾಪಕ್ಷಯಂಕರಂ ॥ ೧ ॥
ಸ್ವಾಂಶೇನ ಭಾಸ್ಕರಸ್ತತ್ರ ತಿಷ್ಠತೇ ಚೋತ್ತರೇ ತಟೇ ।
ಸರ್ವವ್ಯಾಧಿಹರಃ ಪುಂಸಾಂ ನರ್ಮದಾಯಾಂ ವ್ಯವಸ್ಥಿತಃ ॥ ೨ ॥
ಷಷ್ಠ್ಯಾಂ ಷಷ್ಠ್ಯಾಂ ನೃಪಶ್ರೇಷ್ಠ ಹ್ಯಷ್ಟಮ್ಯಾಂ ಚ ಚತುರ್ದಶೀಂ ।
ಸ್ನಾನಂ ಯಃ ಕಾರಯೇನ್ಮರ್ತ್ಯಃ ಶ್ರಾದ್ಧಂ ಪ್ರೇತೇಷು ಭಕ್ತಿತಃ ।
ತಸ್ಯ ಪಾಪಕ್ಷಯಃ ಪಾರ್ಥ ಸೂರ್ಯಲೋಕೇ ಮಹೀಯತೇ ॥ ೩ ॥
ತತಃ ಸ್ವರ್ಗಾಚ್ಚ್ಯುತಃ ಸೋಽಪಿ ಜಾಯತೇ ವಿಮಲೇ ಕುಲೇ ।
ಧನಾಢ್ಯೋ ವ್ಯಾಧಿನಿರ್ಮುಕ್ತೋ ಜೀವೇಜ್ಜನ್ಮನಿ ಜನ್ಮನಿ ॥ ೪ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿ ಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
“ ರವಿತೀರ್ಥಮಾಹಾತ್ಮ್ಯವರ್ಣನಂ ”ನಾಮ ಸಪ್ತತಿತಮೋಽಧ್ಯಾಯಃ

## ಕನ್ನಡದ ಅನುವಾದ

### ರವಿತೀರ್ಥಮಾಹಾತ್ಮ್ಯವರ್ಣನ

೧. ಶ್ರೀ ಮಾರ್ಕಂಡೇಯನು ಹೇಳುತ್ತಾನೆ —ನರ್ಮದಾನದಿಯ ಉತ್ತರ ದಡದಲ್ಲಿ ರವಿಯು ನಿರ್ಮಿಸಿರುವ ಅತ್ಯಂತಮನೋಹರವೂ, ಸಮಸ್ತಪಾಪ ನಾಶಕವೂ ಆದ ತೀರ್ಥವಿರುವುದು.

೨. ಅಲ್ಲಿ ಮಾನವರ ಸಕಲ ವ್ಯಾಧಿಗಳನ್ನೂ ಪರಿಹರಿಸುವ ಸೂರ್ಯದೇವನು ತನ್ನ ಅಂಶದಿಂದ ನೆಲಸಿರುವನು.

೩. ಪ್ರತಿ ಷಷ್ಠೀ, ಅಷ್ಟಮೀ, ಚತುರ್ದಶಿಗಳ ದಿನಗಳಲ್ಲಿ ಅಲ್ಲಿ ಮಿಂದು ಪ್ರೇತಗಳಿಗೆ ಭಕ್ತಿಯಿಂದ ಶ್ರಾದ್ಧಮಾಡುವವನ ಪಾಪವು ಪರಿಹಾರವಾಗುವುದು. ಅವನು ಸೂರ್ಯಲೋಕದಲ್ಲಿ ಪೂಜ್ಯನಾಗುವನು.

೪. ಅನಂತರ ಅವನು ಸ್ವರ್ಗದಿಂದ ಭ್ರಷ್ಟನಾಗಿ ಪರಿಶುದ್ಧವಾದ ವಂಶ ದಲ್ಲಿ ಜನಿಸಿ ಪ್ರತಿಜನ್ಮದಲ್ಲಿಯೂ ಧನಾಢ್ಯನೂ, ವ್ಯಾಧಿರಹಿತನೂ ಆಗಿ ಜೀವಿಸು ವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
“ ರವಿತೀರ್ಥಮಾಹಾತ್ಮ್ಯವರ್ಣನ ” ವೆಂಬ ಎಪ್ಪತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥೈಕಸಪ್ತತಿತಮೋಽಧ್ಯಾಯಃ

## ಕಾಮೇಶ್ವರತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ಕಾಮೇಶ್ವರಂ ತತಶ್ಚಾಽನ್ಯಚ್ಛೃಣು ಪಾಂಡವಸತ್ತಮ ।
ಸಿದ್ಧೋ ಯತ್ರ ಗಣಾಧ್ಯಕ್ಷೋ ಗೌರೀಪುತ್ರೋ ಮಹಾಬಲಃ ॥ ೧ ॥
ತತ್ರ ತೀರ್ಥೇ ತು ಯೋ ಭಕ್ತ್ಯಾ ಭಕ್ತಿಯುಕ್ತೋ ಜಿತೇಂದ್ರಿಯಃ ।
ಪಂಚಾಮೃತೇನ ಸಂಸ್ನಾಪ್ಯ ಧೂಪನೈವೇದ್ಯಪೂಜನೈಃ ॥ ೨ ॥
ಪ್ರಸಾದ್ಯ ಜಗತಾಮೀಶಂ ಸರ್ವಪಾಪೈಃ ಪ್ರಮುಚ್ಯತೇ ।
ಅಷ್ಟಮ್ಯಾಂ ಮಾರ್ಗಶೀರ್ಷಸ್ಯ ತತ್ರ ಸ್ನಾತ್ವಾ ಯುಧಿಷ್ಠಿರ ॥ ೩ ॥
ಯೋ ಯೇನ ಯಜತೇ ತತ್ರ ಸ ತಂ ಕಾಮಮವಾಪ್ನುಯಾತ್ ॥ ೪ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ಕಾಮೇಶ್ವರತೀರ್ಥಮಾಹಾತ್ಮ್ಯವರ್ಣನಂ" ನಾಮೈಕಸಪ್ತತಿತಮೋಽಧ್ಯಾಯಃ

---

## ಕನ್ನಡದ ಅನುವಾದ

### ಕಾಮೇಶ್ವರತೀರ್ಥಮಾಹಾತ್ಮ್ಯವರ್ಣನ

೧. ಶ್ರೀ ಮಾರ್ಕಂಡೇಯನು ಹೇಳುತ್ತಾನೆ —ಯುಧಿಷ್ಠಿರ! ಅನಂತರ ಕಾಮೇಶ್ವರವೆಂಬ ಮತ್ತೊಂದು ತೀರ್ಥವನ್ನು ಕೇಳು. ಅಲ್ಲಿ ಗೌರೀಪುತ್ರನೂ, ಅತಿ ಬಲಿಷ್ಠನೂ ಆದ ಗಣೇಶನು ಸಿದ್ಧನಾಗಿರುವನು.

೨–೪. ಆ ತೀರ್ಥದಲ್ಲಿ ಜಿತೇಂದ್ರಿಯನಾದ ಮಾನವನು ಭಕ್ತಿಯಿಂದ ಶಂಕರನಿಗೆ ಪಂಚಾಮೃತಾಭಿಷೇಕವನ್ನು ಮಾಡಿ ಧೂಪ ನೈವೇದ್ಯಗಳಿಂದ ಪೂಜಿಸಿ ಸಂತೋಷಗೊಳಿಸಿದರೆ ಸಮಸ್ತಪಾಪಗಳಿಂದಲೂ ಮುಕ್ತನಾಗುವನು. ಇದರಲ್ಲಿ ಸಂಶಯವಿಲ್ಲವು. ಯುಧಿಷ್ಠಿರ! ನರನು ಮಾರ್ಗಶೀರ್ಷಮಾಸದ ಅಷ್ಟಮೀ ದಿನ ಅಲ್ಲಿ ಮಿಂದು ಯಾವ ಅಭಿಲಾಷೆಯಿಂದ ಪೂಜಿಸಿದರೂ ಅದನ್ನು ಪಡೆಯುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಕಾಮೇಶ್ವರತೀರ್ಥಮಾಹಾತ್ಮ್ಯವರ್ಣನ"ವೆಂಬ
ಎಪ್ಪತ್ತೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ದ್ವಿಸಪ್ತತಿತಮೋಽಧ್ಯಾಯಃ

## ಮಣಿನಾಗೇಶ್ವರತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ತತೋ ಗಚ್ಛೇತ್ತು ರಾಜೇಂದ್ರ ಮಣಿನಾಗೇಶ್ವರಂ ಶುಭಂ ।
ಉತ್ತರೇ ನರ್ಮದಾಕೂಲೇ ಸರ್ವಪಾಪಕ್ಷಯಂಕರಂ ।
ಸ್ಥಾಪಿತಂ ಮಣಿನಾಗೇನ ಲೋಕಾನಾಂ ಹಿತಕಾಮ್ಯಯಾ ॥ ೧ ॥

ಯುಧಿಷ್ಠಿರ ಉವಾಚ :—

ಆಶೀವಿಷೇಣ ಸರ್ಪೇಣ ಈಶ್ವರಸ್ತೋಷಿತಃ ಕಥಂ ।
ಕ್ಷುದ್ರಾಃ ಸರ್ವಸ್ಯ ಲೋಕಸ್ಯ ಭಯದಾ ವಿಷಶಾಲಿನಃ ॥ ೨ ॥
ಕಥ್ಯತಾಂ ತಾತ ಮೇ ಸರ್ವಂ ಪಾತಕಸ್ಯೋಪಶಾಂತಿದಂ ।
ಮಮ ಸಂತಾಪಜಂ ದುಃಖಂ ದುರ್ಯೋಧನಸಮುದ್ಭವಂ ॥ ೩ ॥
ಕರ್ಣಭೀಷ್ಮೋದ್ಭವಂ ರೌದ್ರಂ ದುಃಖಂ ಪಾಂಚಾಲಿಸಂಭವಂ ।
ತವ ವಕ್ತ್ರಾಂಬುಜೌಘೇನ ಪ್ಲಾವಿತಂ ನಿರ್ವೃತಿಂ ಗತಃ ॥ ೪ ॥
ಶ್ರುತ್ವಾ ತವ ಮುಖೋದ್ಗೀತಾಂ ಕಥಾಂ ವೈ ಪಾಪನಾಶಿನೀಂ ।
ಅಯುಕ್ತಮಿದಮಸ್ಮಾಕಂ ದ್ವಿಜ ಕ್ಲೇಶೋ ನ ಶಾಮ್ಯಸಿ ॥ ೫ ॥

---

## ಕನ್ನಡದ ಅನುವಾದ

### ಮಣಿನಾಗೇಶ್ವರತೀರ್ಥಮಾಹಾತ್ಮ್ಯವರ್ಣನ

೧. ಶ್ರೀ ಮಾರ್ಕಂಡೇಯನು ಹೇಳುತ್ತಾನೆ —ರಾಜೇಂದ್ರ! ಬಳಿಕ ನರ್ಮದಾನದಿಯ ಉತ್ತರದಡದಲ್ಲಿ ಮಣಿನಾಗನು ಜನಗಳ ಹಿತಕ್ಕಾಗಿ ಸ್ಥಾಪಿಸಿರುವ ಸಕಲಪಾಪಗಳನ್ನೂ ನೀಗಿಸುವ ಮಣಿನಾಗೇಶ್ವರನೆಡೆಗೆ ಹೋಗಬೇಕು.

೨. ಯುಧಿಷ್ಠಿರನು ಹೇಳುತ್ತಾನೆ —ಮುನಿಯೆ! ಆ ನಾಗನು ಈಶ್ವರನನ್ನು ಹೇಗೆ ಸಂತೋಷಗೊಳಿಸಿದನು? ವಿಷದಿಂದ ಪ್ರಕಾಶಿಸುವ ನಾಗಗಳು ಕ್ಷುದ್ರಗಳೂ, ಸಮಸ್ತ ಜನರಿಗೆ ಭಯವನ್ನುಂಟುಮಾಡುವುವೂ ಆಗಿರುವುವಲ್ಲವೆ.

೩–೪. ಪಾಪವನ್ನು ಪರಿಹರಿಸುವ ಆ ಕಥೆಯನ್ನೆಲ್ಲ ನನಗೆ ಹೇಳು. ದುರ್ಯೋಧನ, ಕರ್ಣ, ಭೀಷ್ಮ, ದ್ರೌಪದಿಯರಿಂದುಂಟಾದ ನನ್ನ ದುಃಖವು ನಿನ್ನ ಮುಖಕಮಲದ ಪ್ರಭಾಪ್ರವಾಹದಿಂದ ನೆಂದು ಕರಗಿದೆ. ನಾನು ಬಹಳವಾಗಿ ಸುಖಗೊಂಡಿರುವೆನು.

೫. ಮುನಿಯೆ! ನಿನ್ನ ಮುಖದಿಂದ ಬಂದ ಪಾಪವನ್ನು ನೀಗಿಸುವ ಈ ಕಥೆಯನ್ನು ಕೇಳಿದ ನನ್ನ ದುಃಖವು ಪರಿಹಾರವಾಗಲಿಲ್ಲವೆಂಬುದು ಅನುಚಿತವು.

ಅಥವಾ ಪ್ರಾಪ್ಸ್ಯತೇ ತಾತ ವಿದ್ಯಾದಾನಸ್ಯ ಯತ್ಫಲಂ ।
ತತ್ಫಲಂ ಪ್ರಾಪ್ಯತೇ ನಿತ್ಯಂ ಕಥಾಶ್ರವಣತೋ ಹರೇಃ ॥ ೬ ॥
ಶ್ರೀ ಮಾರ್ಕಂಡೇಯ ಉವಾಚ :—
ಯಥಾ ಯಥಾ ತ್ವಂ ನೃಪ ಭಾಷಸೇ ಚ
ತಥಾ ತಥಾ ಮೇ ಸುಖಮೇತಿ ಭಾರತೀ ।
ಶೈಥಿಲ್ಯತಾ ವಾ ಜರಯಾನ್ವಿತಸ್ಯ
ತ್ವತ್ಸೌಹೃದಂ ನಶ್ಯತಿ ನೈವ ತಾತ ।
ಶೃಣುಷ್ವ ತಸ್ಮಾತ್ಸಹ ಬಾಂಧವೈಶ್ಚ
ಕಥಾಮಿಮಾಂ ಪಾಪಹರಾಂ ಪ್ರಶಸ್ತಾಂ ॥ ೭ ॥
ಕಥಯಾಮಿ ಯಥಾ ವೃತ್ತಮಿತಿಹಾಸಂ ಪುರಾತನಂ ॥ ೮ ॥
ಕಥಿತಂ ಪೂರ್ವತೋ ವೃತ್ತೈಃ ಪಾರಂಪರ್ಯೇಣ ಭಾರತ ॥ ೯ ॥
ದ್ವೇ ಭಾರ್ಯೇ ಕಶ್ಯಪಸ್ಯಾಸ್ತಾಂ ಸರ್ವಲೋಕೇಷ್ವನುತ್ತಮೇ ।
ಗರುತ್ಮಂತಂ ಚ ವಿನತಾಽಸೂತ ಕದ್ರೂರಹೀನಥ ॥ ೧೦ ॥
ಸಂತೋಷೇಣ ಚ ತೇ ತಾತ ತಿಷ್ಠತಃ ಕಾಶ್ಯಪೇ ಗೃಹೇ ।
ಕದ್ರೂಶ್ಚ ವಿನತಾ ನಾಮ ಹೃಷ್ಟೇ ಚ ವನಿತೇ ಸದಾ ॥ ೧೧ ॥
ತಾಭ್ಯಾಂ ಸಾರ್ಧಂ ಕ್ರೀಡತೇ ಚ ಕಶ್ಯಪೋಽಪಿ ಪ್ರಜಾಪತಿಃ ।
ತತಸ್ತ್ವೇಕದಿನೇ ಪ್ರಾಪ್ತೇ ಆಶ್ರಮಸ್ಥಾ ಶುಭಾನನಾ ॥ ೧೨ ॥
ಉಚ್ಚೈಃಶ್ರವಂ ಹಯಂ ದೃಷ್ಟ್ವಾ ಮನೋವೇಗಸಮನ್ವಿತಂ ।
ಕಶ್ಯಪಸ್ಯ ಹಿ ತನ್ವಂಗೀ ಹಯಂ ಸರ್ವತ್ರ ಪಾಂಡುರಂ ॥ ೧೩ ॥

---

೬. ಅಥವಾ ವಿದ್ಯಾದಾನದಿಂದ ಯಾವ ಫಲವು ಲಭಿಸುವುದೋ ಅದೇ ಫಲವೇ ನಿತ್ಯವೂ ಹರಿಕಥಾಶ್ರವಣಮಾಡುವುದರಿಂದ ಮಾನವನಿಗೆ ಲಭಿಸುವುದು.

೭. ಶ್ರೀ ಮಾರ್ಕಂಡೇಯನು ಹೇಳುತ್ತಾನೆ.—ಅರಸ! ನೀನು ಮಾತನಾಡಿದ ಹಾಗೆಲ್ಲ ನನ್ನ ಮಾತು ಸಫಲತೆಯನ್ನು ಪಡೆಯುವುದು. ಮುದುಕನಾದ ನನಗೆ ಶೈಥಿಲ್ಯವಿಲ್ಲ. ನನಗೆ ನಿನ್ನಲ್ಲಿಯ ಮೈತ್ರಿಯೂ ನಾಶವಾಗುವುದಿಲ್ಲ. ಆದುದರಿಂದ ಪಾಪವನ್ನು ನಿವಾರಿಸುವುದೂ, ಪ್ರಶಸ್ತವೂ ಆದ ಈ ಕಥೆಯನ್ನು ಕೇಳು.

೮–೯. ಹಿಂದಿನವರು ಕ್ರಮವಾಗಿ ಹೇಳಿಕೊಂಡುಬಂದ ಇತಿಹಾಸವನ್ನು ನಡೆದಂತೆ ಹೇಳುವೆನು.

೧೦. ಕಶ್ಯಪನಿಗೆ ಉತ್ತಮರಾದ ಇಬ್ಬರು ಪತ್ನಿಯರಿದ್ದರು. ಅವರಲ್ಲಿ ವಿನತೆಯು ಗರುಡನನ್ನೂ, ಕದ್ರುವು ಸರ್ಪಗಳನ್ನೂ ಹಡೆದಳು.

೧೧–೧೪. ಆ ಕದ್ರೂ ವಿನತೆಯರು ಕಶ್ಯಪನ ಮನೆಯಲ್ಲಿ ಸಂತೋಷದಿಂದಿದ್ದರು. ಕಶ್ಯಪನೂ ಅವರೊಂದಿಗೆ ವಿನೋದಗೊಳ್ಳುತ್ತಿದ್ದನು. ಒಂದಾನೊಂದು

ಧಾವಮಾನಮವಿಶ್ರಾಂತಂ ಜವೇನ ಮನಸೋಪಮಂ ।
ತಂ ದೃಷ್ಟ್ವಾ ಸಹಸಾ ಚಾಶ್ವಮೀರ್ಷ್ಯಾಭಾವೇನ ಚಾಬ್ರವೀತ್ ॥ ೧೪ ॥
ಕದ್ರೂರುವಾಚ :—
ಬ್ರೂಹಿ ಭದ್ರೇ ಸಹಸ್ರಾಂಶೋರಶ್ವಃ ಕಿಂ ವರ್ಣಕೋ ಭವೇತ್ ।
ಅಹಂ ಬ್ರವೀಮಿ ಕೃಷ್ಣೋಽಯಂ ತ್ವಂ ಕಿಂ ವದಸಿ ತದ್ವದ ॥ ೧೫ ॥
ವಿನತೋವಾಚ :—
ಪಶ್ಯಸೇ ನನು ನೇತ್ರೈಶ್ಚ ಕೃಷ್ಣಂ ಶ್ವೇತಂ ನ ಪಶ್ಯಸಿ ।
ಅಸತ್ಯಭಾಷಣಾದ್ಭದ್ರೇ ಯಮಲೋಕಂ ಗಮಿಷ್ಯಸಿ ॥ ೧೬ ॥
ಸತ್ಯಾನೃತೇ ತು ವಚನೇ ಪಣಸ್ತವ ಮಮೈವ ತು ।
ಸಹಸ್ರಂ ಚೈವ ವರ್ಷಾಣಾಂ ದಾಸ್ಯಹಂ ತವ ಮಂದಿರೇ ॥ ೧೭ ॥
ಅಸತ್ಯಾ ಯದಿ ಮೇ ವಾಣೀ ಕೃಷ್ಣ ಉಚ್ಚೈಃಶ್ರವಾ ಯದಿ ।
ತದಾಽಹಂ ತ್ವದ್ಗೃಹೇ ದಾಸೀ ಭವಾಮಿ ಸರ್ಪಮಾತೃಕೇ ॥ ೧೮ ॥
ಯದಿ ಉಚ್ಚೈಃಶ್ರವಾಃ ಶ್ವೇತೋಽಹಂ ದಾಸೀ ತವೈವ ತು ।
ಏವಂ ಪರಸ್ಪರಂ ದ್ವಾಭ್ಯಾಂ ಸಂವಾದೋಽಯಂ ವ್ಯವರ್ಧತ ॥ ೧೯ ॥
ಆಶ್ರಮೇಷು ಗತಾ ಬಾಲಾ ರಾತ್ರೌ ಚಿಂತಾಪರಾ ಸ್ಥಿತಾ ।
ಬಂಧುವರ್ಗಸ್ಯ ಕಥಿತಂ ಸಮಸ್ತಂ ತದ್ವಿಚೇಷ್ಟಿತಂ ॥ ೨೦ ॥

---

ದಿನ ಆಶ್ರಮದಲ್ಲಿರುವ ಕಶ್ಯಪನ ಪತ್ನಿಯಾದ ಕದ್ರುವು ಮನೋವೇಗದಿಂದ ನಡೆಯುವುದೂ, ಮೈಯೆಲ್ಲ ಬೆಳ್ಳಗಿರುವುದೂ, ಎಡೆಬಿಡದೆ ಓಡುತ್ತಿರುವುದೂ ಆದ ಉಚ್ಚೈಃಶ್ರವಸ್ಸೆಂಬ ಕುದುರೆಯನ್ನು ಕಂಡು ಅಸೂಯೆಯಿಂದ ಇಂತೆಂದಳು.

೧೫. ಕದ್ರುವು ಹೇಳುತ್ತಾಳೆ:—ಮಂಗಳಕರಳೆ! ಸೂರ್ಯನ ಕುದುರೆಯು ಯಾವ ಬಣ್ಣವಾಗಿರುವುದು? ನಾನು ಕೃಷ್ಣವರ್ಣವಾಗಿರುವುದೆಂದು ಹೇಳುತ್ತೇನೆ. ನೀನು ಏನನ್ನು ಹೇಳುವೆ? ಅದನ್ನು ಹೇಳು.

೧೬. ವಿನತೆಯು ಹೇಳುತ್ತಾಳೆ:—ಮಂಗಳಕರಳೆ! ಆ ಕುದುರೆಯ ಕಣ್ಣು ಕೃಷ್ಣವಾಗಿಯೂ, ಮೈಯು ಶ್ವೇತವರ್ಣವಾಗಿಯೂ ಇರುವುದನ್ನು ನೀನು ನೋಡಲಿಲ್ಲವೆ? ಸುಳ್ಳುಮಾತಿನಿಂದ ಯಮಲೋಕಕ್ಕೆ ತೆರಳುವೆ.

೧೭–೧೯. ನನ್ನ ಮಾತು ಸುಳ್ಳಾದರೆ ನಾನು ನಿನ್ನ ಮನೆಯಲ್ಲಿ ಸಾವಿರ ವರ್ಷಕಾಲ ದಾಸಿಯಾಗಿರುವೆನು. ಉಚ್ಚೈಃಶ್ರವಸ್ಸು ಬೆಳ್ಳಗಿದ್ದು ನಿನ್ನ ಮಾತು ಸುಳ್ಳಾದರೆ ನೀನು ನನ್ನ ಮನೆಯಲ್ಲಿ ದಾಸಿಯಾಗಿರು. ಹೀಗೆ ಅವರಿಬ್ಬರಲ್ಲಿ ವಿವಾದವು ಬೆಳೆಯಿತು.

೨೦. ಆ ಕದ್ರುವು ಆಶ್ರಮಕ್ಕೆ ತೆರಳಿ ಅಲ್ಲಿ ಚಿಂತಾಕ್ರಾಂತಳಾದಳು. ಬಂಧುಗಳಿಗೆ ತಾನು ಮಾಡಿದ ಕೆಲಸವನ್ನೆಲ್ಲ ಹೇಳಿದಳು.

ಪುತ್ರಾಣಾಂ ಕಥಿತಂ ಸಾರ್ಧಂ ಪಣಂ ಚೈವ ಮಯಾಕೃತಂ ।
ಹಾಹಾಕಾರಃ ಕೃತಃ ಸರ್ಪೈಃ ಶ್ರುತ್ವಾ ಮಾತ್ರಾ ಪಣಂ ಕೃತಂ ॥ ೨೧ ॥
ಜಾತಾ ದಾಸೀ ನ ಸಂದೇಹಃ ಶ್ವೇತೋ ಭಾಸ್ಕರವಾಹನಃ ।
ಉಚ್ಚೈಃಶ್ರವಾ ಹಯಃ ಶ್ವೇತೋ ನ ಕೃಷ್ಣೋ ವಿದ್ಯತೇ ಕ್ವಚಿತ್ ॥ ೨೨ ॥

ಕದ್ರೂರುವಾಚ :—

ಯಥಾಽಹಂ ನ ಭವೇ ದಾಸೀ ತತ್ಕಾರ್ಯಂ ಚ ವಿಚಿಂತ್ಯತಾಂ ।
ವಿಶಧ್ವಂ ರೋಮಕೂಪೇಷು ಹ್ಯುಚ್ಚೈಃಶ್ರವಹಯಸ್ಯ ತು ॥ ೨೩ ॥
ಏಕಂ ಮುಹೂರ್ತಮಾತ್ರಂ ತು ಯಾವತ್ಕೃಷ್ಣಃ ಸ ದೃಶ್ಯತೇ ।
ಕ್ಷಣಮಾತ್ರೇಣ ಚೈಕೇನ ದಾಸೀ ಸಾ ಭವತೇ ಮಮ ॥ ೨೪ ॥
ದಾಸೀಂ ಕೃತ್ವಾ ತು ತಾಂ ತನ್ವೀಂ ವಿನತಾಂ ಸತ್ಯಗರ್ವಿತಾಂ ।
ತತಃ ಸ್ವಸ್ಥಾನಗಾಃ ಸರ್ವೇ ಭವಿಷ್ಯಥ ಯಥಾಸುಖಂ ॥ ೨೫ ॥

ಸರ್ಪಾ ಊಚುಃ :—

ಯಥಾ ತ್ವಂ ಜನನೀ ಚಾಂಬ ಸರ್ವೇಷಾಂ ಭುವಿ ಪೂಜಿತಾ ।
ತಥಾ ಸಾಽಪಿ ವಿಶೇಷೇಣ ವಂಚಿತವ್ಯಾ ನ ಮಾತರಃ ॥ ೨೬ ॥
ಮಾತಾ ಚ ಪಿತೃಭಾರ್ಯಾ ಚ ಮಾತೃಮಾತಾ ಪಿತಾಮಹೀ ।
ಕರ್ಮಣಾ ಮನಸಾ ವಾಚಾ ಹಿತಂ ತಾಸಾಂ ಸಮಾಚರೇತ್ ॥ ೨೭ ॥

---

೨೧. "ಪುತ್ರರೆ! ನಾನು ಪಣತೊಟ್ಟಿರುವೆನೆಂದಳು." ಸರ್ಪಗಳು ಅವಳು ಮಾಡಿದ ಪಣವನ್ನು ಕೇಳಿ ಹಾಹಾಕಾರಮಾಡಿದರು.

೨೨–೨೪. ಅವರು, "ಸೂರ್ಯನ ವಾಹನವಾದ ಉಚ್ಚೈಶ್ರವಸ್ಸು ಬೆಳ್ಳಗಿದೆ. ಕೃಷ್ಣವರ್ಣವಾಗಿಲ್ಲ. ನಮ್ಮ ತಾಯಿಯಾದ ಕದ್ರುವು ದಾಸಿಯಾದಳು" ಎಂದು ಕೊಂಡರು. "ನಾನು ದಾಸಿಯಾಗದಿರಲು ಉಪಾಯವನ್ನು ಚಿಂತಿಸಿರಿ. ಸ್ವಲ್ಪಹೊತ್ತು ಆ ಕುದುರೆಯು ಕೃಷ್ಣವರ್ಣವಾಗಿ ಕಾಣುವಂತೆ ಅದರ ರೋಮ ಕೂಪಗಳಲ್ಲಿ ಪ್ರವೇಶಿಸಿರಿ. ಆ ಒಂದು ಕ್ಷಣದಲ್ಲಿಯೇ ಅವಳು ನನಗೆ ದಾಸಿ ಯಾಗುವಳು.

೨೫. ನೀವು ಹೀಗೆ ಸತ್ಯದಿಂದ ಅಹಂಕಾರಗೊಂಡ ಆ ವಿನತೆಯನ್ನು ನನಗೆ ದಾಸಿಯನ್ನಾಗಿಸಿ ಸುಖವಾಗಿ ನಿಮ್ಮ ಸ್ಥಳಕ್ಕೆ ತೆರಳಿರಿ" ಎಂದು ಕದ್ರುವು ಹೇಳಿದಳು.

೨೬–೨೭. ಸರ್ಪಗಳು ಹೇಳುತ್ತವೆ.—ಅಮ್ಮ! ನೀನು ನಮ್ಮೆಲ್ಲರಿಗೆ ಹೇಗೆ ಪೂಜ್ಯಳೊ, ಹಾಗೆಯೇ ಆ ವಿನತೆಯೂ ಪೂಜ್ಯಳಾಗಿರುವಳು. ಮಾತೆಯರನ್ನು ವಂಚಿಸಬಾರದು. ತಾಯಿ, ತಂದೆಯ ಪತ್ನಿ, ಅಜ್ಜಿ, ತಂದೆಯ ತಾಯಿ ಇವರಿಗೆ ಮನೋವಾಕ್ಕರ್ಮಗಳಿಂದ ಹಿತವನ್ನಾಚರಿಸಬೇಕು.

ಸಾ ತತಸ್ತೇನ ವಾಕ್ಯೇನ ಕ್ರುದ್ಧಾ ಕಾಲಾನಲೋಪಮಾ ।
ಮಮ ವಾಕ್ಯಮಕುರ್ವಾಣಾ ಯೇ ಕೇಚಿದ್ಭುವಿ ಪನ್ನಗಾಃ ॥ ೨೮ ॥
ಹವ್ಯವಾಹಮುಖೇ ಸರ್ವೇ ತೇ ಯಾಸ್ಯಂತ್ಯವಿಚಾರಿತಂ ।
ಮಾತುಸ್ತದ್ವಚನಂ ಶ್ರುತ್ವಾ ಸರ್ವೇ ಚೈವ ಭುಜಂಗಮಾಃ ॥ ೨೯ ॥
ಕೇಚಿತ್ಪ್ರವಿಷ್ಟಾ ರೋಮೇಷು ಉಚ್ಚೈಃಶ್ರವಹಯಸ್ಯ ಚ ।
ನಷ್ಟಾಃ ಕೇಚಿದ್ದಶದಿಶಂ ಕದ್ರೂಶಾಪಭಯಾತ್ತತಃ ॥ ೩೦ ॥
ಕೇಚಿದ್ಗಂಗಾಜಲೇ ನಷ್ಟಾಃ ಕೇಚಿನ್ನಷ್ಟಾಃ ಸರಸ್ವತೀಂ ।
ಕೇಚಿನ್ಮಹೋದಧೌ ಲೀನಾಃ ಪ್ರವಿಷ್ಟಾ ವಿಂಧ್ಯಕಂದರೇ ॥ ೩೧ ॥
ಆಶ್ರಿತ್ಯ ನರ್ಮದಾತೋಯೇ ಮಣಿನಾಗೋತ್ತಮೋ ನೃಪ ।
ತಪಶ್ಚಚಾರ ವಿಪುಲಮುತ್ತರೇ ನರ್ಮದಾ ತಟೇ ॥ ೩೨ ॥
ಮಾತೃಶಾಪಭಯಾತ್ಪಾರ್ಥ ಧ್ಯಾಯತೇ ಕಾಮನಾಶನಂ ।
ಅಚ್ಛೇದ್ಯಮಪ್ರತರ್ಕ್ಯಂ ಚ ವಿನಾಶೋತ್ಪತ್ತಿವರ್ಜಿತಂ ॥ ೩೩ ॥
ವಾಯುಭಕ್ಷಃ ಶತಂ ಸಾಗ್ರಂ ತದರ್ಧಂ ರವಿವೀಕ್ಷಕಃ ।
ಏವಂ ಧ್ಯಾನರತಸ್ಯೈವ ಪ್ರತ್ಯಕ್ಷಸ್ತ್ರಿಪುರಾಂತಕಃ ॥ ೩೪ ॥

---

೨೮–೩೦. ಸರ್ಪಗಳ ಆ ಮಾತಿನಿಂದ ಕ್ರುದ್ಧಳಾಗಿ ಪ್ರಳಯಕಾಲದ ಅಗ್ನಿಯಂತಾದ ಆ ಕದ್ರುವು, "ನನ್ನ ಮಾತನ್ನು ನಡೆಯಿಸದೆ ಭೂಮಿಯಲ್ಲಿರುವ ಹಾವುಗಳು ವಿಚಾರವಿಲ್ಲದೆ ಬೆಂಕಿಯಲ್ಲಿ ಬೀಳುವುವು." ತಾಯಿಯ ಆ ಮಾತನ್ನು ಕೇಳಿ ಆ ಸರ್ಪಗಳಲ್ಲಿ ಕೆಲವು ಉಚ್ಚೈಃಶ್ರವಸ್ಸಿನ ರೋಮಗಳಲ್ಲಿ ಹೊಕ್ಕುವು. ಕೆಲವು ಕದ್ರುವಿನ ಶಾಪದ ಭಯದಿಂದ ಹತ್ತುದಿಕ್ಕುಗಳಲ್ಲಿ ಅಡಗಿಕೊಂಡವು.

೩೧. ಕೆಲವು ಗಂಗಾಜಲದಲ್ಲಿಯೂ, ಕೆಲವು ಸರಸ್ವತೀನದಿಯಲ್ಲಿಯೂ, ಕೆಲವು ಸಮುದ್ರದಲ್ಲಿಯೂ, ಕೆಲವು ವಿಂಧ್ಯಪರ್ವತದ ಗುಹೆಯಲ್ಲಿಯೂ ಅವಿತುಕೊಂಡವು.

೩೨–೩೩. ದೊರೆಯೆ! ಉತ್ತಮವಾದ ಮಣಿನಾಗನು ಮಾತ್ರ ತಾಯಿಯ ಶಾಪದ ಭಯದಿಂದ ನರ್ಮದಾನದಿಯ ನೀರನ್ನು ಆಶ್ರಯಿಸಿ ಆ ನದಿಯ ಉತ್ತರ ದಡದಲ್ಲಿ ಕಾಮನಾಶಕನೂ, ನಾಶರಹಿತನೂ, ಅಪ್ರಮೇಯನೂ, ಉತ್ಪತ್ತಿರಹಿತನೂ ಆದ ಶಂಕರನನ್ನು ಕುರಿತು ತಪಸ್ಸನ್ನು ಮಾಡಿದನು.

೩೪. ಅವನು ನೂರುವರ್ಷಕಾಲ ವಾಯುಭಕ್ಷಕನಾಗಿಯೂ, ಐವತ್ತು ವರ್ಷಕಾಲ ಆತಪಭಕ್ಷಕನಾಗಿಯೂ ಧ್ಯಾನಮಾಡುತ್ತಿರಲು, ತ್ರಿಪುರಾಂತಕನು ಅವನಿಗೆ ಪ್ರತ್ಯಕ್ಷನಾದನು.

ಸಾಧುಸಾಧು ಮಹಾಭಾಗ ಸತ್ತ್ವವಾಂಸ್ತು ಭುಜಂಗಮ ।
ತ್ವಯಾ ಭಕ್ತ್ಯಾ ಗೃಹೀತೋಽಹಂ ಪ್ರೀತಸ್ತೇಹ್ಯುರಗೇಶ್ವರ ।
ವರಂ ಯಾಚಯ ಮೇ ಕ್ಷಿಪ್ರಂ ಯಸ್ತೇ ಮನಸಿ ವರ್ತತೇ ॥ ೩೫ ॥

ಮಣಿನಾಗ ಉವಾಚ :—

ಮಾತೃಶಾಪಭಯಾನ್ನಾಥ ಕ್ಲಿಷ್ಟೋಽಹಂ ನರ್ಮದಾತಟೇ ।
ತ್ವತ್ಪ್ರಸಾದೇನ ಮೇ ನಾಥ ಮಾತೃಶಾಪೋ ಭವೇತ್ತಥಾ ॥ ೩೬ ॥

ಈಶ್ವರ ಉವಾಚ :—

ಹವ್ಯವಾಹಮುಖಂ ವತ್ಸ ನ ಪ್ರಾಪ್ಸ್ಯಸಿ ಮಮಾಜ್ಞಯಾ ।
ಮಮ ಲೋಕೇ ನಿವಾಸಶ್ಚ ತವ ಪುತ್ರ ಭವಿಷ್ಯತಿ ॥ ೩೭ ॥

ಮಣಿನಾಗ ಉವಾಚ :—

ಅತ್ರ ಸ್ಥಾನೇ ಮಹಾದೇವ ಸ್ಥೀಯತಾಮಂಶಭಾಗತಃ ।
ಸಹಸ್ರಾಂಶೇನ ಭಾಗೇನ ಸ್ಥೀಯತಾಂ ನರ್ಮದಾಜಲೇ ।
ಉಪಕಾರಾಯ ಲೋಕಾನಾಂ ಮಮ ನಾಮ್ನೈವ ಶಂಕರ ॥ ೩೮ ॥

ಈಶ್ವರ ಉವಾಚ :—

ಸ್ಥಾಪಯಸ್ವ ಪರಂ ಲಿಂಗಮಾಜ್ಞಯಾ ಮಮ ಪನ್ನಗ ।
ಇತ್ಯುಕ್ತ್ವಾಂತರ್ಹಿತೋ ದೇವೋ ಜಗಾಮ ಹ್ಯುಮಯಾ ಸಹ ॥ ೩೯ ॥

---

೩೫. "ಮಹಾಭಾಗ! ಒಳ್ಳೆಯದು ಸಂತೋಷ, ಸತ್ವಶಾಲಿಯಾದ ನಿನ್ನ ಭಕ್ತಿಯಿಂದ ನಾನು ನಿನಗೆ ವಶನಾಗಿ ದಿಟನಾಗಿಯೂ ಸಂತುಷ್ಟನಾಗಿರುವೆನು. ನಿನಗಿಷ್ಟವಾದ ವರವನ್ನು ಬೇಡಿಕೊ.

೩೬. ಮಣಿನಾಗನು ಹೇಳುತ್ತಾನೆ —ನಾಥ! ನಾನು ತಾಯಿಯ ಶಾಪದ ಭಯದಿಂದ ನರ್ಮದಾನದಿಯ ದಡದಲ್ಲಡಗಿ ವ್ಯಥೆಗೊಂಡಿದ್ದೇನೆ. ನಿನ್ನ ಅನುಗ್ರಹದಿಂದ ನಮ್ಮ ತಾಯಿಯ ಶಾಪವು ವ್ಯರ್ಥವಾಗಲಿ.

೩೭. ಈಶ್ವರನು ಹೇಳುತ್ತಾನೆ.—ಮಗು! ನನ್ನ ಆಜ್ಞೆಯಿಂದ ಅಗ್ನಿಯ ಬಾಯಿಯನ್ನು ಪ್ರವೇಶಿಸುವುದಿಲ್ಲ. ನನ್ನ ಲೋಕವಾಸವು ನಿನಗೆ ಲಭಿಸುವುದು.

೩೮. ಮಣಿನಾಗನು ಹೇಳುತ್ತಾನೆ:—ಶಂಕರ! ನೀನು ಲೋಕೋಪಕಾರಕ್ಕಾಗಿ ಈ ನರ್ಮದಾನದಿಯ ಜಲದಲ್ಲಿ ನನ್ನ ಹೆಸರಿನಿಂದ ಸಾವಿರದ ಒಂದನೆಯ ಭಾಗದಿಂದ ನೆಲೆಸು.

೩೯. ಈಶ್ವರನು ಹೇಳುತ್ತಾನೆ:—ಮಹೇಶ್ವರನು ನನ್ನ ಆಜ್ಞೆಯಿಂದ ಉತ್ತಮವಾದ ಲಿಂಗವನ್ನು ಸ್ಥಾಪಿಸೆಂದು ಹೇಳಿ ಪಾರ್ವತಿಯೊಡನೆ ಕಣ್ಮರೆಯಾದನು.

ಮಾರ್ಕಂಡೇಯ ಉವಾಚ :—

ತತ್ರ ತೀರ್ಥೇ ತು ಯೇ ಗತ್ವಾ ಶುಚಿಪ್ರಯತಮಾನಸಾಃ ।
ಪಂಚಮ್ಯಾಂ ವಾ ಚತುರ್ದಶ್ಯಾಮಷ್ಟಮ್ಯಾಂ ಶುಕ್ಲಕೃಷ್ಣಯೋಃ ॥ ೪೦ ॥
ಅರ್ಚಯಂತಿ ಸದಾ ಪಾರ್ಥ ನೋಪಸರ್ಪಂತಿ ತೇ ಯಮಂ ।
ದಧ್ನಾ ಚ ಮಧುನಾ ಚೈವ ಘೃತೇನ ಕ್ಷೀರಯೋಗತಃ ॥ ೪೧ ॥
ಸ್ನಾಪಯಂತಿ ವಿರೂಪಾಕ್ಷಮುಮಾದೇಹಾರ್ಧದಾರಿಣಂ ।
ಕಾಮಾಂಗದಹನಂ ದೇವಮಘಾಸುರನಿಷೂದನಂ ॥ ೪೨ ॥
ಸ್ನಾಪ್ಯಮಾನಂ ಚ ಯೇ ಭಕ್ತ್ಯಾ ಪಶ್ಯಂತಿ ಪರಮೇಶ್ವರಂ ।
ತೇ ಯಾಂತಿ ಚ ಪರೇ ಲೋಕೇ ಸರ್ವಪಾಪವಿವರ್ಜಿತೇ ॥ ೪೩ ॥
ಶ್ರಾದ್ಧಂ ಪ್ರೇತೇಷು ಯೇ ಪಾರ್ಥ ಚಾಷ್ಟಮ್ಯಾಂ ಪಂಚಮೀಷು ಚ ।
ಬ್ರಾಹ್ಮಣೈಶ್ಚ ಸದಾ ಯೋಗ್ಯೈರ್ವೇದಪಾಠಕಚಿಂತಕೈಃ ॥ ೪೪ ॥
ಸ್ವದಾರನಿರತೈಃ ಶ್ಲಕ್ಷ್ಣೈಃ ಪರದಾರವಿವರ್ಜಿತಃ ।
ಷಟ್ಕರ್ಮನಿರತೈಸ್ತಾತ ಶೂದ್ರಪ್ರೇಷಣವರ್ಜಿತೈಃ ॥ ೪೫ ॥
ಖಂಜಾಶ್ಚ ದರ್ದುರಾಃ ಷಂಢಾ ವಾರ್ಧುಷ್ಯಾಶ್ಚ ಕೃಷೀವಲಾಃ ।
ಭಿನ್ನವೃತ್ತಿಕರಾಃ ಪುತ್ರ ನಿಯೋಜ್ಯಾ ನ ಕದಾಚನ ॥ ೪೬ ॥

---

೪೦–೪೩. ಶ್ರೀ ಮಾರ್ಕಂಡೇಯನು ಹೇಳುತ್ತಾನೆ :— ಎರಡು ಪಕ್ಷಗಳ ಪಂಚಮೀ, ಚತುರ್ದಶೀ, ಅಷ್ಟಮಿಗಳಲ್ಲಿ ಆ ತೀರ್ಥಕ್ಕೆ ಹೋಗಿ ಶುದ್ಧಮನಸ್ಸಿನಿಂದ ಮಣಿನಾಗೇಶ್ವರನನ್ನು ಪೂಜಿಸಿದವನು ಯಮನೆಡೆಗೆ ಹೋಗುವುದಿಲ್ಲ. ಉಮಾರ್ಧಾಂಗಿಯಾಗಿರುವವನೂ, ಕಾಮನನ್ನು ದಹಿಸಿದವನೂ, ಅಂಧಕಾಸುರನನ್ನು ಕೊಂದವನೂ ಆದ ವಿರೂಪಾಕ್ಷನನ್ನು ದಧಿ, ಮಧು, ಘೃತ, ಕ್ಷೀರಗಳಿಂದ ಭಕ್ತಿಯಿಂದ ಅಭಿಷೇಕಮಾಡಿದವನು ಪರಮೇಶ್ವರನನ್ನು ನೋಡುವನು. ಮತ್ತು ಸಕಲ ಪಾಪರಹಿತನಾದ ಶಿವಲೋಕಕ್ಕೆ ತೆರಳುವನು.

೪೪–೪೫. ಯುಧಿಷ್ಠಿರ! ಪಂಚಮೀ, ಅಷ್ಟಮೀ ದಿನಗಳಲ್ಲಿ ಅಲ್ಲಿ ಯಾವಾಗಲೂ ಯೋಗ್ಯರೂ, ವೇದಾಧ್ಯಯನಮಾಡುವವರೂ, ಸ್ವಪತ್ನೀನಿರತರೂ, ಸಾಧುಗಳೂ, ಷಟ್ಕರ್ಮನಿರತರೂ, ಶೂದ್ರಸೇವಕರಲ್ಲದವರೂ ಆದ ಬ್ರಾಹ್ಮಣರಿಂದ ಪರಪತ್ನೀವಿಮುಖನಾಗಿ ಪ್ರೇತಗಳಿಗೆ ಶ್ರಾದ್ಧವನ್ನು ಮಾಡಬೇಕು.

೪೬. ಮಗು! ಶ್ರಾದ್ಧದಲ್ಲಿ ಕುಂಟರೂ, ಕುಷ್ಠರೋಗಿಗಳೂ, ನಪುಂಸಕರೂ, ಬಡ್ಡಿಯಿಂದ ಜೀವಿಸುವವರೂ, ವ್ಯವಸಾಯಮಾಡುವವರೂ, ಬೇರೆ ವೃತ್ತಿಯನ್ನವಲಂಬಿಸಿದವರೂ ಆದ ಬ್ರಾಹ್ಮಣರನ್ನು ಭೋಜನಮಾಡಿಸಬಾರದು.

ವೃಷಲೀ ಮಂದಿರೇ ಯಸ್ಯ ಮಹಿಷೀಂ ಯಸ್ತು ಪಾಲಯೇತ್ ।
ಸ ವಿಪ್ರೋ ದೂರತಸ್ತ್ಯಾಜ್ಯೋ ವ್ರತೇ ಶ್ರಾದ್ಧೇ ನರಾಧಿಪ ॥ ೪೭ ॥
ಕಾಣಾಷ್ಷಂಟಾಶ್ಚ ಮಂಟಾಶ್ಚ ವೇದಪಾಠವಿವರ್ಜಿತಾಃ ।
ನ ತೇ ಪೂಜ್ಯಾ ದ್ವಿಜಾಃ ಪಾರ್ಥ ಮಣಿನಾಗೇಶ್ವರೇ ಶುಭೇ ॥ ೪೮ ॥
ಯದೀಚ್ಛೇದೂರ್ಧ್ವಗಮನಮಾತ್ಮನಃ ಪಿತೃಭಿಃ ಸಹ ।
ಸರ್ವಾಂಗರುಚಿರಾಂ ಧೇನುಂ ಯೋ ದದ್ಯಾದಗ್ರಜನ್ಮನೇ ॥ ೪೯ ॥
ಸ ಯಾತಿ ಪರಮಂ ಲೋಕಂ ಯಾವದಾಭೂತಸಂಪ್ಲವಂ ।
ತತಃ ಸ್ವರ್ಗಾಚ್ಚ್ಯುತಃ ಸೋಽಪಿ ಜಾಯತೇ ವಿಮಲೇ ಕುಲೇ ॥ ೫೦ ॥
ಯೇ ಪಶ್ಯಂತಿ ಪರಂ ಭಕ್ತ್ಯಾ ಮಣಿನಾಗೇಶ್ವರಂ ನೃಪ ।
ನ ತೇಷಾಂ ಜಾಯತೇ ವಂಶೇ ಪನ್ನಗಾನಾಂ ಭಯಂ ನೃಪ ॥ ೫೧ ॥
ಪನ್ನಗಃ ಶಂಕತೇ ತೇಷಾಂ ಮಣಿನಾಗಪ್ರದರ್ಶನಾತ್ ।
ಸೌಪರ್ಣರೂಪಿಣಸ್ತೇ ವೈ ದೃಶ್ಯಂತೇ ನಾಗಮಂಡಲೇ ॥ ೫೨ ॥
ಫಲಾನಿ ಚೈವ ದಾನಾನಾಂ ಶೃಣುಷ್ವಾಽಥ ನೃಪೋತ್ತಮ ।
ಅನ್ನಂ ಸಂಸ್ಕಾರಸಂಯುಕ್ತಂ ಯೇ ದದಂತೇ ನರೋತ್ತಮಾಃ ॥ ೫೩ ॥
ತೋಯಂ ಶಯ್ಯಾಂ ತಥಾ ಛತ್ರಂ ಕನ್ಯಾಂ ದಾಸೀಂ ಸುಭಾಷಿಣೀಂ ।
ಪಾತ್ರೇ ದೇಯಂ ಯತೋ ರಾಜನ್ಯದೀಚ್ಛೇಚ್ಛ್ರೇಯ ಆತ್ಮನಃ ॥ ೫೪ ॥

---

೪೭. ಮನೆಯಲ್ಲಿ ಶೂದ್ರಸ್ತ್ರೀಯನ್ನು ಇಟ್ಟುಕೊಂಡಿರುವವನೂ, ಎಮ್ಮೆಯನ್ನು ಪಾಲಿಸುವವನೂ ಆದ ಬ್ರಾಹ್ಮಣನನ್ನು ವ್ರತ ಮತ್ತು ಶ್ರಾದ್ಧಗಳಲ್ಲಿ ದೂರದಿಂದಲೇ ತೊರೆಯತಕ್ಕದ್ದು.

೪೮–೫೦. ಈ ಮಣಿನಾಗೇಶ್ವರದಲ್ಲಿ ಪಿತೃಗಳೊಡನೆ ತಾನೂ ಉದ್ಧಾರವಾಗಬೇಕೆಂದು ಬಯಸುವವನು, ಕುರುಡರೂ, ಮೊದಲು ಮಾತಾಡುವವರೂ, ಹುಚ್ಚರೂ, ವೇದಾಧ್ಯಯನಮಾಡದವರೂ ಆದ ಬ್ರಾಹ್ಮಣರನ್ನು ಪೂಜಿಸಬಾರದು. ಬ್ರಾಹ್ಮಣನಿಗೆ ಸರ್ವಾಂಗಸುಂದರವಾದ ಧೇನುವನ್ನಿತ್ತವನು ಪ್ರಳಯಕಾಲದವರೆಗೆ ಉತ್ತಮಲೋಕದಲ್ಲಿ ವಾಸಮಾಡುವನು. ಅನಂತರ ಸ್ವರ್ಗವನ್ನು ಬಿಟ್ಟು ಶುದ್ಧವಾದ ವಂಶದಲ್ಲಿ ಹುಟ್ಟುವನು.

೫೧. ಮಣಿನಾಗೇಶ್ವರನನ್ನು ಭಕ್ತಿಯಿಂದ ದರ್ಶನಮಾಡಿದವರ ವಂಶದಲ್ಲಿ ಸರ್ಪಗಳ ಭಯವುಂಟಾಗುವುದಿಲ್ಲ.

೫೨. ಆ ಮಣಿನಾಗನನ್ನು ದರ್ಶನಮಾಡಿದವರನ್ನು ನೋಡಿ ಸರ್ಪವು ಶಂಕಿಸುತ್ತದೆ. ಅವರು ನಾಗಗಳ ಸಮೂಹದಲ್ಲಿ ಗರುಡರೂಪವುಳ್ಳವರಾಗಿ ಕಾಣಿಸುತ್ತಾರೆ.

೫೩–೫೪. ಯುಧಿಷ್ಠಿರ! ಅನಂತರ ದಾನಗಳ ಫಲಗಳನ್ನು ಕೇಳು.

ಸುರಭೀಣಿ ಚ ಪುಷ್ಪಾಣಿ ಗಂಧವಸ್ತ್ರಾಣಿ ದಾಪಯೇತ್ ।
ದೀಪಂ ಧಾನ್ಯಂ ಗೃಹಂ ಶುಭ್ರಂ ಸರ್ವೋಪಸ್ಕರಸಂಯುತಂ ॥ ೫೫ ॥
ಯೇ ದದಂತೇ ಪರಂ ಭಕ್ತ್ಯಾ ತೇ ವ್ರಜಂತಿ ತ್ರಿವಿಷ್ಟಪಂ ।
ಮಣಿನಾಗೇ ನೃಪಶ್ರೇಷ್ಠ ಯಚ್ಚ ದಾನಂ ಪ್ರದೀಯತೇ ॥ ೫೬ ॥
ತಸ್ಯ ದಾನಸ್ಯ ಭಾವೇನ ಸ್ವರ್ಗೇ ವಾಸೋ ಭವೇದ್ಧ್ರುವಂ ।
ಪಾತಕಾನಿ ಪ್ರಲೀಯಂತೇ ಆಮಪಾತ್ರೇ ಯಥಾಜಲಂ ॥ ೫೭ ॥
ನರ್ಮದಾತೋಯಸಂಸಿದ್ಧಂ ಭೋಜ್ಯಂ ವಿಪ್ರೇ ದದಾತಿ ಯಃ ।
ಸೋಽಪಿ ಪಾಪೈರ್ವಿನಿರ್ಮುಕ್ತಃ ಕ್ರೀಡತೇ ದೈವತೈಃ ಸಹ ॥ ೫೮ ॥
ತತಃ ಸ್ವರ್ಗಚ್ಯುತಾನಾಂ ಹಿ ಲಕ್ಷಣಂ ಪ್ರವದಾಮ್ಯಹಂ ।
ದೀರ್ಘಾಯುಷೋ ಜೀವಪುತ್ರಾ ಧನವಂತಃ ಸುಶೋಭನಾಃ ॥ ೫೯ ॥
ಸರ್ವವ್ಯಾಧಿವಿನಿರ್ಮುಕ್ತಾಃ ಸುತಭೃತ್ಯೈಃ ಸಮನ್ವಿತಾಃ ।
ತ್ಯಾಗಿನೋ ಭೋಗಸಂಯುಕ್ತಾ ಧರ್ಮಾಖ್ಯಾನರತಾಃ ಸದಾ ॥ ೬೦ ॥
ದೇವದ್ವಿಜಗುರೋರ್ಭಕ್ತಾಸ್ತೀರ್ಥಸೇವಾಪರಾಯಣಾಃ ।
ಮಾತಾಪಿತೃವಶಾ ನಿತ್ಯಂ ದ್ರೋಹ ಕ್ರೋಧವಿವರ್ಜಿತಾಃ ॥ ೬೧ ॥

---

ತನಗೆ ಶ್ರೇಯಸ್ಸನ್ನು ಬಯಸುವವನು ಸಂಸ್ಕಾರದಿಂದ ಕೂಡಿದ ಅನ್ನ, ನೀರು, ಹಾಸಿಗೆ, ಕೊಡೆ, ಕನ್ಯೆ, ಚೆನ್ನಾಗಿ ಮಾತಾಡುವ ದಾಸಿ ಇವರನ್ನು ಸತ್ಪಾತ್ರದಲ್ಲಿ ದಾನಮಾಡಬೇಕು.

೫೫–೫೭. ಸುವಾಸನೆಯಾದ ಹೂವು, ಗಂಧ, ವಸ್ತ್ರ, ದೀಪ, ಧಾನ್ಯ, ಸಮಸ್ತಸಾಮಗ್ರಿಗಳಿಂದ ಕೂಡಿದ ಮನೆ ಇವುಗಳನ್ನು ಭಕ್ತಿಯಿಂದ ದಾನ ಮಾಡುವವರು ಸ್ವರ್ಗಕ್ಕೆ ಹೋಗುವರು. ಮಣಿನಾಗದಲ್ಲಿ ಕೊಟ್ಟ ದಾನದ ಪ್ರಭಾವದಿಂದ ನಿಶ್ಚಯವಾಗಿಯೂ ಸ್ವರ್ಗವಾಸವು ಲಭಿಸುವುದು. ಮಣ್ಣಿನ ಪಾತ್ರೆಯಲ್ಲಿ ನೀರು ಇಂಗುವಂತೆ ಪಾಪಗಳು ನೀಗುವುವು.

೫೮. ನರ್ಮದಾನದಿಯ ನೀರಿನಿಂದ ಸಿದ್ಧವಾದ ಭೋಜನವಸ್ತುವನ್ನು ಬ್ರಾಹ್ಮಣರಿಗೆ ದಾನಮಾಡುವವನು ಪಾಪಮುಕ್ತನಾಗಿ ದೇವತೆಗಳೊಡನೆ ವಿನೋದಪಡುವನು.

೫೯–೬೨. ಅನಂತರ ಸ್ವರ್ಗಭ್ರಷ್ಟರಾಗುವ ಅದೇ ಮಾನವರ ಲಕ್ಷಣವನ್ನು ಹೇಳುತ್ತೇನೆ. ದೀರ್ಘಾಯುಷ್ಮಂತರೂ, ಬದುಕಿರುವ ಪುತ್ರನುಳ್ಳವರೂ, ಧನವಂತರೂ, ಸುಂದರರೂ, ಸಮಸ್ತವ್ಯಾಧಿರಹಿತರೂ, ಪುತ್ರಭೃತ್ಯರಿಂದ ಕೂಡಿದವರೂ, ತ್ಯಾಗಶೀಲರೂ, ಭೋಗಿಗಳೂ, ಧರ್ಮಾಖ್ಯಾನನಿರತರೂ, ದೇವತೆಗಳು, ದ್ವಿಜರು, ಗುರುಗಳು ಇವರಲ್ಲಿ ಭಕ್ತಿಯುಳ್ಳವರೂ, ತೀರ್ಥಸೇವನೆಯಲ್ಲಿ

ಏಭಿರೇವ ಗುಣೈರ್ಯುಕ್ತಾ ಯೇ ನರಾಃ ಪಾಂಡುನಂದನ ।
ಸತ್ಯಂತೇ ಸ್ವರ್ಗದಾ ಯಾತಾಃ ಸ್ವರ್ಗೇ ವಾಸಂ ವ್ರಜಂತಿ ತೇ ॥ ೬೨ ॥
ಸರ್ವತೀರ್ಥವರಂ ತೀರ್ಥಂ ಮಣಿನಾಗಂ ನೃಪೋತ್ತಮ ।
ತೀರ್ಥಾಖ್ಯಾನಮಿದಂ ಪುಣ್ಯಂ ಯಃ ಪಠೇಚ್ಛೃಣುಯಾದಪಿ ॥ ೬೩ ॥
ಸೋಽಪಿ ಪಾಪೈರ್ವಿನಿರ್ಮುಕ್ತಃ ಶಿವಲೋಕೇ ಮಹೀಯತೇ ।
ನ ವಿಷಂ ಕ್ರಮತೇ ತೇಷಾಂ ವಿಚರಂತಿ ಯಥೇಚ್ಛಯಾ ॥ ೬೪ ॥
ಭಾದ್ರಪದ್ಯಾಂ ಚ ಯತ್ ಷಷ್ಠ್ಯಾಂ ಪುಣ್ಯಂ ಸೂರ್ಯಸ್ಯ ದರ್ಶನೇ ।
ತತ್ಫಲಂ ಸಮವಾಪ್ನೋತಿ ಆಖ್ಯಾನಶ್ರವಣೇನ ತು ॥ ೬೫ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
" ಮಣಿನಾಗೇಶ್ವರತೀರ್ಥಮಾಹಾತ್ಮ್ಯವರ್ಣನಂ " ನಾಮ
ದ್ವಿಸಪ್ತತಿತಮೋಽಧ್ಯಾಯಃ

---

ನಿರತರೂ, ತಾಯಿತಂದೆಗಳ ಅಧೀನದಲ್ಲಿರುವವರೂ, ಯಾವಾಗಲೂ ದ್ರೋಹ ಕ್ರೋಧಗಳಿಲ್ಲದವರೂ ನಿಜವಾಗಿಯೂ ಸ್ವರ್ಗದಿಂದ ಬಂದವರೆಂದೇ ತಿಳಿಯ ಬೇಕು. ಅವರು ಮರಳಿ ಸ್ವರ್ಗಕ್ಕೇ ತೆರಳುವರು.

೬೩–೬೪. ಮಣಿನಾಗತೀರ್ಥವು ಸಕಲ ತೀರ್ಥಗಳಲ್ಲಿಯೂ ಉತ್ತಮ ವಾದುದು. ಪುಣ್ಯಕರವಾದ ಈ ತೀರ್ಥದ ಕಥೆಯನ್ನು ಪಠಿಸುವವರೂ, ಕೇಳುವ ವರೂ ಪಾಪಮುಕ್ತರಾಗಿ ಶಿವಲೋಕದಲ್ಲಿ ಪೂಜ್ಯರಾಗುವರು. ವಿಷವು ಅವರನ್ನು ಆಕ್ರಮಿಸುವುದಿಲ್ಲ. ಅವರು ಸ್ವೇಚ್ಛೆಯಾಗಿ ಸಂಚರಿಸುವರು.

೬೫. ಇದನ್ನು ಕೇಳುವುದರಿಂದ ಭಾದ್ರಪದಮಾಸದ ಷಷ್ಠೀದಿನ ಸೂರ್ಯ ನನ್ನು ದರ್ಶನಮಾಡಿದ ಫಲವು ದೊರೆಯುವುದು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
" ಮಣಿನಾಗೇಶ್ವರತೀರ್ಥಮಾಹಾತ್ಮ್ಯವರ್ಣನ "ವೆಂಬ
ಎಪ್ಪತ್ತೆರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ತ್ರಿಸಪ್ತತಿತಮೋಽಧ್ಯಾಯಃ

## ಗೋಽಪಾರೇಶ್ವರಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ನರ್ಮದಾದಕ್ಷಿಣೇ ಕೂಲೇ ತೀರ್ಥಂ ಪರಮಶೋಭನಂ ।
ಸರ್ವಪಾಪಹರಂ ಪಾರ್ಥ ಗೋಽಪಾರೇಶ್ವರಮುತ್ತಮಂ ।
ಗೋದೇಹಾನ್ನಿಃಸೃತಂ ಲಿಂಗಂ ಪುಣ್ಯಂ ಭೂಮಿತಲೇ ನೃಪ ॥ ೧ ॥

ಯುಧಿಷ್ಠಿರ ಉವಾಚ :—

ಗೋದೇಹಾನ್ನಿಃಸೃತಂ ಕಸ್ಮಾಲ್ಲಿಂಗಂ ಪಾಪಕ್ಷಯಂಕರಂ ।
ದಕ್ಷಿಣೇ ನರ್ಮದಾಕೂಲೇ ಮಣಿನಾಗಸಮೀಪತಃ ।
ಸಂಕ್ಷೇಪಾತ್ಕಥ್ಯತಾಂ ವಿಪ್ರ ಗೋಽಪಾರೇಶ್ವರಸಂಭವಂ ॥ ೨ ॥

ಶ್ರೀ ಮಾರ್ಕಂಡೇಯ ಉವಾಚ :—

ಕಾಮಧೇನುಸ್ತಪಸ್ತತ್ರ ಪುರಾ ಪಾರ್ಥ ಚಕಾರ ಹ ।
ಧ್ಯಾಯತೇ ಪರಯಾ ಭಕ್ತ್ಯಾ ದೇವದೇವಂ ಮಹೇಶ್ವರಂ ॥ ೩ ॥
ತುಷ್ಟಸ್ತಸ್ಯಾ ಜಗನ್ನಾಥಃ ಕಪಿಲಾಯಾ ಮಹೇಶ್ವರಃ ।
ನಿಃಸೃತೋ ದೇಹಮಧ್ಯಾತ್ತು ಅಚ್ಛೇದ್ಯಃ ಪರಮೇಶ್ವರಃ ॥ ೪ ॥

---

## ಕನ್ನಡದ ಅನುವಾದ

### ಗೋಽಪಾರೇಶ್ವರಮಾಹಾತ್ಮ್ಯವರ್ಣನ

೧. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:—ನರ್ಮದಾನದಿಯ ದಕ್ಷಿಣ ದಡದಲ್ಲಿ ಸಕಲ ಪಾಪಗಳನ್ನು ನೀಗಿಸುವುದೂ, ಅತಿಮಂಗಳಕರವೂ, ಗೋವಿನ ದೇಹದಿಂದ ಹೊರಟ ಲಿಂಗವುಳ್ಳುದೂ ಆದ ಉತ್ತಮವಾದ ಗೋಽಪಾರೇಶ್ವರ ಕ್ಷೇತ್ರವಿದೆ.

೨. ಯುಧಿಷ್ಠಿರನು ಹೇಳುತ್ತಾನೆ:— ಮುನಿಯೇ! ನರ್ಮದಾನದಿಯ ದಕ್ಷಿಣದಡದಲ್ಲಿ ಮಣಿನಾಗನ ಬಳಿ ಪಾಪವನ್ನು ನಿವಾರಿಸುವ ಆ ಲಿಂಗವು ಗೋವಿನ ದೇಹದಿಂದ ಏಕೆ ಹೊರಟಿತು? ಆ ಗೋಽಪಾರೇಶ್ವರನ ಉತ್ಪತ್ತಿಯ ಕ್ರಮವನ್ನು ಸಂಕ್ಷೇಪವಾಗಿ ಹೇಳು.

೩. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:—ಯುಧಿಷ್ಠಿರ! ಹಿಂದೆ ಕಾಮಧೇನುವು ಅತಿಭಕ್ತಿಯಿಂದ ಮಹೇಶ್ವರನನ್ನು ಧ್ಯಾನಿಸುತ್ತ ತಪವನ್ನಾಚರಿಸಿತು.

೪. ಅವಿನಾಶಿಯಾದ ಪರಮೇಶ್ವರನು ಆ ಕಪಿಲೆಯ ವಿಷಯದಲ್ಲಿ ಸಂತುಷ್ಟನಾಗಿ ಅದರ ದೇಹದಿಂದ ಹೊರಟನು.

ತುಷ್ಟೋ ದೇವಿ ಜಗನ್ನಾಥಃ ಕಪಿಲೇ ಪರಮೇಶ್ವರಿ ।
ಆರಾಧನಂ ಕೃತಂ ಯಸ್ಮಾತ್ತದ್ಬ್ರೂಹ್ಯಾಶು ಶುಭಾನನೇ ॥ ೫ ॥
ಸುರಭ್ಯುವಾಚ :—
ಲೋಕಾನಾಮುಪಕಾರಾಯ ಸೃಷ್ಟಾಽಹಂ ಪರಮೇಷ್ಠಿನಾ ।
ಲೋಕಕಾರ್ಯಾಣಿ ಸರ್ವಾಣಿ ಸಿದ್ಧ್ಯಂತಿ ಮತ್ಪ್ರಸಾದತಃ ॥ ೬ ॥
ಲೋಕಾಃ ಸ್ವರ್ಗಂ ಪ್ರಯಾಸ್ಯಂತಿ ಮತ್ಪ್ರಸಾದೇನ ಶಂಕರ ।
ತೀರ್ಥೇ ತ್ವಂ ಭವ ಮೇ ಶಂಭೋ ಲೋಕಾನಾಂ ಹಿತಕಾಮ್ಯಯಾ ॥ ೭ ॥
ತಥೇತಿ ಭಗವಾನುಕ್ತ್ವಾ ತೀರ್ಥೇ ತತ್ರಾಽವಸನ್ಮುದಾ ।
ತದಾಪ್ರಭೃತಿ ತತ್ತೀರ್ಥಂ ವಿಖ್ಯಾತಂ ವಸುಧಾತಲೇ ।
ಸ್ನಾನೇನೈಕೇನ ರಾಜೇಂದ್ರ ಪಾಪಸಂಘಂ ವ್ಯಪೋಹತಿ ॥ ೮ ॥
ಗೋಪಾರೇಶ್ವರ ಗೋದಾನಂ ಯಸ್ತು ಭಕ್ತ್ಯಾ ಚ ಕಾರಯೇತ್ ।
ಯೋಗ್ಯೇ ದ್ವಿಜೋತ್ತಮೇ ದೇಯಾ ಯೋಗ್ಯಾ ಧೇನುಃ ಸಕಾಂಚನಾ॥ ೯ ॥
ಸವತ್ಸಾ ತರುಣೀ ಶುಭ್ರಾ ಬಹುಕ್ಷೀರಾ ಸವಸ್ತ್ರಕಾ ।
ಕೃಷ್ಣಪಕ್ಷೇ ಚತುರ್ದಶ್ಯಾಮಷ್ಟಮ್ಯಾಂ ವಾ ಪ್ರದಾಪಯೇತ್ ॥ ೧೦ ॥

---

೫. "ದೇವಿಯೂ ಜಗನ್ಮಾತೆಯೂ ಆದ ಕಪಿಲೆಯೆ! ನೀನು ನನ್ನನ್ನು ಆರಾಧಿಸಿರುವುದರಿಂದ ನಾನು ನಿನ್ನಲ್ಲಿ ಸಂತುಷ್ಟನಾಗಿರುವೆನು. ಸುಂದರಿಯೆ! ನಿನ್ನ ಅಭೀಷ್ಟವನ್ನು ಕೂಡಲೆ ಹೇಳು" ಎಂದನು.

೬. ಸುರಭಿಯು ಹೇಳುತ್ತದೆ —ಶಂಕರ! ಬ್ರಹ್ಮನು ನನ್ನನ್ನು ಲೋಕೋಪಕಾರಕ್ಕಾಗಿ ಸೃಜಿಸಿದನು. ಪ್ರಪಂಚದ ಕೆಲಸವೆಲ್ಲ ನನ್ನ ಅನುಗ್ರಹದಿಂದ ಸಿದ್ಧಿಸುವುವು.

೭. ಜನರು ನನ್ನ ಅನುಗ್ರಹದಿಂದ ಸ್ವರ್ಗಕ್ಕೆ ತೆರಳುವರು. ಶಂಕರ! ನೀನು ಜನರ ಹಿತಕ್ಕಾಗಿ ಈ ತೀರ್ಥದಲ್ಲಿಯೇ ನೆಲಸಿರು.

೮. ಶಿವನು ಹಾಗೆಯೇ ಆಗಲೆಂದು ಆ ತೀರ್ಥದಲ್ಲಿ ಸಂತೋಷದಿಂದ ವಾಸಮಾಡಿದನು. ಅದು ಮೊದಲ್ಗೊಂಡು ಭೂಮಿಯಲ್ಲಿ ಪ್ರಸಿದ್ಧವಾದ ಆ ತೀರ್ಥವು ಸ್ನಾನವೊಂದರಿಂದಲೇ ಪಾಪಸಮೂಹವನ್ನು ನಿವಾರಿಸುವುದು.

೯–೧೦. ಗೋಪಾರೇಶ್ವರದಲ್ಲಿ ಗೋದಾನಮಾಡಲಿಚ್ಛಿಸುವವನು ಕೃಷ್ಣಪಕ್ಷದ ಅಷ್ಟಮೀ ಚತುರ್ದಶೀ ದಿನಗಳಲ್ಲಿ ಯೋಗ್ಯನಾದ ದ್ವಿಜಶ್ರೇಷ್ಠನಿಗೆ ಸುವರ್ಣಮಯವಾದ ಕರುವಿನಿಂದ ಕೂಡಿರುವುದೂ, ಯೌವನವುಳ್ಳುದೂ, ಶ್ವೇತವರ್ಣದ್ದೂ, ಹೆಚ್ಚು ಹಾಲನ್ನುಕೊಡುವುದೂ, ವಸ್ತ್ರಸಹಿತವಾದುದೂ ಆದ ಆಕಳನ್ನು ದಾನಮಾಡಬೇಕು.

**ಸರ್ವೇಷು ಚೈವ ಮಾಸೇಷು ಕಾರ್ತಿಕೇ ಚ ವಿಶೇಷತಃ ।**
**ದಾಪಯೇತ್ಪರಯಾ ಭಕ್ತ್ಯಾ ದ್ವಿಜೇ ಸ್ವಾಧ್ಯಾಯತತ್ಪರೇ ॥ ೧೧ ॥**
**ವಿಧಿನಾ ಚ ಪ್ರದದ್ಯಾದ್ಯೋ ವಿಧಿನಾ ಯಸ್ತು ಗೃಹ್ಣತೇ ।**
**ತಾವುಭೌ ಪುಣ್ಯಕರ್ಮಾಣೌ ಪ್ರೇಕ್ಷಕಃ ಪುಣ್ಯಭಾಜನಂ ॥ ೧೨ ॥**
**ಪಿಂಡದಾನಂ ಪ್ರಕುರ್ಯಾದ್ಯಃ ಪ್ರೇತಾನಾಂ ಭಕ್ತಿಸಂಯುತಃ ।**
**ಪಿಂಡೇನೈಕೇನ ರಾಜೇಂದ್ರ ಪ್ರೇತಾ ಯಾಂತಿ ಪರಾಂಗತಿಂ ॥ ೧೩ ॥**
**ಭಕ್ತ್ಯಾ ಪ್ರಣಾಮಂ ರುದ್ರಸ್ಯ ಯೇ ಕುರ್ವಂತಿ ದಿನೇ ದಿನೇ ।**
**ತೇಷಾಂ ಪಾಪಂ ಪ್ರಲೀಯೇತ ಭಿನ್ನಪಾತ್ರೇ ಜಲಂ ಯಥಾ ॥ ೧೪ ॥**
**ತತ್ರ ತೀರ್ಥೇ ತು ಯೋ ರಾಜನ್ವೃಷಭಂ ಚ ಸಮುತ್ಸೃಜೇತ್ ।**
**ಪಿತರಶ್ಚೋದ್ಧೃತಾಸ್ತೇನ ಶಿವಲೋಕೇ ಮಹೀಯತೇ ॥ ೧೫ ॥**

ಯುಧಿಷ್ಠಿರ ಉವಾಚ :—

**ವೃಷೋತ್ಸರ್ಗೇ ಕೃತೇ ತಾತ ಫಲಂ ಯಜ್ಜಾಯತೇ ನೃಣಾಂ ।**
**ತತ್ಸರ್ವಂ ಕಥಯಸ್ವಾಶು ಪ್ರಯತ್ನೇನ ದ್ವಿಜೋತ್ತಮ ॥ ೧೬ ॥**

ಶ್ರೀ ಮಾರ್ಕಂಡೇಯ ಉವಾಚ :—

**ಸರ್ವಲಕ್ಷಣಸಂಪೂರ್ಣೇ ವೃಷೇ ಚೈವ ತು ಯತ್ಫಲಂ ।**
**ತದಹಂ ಸಂಪ್ರವಕ್ಷ್ಯಾಮಿ ಶೃಣುಷ್ವ ಧರ್ಮನಂದನ ॥ ೧೭ ॥**

---

೧೧-೧೨. ಅಥವಾ ಸಕಲ ಮಾಸಗಳಲ್ಲಿಯೂ, ವಿಶೇಷವಾಗಿ ಕಾರ್ತಿಕ ಮಾಸದಲ್ಲಿಯೂ ಅತಿ ಭಕ್ತಿಯಿಂದ ವೇದಾಧ್ಯಯನಮಾಡಿದ ಬ್ರಾಹ್ಮಣನಿಗೆ ದಾನ ಮಾಡಬೇಕು. ವಿಧಿಯಿಂದ ದಾನಮಾಡುವವನೂ, ವಿಧಿಯಿಂದ ದಾನವನ್ನು ತೆಗೆದುಕೊಳ್ಳುವವನೂ ಇವರಿಬ್ಬರೂ ಪುಣ್ಯವಂತರು. ನೋಡುವವನೂ ಪುಣ್ಯಕ್ಕೆ ಪಾತ್ರನಾಗುವನು.

೧೩. ಮೃತರಿಗೆ ಭಕ್ತಿಯಿಂದ ಪಿಂಡಪ್ರದಾನಮಾಡಿದರೆ ಒಂದು ಪಿಂಡ ದಿಂದಲೇ ಮೃತರು ಉತ್ತಮಗತಿಯನ್ನು ಹೊಂದುವರು.

೧೪. ಪ್ರತಿದಿನವೂ ಭಕ್ತಿಯಿಂದ ರುದ್ರನಿಗೆ ಪ್ರಣಾಮಗೈಯುವವರ ಪಾಪವು ಒಡೆದ ಪಾತ್ರೆಯಲ್ಲಿಯ ನೀರಿನಂತೆ ವಿಲೀನವಾಗುವುದು.

೧೫. ಆ ತೀರ್ಥದಲ್ಲಿ ವೃಷೋತ್ಸರ್ಗವನ್ನು ಮಾಡಿದವರಿಂದ ಪಿತೃಗಳು ಉದ್ಧೃತರಾಗಿ ಶಿವಲೋಕದಲ್ಲಿ ಪೂಜ್ಯರಾಗುವರು.

೧೬. ಯುಧಿಷ್ಠಿರನು ಹೇಳುತ್ತಾನೆ:—ಮುನಿಯೆ! ವೃಷೋತ್ಸರ್ಗ ಮಾಡಿದ ಮಾನವರಿಗುಂಟಾಗುವ ಫಲವನ್ನೆಲ್ಲ ಬೇಗನೆ ಹೇಳು.

೧೭. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:—ಸಮಸ್ತ ಲಕ್ಷಣಗಳಿಂದ ಕೂಡಿದ ವೃಷಭವನ್ನು ದಾನಮಾಡುವುದರಿಂದಾಗುವ ಫಲವನ್ನು ಹೇಳುವೆನು. ಕೇಳು.

ಕಾರ್ತಿಕೇ ಚೈವ ವೈಶಾಖೇ ಪೂರ್ಣಿಮಾಯಾಂ ನರಾಧಿಪ ।
ರುದ್ರಸ್ಯ ಸನ್ನಿಧೌ ಭೂತ್ವಾ ಶುಚಿಃ ಸ್ನಾತೋ ಜಿತೇಂದ್ರಿಯಃ ॥ ೧೮ ॥
ವೃಷಸ್ಯೈವ ಸಮುತ್ಸರ್ಗಂ ಕಾರಯೇತ್ಪ್ರೀಯತಾಂ ಹರಃ ।
ಸಾನ್ನಿಧ್ಯೇ ಕಾರಯೇತ್ತತ್ರ ಚತಸ್ರೋ ವತ್ಸಿಕಾಃ ಶುಭಾಃ ॥ ೧೯ ॥
ದತ್ವಾ ತು ವಿಪ್ರಮುಖ್ಯಾಯ ಸರ್ವಲಕ್ಷಣಸಂಯುತಾಃ ।
ಪ್ರೀಯತಾಂ ಚ ಮಹಾದೇವೋ ಬ್ರಹ್ಮಾವಿಷ್ಣುರ್ಮಹೇಶ್ವರಃ ॥ ೨೦ ॥
ವೃಷಭೇ ರೋಮಸಂಖ್ಯಾಯಾ ಸರ್ವಾಂಗೇಷು ನರಾಧಿಪ ।
ತಾವದ್ವರ್ಷಪ್ರಮಾಣಂ ತು ಶಿವಲೋಕೇ ಮಹೀಯತೇ ॥ ೨೧ ॥
ಶಿವಲೋಕೇ ವಸಿತ್ವಾ ತು ಯದಾ ಮರ್ತ್ಯೇಷು ಜಾಯತೇ ।
ಕುಲೇ ಮಹತಿ ಸಂಭೂತಿರ್ಧನಧಾನ್ಯಸಮಾಕುಲೇ ॥ ೨೨ ॥
ನೀರೋಗೋ ರೂಪವಾಂಶ್ಚೈವ ವಿದ್ಯಾಢ್ಯಃ ಸತ್ಯವಾಕ್ಛುಚಿಃ ।
ಗೋಪಾರೇಶ್ವರಮಾಹಾತ್ಮ್ಯಂ ಮಯಾಖ್ಯಾತಂ ಯುಧಿಷ್ಠಿರ ।
ಗೋದೇಹಾನ್ನಿಃಸೃತಂ ಲಿಂಗಂ ನರ್ಮದಾದಕ್ಷಿಣೇ ತಟೇ ॥ ೨೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ಗೋಪಾರೇಶ್ವರಮಾಹಾತ್ಮ್ಯವರ್ಣನಂ" ನಾಮ ತ್ರಿಸಪ್ತತಿತಮೋಽಧ್ಯಾಯಃ

---

೧೮-೨೦. ಯುಧಿಷ್ಠಿರ! ಕಾರ್ತಿಕ ಅಥವಾ ವೈಶಾಖಮಾಸದ ಹುಣ್ಣಿಮೆಯ ದಿನ ರುದ್ರನ ಸಮೀಪದಲ್ಲಿರುವ ಸರಸ್ಸಿನಲ್ಲಿ ಮಿಂದು ಶುದ್ಧನೂ, ಜಿತೇಂದ್ರಿಯನೂ ಆಗಿ ಹರನು ಪ್ರೀತನಾಗಲೆಂದು ವೃಷೋತ್ಸರ್ಗಮಾಡಬೇಕು ಶಿವನ ಬಳಿ ನಾಲ್ಕು ಕರುಗಳನ್ನು ಬ್ರಹ್ಮವಿಷ್ಣು ಮಹೇಶ್ವರರು ಪ್ರೀತರಾಗಲೆಂದು ಬ್ರಾಹ್ಮಣೋತ್ತಮನಿಗೆ ದಾನಮಾಡಬೇಕು.

೨೧. ಹೀಗೆ ದಾನಮಾಡಿದವನು ವೃಷಭದ ಸರ್ವಾಂಗಗಳಲ್ಲಿರುವ ರೋಮ ಸಂಖ್ಯೆಯಷ್ಟುಕಾಲ ಶಿವಲೋಕದಲ್ಲಿ ಪೂಜ್ಯನಾಗುವನು

೨೨-೨೩. ಅವನು ಆ ಶಿವಲೋಕದಲ್ಲಿ ವಾಸಮಾಡಿಯಾದಬಳಿಕ ಭೂಲೋಕದಲ್ಲಿ ಜನಿಸುವಾಗ ಧನಧಾನ್ಯಗಳಿಂದ ತುಂಬಿರುವ ಉತ್ತಮಕುಲದಲ್ಲಿ ಜನಿಸಿ ರೋಗರಹಿತನೂ, ಸುಂದರನೂ, ವಿದ್ಯಾವಂತನೂ, ಸತ್ಯವಾದ ಮಾತುಳ್ಳವನೂ, ಶುದ್ಧನೂ ಆಗುವನು. ಈ ಪ್ರಕಾರವಾಗಿ ನರ್ಮದಾನದಿಯ ದಕ್ಷಿಣದಡದಲ್ಲಿ ಗೋವಿನ ಶರೀರದಿಂದ ಹುಟ್ಟಿದ ಲಿಂಗವುಳ್ಳ ಗೋಪಾರೇಶ್ವರಕ್ಷೇತ್ರ ಮಾಹಾತ್ಮ್ಯವನ್ನು ನಾನು ನಿನಗೆ ಹೇಳಿದ್ದೇನೆ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಗೋಪಾರೇಶ್ವರಮಾಹಾತ್ಮ್ಯವರ್ಣನ"ವೆಂಬ ಎಪ್ಪತ್ತಮೂರನೆಯ ಅಧ್ಯಾಯವು
ಮುಗಿದುದು

॥ ಶ್ರೀಃ ॥

# ಅಥ ಚತುಃಸಪ್ತತಿತಮೋಽಧ್ಯಾಯಃ

## ಗೌತಮೇಶ್ವರತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ರೇವಾಯಾ ಉತ್ತರೇ ಕೂಲೇ ತೀರ್ಥಂ ಪರಮಶೋಭನಂ ।
ಸರ್ವಪಾಪಹರಂ ಮರ್ತ್ಯೇ ನಾಮ್ನಾ ವೈ ಗೌತಮೇಶ್ವರಂ ॥ ೧ ॥
ಸ್ಥಾಪಿತಂ ಗೌತಮೇನೈವ ಲೋಕಾನಾಂ ಹಿತಕಾಮ್ಯಯಾ ।
ಸ್ವರ್ಗಸೋಪಾನರೂಪಂ ತು ತೀರ್ಥಂ ಪುಂಸಾಂ ಯುಧಿಷ್ಠಿರ ॥ ೨ ॥
ತತ್ರ ಗಚ್ಛ ಪರಂ ಭಕ್ತ್ಯಾ ಯತ್ರ ದೇವೋ ಜಗದ್ಗುರುಃ ।
ಪಾತಕಸ್ಯ ವಿನಾಶಾರ್ಥಂ ಸ್ವರ್ಗವಾಸಪ್ರದಸ್ತಥಾ ॥ ೩ ॥
ಸೌಭಾಗ್ಯವರ್ಧನಂ ತೀರ್ಥಂ ಜಯದಂ ದುಃಖನಾಶನಂ ।
ಪಿಂಡದಾನೇನ ಚೈಕೇನ ಕುಲಾನಾಮುದ್ಧರೇತ್ತ್ರಯಂ ॥ ೪ ॥

---

## ಕನ್ನಡದ ಅನುವಾದ

### ಗೌತಮೇಶ್ವರತೀರ್ಥಮಾಹಾತ್ಮ್ಯವರ್ಣನ

೧. ಶ್ರೀ ಮಾರ್ಕಂಡೇಯನು ಹೇಳುತ್ತಾನೆ :—ಭೂಲೋಕದಲ್ಲಿ ನರ್ಮದಾ ನದಿಯ ಉತ್ತರದಡದಲ್ಲಿ ಅತಿ ಮಂಗಳಕರವೂ, ಸಕಲ ಪಾಪಹರವೂ ಆದ ಗೌತಮೇಶ್ವರವೆಂಬ ತೀರ್ಥವಿದೆ.

೨. ಗೌತಮನು ಲೋಕಹಿತಕ್ಕಾಗಿ ಮಾನವರಿಗೆ ಸ್ವರ್ಗದ ಮೆಟ್ಟಲಂತಿರುವ ಆ ತೀರ್ಥವನ್ನು ಸ್ಥಾಪಿಸಿದನು.

೩. ಜಗದ್ಗುರುವೂ, ಸ್ವರ್ಗವಾಸವನ್ನು ಕೊಡುವವನೂ ಆದ ಮಹೇಶ್ವರನಿರುವ ಆ ತೀರ್ಥಕ್ಕೆ ಪಾಪದ ನಾಶಕ್ಕಾಗಿ ಹೋಗು.

೪. ಸೌಭಾಗ್ಯವನ್ನು ಹೆಚ್ಚಿಸುವುದೂ, ಜಯವನ್ನು ಕೊಡುವುದೂ, ದುಃಖವನ್ನು ನೀಗಿಸುವುದೂ ಆದ ಆ ತೀರ್ಥವು, ಪಿತೃಗಳಿಗೆ ಒಂದು ಪಿಂಡವನ್ನು ದಾನಮಾಡುವುದರಿಂದ ಮೂರು ಕುಲಗಳನ್ನು ಉದ್ಧರಿಸುವುದು.

ಯತ್ಕಿಂಚಿದ್ದೀಯತೇ ಭಕ್ತ್ಯಾ ಸ್ವಲ್ಪಂ ವಾ ಯದಿ ವಾ ಬಹು ।
ತತ್ಸರ್ವಂ ಶತಸಾಹಸ್ರಮಾಜ್ಞಯಾ ಗೌತಮಸ್ಯ ಹಿ ॥ ೫ ॥
ತೀರ್ಥಾನಾಂ ಪರಮಂ ತೀರ್ಥಂ ಸ್ವಯಂ ರುದ್ರೇಣ ಭಾಷಿತಂ ॥ ೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಅವಂತ್ಯಖಂಡೇ ತೃತೀಯೇ ರೇವಾಖಂಡೇ
"ಗೌತಮೇಶ್ವರತೀರ್ಥಮಾಹಾತ್ಮ್ಯವರ್ಣನಂ"
ನಾಮ ಚತುಃಸಪ್ತತಿತಮೋಽಧ್ಯಾಯಃ

---

೫. ಅಲ್ಲಿ ಭಕ್ತಿಯಿಂದ ದಾನಮಾಡಿದ ವಸ್ತುವು ಸ್ವಲ್ಪವಾಗಲಿ, ಹೆಚ್ಚಾಗಲಿ ಅದೆಲ್ಲವೂ ಗೌತಮರ ಆಜ್ಞೆಯಿಂದ ಲಕ್ಷದಷ್ಟಾಗುವುದು.

೬. ರುದ್ರನು ಇದು ತೀರ್ಥಗಳಲ್ಲಿ ಉತ್ತಮವಾದುದೆಂದು ಹೇಳಿರುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಅವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಗೌತಮೇಶ್ವರತೀರ್ಥಮಾಹಾತ್ಮ್ಯವರ್ಣನ"ವೆಂಬ
ಎಪ್ಪತ್ತನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಪಂಚಸಪ್ತತಿತಮೋಽಧ್ಯಾಯಃ

## ಶಂಖಚೂಡತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

**ನರ್ಮದಾದಕ್ಷಿಣೇ ಕೂಲೇ ತೀರ್ಥಂ ಪರಮಶೋಭನಂ ।**
**ಶಂಖಚೂಡಸ್ಯ ನಾಮ್ನಾ ವೈ ಪ್ರಸಿದ್ಧಂ ಭೂಮಿಮಂಡಲೇ ॥ ೧ ॥**
**ಶಂಖಚೂಡಃ ಸ್ವಯಂ ತತ್ರ ಸಂಸ್ಥಿತಃ ಪಾಂಡುನಂದನ ।**
**ವೈನತೇಯಭಯಾತ್ಪಾರ್ಥ ಸುಖದೇ ನರ್ಮದಾತಟೇ ॥ ೨ ॥**
**ತತ್ರ ತೀರ್ಥೇ ತು ಯೋ ಭಕ್ತ್ಯಾ ಶುಚಿರ್ಭೂತ್ವಾ ಸಮಾಹಿತಃ ।**
**ಸ್ನಾಪಯೇಚ್ಛಂಖಚೂಡಂ ತು ಕ್ಷೀರಕ್ಷೌದ್ರೇಣ ಸರ್ಪಿಷಾ ॥ ೩ ॥**
**ರಾತ್ರೌ ಜಾಗರಣಂ ಕುರ್ಯಾದ್ದೇವಸ್ಯಾಗ್ರೇ ನರಾಧಿಪ ।**
**ದಧಿಭಕ್ತೇನ ಸಂಪೂಜ್ಯ ಬ್ರಾಹ್ಮಣಾಂಛಂಸಿತವ್ರತಾನ್ ।**
**ಗೋಪ್ರದಾನೇ ದ್ವಿಜೇಂದ್ರೋಽಯಂ ಸರ್ವಪಾಪಕ್ಷಯಂಕರಃ ॥ ೪ ॥**

---

## ಕನ್ನಡದ ಅನುವಾದ

### ಶಂಖಚೂಡತೀರ್ಥಮಾಹಾತ್ಮ್ಯವರ್ಣನ

೧. ಶ್ರೀ ಮಾರ್ಕಂಡೇಯನು ಹೇಳುತ್ತಾನೆ :—ನರ್ಮದಾನದಿಯ ದಕ್ಷಿಣ ದಡದಲ್ಲಿ ಪರಮಮಂಗಳಕರವೂ, ಶಂಖಚೂಡನ ಹೆಸರಿನಿಂದ ಭೂಮಿಯಲ್ಲಿ ಪ್ರಸಿದ್ಧವೂ ಆದ ಒಂದು ತೀರ್ಥವಿದೆ.

೨. ಯುಧಿಷ್ಠಿರ! ಸುಖವನ್ನುಂಟುಮಾಡುವ ಆ ನರ್ಮದಾದಡದಲ್ಲಿ ಶಂಖಚೂಡನು ಗರುಡನ ಭಯದಿಂದ ನೆಲೆಸಿರುವನು.

೩. ಆ ತೀರ್ಥದಲ್ಲಿ ಮನುಷ್ಯನು ಭಕ್ತಿಯಿಂದ ಶುದ್ಧನೂ, ಸಾವಧಾನ ಚಿತ್ತನೂ ಆಗಿ ಶಂಖಚೂಡನನ್ನು ಹಾಲು, ಜೇನು, ಘೃತಗಳಿಂದ ಅಭಿಷೇಕ ಮಾಡಬೇಕು.

೪. ಅವನ ಮುಂದೆ ರಾತ್ರಿ ಜಾಗರಣೆಮಾಡಿ ಶ್ಲಾಘ್ಯವ್ರತರಾದ ಬ್ರಾಹ್ಮಣರನ್ನು ಮೊಸರನ್ನದಿಂದ ಪೂಜಿಸಿ ಗೋದಾನಮಾಡಿದರೆ ಸಮಸ್ತಪಾಪವೂ ನೀಗುವುದು.

**ತಸ್ಮಿಂಸ್ತೀರ್ಥೇ ತು ಯಃ ಪಾರ್ಥ ಸರ್ಪದಷ್ಟಂ ಪ್ರತರ್ಪಯೇತ್ ।**
**ಸ ಯಾತಿ ಪರಮಂ ಲೋಕಂ ಶಂಕರಸ್ಯ ವಚೋ ಯಥಾ ॥ ೫ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ "ಶಂಖಚೂಡತೀರ್ಥಮಾಹಾತ್ಮ್ಯವರ್ಣನಂ" ನಾಮ ಪಂಚಸಪ್ತತಿತಮೋಽಧ್ಯಾಯಃ**

---

೫. ಆ ತೀರ್ಥದಲ್ಲಿ ಸರ್ಪದಷ್ಟನಾಗಿ ಮಡಿದವನಿಗೆ ತರ್ಪಣಮಾಡಿದರೆ ಶಂಕರನ ಮಾತಿನಂತೆ ಅವನು ಉತ್ತಮಲೋಕಕ್ಕೆ ತೆರಳುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಶಂಖಚೂಡತೀರ್ಥಮಾಹಾತ್ಮ್ಯವರ್ಣನ"ವೆಂಬ
ಎಪ್ಪತ್ತೈದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಷಟ್‌ಸಪ್ತತಿತಮೋಽಧ್ಯಾಯಃ

### ಪಾರೇಶ್ವರತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ತತೋ ಗಚ್ಛೇತ್ತು ರಾಜೇಂದ್ರ ಪಾರೇಶ್ವರಮನುತ್ತಮಂ ।
ಪರಾಶರೋ ಮಹಾತ್ಮಾ ವೈ ನರ್ಮದಾಯಾಸ್ತಟೇ ಶುಭೇ ॥ ೧ ॥
ತಪಶ್ಚಚಾರ ವಿಪುಲಂ ಪುತ್ರಾರ್ಥಂ ಪಾಂಡುನಂದನ ।
ಹಿಮವದ್ದುಹಿತಾ ತೇನ ಗೌರೀ ನಾರಾಯಣೀ ನೃಪ ॥ ೨ ॥
ತೋಷಿತಾ ಪರಯಾ ಭಕ್ತ್ಯಾ ನರ್ಮದೋತ್ತರಕೇ ತಟೇ ।
ತಸ್ಯ ತುಷ್ಟಾ ಮಹಾದೇವೀ ಶಂಕರಾರ್ಧಾಂಗಧಾರಿಣೀ ॥ ೩ ॥
ಭೋ ಭೋ ಋಷಿವರ ಶ್ರೇಷ್ಠ ತುಷ್ಟಾಽಹಂ ತವಭಕ್ತಿತಃ ।
ವರಂ ಯಾಚಯ ಮೇ ವಿಪ್ರ ಪರಾಶರ ಮಹಾಮತೇ ॥ ೪ ॥

ಪರಾಶರ ಉವಾಚ :—

ಪರಿತುಷ್ಟಾಽಸಿ ಮೇ ದೇವಿ ಯದಿ ದೇಯೋ ವರೋ ಮಮ ।
ದೇಹಿ ಪುತ್ರಂ ಭಗವತಿ ಸತ್ಯಶೌಚಗುಣಾನ್ವಿತಂ ॥ ೫ ॥
ವೇದಾಭ್ಯಸನಶೀಲಂ ಹಿ ಸರ್ವಶಾಸ್ತ್ರವಿಶಾರದಂ ।
ತೀರ್ಥೇ ಚಾಽತ್ರ ಭವೇದ್ದೇವಿ ಸನ್ನಿಧಾನವರೇಣ ತು ॥ ೬ ॥

---

### ಕನ್ನಡದ ಅನುವಾದ

#### ಪಾರೇಶ್ವರತೀರ್ಥಮಾಹಾತ್ಮ್ಯವರ್ಣನ

೧–೪. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:—ನರೇಂದ್ರ! ಬಳಿಕ ಉತ್ತಮವಾದ ಪಾರೇಶ್ವರತೀರ್ಥಕ್ಕೆ ಹೋಗಬೇಕು. ನರ್ಮದಾತಟದಲ್ಲಿರುವ ಆ ತೀರ್ಥದಲ್ಲಿ ಮಹಾತ್ಮನಾದ ಪಾರಾಶರನು ಪುತ್ರನಿಗಾಗಿ ತಪವಂಗೈದು ಅತಿ ಭಕ್ತಿಯಿಂದ ಹಿಮಾಲಯನ ಸುತೆಯಾದ ಗೌರಿಯನ್ನು ಸಂತೋಷಗೊಳಿಸಿದನು. ಅವನಲ್ಲಿ ಸಂತುಷ್ಟಳಾದ ಶಂಕರನ ಮಡದಿಯಾದ ಪಾರ್ವತಿಯು, "ಎಲೈ ಮುನಿವರ್ಯನೆ! ನಾನು ನಿನ್ನ ಭಕ್ತಿಯಿಂದ ಸಂತುಷ್ಟಳಾಗಿದ್ದೇನೆ. ವರವನ್ನು ಕೇಳಿಕೊ" ಎಂದಳು.

೫–೭. ಪರಾಶರನು ಹೇಳುತ್ತಾನೆ:—ದೇವಿ! ನೀನು ಸಂತುಷ್ಟಳಾಗಿದ್ದರೆ ನನಗೆ ವರವನ್ನು ಕೊಡುವುದಾದರೆ ಸತ್ಯ, ಶೌಚಾದಿಗುಣಗಳಿಂದ ಕೂಡಿದವನೂ, ವೇದಾಭ್ಯಾಸಶೀಲನೂ, ಸಮಸ್ತಶಾಸ್ತ್ರವಿಶಾರದನೂ ಆದ ಪುತ್ರನನ್ನು ನನಗೆ

ಲೋಕೋಪಕಾರಹೇತೋಶ್ಚ ಸ್ಥೀಯತಾಂ ಗಿರಿನಂದಿನಿ ।
ಪರಾಶರಾಭಿಧಾನೇನ ನರ್ಮದಾದಕ್ಷಿಣೇ ತಟೇ ॥ ೭ ॥

ಶ್ರೀ ದೇವ್ಯುವಾಚ :—

ಏವಂ ಭವತು ತೇ ವಿಪ್ರ ತತ್ರೈವಾಂತರಧೀಯತ ।
ಪರಾಶರೋ ಮಹಾತ್ಮಾ ವೈ ಸ್ಥಾಪಯಾಮಾಸ ಪಾರ್ವತೀಂ ॥ ೮ ॥
ಶಂಕರಂ ಸ್ಥಾಪಯಾಮಾಸ ಸುರಾಽಸುರನಮಸ್ಕೃತಂ ।
ಅಚ್ಛೇದ್ಯಮಪ್ರತರ್ಕ್ಯಂ ಚ ದೇವಾನಾಂ ತು ದುರಾಸದಂ ॥ ೯ ॥
ಪರಾಶರೋ ಮಹಾತ್ಮಾ ವೈ ಕೃತಾರ್ಥೋಽಹ್ಯಭವನ್ನೃಪ ॥ ೧೦ ॥
ತತ್ರ ತೀರ್ಥೇ ತು ಯೋ ಭಕ್ತ್ಯಾ ಶುಚಿಃ ಪ್ರಯತಮಾನಸಃ ।
ಸ್ತ್ರ್ಯಥವಾ ಪುರುಷೋ ವಾಽಪಿ ಕಾಮಕ್ರೋಧವಿವರ್ಜಿತಃ ॥ ೧೧ ॥
ಮಾಘೇ ಚೈತ್ರೇಽಥ ವೈಶಾಖೇ ಶ್ರಾವಣೇ ನೃಪನಂದನ ।
ಮಾಸಿ ಮಾರ್ಗಶಿರೇ ಚೈವ ಶುಕ್ಲಪಕ್ಷೇ ತು ಸರ್ವದಾ ॥ ೧೨ ॥
ತತ್ರ ಗತ್ವಾ ಶುಭೇ ಸ್ಥಾನೇ ನರ್ಮದಾದಕ್ಷಿಣೇ ತಟೇ ॥ ೧೩ ॥
ಉಪೋಷ್ಯ ಪರಯಾ ಭಕ್ತ್ಯಾ ವ್ರತಮೇತತ್ಸಮಾಚರೇತ್ ।
ರಾತ್ರೌ ಜಾಗರಣಂ ಕೃತ್ವಾ ದೀಪದಾನಂ ಸ್ವಶಕ್ತಿತಃ ॥ ೧೪ ॥
ಗೀತಂ ನೃತ್ಯಂ ತಥಾ ವಾದ್ಯಂ ಕಾಮಕ್ರೋಧವಿವರ್ಜಿತಃ ।
ಪ್ರಭಾತೇ ವಿಮಲೇ ಪ್ರಾಪ್ತೇ ದ್ವಿಜಾಃ ಪೂಜ್ಯಾಃ ಸ್ವಶಕ್ತಿತಃ ॥ ೧೫ ॥

---

ಕೊಡು. ನರ್ಮದೆಯ ದಕ್ಷಿಣದಡದಲ್ಲಿ ಪಾರಾಶರವೆಂಬ ಹೆಸರುಳ್ಳ ಈ ತೀರ್ಥದಲ್ಲಿ ನೀನು ಲೋಕೋಪಕಾರಕ್ಕಾಗಿ ಉತ್ತಮಸಾನ್ನಿಧ್ಯವುಳ್ಳವಳಾಗಿ ನೆಲೆಸು.

೮–೧೦. ಶ್ರೀದೇವಿಯು ಹೇಳುತ್ತಾಳೆ :—"ಮಹರ್ಷಿಯೆ! ಹಾಗೆಯೇ ಆಗಲಿ" ಎಂದು ದೇವಿಯು ಅಲ್ಲಿಯೇ ಅದೃಶ್ಯಳಾದಳು. ಮಹಾತ್ಮನಾದ ಪರಾಶರನು ಪಾರ್ವತಿಯನ್ನೂ, ಸುರಾಸುರವಂದಿತನೂ, ಶಾಶ್ವತನೂ, ಊಹಿಸಲಶಕ್ಯನೂ, ದೇವತೆಗಳಿಗೆ ಹೊಂದಲಸಾಧ್ಯನೂ ಆದ ಶಂಕರನನ್ನೂ ಸ್ಥಾಪಿಸಿ ಧನ್ಯನಾದನು.

೧೧–೧೭. ನರ್ಮದಾನದಿಯ ದಕ್ಷಿಣತೀರದಲ್ಲಿರುವ ಆ ತೀರ್ಥದಲ್ಲಿ ಹೆಂಗಸಾಗಲಿ, ಗಂಡಸಾಗಲಿ ಶುದ್ಧರೂ, ಕಾಮಕ್ರೋಧಗಳನ್ನು ತ್ಯಜಿಸಿದವರೂ ಆಗಿ ಮಾಘ, ಚೈತ್ರ, ವೈಶಾಖ, ಶ್ರಾವಣ, ಮಾರ್ಗಶಿರಮಾಸಗಳ ಶುಕ್ಲ ಪಕ್ಷದಲ್ಲಿ ಯಾವಾಗಲೂ ಭಕ್ತಿಯಿಂದ ಉಪವಾಸಮಾಡಿ ರಾತ್ರಿ ಜಾಗರಣೆಗೈದು ಶಕ್ತ್ಯನುಸಾರ ದೀಪದಾನ ಮಂಗಳಗೀತ, ನೃತ್ಯ, ವಾದ್ಯಗಳನ್ನು ಮಾಡಿ ಶ್ಲಾಘ್ಯ

ಸಂಪೂಜ್ಯ ಬ್ರಾಹ್ಮಣಾನ್ಪಾರ್ಥ ಧನಧಾನ್ಯಹಿರಣ್ಯತಃ ।
ವಸ್ತ್ರೇಣ ಛತ್ರದಾನೇನ ಶಯ್ಯಾತಾಂಬೂಲಭೋಜನೈಃ ॥ ೧೬ ॥
ಪ್ರೀಣಯೇನ್ನರ್ಮದಾತೀರೇ ಬ್ರಾಹ್ಮಣಾನ್ ಶಂಸಿತವ್ರತಾನ್ ।
ಶ್ರಾದ್ಧಂ ಕಾರ್ಯಂ ನೃಪಶ್ರೇಷ್ಠ ಆಮೈಃ ಪಕ್ವೈರ್ಜಲೇನ ಚ ॥ ೧೭ ॥
ಸ್ತ್ರೀಣಾಂ ಚೈವ ತು ಶೂದ್ರಾಣಾಮಾಮಶ್ರಾದ್ಧಂ ಪ್ರಶಸ್ಯತೇ ।
ಆಮಂ ಚತುರ್ಗುಣಂ ದೇಯಂ ಬ್ರಾಹ್ಮಣಾನಾಂ ಯುಧಿಷ್ಠಿರ ॥ ೧೮ ॥
ವೇದೋಕ್ತೇನ ವಿಧಾನೇನ ದ್ವಿಜಾಃ ಪೂಜ್ಯಾಃ ಪ್ರಯತ್ನತಃ ।
ಹಸ್ತಮಾತ್ರೈಃ ಕುಶೈಶ್ಚೈವ ತಿಲೈಶ್ಚೈವಾಕ್ಷತೈರ್ನೃಪ ॥ ೧೯ ॥
ವಿಪ್ರಾ ಉದಙ್ಮುಖಾಃ ಕಾರ್ಯಾಃ ಸ್ವಯಂ ವೈ ದಕ್ಷಿಣಾಮುಖಃ ।
ದರ್ಭೇಷು ನಿಕ್ಷಿಪೇದನ್ನಂ ಇತ್ಯುಚ್ಚಾರ್ಯ ದ್ವಿಜಾಗ್ರತಃ ॥ ೨೦ ॥
ಪ್ರೇತಾ ಯಾಂತು ಪರೇ ಲೋಕೇ ತೀರ್ಥಸ್ಯಾಸ್ಯ ಪ್ರಭಾವತಃ ।
ಪಾಪಂ ಮೇ ಪ್ರಶಮಂ ಯಾತು ವಿತು ವೃದ್ಧಿಂ ಶುಭಂ ತದಾ ॥ ೨೧ ॥
ವೃದ್ಧಿಂ ಯಾತು ಸದಾ ವಂಶೋ ಜ್ಞಾತಿವರ್ಗೋ ದ್ವಿಜೋತ್ತಮ ।
ಏವಮುಚ್ಚಾರ್ಯ ವಿಪ್ರಾಯ ದಾನಂ ದೇಯಂ ಸ್ವಶಕ್ತಿತಃ ॥ ೨೨ ॥
ಗೋ ಭೂತಿಲಹಿರಣ್ಯಾದಿ ಚಾಽನ್ನಂ ವಸ್ತ್ರಂ ಸ್ವಶಕ್ತಿತಃ ।
ದಾತವ್ಯಂ ಪಾಂಡವಶ್ರೇಷ್ಠ ಪಾರೇಶ್ವರವರಾಶ್ರಮೇ ॥ ೨೩ ॥

---

ವ್ರತರಾದ ಬ್ರಾಹ್ಮಣರಿಗೆ ದ್ರವ್ಯ, ಕನಕ, ವಸ್ತ್ರ, ಕೊಡೆ, ಹಾಸಿಗೆ, ತಾಂಬೂಲ, ಭೋಜನಗಳನ್ನಿತ್ತು ಪೂಜಿಸಿ ಸಂತೋಷಗೊಳಿಸಬೇಕು ಅನಂತರ ಹಸಿ ಅಥವಾ ಪಕ್ವಪದಾರ್ಥದಿಂದಾಗಲಿ, ಜಲದಿಂದಾಗಲಿ ಶ್ರಾದ್ಧಗೈಯಬೇಕು.

೧೮. ಸ್ತ್ರೀ ಶೂದ್ರರಿಗೆ ಆಮಶ್ರಾದ್ಧವು ಶ್ರೇಷ್ಠವಾದುದು. ಹಸಿಪದಾರ್ಥಗಳನ್ನು ಬ್ರಾಹ್ಮಣರಿಗೆ ನಾಲ್ಮಡಿಯಾಗಿ ಕೊಡಬೇಕು.

೧೯. ಹಸ್ತಪರಿಮಾಣದ ದರ್ಭೆ, ತಿಲ, ಅಕ್ಷತೆಗಳಿಂದ ವೇದೋಕ್ತವಿಧಿಯಂತೆ ಬ್ರಾಹ್ಮಣರನ್ನು ಪೂಜಿಸಬೇಕು.

೨೦. ಬ್ರಾಹ್ಮಣರನ್ನು ಉತ್ತರಮುಖರನ್ನಾಗಿ ಕುಳ್ಳಿರಿಸಿ ತಾನು ದಕ್ಷಿಣಾಭಿಮುಖನಾಗಿ ಅವರ ಮುಂದೆ ಈ ಮಂತ್ರವನ್ನುಚ್ಚರಿಸಿ ಅನ್ನವನ್ನು ಹಾಕಬೇಕು.

೨೧–೨೩. "ಈ ತೀರ್ಥದ ಪ್ರಭಾವದಿಂದ ಪ್ರೇತಗಳು ಪರಲೋಕವನ್ನೈದಲಿ. ನನ್ನ ಪಾಪವು ಶಾಂತವಾಗಲಿ. ಮಂಗಳವು ವೃದ್ಧಿಗೊಳ್ಳಲಿ. ವಂಶವೂ, ಜ್ಞಾತಿವರ್ಗವೂ ಯಾವಾಗಲೂ ವೃದ್ಧಿಯಾಗಲಿ." ಎಂಬ ಮಂತ್ರವನ್ನುಚ್ಚರಿಸಿ ತನ್ನ ಶಕ್ತ್ಯನುಸಾರ ಬ್ರಾಹ್ಮಣರಿಗೆ ಗೋವು, ಭೂಮಿ, ತಿಲ, ಸುವರ್ಣ, ಅನ್ನ, ವಸ್ತ್ರಗಳನ್ನು ದಾನಮಾಡಬೇಕು.

ಯೇ ಶೃಣ್ವಂತಿ ಪರಂ ಭಕ್ತ್ಯಾ ಮುಚ್ಯಂತೇ ಸರ್ವಪಾತಕೈಃ ॥ ೨೪ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ಪಾರೇಶ್ವರತೀರ್ಥಮಾಹಾತ್ಮ್ಯವರ್ಣನಂ"
ನಾಮ ಷಟ್ಸಪ್ತತಿತಮೋಽಧ್ಯಾಯಃ

---

೨೪. ಇದನ್ನು ಅತಿಭಕ್ತಿಯಿಂದ ಕೇಳುವವರು ಸಕಲಪಾಪಗಳಿಂದಲೂ ಮುಕ್ತರಾಗುವರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಪಾರೇಶ್ವರತೀರ್ಥಮಾಹಾತ್ಮ್ಯವರ್ಣನ"ವೆಂಬ
ಎಪ್ಪತ್ತಾರನೆಯ ಅಧ್ಯಾಯವು ಮುಗಿದುದು

|| ಶ್ರೀಃ ||

# ಅಥ ಸಪ್ತಸಪ್ತತಿತಮೋಽಧ್ಯಾಯಃ

### ಭೀಮೇಶ್ವರತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

**ಭೀಮೇಶ್ವರಂ ತತೋ ಗಚ್ಛೇತ್ಸರ್ವಪಾಪಕ್ಷಯಂಕರಂ ।**
**ಸೇವಿತಂ ಋಷಿಸಂಘೈಶ್ಚ ಭೀಮವ್ರತಧರೈಃ ಶುಭೈಃ ॥ ೧ ॥**
**ತತ್ರ ತೀರ್ಥೇ ತು ಯಃ ಸ್ನಾತ್ವಾ ಸೋಪವಾಸೋ ಜಿತೇಂದ್ರಿಯಃ ।**
**ಜಪೇದೇಕಾಕ್ಷರಂ ಮಂತ್ರಮೂರ್ಧ್ವಬಾಹುರ್ದಿವಾಕರೇ ॥ ೨ ॥**
**ತಸ್ಯ ಜನ್ಮಾರ್ಜಿತಂ ಪಾಪಂ ತತ್ಕ್ಷಣಾದೇವ ನಶ್ಯತಿ ।**
**ಸಪ್ತ ಜನ್ಮಾರ್ಜಿತಂ ಪಾಪಂ ಗಾಯತ್ರ್ಯಾ ನಶ್ಯತೇ ಧ್ರುವಂ ॥ ೩ ॥**
**ದಶಭಿರ್ಜನ್ಮಭಿರ್ಜಾತಂ ಶತೇನ ತು ಪುರಾ ಕೃತಂ ।**
**ಸಹಸ್ರೇಣ ತ್ರಿಜನ್ಮೋತ್ಥಂ ಗಾಯತ್ರೀ ಹಂತಿ ಕಿಲ್ಬಿಷಂ ॥ ೪ ॥**
**ವೈದಿಕಂ ಲೌಕಿಕಂ ವಾಽಪಿ ಜಾಪ್ಯಂ ಜಪ್ತಂ ನರೇಶ್ವರ ।**
**ತತ್ಕ್ಷಣಾದ್ದಹತೇ ಸರ್ವಂ ತೃಣಂ ತು ಜ್ವಲನೋ ಯಥಾ ॥ ೫ ॥**

---

## ಕನ್ನಡದ ಅನುವಾದ

### ಭೀಮೇಶ್ವರತೀರ್ಥಮಾಹಾತ್ಮ್ಯವರ್ಣನ

೧. ಶ್ರೀ ಮಾರ್ಕಂಡೇಯನು ಹೇಳುತ್ತಾನೆ.—ಬಳಿಕ ಸಕಲ ಪಾಪಗಳನ್ನು ಪರಿಹರಿಸುವುದೂ, ಭಯಂಕರವ್ರತಧಾರಿಗಳಾದ ಶುಭಮುನಿಗಳಿಂದ ಸೇವಿಸಲ್ಪಟ್ಟುದೂ ಆದ ಭೀಮೇಶ್ವರತೀರ್ಥಕ್ಕೆ ಹೋಗಬೇಕು.

೨-೩. ಆ ತೀರ್ಥದಲ್ಲಿ ಮಿಂದು ಜಿತೇಂದ್ರಿಯನಾಗಿ ಉಪವಾಸಮಾಡಿ ಸೂರ್ಯಾಭಿಮುಖವಾಗಿ ತೋಳುಗಳನ್ನೆತ್ತಿ ಏಕಾಕ್ಷರಮಂತ್ರವನ್ನು ಜಪಿಸಿದರೆ ಆ ಜನ್ಮದಲ್ಲಿ ಮಾಡಿದ ಪಾಪವು ಕೂಡಲೆ ಪರಿಹಾರವಾಗುವುದು. ಗಾಯತ್ರೀ ಮಂತ್ರದಿಂದ ಏಳುಜನ್ಮಗಳಲ್ಲಿ ಮಾಡಿದ ಪಾಪವು ಪರಿಹಾರವಾಗುವುದು.

೪. ಹಿಂದೆ ಹತ್ತು ಜನ್ಮಗಳಲ್ಲಿ ಮಾಡಿದ ಪಾಪವು ಶತಗಾಯತ್ರಿಯಿಂದಲೂ, ಮೂರುಜನ್ಮಗಳ ಪಾಪವು ಸಾವಿರ ಗಾಯತ್ರೀಜಪದಿಂದಲೂ ಪರಿಹಾರವಾಗುವುದು.

೫. ಅಲ್ಲಿ ವೈದಿಕ ಅಥವಾ ಲೌಕಿಕ ಮಂತ್ರವನ್ನು ಜಪಿಸಿದರೆ ಅದು ಹುಲ್ಲನ್ನು ಬೆಂಕಿಯು ಸುಡುವಂತೆ ಪಾಪವನ್ನು ನೀಗಿಸುವುದು.

ನ ದೇವಬಲಮಾಶ್ರಿತ್ಯ ಕದಾಚಿತ್ಪಾಪಮಾಚರೇತ್ ।
ಅಜ್ಞಾನಾನ್ನಶ್ಯತೇ ಕ್ಷಿಪ್ರಂ ನೋತ್ತರಂ ತು ಕದಾಚನ ॥ ೬ ॥
ತತ್ರ ತೀರ್ಥೇ ತು ಯೋ ದಾನಂ ಶಕ್ತಿಮಾಶ್ರಿತ್ಯ ಚಾಚರೇತ್ ।
ತದಕ್ಷಯ್ಯಫಲಂ ಸರ್ವಂ ಜಾಯತೇ ಪಾಂಡುನಂದನ ॥ ೭ ॥

ಇತಿ ಶ್ರೀಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ಭೀಮೇಶ್ವರತೀರ್ಥಮಾಹಾತ್ಮ್ಯವರ್ಣನಂ"
ನಾಮ ಸಪ್ತಸಪ್ತತಿತಮೋಽಧ್ಯಾಯಃ

---

೬. ದೇವಬಲವನ್ನಾಶ್ರಯಿಸಿ ಒಂದುವೇಳೆಯೂ ಪಾಪವನ್ನಾಚರಿಸಬಾರದು. ಅಜ್ಞಾನದಿಂದ ಮಾಡಿದ ಪಾಪವು ಬೇಗನೆ ಪರಿಹಾರವಾಗುವುದು. ಎರಡನೆಯ ದೇವಬಲದಿಂದ ಮಾಡಿದ ಪಾಪವು ಪರಿಹಾರವಾಗುವುದಿಲ್ಲ.

೭. ಆ ತೀರ್ಥದಲ್ಲಿ ಶಕ್ತಿಯನ್ನಾಶ್ರಯಿಸಿ ಮಾಡಿದ ದಾನವು ಅಕ್ಷಯ ಫಲವನ್ನು ಕೊಡುವುದು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಭೀಮೇಶ್ವರತೀರ್ಥವರ್ಣನ"ವೆಂಬ
ಎಪ್ಪತ್ತೇಳನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥಾಷ್ಟಸಪ್ತತಿತಮೋಽಧ್ಯಾಯಃ

## ನಾರದೇಶ್ವರತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ತತೋ ಗಚ್ಛೇತ್ತು ರಾಜೇಂದ್ರ ನಾರದೇಶ್ವರಮುತ್ತಮಂ ।
ತೀರ್ಥಾನಾಂ ಪರಮಂ ತೀರ್ಥಂ ನಿರ್ಮಿತಂ ನಾರದೇನ ತು ॥ ೧ ॥

ಯುಧಿಷ್ಠಿರ ಉವಾಚ :—

ನಾರದೇನ ಮುನಿಶ್ರೇಷ್ಠ ಕಸ್ಮಾತ್ತೀರ್ಥಂ ವಿನಿರ್ಮಿತಂ ।
ಏತದಾಖ್ಯಾಹಿ ಮೇ ಸರ್ವಂ ಪ್ರಸನ್ನೋ ಯದಿ ಸತ್ತಮ ॥ ೨ ॥

ಶ್ರೀ ಮಾರ್ಕಂಡೇಯ ಉವಾಚ :—

ಪರಮೇಷ್ಠಿಸುತಃ ಪಾರ್ಥ ನಾರದೋ ಮುನಿಸತ್ತಮಃ ।
ರೇವಾಯಾಶ್ಚೋತ್ತರೇ ಕೂಲೇ ತಪಸ್ತೇನ ಪುರಾಕೃತಂ ॥ ೩ ॥
ನವನಾಡೀನಿರೋಧೇನ ಕಾಷ್ಠಾವತ್ಯಾಂ ಗತೇನ ಚ ।
ತೋಷಿತಃ ಪಶುಭರ್ತಾ ವೈ ನಾರದೇನ ಯುಧಿಷ್ಠಿರ ॥ ೪ ॥

ಈಶ್ವರ ಉವಾಚ :—

ತುಷ್ಟೋಽಹಂ ತವ ವಿಪ್ರೇಂದ್ರ ಯೋಗಿನಾಥ ಅಯೋನಿಜ ।
ವರಂ ಪ್ರಾರ್ಥಯ ಮೇ ವತ್ಸ ಯಸ್ತೇ ಮನಸಿ ವರ್ತತೇ ॥ ೫ ॥

---

## ಕನ್ನಡದ ಅನುವಾದ

### ನಾರದೇಶ್ವರತೀರ್ಥವರ್ಣನ

೧. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:—ನರೇಂದ್ರ! ಅನಂತರ ನಾರದನು ನಿರ್ಮಿಸಿರುವ ತೀರ್ಥಗಳಲ್ಲಿ ಉತ್ತಮವಾದ ನಾರದೇಶ್ವರತೀರ್ಥಕ್ಕೆ ಹೋಗಬೇಕು.

೨. ಯುಧಿಷ್ಠಿರನು ಹೇಳುತ್ತಾನೆ:—ಮುನಿವರ್ಯನೆ! ನಾರದನು ಏಕೆ ತೀರ್ಥವನ್ನು ನಿರ್ಮಿಸಿದನು? ನೀನು ಪ್ರಸನ್ನನಾಗಿದ್ದರೆ ಇದನ್ನೆಲ್ಲ ಹೇಳು.

೩. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:—ಹಿಂದೆ ಬ್ರಹ್ಮನ ಮಗನಾದ ನಾರದನು ರೇವಾನದಿಯ ಉತ್ತರದಡದಲ್ಲಿ ತಪಸ್ಸನ್ನಾಚರಿಸಿದನು.

೪. ಆತನು ಒಂಬತ್ತು ನಾಡಿಗಳನ್ನೂ ನಿರೋಧಿಸಿ ಅತಿಶಯ ತಪಸ್ಸಿನಿಂದ ಶಂಕರನನ್ನು ಸಂತೋಷಗೊಳಿಸಿದನು.

೫. ಈಶ್ವರನು ಹೇಳುತ್ತಾನೆ:—ಯೋಗಿವರ್ಯನೂ, ಅಯೋನಿಜನೂ ಆದ

ನಾರದ ಉವಾಚ :—

ತ್ವತ್ಪ್ರಸಾದೇನ ಮೇ ಶಂಭೋ ಯೋಗಶ್ಚೈವ ಪ್ರಸಿದ್ಧ್ಯತು ।
ಅಚಲಾ ತೇ ಭವೇದ್ಭಕ್ತಿಃ ಸರ್ವಕಾಲಂ ಮುನ್ಯೈವ ತು ॥ ೬ ॥
ಸ್ವೇಚ್ಛಾಚಾರೀ ಭವೇದೇವ ವೇದವೇದಾಂಗಪಾರಗಃ ।
ತ್ರಿಕಾಲಜ್ಞೋ ಜಗನ್ನಾಥ ಗೀತಜ್ಞೋಽಹಂ ಸದಾ ಭವೇ ॥ ೭ ॥
ದಿನೇ ದಿನೇ ಯಥಾ ಯುದ್ಧಂ ದೇವದಾನವಮಾನುಷ್ಯೈಃ ।
ಪಾತಾಲೇ ಮರ್ತ್ಯಲೋಕೇ ಚ ಸ್ವರ್ಗೇ ವಾಪಿ ಮಹೇಶ್ವರ ॥ ೮ ॥
ಪಶ್ಯೇಯಂ ತ್ವತ್ಪ್ರಸಾದೇನ ಭವಂತಂ ಪಾರ್ವತೀಂ ತಥಾ ।
ತೀರ್ಥಂ ಲೋಕೇಷು ವಿಖ್ಯಾತಂ ಸರ್ವಪಾಪಕ್ಷಯಂಕರಂ ॥ ೯ ॥

ಈಶ್ವರ ಉವಾಚ :—

ಏವಂ ನಾರದ ಸರ್ವಂ ತು ಭವಿಷ್ಯತಿ ನ ಸಂಶಯಃ ।
ಚಿಂತಿತಂ ಮತ್ಪ್ರಸಾದೇನ ಸಿದ್ಧ್ಯತೇ ನಾತ್ರ ಸಂಶಯಃ ॥ ೧೦ ॥
ಸ್ವೇಚ್ಛಾಚಾರೋ ಭವೇರ್ವತ್ಸ ಸ್ವರ್ಗೇ ಪಾತಾಲಗೋಚರೇ ।
ಮರ್ತ್ಯೇ ವಾ ಭ್ರಮ ವೈ ಯೋಗಿನ್ನ ಕೇನಾಪಿ ನಿವಾರ್ಯಸೇ ॥ ೧೧ ॥
ಸಪ್ತ ಸ್ವರಾ ಸ್ತ್ರಯೋ ಗ್ರಾಮಾ ಮೂರ್ಛನಾಶ್ಚೈಕವಿಂಶತಿಃ ।
ತಾನಾ ಏಕೋನಪಂಚಾಶತ್ಪ್ರಸಾದಾನ್ಮೇ ತವ ಧ್ರುವಂ ॥ ೧೨ ॥

---

ಮುನಿವರ್ಯನೇ! ನಾನು ನಿನ್ನಲ್ಲಿ ಸಂತುಷ್ಟನಾಗಿರುವೆನು. ನಿನ್ನ ಮನಸ್ಸಿನಲ್ಲಿರುವ ವರವನ್ನು ಕೇಳಿಕೊ.

೬. ನಾರದನು ಹೇಳುತ್ತಾನೆ —ಈಶ್ವರ! ನಿನ್ನ ಅನುಗ್ರಹದಿಂದ ನನಗೆ ಯೋಗವು ಸಿದ್ಧಿಸಲಿ. ಯಾವಾಗಲೂ ನಿನ್ನಲ್ಲಿ ಸ್ಥಿರಭಕ್ತಿಯುಂಟಾಗಲಿ.

೭. ನಾನು ಸ್ವೇಚ್ಛಾಚಾರಿಯೂ, ವೇದವೇದಾಂಗಪಾರಂಗತನೂ, ತ್ರಿಕಾಲಜ್ಞನೂ, ಗೀತಜ್ಞನೂ ಆಗುವಂತೆ ಮಾಡು.

೮–೯. ಸ್ವರ್ಗ, ಮರ್ತ್ಯ ಅಥವಾ ಪಾತಾಳಲೋಕಗಳಲ್ಲಿ ಪ್ರತಿದಿನವೂ ನಿನ್ನ ಅನುಗ್ರಹದಿಂದ ದೇವ, ದಾನವ, ಮನುಷ್ಯರ ಯುದ್ಧವನ್ನೂ, ನಿನ್ನನ್ನೂ, ಪಾರ್ವತಿಯನ್ನೂ ನೋಡುವಂತೆ ಅನುಗ್ರಹಿಸು. ಸಕಲ ಪಾಪಗಳನ್ನೂ ಪರಿಹರಿಸುವ ಈ ತೀರ್ಥವು ಲೋಕಗಳಲ್ಲಿ ವಿಖ್ಯಾತವಾಗಲಿ.

೧೦. ಈಶ್ವರನು ಹೇಳುತ್ತಾನೆ:—ನಾರದ! ನೀನು ಚಿಂತಿಸಿರುವುದೆಲ್ಲ ನನ್ನ ಅನುಗ್ರಹದಿಂದ ನಿಜವಾಗಿಯೂ ನಿನಗೆ ಸಿದ್ಧಿಸುವುದು.

೧೧. ಸ್ವರ್ಗ, ಮರ್ತ್ಯ ಪಾತಾಳಲೋಕಗಳಲ್ಲಿ ಯಾರ ತಡೆಯೂ ಇಲ್ಲದೆ ಸ್ವೇಚ್ಛಾಚಾರಿಯಾಗುವೆ.

೧೨. ಏಳು ಸ್ವರಗಳೂ, ಮೂರು ಗ್ರಾಮಗಳೂ, ಇಪ್ಪತ್ತೊಂದು ಮೂರ್ಛನೆ

ಮಮ ಪ್ರಿಯಂಕರಂ ದಿವ್ಯಂ ನೃತ್ಯಗೀತಂ ಭವಿಷ್ಯತಿ ।
ಕಲಿಂ ಚ ಪಶ್ಯಸೇ ನಿತ್ಯಂ ದೇವದಾನವಕಿಂನರೈಃ ॥ ೧೩ ॥
ತ್ವತ್ತೀರ್ಥಂ ಭೂತಲೇ ಪುಣ್ಯಂ ಮತ್ಪ್ರಸಾದಾದ್ಭವಿಷ್ಯತಿ ।
ವೇದವೇದಾಂಗತತ್ತ್ವಜ್ಞೋ ಹ್ಯಶೇಷ ಜ್ಞಾನಕೋವಿದಃ ।
ಏಕಸ್ತ್ವಮಸಿ ನಿಸ್ಸಂಗೋ ಮತ್ಪ್ರಸಾದೇನ ನಾರದ ॥ ೧೪ ॥
ಇತ್ಯುಕ್ತ್ವಾಂತರ್ದಧೇ ದೇವೋ ನಾರದಸ್ತತ್ರ ಶೂಲಿನಂ ।
ಸ್ಥಾಪಯಾಮಾಸ ರಾಜೇಂದ್ರ ಸರ್ವಸತ್ತ್ವೋಪಕಾರಕಂ ॥ ೧೫ ॥
ಪೃಥಿವ್ಯಾಮುತ್ತಮಂ ತೀರ್ಥಂ ನಿರ್ಮಿತಂ ನಾರದೇನ ತು ।
ತತ್ರ ತೀರ್ಥೇ ನೃಪಶ್ರೇಷ್ಠ ಯೋ ಗಚ್ಛೇದ್ವಿಜಿತೇಂದ್ರಿಯಃ ॥ ೧೬ ॥
ಮಾಸಿ ಭಾದ್ರಪದೇ ಪಾರ್ಥ ಕೃಷ್ಣಪಕ್ಷೇ ಚತುರ್ದಶೀ ।
ಉಪೋಷ್ಯ ಪರಯಾ ಭಕ್ತ್ಯಾ ರಾತ್ರೌ ಕುರ್ವೀತ ಜಾಗರಂ ॥ ೧೭ ॥
ಛತ್ರಂ ತತ್ರ ಪ್ರದಾತವ್ಯಂ ಬ್ರಾಹ್ಮಣೇ ಶುಭಲಕ್ಷಣೇ ।
ಶಸ್ತ್ರೇಣ ತು ಹತಾ ಯೇ ವೈ ತೇಷಾಂ ಶ್ರಾದ್ಧಂ ಪ್ರದಾಪಯೇತ್ ।
ತೇ ಯಾಂತಿ ಪರಮಂ ಲೋಕಂ ಪಿಂಡದಾನಪ್ರಭಾವತಃ ॥ ೧೮ ॥

---

ಗಳೂ, ನಲವತ್ತೊಂಬತ್ತು ತಾನಗಳೂ ನನ್ನ ಅನುಗ್ರಹದಿಂದ ನಿನಗೆ ಬರಲಿ.

೧೩. ನಿನ್ನ ದಿವ್ಯನೃತ್ಯಗೀತಗಳು ನನಗೆ ಪ್ರಿಯವಾಗುವುವು. ನಿತ್ಯವೂ ದೇವ, ದಾನವ, ಕಿನ್ನರರ ಜಗಳವನ್ನು ನೀನು ನೋಡುವೆ.

೧೪. ನನ್ನ ಅನುಗ್ರಹದಿಂದ ನಿನ್ನ ತೀರ್ಥವು ಭೂಮಿಯಲ್ಲಿ ಪುಣ್ಯಕರ ವಾಗುವುದು. ನೀನೊಬ್ಬನೇ ವೇದವೇದಾಂಗತತ್ವಗಳನ್ನರಿತವನೂ, ಸಮಸ್ತ ಜ್ಞಾನವುಳ್ಳವನೂ ಆಗುವೆ.

೧೫. ಶಂಕರನು ಹೀಗೆ ಹೇಳಿ ಅದೃಶ್ಯನಾದನು. ನಾರದನು ಅಲ್ಲಿ ಸಕಲ ಪ್ರಾಣಿಗಳಿಗೆ ಉಪಕಾರವನ್ನು ಮಾಡಲೋಸುಗ ಅವನನ್ನು ಪ್ರತಿಷ್ಠೆಮಾಡಿದನು.

೧೬–೧೮. ನಾರದನು ಭೂಮಿಯಲ್ಲಿ ಇಂತಹ ಉತ್ತಮತೀರ್ಥವನ್ನು ನಿರ್ಮಿಸಿದನು. ನೃಪವರ್ಯನೆ! ಮಾನವನು ಭಾದ್ರಪದ ಕೃಷ್ಣಪಕ್ಷ ಚತುರ್ದಶಿಯ ದಿನ ಆ ತೀರ್ಥಕ್ಕೆ ಹೋಗಿ ಅತಿ ಭಕ್ತಿಯಿಂದ ಉಪವಾಸಮಾಡಿ ರಾತ್ರಿ ಜಾಗರಣೆಗೈದು ಲಕ್ಷಣವಂತನಾದ ಬ್ರಾಹ್ಮಣನಿಗೆ ಕೊಡೆಯನ್ನು ದಾನ ಮಾಡಿ ಶಸ್ತ್ರಹತರಿಗೆ ಶ್ರಾದ್ಧಮಾಡಬೇಕು. ಅವರು ಈ ಪಿಂಡದಾನದ ಪ್ರಭಾವ ದಿಂದ ಉತ್ತಮಲೋಕವನ್ನು ಸೇರುವರು.

ಕಪಿಲಾ ತತ್ರ ದಾತವ್ಯಾ ಪಿತೄನುದ್ದಿಶ್ಯ ಭಾರತ ।
ಇತ್ಯುಚ್ಚಾರ್ಯ ದ್ವಿಜೇ ದೇಯಾ ಯಾಂತು ತೇ ಪರಮಾಂ ಗತಿಂ ॥ ೧೯ ॥
ಅಸ್ಯ ಶ್ರಾದ್ಧಸ್ಯ ಭಾವೇನ ಬ್ರಾಹ್ಮಣಸ್ಯ ಪ್ರಸಾದತಃ ।
ನರ್ಮದಾತೋಯಭಾವೇನ ನ್ಯಾಯಾರ್ಜಿತಧನಸ್ಯ ಚ ।
ತೇಷಾಂ ಚೈವ ಪ್ರಭಾವೇನ ಪ್ರೇತಾ ಯಾಂತು ಪರಾಂ ಗತಿಂ ॥ ೨೦ ॥
ಇತ್ಯುಚ್ಚಾರ್ಯ ದ್ವಿಜೇ ದೇಯಾ ದಕ್ಷಿಣಾ ಚ ಸ್ವಶಕ್ತಿತಃ ।
ಹವಿಷ್ಯಾನ್ನಂ ವಿಶಾಲಾಕ್ಷ ದ್ವಿಜಾನಾಂ ಚೈವ ದಾಪಯೇತ್ ॥ ೨೧ ॥
ದೀಪಂ ಭಕ್ತ್ಯಾ ಪ್ರದಾತವ್ಯಂ ನೃತ್ಯಂ ಗೀತಂ ಚ ಕಾರಯೇತ್ ।
ಅವಾಪ್ತಂ ತೇನ ವೈ ಸರ್ವಂ ಯಃ ಕರೋತೀಶ್ವರಾಲಯೇ ॥ ೨೨ ॥
ಸ ಯಾತಿ ರುದ್ರಸಾನ್ನಿಧ್ಯಮಿತಿ ರುದ್ರಃ ಸ್ವಯಂ ಜಗೌ ।
ವಿದ್ಯಾದಾನೇನ ಚೈಕೇನ ಅಕ್ಷಯ್ಯಾಂ ಗತಿಮಾಪ್ನುಯಾತ್ ॥ ೨೩ ॥
ಧೂರ್ವಹಾಸ್ತತ್ರ ದಾತವ್ಯಾ ಭೂಮಿಃ ಸಸ್ಯವತೀ ನೃಪ ।
ಚಿತ್ರಭಾನುಂ ಶುಭೈರ್ಮಂತ್ರೈಃ ಪ್ರೀಣಯೇತ್ತತ್ರ ಭಕ್ತಿತಃ ॥ ೨೪ ॥
ಆಜ್ಯೇನ ಸುಪ್ರಭೂತೇನ ಹೋಮದ್ರವ್ಯೇಣ ಭಾರತ ।
ಯೇ ಯಜಂತಿ ಸದಾ ಭಕ್ತ್ಯಾ ತ್ರಿಕಾಲಂ ನೃತ್ಯಮೇವ ಚ ॥ ೨೫ ॥
ತೀರ್ಥೇ ನಾರದನಾಮಾಖ್ಯೇ ರೇವಾಯಾಶ್ಚೋತ್ತರೇ ತಟೇ ।
ಚಿತ್ರಭಾನುಮುಖಾ ದೇವಾಃ ಸರ್ವದೇವಮಯೋ ಋಷಿಃ ॥ ೨೬ ॥

---

೧೯. ಅಲ್ಲಿ ಪ್ರೇತಗಳು ಉತ್ತಮಗತಿಯನ್ನು ಹೊಂದಲಿ ಎಂದು ಹೇಳಿ ಪಿತೃಗಳನ್ನುದ್ದೇಶಿಸಿ ಕಪಿಲಧೇನುವನ್ನು ದಾನಮಾಡಬೇಕು.

೨೦. "ಈ ಶ್ರಾದ್ಧದ ಪ್ರಭಾವದಿಂದಲೂ, ಬ್ರಾಹ್ಮಣರ ಅನುಗ್ರಹದಿಂದಲೂ, ನರ್ಮದಾನದಿಯ ನೀರಿನ ಸಾಮರ್ಥ್ಯದಿಂದಲೂ ನ್ಯಾಯದಿಂದ ಸಂಪಾದಿಸಿದ ಹಣದ ಪ್ರಭಾವದಿಂದಲೂ ಪ್ರೇತಗಳು ಉತ್ತಮಗತಿಯನ್ನು ಹೊಂದಲಿ."

೨೧. ಹೀಗೆ ಹೇಳಿ ಬ್ರಾಹ್ಮಣರಿಗೆ ಸ್ವಶಕ್ತ್ಯನುಸಾರ ದಕ್ಷಿಣೆಯನ್ನೂ, ಹವಿಷ್ಯಾನ್ನವನ್ನೂ ಕೊಡಬೇಕು.

೨೨-೨೩. "ಈಶ್ವರ ದೇವಾಲಯದಲ್ಲಿ ದೀಪವನ್ನು ಹೊತ್ತಿಸಿ ನೃತ್ಯಗೀತಗಳನ್ನು ಮಾಡಿದವರು ಸಮಸ್ತವನ್ನೂ ಹೊಂದುವರು. ಮತ್ತು ರುದ್ರನ ಸಾನ್ನಿಧ್ಯವನ್ನು ಪಡೆಯುವರು" ಎಂದು ಶಿವನ್ ತಾನೇ ಹೇಳಿರುವನು. ಅಲ್ಲಿ ಮಾನವನು ವಿದ್ಯಾದಾನವೊಂದರಿಂದಲೇ ಅಕ್ಷಯಗತಿಯನ್ನು ಪಡೆಯುವನು.

೨೪-೨೭. ಅಲ್ಲಿ ಎತ್ತು ಕುದುರೆಗಳನ್ನೂ, ಸಸ್ಯವುಳ್ಳ ಭೂಮಿಯನ್ನೂ

ಋಷಿಣಾ ಪ್ರೀಣಿತಾಃ ಸರ್ವೇ ತಸ್ಮಾತ್ಪ್ರೀತೋ ಹುತಾಶನಃ ।
ಪೂಜಿತೇ ಹವ್ಯವಾಹೇ ತು ದಾರಿದ್ರ್ಯಂ ನೈವ ಜಾಯತೇ ॥ ೨೭ ॥
ಧನೇನ ವಿಪುಲಾ ಪ್ರೀತಿರ್ಜಾಯತೇ ಪ್ರತಿಜನ್ಮನಿ ।
ಕುಲೀನಾಶ್ಚ ಸುವೇಷಾಶ್ಚ ಸರ್ವಕಾಲಂ ಧನೇನ ತು ॥ ೨೮ ॥
ಪ್ಲವೋ ನದೀನಾಂ ಪತಿರಂಗನಾನಾಂ
ರಾಜಾ ಚ ಸದ್ವೃತ್ತರತಃ ಪ್ರಜಾನಾಂ ।
ಧನಂ ನರಾಣಾಮೃತವಸ್ತರೂಣಾಂ
ಗತಂ ಗತಂ ಯೌವನಮಾನಯಂತಿ ॥ ೨೯ ॥
ಧನದತ್ವಂ ಧನೇಶೇನ ತಸ್ಮಿಂಸ್ತೀರ್ಥೇಽಹ್ಯುಪಾರ್ಜಿತಂ ।
ಯಮೇನ ಹಿ ಯಮತ್ವಂ ಹಿ ಇಂದ್ರತ್ವಂ ಚೈವ ವಜ್ರಿಣಾ ॥ ೩೦ ॥
ಅನ್ಯೈರಪಿ ಮಹೀಪಾಲೈಃ ಪಾರ್ಥಿವತ್ವಮುಪಾರ್ಜಿತಂ ।
ನಾರದೇಶ್ವರಮಾಹಾತ್ಮ್ಯಾದ್ಧ್ರುವೋ ನಿಶ್ಚಲತಾಂ ಗತಃ ॥ ೩೧ ॥

---

ದಾನಮಾಡಬೇಕು. ಅಗ್ನಿಯನ್ನು ಶುಭಕರವಾದ ಮಂತ್ರಗಳಿಂದ ಸಂತೋಷಗೊಳಿಸಬೇಕು. ದೇವತೆಗಳು ಅಗ್ನಿಮುಖರಾಗಿರುವರು. ಋಷಿಗಳು ದೇವತಾರೂಪರು. ಋಷಿಯು ಎಲ್ಲರನ್ನೂ ಸಂತೋಷಗೊಳಿಸುವನು. ಆದುದರಿಂದ ಅಗ್ನಿಯನ್ನು ಸಂತೋಷಗೊಳಿಸಬೇಕು. ನರ್ಮದಾನದಿಯ ಉತ್ತರದಡದಲ್ಲಿರುವ ನಾರದತೀರ್ಥದಲ್ಲಿ ಹೆಚ್ಚಾದ ತುಪ್ಪದಿಂದಲೂ, ಹೋಮದ್ರವ್ಯದಿಂದಲೂ ತ್ರಿಕಾಲದಲ್ಲಿ ಅಗ್ನಿಯಲ್ಲಿ ಹೋಮಮಾಡುತ್ತ ನೃತ್ಯಗೈಯ್ಯುತ್ತ ಪೂಜಿಸುವವರು ದಾರಿದ್ರ್ಯವನ್ನು ಹೊಂದುವುದಿಲ್ಲ.

೨೮. ಅವರು ಪ್ರತಿಜನ್ಮದಲ್ಲಿಯೂ ದ್ರವ್ಯದಿಂದ ಅತ್ಯಂತ ಸಂತೋಷಗೊಳ್ಳುವರು. ಕುಲೀನರೂ, ಸುಂದರರೂ ಆಗಿ ಯಾವಾಗಲೂ ಧನಿಕರಾಗಿರುವರು.

೨೯. ದೋಣಿಯು ನದಿಗಳಿಗೂ, ಗಂಡನು ಸ್ತ್ರೀಯರಿಗೂ, ಸಚ್ಚರಿತನಾದ ರಾಜನು ಪ್ರಜೆಗಳಿಗೂ, ದ್ರವ್ಯವು ಮನುಷ್ಯನಿಗೂ, ಋತುಗಳು ಮರಗಳಿಗೂ ಕಳೆದುಹೋದ ಯೌವನವನ್ನು ತಂದುಕೊಡುವುವು

೩೦–೩೧. ಆ ನಾರದತೀರ್ಥದಲ್ಲಿ ಕುಬೇರನು ಧನದತ್ವವನ್ನೂ, ಯಮನು ಯಮತ್ವವನ್ನೂ, ಇಂದ್ರನು ಇಂದ್ರತ್ವವನ್ನೂ, ಇತರ ರಾಜರು ರಾಜತ್ವವನ್ನೂ ಪಡೆದರು. ಧ್ರುವನು ಈ ನಾರದೇಶ್ವರನ ಮಾಹಾತ್ಮ್ಯದಿಂದ ಶಾಶ್ವತ ಪದವೀಧರನಾದನು.

**ಸರ್ವತೀರ್ಥವರಂ ತೀರ್ಥಂ ನಿರ್ಮಿತಂ ನಾರದೇನ ತು ।**
**ಪೃಥಿವ್ಯಾಂ ಸಾಗರಾಂತಾಯಾಂ ರೇವಾಯಾಶ್ಚೋತ್ತರೇ ತಟೇ ।**
**ತದ್ವರಂ ಸರ್ವತೀರ್ಥಾನಾಂ ಮಹಾಪಾತಕನಾಶನಂ ॥ ೩೨ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ "ನಾರದೇಶ್ವರತೀರ್ಥಮಾಹಾತ್ಮ್ಯವರ್ಣನಂ" ನಾಮಾಷ್ಟಸಪ್ತತಿತಮೋಽಧ್ಯಾಯಃ**

---

೩೨. ನಾರದಮುನಿಯು ಸಮುದ್ರದ ಮಧ್ಯದಲ್ಲಿರುವ ಭೂಮಿಯಲ್ಲಿರುವ ನರ್ಮದಾನದಿಯ ಉತ್ತರದಡದಲ್ಲಿ ಸಮಸ್ತತೀರ್ಥಗಳಲ್ಲಿಯೂ ಶ್ರೇಷ್ಠವಾದ ತೀರ್ಥವನ್ನು ನಿರ್ಮಿಸಿರುವನು. ಸಮಸ್ತತೀರ್ಥಗಳಲ್ಲಿಯೂ ಉತ್ತಮವಾದ ಆ ತೀರ್ಥವು ಮಹಾಪಾತಕಗಳನ್ನು ಪರಿಹರಿಸುವುದು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ "ನಾರದೇಶ್ವರತೀರ್ಥಮಾಹಾತ್ಮ್ಯವರ್ಣನ"ವೆಂಬ ಎಪ್ಪತ್ತೆಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥೈಕೋನಾಽಶೀತಿತಮೋಽಧ್ಯಾಯಃ

## ದಧಿಸ್ಕಂದ ಮಧುಸ್ಕಂದತೀರ್ಥಮಾಹಾತ್ಮ್ಯವರ್ಣನಂ

**ಶ್ರೀ ಮಾರ್ಕಂಡೇಯ ಉವಾಚ :—**

**ತತೋ ಗಚ್ಛೇತ್ತು ರಾಜೇಂದ್ರ ತೀರ್ಥದ್ವಯಮನುತ್ತಮಂ ।**
**ದಧಿಸ್ಕಂದಂ ಮಧುಸ್ಕಂದಂ ಸರ್ವಪಾಪಕ್ಷಯಂಕರಂ ॥ ೧ ॥**
**ದಧಿಸ್ಕಂದೇ ನರಃ ಸ್ನಾತ್ವಾ ಯಸ್ತು ದದ್ಯಾದ್ದ್ವಿಜೇ ದಧಿ ।**
**ಉಪತಿಷ್ಠೇತ್ತತಸ್ತಸ್ಯ ಸಪ್ತಜನ್ಮನಿ ಭಾರತ ॥ ೨ ॥**
**ನ ವ್ಯಾಧಿರ್ನಜರಾ ತಸ್ಯ ನ ಶೋಕೋ ನೈವ ಮತ್ಸರಃ ।**
**ದಶಚಂದ್ರಶತಂ ಯಾವಜ್ಜಾಯತೇ ವಿಮಲೇಕುಲೇ ॥ ೩ ॥**
**ಮಧುಸ್ಕಂದೇಽಪಿ ಮಧುನಾ ಮಿಶ್ರಿತಾನ್ಯಸ್ತಿಲಾನ್ದದೇತ್ ।**
**ನಾಽಸೌ ವೈವಸ್ವತಂ ದೇವಂ ಪಶ್ಯೇದ್ವೈ ಜನ್ಮಸಪ್ತತಿಂ ॥ ೪ ॥**
**ಮಧುನಾ ಸಹ ಸಂಮಿಶ್ರಂ ಪಿಂಡಂ ಯಸ್ತು ಪ್ರದಾಪಯೇತ್ ।**
**ತಸ್ಯ ಪೌತ್ರಪ್ರಪೌತ್ರೇಭ್ಯೋ ದಾರಿದ್ರ್ಯಂ ನೈವ ಜಾಯತೇ ॥ ೫ ॥**

---

## ಕನ್ನಡದ ಅನುವಾದ

### ದಧಿಸ್ಕಂದ ಮಧುಸ್ಕಂದತೀರ್ಥಮಾಹಾತ್ಮ್ಯವರ್ಣನ

೧. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:—ದೊರೆಯೆ! ತರುವಾಯ ಸಕಲ ಪಾಪಗಳನ್ನೂ ನಿವಾರಿಸುವ ದಧಿಸ್ಕಂದ ಮತ್ತು ಮಧುಸ್ಕಂದ ಎಂಬ ಎರಡು ತೀರ್ಥಗಳಿಗೆ ಹೋಗಬೇಕು.

೨. ದಧಿಸ್ಕಂದದಲ್ಲಿ ಮಿಂದು ಬ್ರಾಹ್ಮಣರಿಗೆ ಮೊಸರನ್ನು ದಾನಮಾಡಿದ ಮಾನವನಿಗೆ ಏಳು ಜನ್ಮಗಳಲ್ಲಿ ಅದು ಸನ್ನಿಹಿತವಾಗುವುದು.

೩. ಅವನಿಗೆ ರೋಗ, ಮುಪ್ಪು, ದುಃಖ, ಮಾತ್ಸರ್ಯಗಳುಂಟಾಗುವುದಿಲ್ಲ. ಸಾವಿರ ಚಂದ್ರರಿರುವವರೆಗೆ ಶುದ್ಧವಾದ ವಂಶದಲ್ಲಿ ಜನಿಸುವನು.

೪. ಮಧುಸ್ಕಂದದಲ್ಲಿಯೂ ಮಧುಮಿಶ್ರವಾದ ಎಳ್ಳನ್ನು ದಾನಮಾಡಿದವನು ಎಪ್ಪತ್ತು ಜನ್ಮಗಳಲ್ಲಿ ಯಮನನ್ನು ನೋಡುವುದಿಲ್ಲ.

೫. ಅಲ್ಲಿ ಮಧುಮಿಶ್ರವಾದ ಪಿಂಡವನ್ನು ದಾನಮಾಡುವವನ ಮಕ್ಕಳು, ಮೊಮ್ಮಕ್ಕಳಿಗೂ ಬಡತನವುಂಟಾಗುವುದಿಲ್ಲ.

**ದಧಿಭಿಃ ಸಹ ಸಂಮಿಶ್ರಂ ಪಿಂಡಂ ಯಸ್ತು ಪ್ರದಾಪಯೇತ್ ।**
**ತಸ್ಮಿಂಸ್ತೀರ್ಥೇ ನರಃ ಸ್ನಾತ್ವಾ ವಿಧಿವದ್ದಕ್ಷಿಣಾಮುಖಃ ॥ ೬ ॥**
**ಪಿತಾ ಪಿತಾಮಹಶ್ಚೈವ ತಥೈವ ಪ್ರಪಿತಾಮಹಃ ।**
**ದ್ವಾದಶಾಬ್ದಾನಿ ತುಷ್ಯಂತಿ ನಾಽತ್ರ ಕಾರ್ಯಾ ವಿಚಾರಣಾ ॥ ೭ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ**
**ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ**
**"ದಧಿಸ್ಕಂದ ಮಧುಸ್ಕಂದತೀರ್ಥಮಾಹಾತ್ಮ್ಯವರ್ಣನಂ"**
**ನಾಮೈಕೋನಾಽಶೀತಿತಮೋಽಧ್ಯಾಯಃ**

---

೬–೭. ನರನು ಆ ತೀರ್ಥದಲ್ಲಿ ಮಿಂದು ದಕ್ಷಿಣಾಭಿಮುಖನಾಗಿ ವಿಧಿಯಂತೆ ಮೊಸರಿಂದ ಕೂಡಿದ ಪಿಂಡವನ್ನು ದಾನಮಾಡಿದರೆ ಅವನ ತಂದೆ, ಪಿತಾಮಹ, ಪ್ರಪಿತಾಮಹ ಇವರೆಲ್ಲರೂ ಹನ್ನೆರಡುವರ್ಷಕಾಲ ಸಂತುಷ್ಟರಾಗುವರು. ಈ ವಿಷಯದಲ್ಲಿ ವಿಚಾರವಿಲ್ಲ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ದಧಿಸ್ಕಂದ ಮಧುಸ್ಕಂದತೀರ್ಥಮಹಾತ್ಮ್ಯವರ್ಣನ"ವೆಂಬ
ಎಪ್ಪತ್ತೊಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥಾಶೀತಿತಮೋಽಧ್ಯಾಯಃ

## ನಂದಿಕೇಶ್ವರತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ತತೋ ಗಚ್ಛೇತ್ತು ರಾಜೇಂದ್ರ ನಂದಿಕೇಶ್ವರಮುತ್ತಮಂ ।
ಯತ್ರ ಸಿದ್ಧೋ ಮಹಾನಂದೀ ತತ್ತೇ ಸರ್ವಂ ವದಾಮ್ಯಹಂ ॥ ೧ ॥
ರೇವಾಯಾಂ ಪುರತಃ ಕೃತ್ವಾ ಪುರಾ ನಂದೀ ಗಣೇಶ್ವರಃ ।
ತಪಸ್ತಪಂಜಯಂ ಕುರ್ವಂಸ್ತೀರ್ಥಾತ್ತೀರ್ಥಂ ಜಗಾಮ ಹ ॥ ೨ ॥
ದಧಿಸ್ಕಂದಂ ಮಧುಸ್ಕಂದಂ ಯಾವದ್ಧಿತ್ವಾ ತು ಗಚ್ಛತಿ ।
ತಾವತ್ತುಷ್ಟೋ ಮಹಾದೇವೋ ನಂದಿನಾಥಮುವಾಚ ಹ ॥ ೩ ॥

ಈಶ್ವರ ಉವಾಚ :—

ಭೋ ಭೋಃ ಪ್ರಸನ್ನೋ ನಂದೀಶ ವರಂ ವೃಣು ಯಥೇಪ್ಸಿತಂ ।
ತಪಸಾ ತೇನ ತುಷ್ಟೋಽಹಂ ತೀರ್ಥಯಾತ್ರಾಕೃತೇನ ತೇ ॥ ೪ ॥

ನಂದೀಶ್ವರ ಉವಾಚ :—

ನ ಚಾಽಹಂ ಕಾಮಯೇ ವಿತ್ತಂ ನ ಚಾಽಹಂ ಕುಲಸಂತತಿಂ ।
ಮುಕ್ತ್ವಾ ನ ಕಾಮಯೇ ಕಾಮಂ ತವ ಪಾದಾಂಬುಜಾತ್ಪರಂ ॥ ೫ ॥

---

## ಕನ್ನಡದ ಅನುವಾದ

### ನಂದಿಕೇಶ್ವರತೀರ್ಥಮಾಹಾತ್ಮ್ಯವರ್ಣನ

೧. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:— ನರೇಂದ್ರ! ಬಳಿಕ ನಂದಿಕೇಶ್ವರತೀರ್ಥಕ್ಕೆ ಹೋಗಬೇಕು. ಉತ್ತಮವಾದ ಈ ತೀರ್ಥದಲ್ಲಿ ನಂದಿಯು ಸಿದ್ಧಿಯನ್ನು ಪಡೆದಿರುವನು. ಅದನ್ನೆಲ್ಲ ನಾನು ಹೇಳುವೆನು.

೨. ಹಿಂದೆ ಗಣೇಶ್ವರನಾದ ನಂದಿಯು ರೇವಾನದಿಯನ್ನು ಮುಂದಿರಿಸಿಕೊಂಡು ತಪಸ್ಸನ್ನಾಚರಿಸುತ್ತ ಜಪವನ್ನು ಮಾಡುತ್ತ ತೀರ್ಥದಿಂದ ತೀರ್ಥಕ್ಕೆ ಹೋದನು.

೩. ಅವನು ದಧಿಸ್ಕಂದ ಮಧುಸ್ಕಂದಗಳನ್ನು ತ್ಯಜಿಸಿ ಹೋಗುವಷ್ಟರಲ್ಲಿ ಮಹೇಶ್ವರನು ಸಂತುಷ್ಟನಾಗಿ ಅವನನ್ನು ಕುರಿತು ಹೀಗೆಂದನು.

೪. ಈಶ್ವರನು ಹೇಳುತ್ತಾನೆ:—ನಂದೀಶ! ನಾನು ನಿನ್ನಲ್ಲಿ ಪ್ರಸನ್ನನಾಗಿರುವೆನು. ಇಷ್ಟವಾದ ವರವನ್ನು ಕೇಳಿಕೊ. ನಾನು ನಿನ್ನ ತಪಸ್ಸಿನಿಂದಲೂ, ತೀರ್ಥಯಾತ್ರೆಯಿಂದಲೂ ಸಂತುಷ್ಟನಾಗಿರುವೆನು.

೫. ನಂದೀಶ್ವರನು ಹೇಳುತ್ತಾನೆ:—ನಾನು ನಿನ್ನ ಪಾದಕಮಲವನ್ನು ಬಿಟ್ಟು ದ್ರವ್ಯವನ್ನೂ, ಸಂತತಿಯನ್ನೂ, ಇತರ ಇಷ್ಟಾರ್ಥಗಳನ್ನೂ ಬಯಸುವುದಿಲ್ಲ.

ಕ್ರಿಮಿಕೀಟಪತಂಗೇಷು ತಿರ್ಯಗ್ಯೋನಿಂಗತಸ್ಯ ವಾ ।
ಜನ್ಮಜನ್ಮಾಂತರೇಪ್ಯಸ್ತು ಭಕ್ತಿಸ್ತ್ವಯಿ ಮಮಾಽಚಲಾ ॥ ೬ ॥
ತಥೇತ್ಯುಕ್ತ್ವಾ ಮಹಾದೇವಃ ಪರಯಾ ಕೃಪಯಾ ನೃಪ ।
ಗೃಹೀತ್ವಾ ತಂ ಕರೇ ಸಿದ್ಧಂ ಜಗಾಮ ನಿಲಯಂ ಹರಃ ॥ ೭ ॥
ತಸ್ಮಿಂಸ್ತೀರ್ಥೇ ತು ಯಃ ಸ್ನಾತ್ವಾ ಭಕ್ತ್ಯಾ ತ್ರ್ಯಕ್ಷಂ ಪ್ರಪೂಜಯೇತ್ ।
ಅಗ್ನಿಷ್ಟೋಮಸ್ಯ ಯಜ್ಞಸ್ಯ ಫಲಂ ಪ್ರಾಪ್ನೋತಿ ಮಾನವಃ ॥ ೮ ॥
ತತ್ರ ತೀರ್ಥೇ ತು ಯಃ ಸ್ನಾತ್ವಾ ಪ್ರಾಣತ್ಯಾಗಂ ಕರೋತಿ ಚೇತ್ ।
ಶಿವಸ್ಯಾನುಚರೋ ಭೂತ್ವಾ ಮೋದತೇ ಕಲ್ಪಮಕ್ಷಯಂ ॥ ೯ ॥
ತತಃ ಕಾಲೇನ ಮಹತಾ ಜಾಯತೇ ವಿಮಲೇ ಕುಲೇ ।
ವೇದವೇದಾಂಗತತ್ತ್ವಜ್ಞೋ ಜೀವೇಚ್ಚ ಶರದಾಂ ಶತಂ ॥ ೧೦ ॥
ಏತತ್ತೇ ಕಥಿತಂ ತಾತ ತೀರ್ಥಮಾಹಾತ್ಮ್ಯಮುತ್ತಮಂ ।
ದುರ್ಲಭಂ ಮರ್ತ್ಯಸಂಜ್ಞಸ್ಯ ಸರ್ವಪಾಪಕ್ಷಯಂಕರಂ ॥ ೧೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ನಂದಿಕೇಶ್ವರತೀರ್ಥಮಾಹಾತ್ಮ್ಯವರ್ಣನಂ"
ನಾಮಾಶೀತಿತಮೋಽಧ್ಯಾಯಃ

---

೬. ನಾನು ಕ್ರಿಮಿ, ಕೀಟ, ಪತಂಗ, ತಿರ್ಯಗ್ಜಂತು ಏನೇ ಆಗಿದ್ದರೂ ನನಗೆ ಜನ್ಮಜನ್ಮಾಂತರಗಳಲ್ಲಿಯೂ ನಿನ್ನಲ್ಲಿ ಸ್ಥಿರವಾದ ಭಕ್ತಿಯುಂಟಾಗಲಿ.

೭. ಶಂಕರನು ಹಾಗೆಯೇ ಆಗಲೆಂದು ಅವನ ಕೈಹಿಡಿದು ಕರೆದುಕೊಂಡು ತನ್ನ ವಾಸಸ್ಥಾನವಾದ ಕೈಲಾಸಕ್ಕೆ ತೆರಳಿದನು.

೮. ಆ ತೀರ್ಥದಲ್ಲಿ ಮಿಂದು ಭಕ್ತಿಯಿಂದ ಈಶ್ವರನನ್ನು ಪೂಜಿಸಿದವನು ಅಗ್ನಿಷ್ಟೋಮಯಾಗದ ಫಲವನ್ನು ಪಡೆಯುವನು.

೯. ಅಲ್ಲಿ ಮಿಂದು ಪ್ರಾಣವನ್ನು ತ್ಯಜಿಸಿದವನು ಶಿವನಿಗೆ ಸೇವಕನಾಗಿ ಅಕ್ಷಯಕಲ್ಪಗಳಕಾಲ ಆನಂದಗೊಳ್ಳುವನು.

೧೦. ಬಳಿಕ ಬಹುಕಾಲದಮೇಲೆ ಪರಿಶುದ್ಧವಾದ ವಂಶದಲ್ಲಿ ಜನಿಸಿ ವೇದವೇದಾಂಗತತ್ತ್ವಗಳನ್ನರಿತವನಾಗಿ ನೂರುವರ್ಷಕಾಲ ಜೀವಿಸುವನು.

೧೧. ವತ್ಸ! ಮಾನವನಿಗೆ ದುರ್ಲಭವೂ, ಸಕಲ ಪಾಪಗಳನ್ನು ನಾಶಗೊಳಿಸುವುದೂ ಆದ ಈ ಉತ್ತಮತೀರ್ಥಮಾಹಾತ್ಮ್ಯವನ್ನು ನಿನಗೆ ಹೇಳಿರುವೆನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ನಂದಿಕೇಶ್ವರತೀರ್ಥಮಾಹಾತ್ಮ್ಯವರ್ಣನ"ವೆಂಬ
ಎಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥೈಕಾಶೀತಿತಮೋಽಧ್ಯಾಯಃ

## ವರುಣೇಶ್ವರತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ತತೋ ಗಚ್ಛೇನ್ಮಹಾರಾಜ ವರುಣೇಶ್ವರಮುತ್ತಮಂ ।
ಯತ್ರ ಸಿದ್ಧೋ ಮಹಾದೇವೋ ವರುಣೋ ನೃಪಸತ್ತಮ ॥ ೧ ॥
ಪಿಣ್ಯಾಕಶಾಕಪರ್ಣೈಶ್ಚ ಕೃಚ್ಛ್ರಚಾಂದ್ರಾಯಣಾದಿಭಿಃ ।
ಆರಾಧ್ಯ ಗಿರಿಜಾನಾಥಂ ತತಃ ಸಿದ್ಧಿಂ ಪರಾಂಗತಿಂ ॥ ೨ ॥
ತತ್ರ ತೀರ್ಥೇ ತು ಯಃ ಸ್ನಾತ್ವಾ ಸಂತರ್ಪ್ಯ ಪಿತೃದೇವತಾಃ ।
ಪೂಜಯೇಚ್ಛಂಕರಂ ಭಕ್ತ್ಯಾ ಸ ಯಾತಿ ಪರಮಾಂ ಗತಿಂ ॥ ೩ ॥
ಕುಂಡಿಕಾಂ ವರ್ಧನೀಂ ವಾಽಪಿ ಮಹದ್ವಾ ಜಲಭಾಜನಂ ।
ಅನ್ನೇನ ಸಹಿತಂ ಪಾರ್ಥ ತಸ್ಯ ಪುಣ್ಯಫಲಂ ಶೃಣು ॥ ೪ ॥
ಯತ್ಫಲಂ ಲಭತೇ ಮರ್ತ್ಯಃ ಸತ್ರೇ ದ್ವಾದಶವಾರ್ಷಿಕೇ ।
ತತ್ಫಲಂ ಸಮವಾಪ್ನೋತಿ ನಾಽತ್ರ ಕಾರ್ಯಾ ವಿಚಾರಣಾ ॥ ೫ ॥
ಸರ್ವೇಷಾಮೇವ ದಾನಾನಾಮನ್ನದಾನಂ ಪರಂ ಸ್ಮೃತಂ ।
ಸದ್ಯಃ ಪ್ರೀತಿಕರಂ ತೋಯಮನ್ನಂ ಚ ನೃಪಸತ್ತಮ ॥ ೬ ॥

---

## ಕನ್ನಡದ ಅನುವಾದ

### ವರುಣೇಶ್ವರತೀರ್ಥಮಾಹಾತ್ಮ್ಯವರ್ಣನ

೧. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:—ಮಹಾರಾಜ! ಬಳಿಕ ವರುಣನು ಸಿದ್ಧಿಗೊಂಡಿರುವ ಉತ್ತಮವಾದ ವರುಣೇಶ್ವರತೀರ್ಥಕ್ಕೆ ಹೋಗಬೇಕು.

೨. ಇಲ್ಲಿ ವರುಣನು ಹಿಂಡಿ, ಶಾಕ, ಎಲೆಗಳನ್ನು ಮಾತ್ರವೇ ತಿನ್ನುತ್ತ ಕೃಚ್ಛ್ರಚಾಂದ್ರಾಯಣಾದಿಗಳಿಂದ ಮಹೇಶ್ವರನನ್ನು ಆರಾಧಿಸಿ ಉತ್ತಮಸಿದ್ಧಿಯನ್ನು ಪಡೆದಿರುವನು.

೩. ಆ ತೀರ್ಥದಲ್ಲಿ ಮಿಂದು ಪಿತೃದೇವತೆಗಳನ್ನು ತೃಪ್ತಿಗೊಳಿಸಿ ಶಂಕರನನ್ನು ಭಕ್ತಿಯಿಂದ ಪೂಜಿಸಿದವನು ಉತ್ತಮಗತಿಯನ್ನು ಪಡೆಯುವನು.

೪. ಅಲ್ಲಿ ಗಿಂಡಿ, ಕಲಶ, ದೊಡ್ಡ ಜಲಪಾತ್ರೆ ಇವುಗಳನ್ನು ಅನ್ನದೊಡನೆ ದಾನಮಾಡಿದವನಿಗಾಗುವ ಫಲವನ್ನು ಕೇಳು.

೫. ಅದರಿಂದ ಹನ್ನೆರಡುವರ್ಷದ ಸತ್ರಯಾಗವನ್ನು ಮಾಡಿದ ಫಲವು ಲಭಿಸುವುದು. ಇದರಲ್ಲಿ ವಿಚಾರವಿಲ್ಲ.

೬. ಸಕಲ ದಾನಗಳಲ್ಲಿ ಅನ್ನದಾನವು ಉತ್ತಮವಾದುದು. ಅನ್ನ ನೀರುಗಳು ಎಲ್ಲರಿಗೂ ಕೂಡಲೆ ಸಂತೋಷವನ್ನುಂಟುಮಾಡುವುವು.

ತತ್ರ ತೀರ್ಥೇ ಮೃತಾನಾಂ ತು ನರಾಣಾಂ ಭಾವಿತಾತ್ಮನಾಂ ।
ವರುಣಸ್ಯ ಪುರೇ ವಾಸೋ ಯಾವದಾಭೂತಸಂಪ್ಲವಂ ॥ ೭ ॥
ಪಶ್ಚಾತ್ಪೂರ್ಣೇ ತತಃ ಕಾಲೇ ಮರ್ತ್ಯಲೋಕೇ ಪ್ರಜಾಯತೇ ।
ಅನ್ನದಾನಪ್ರದೋ ನಿತ್ಯಂ ಜೀವೇದ್ವರ್ಷಶತಂ ನರಃ ॥ ೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ವರುಣೇಶ್ವರತೀರ್ಥಮಾಹಾತ್ಮ್ಯವರ್ಣನಂ"
ನಾಮ್ಯೇಕಾಶೀತಿತಮೋಽಧ್ಯಾಯಃ

---

೭. ಆ ತೀರ್ಥದಲ್ಲಿ ಮೃತರಾದ ಜ್ಞಾನಿಗಳಾದ ಮಾನವರು ಪ್ರಳಯ ಕಾಲದವರೆಗೆ ವರುಣನ ಪಟ್ಟಣದಲ್ಲಿ ವಾಸಮಾಡುವರು.

೮. ಅನಂತರ ಆ ಪುಣ್ಯದ ಕಾಲವು ಮುಗಿಯಲು ಭೂಲೋಕದಲ್ಲಿ ಜನಿಸಿ ನಿತ್ಯವೂ ಅನ್ನದಾನಮಾಡುತ್ತ ನೂರುವರ್ಷಕಾಲ ಬದುಕುವರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದ
"ವರುಣೇಶ್ವರತೀರ್ಥಮಾಹಾತ್ಮ್ಯವರ್ಣನ"ವೆಂಬ
ಎಂಬತ್ತೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ದ್ವ್ಯಶೀತಿತಮೋಽಧ್ಯಾಯಃ

## ಪಂಚತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ:—

ತತೋ ಗಚ್ಛೇನ್ಮಹೀಪಾಲ ವಹ್ನಿತೀರ್ಥಮನುತ್ತಮಂ ।
ಯತ್ರ ಸಿದ್ಧೋ ಮಹಾತೇಜಾಸ್ತಪಃ ಕೃತ್ವಾ ಹುತಾಶನಃ ॥ ೧ ॥
ಸರ್ವಭಕ್ಷ್ಯಃ ಕೃತೋ ಯೋಽಸೌ ದಂಡಕೇ ಮುನಿನಾ ಪುರಾ ।
ನರ್ಮದಾತಟಮಾಶ್ರಿತ್ಯ ಪೂತೋ ಜಾತೋ ಹುತಾಶನಃ ॥ ೨ ॥
ತತ್ರ ತೀರ್ಥೇ ತು ಯಃ ಸ್ನಾತ್ವಾ ಪೂಜಯಿತ್ವಾ ಮಹೇಶ್ವರಂ ।
ಅಗ್ನಿಪ್ರವೇಶಂ ಕುರುತೇ ಸ ಗಚ್ಛೇದಗ್ನಿಸಾಮ್ಯತಾಂ ॥ ೩ ॥
ಭಕ್ತ್ಯಾ ಸ್ನಾತ್ವಾ ತು ಯಸ್ತತ್ರ ತರ್ಪಯೇತ್ಪಿತೃದೇವತಾಃ ।
ಅಗ್ನಿಷ್ಟೋಮಸ್ಯ ಯಜ್ಞಸ್ಯ ಫಲಮಾಪ್ನೋತ್ಯಸಂಶಯಂ ॥ ೪ ॥
ತಸ್ಯೈವಾಽನಂತರಂ ರಾಜನ್ಕೌಬೇರಂ ತೀರ್ಥಮುತ್ತಮಂ ।
ಕುಬೇರೋ ಯತ್ರ ಸಂಸಿದ್ಧೋ ಯಕ್ಷಾಣಾಮಧಿಪಃ ಪುರಾ ॥ ೫ ॥

---

## ಕನ್ನಡದ ಅನುವಾದ

### ಪಂಚತೀರ್ಥಮಾಹಾತ್ಮ್ಯವರ್ಣನ

೧. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:—ದೊರೆಯೆ! ಬಳಿಕ ಉತ್ತಮವಾದ ವಹ್ನಿತೀರ್ಥಕ್ಕೆ ಹೋಗಬೇಕು. ಆ ತೀರ್ಥದಲ್ಲಿ ಅಗ್ನಿಯು ತಪವನ್ನಾಚರಿಸಿ ಸಿದ್ಧನಾಗಿರುವನು.

೨. ಹಿಂದೆ ಅಗ್ನಿಯನ್ನು ಆ ಮುನಿಯು ದಂಡಕಾರಣ್ಯದಲ್ಲಿ ಸರ್ವಭಕ್ಷಕನನ್ನಾಗಿ ಮಾಡಲು ಆತನು ನರ್ಮದಾತಟಕ್ಕೆ ಬಂದು ಪವಿತ್ರನಾದನು.

೩. ಆ ತೀರ್ಥದಲ್ಲಿ ಮಿಂದು ಈಶ್ವರನನ್ನಾರಾಧಿಸಿ ಅಗ್ನಿಪ್ರವೇಶಮಾಡಿದವನು ಅಗ್ನಿಯಂತೆ ತೇಜಸ್ವಿಯಾಗುವನು.

೪. ಅಲ್ಲಿ ಭಕ್ತಿಯಿಂದ ಮಿಂದು ಪಿತೃದೇವತೆಗಳನ್ನು ತೃಪ್ತಿಗೊಳಿಸಿದವನು ನಿಜವಾಗಿಯೂ ಅಗ್ನಿಷ್ಟೋಮಯಾಗದ ಫಲವನ್ನು ಪಡೆಯುವನು.

೫. ದೊರೆಯೆ! ಅದರ ಮುಂದೆ ಉತ್ತಮವಾದ ಕೌಬೇರತೀರ್ಥವಿರುವುದು. ಇಲ್ಲಿ ಹಿಂದೆ ಯಕ್ಷರೊಡೆಯನಾದ ಕುಬೇರನು ಸಿದ್ಧಿಯನ್ನು ಪಡೆದಿರುವನು.

ತತ್ರ ತೀರ್ಥೇ ನರಃ ಸ್ನಾತ್ವಾ ಸಮಭ್ಯರ್ಚ್ಯ ಜಗದ್ಗುರುಂ ।
ಉಮಯಾ ಸಹಿತಂ ಭಕ್ತ್ಯಾ ಸರ್ವಪಾಪೈಃ ಪ್ರಮುಚ್ಯತೇ ॥ ೬ ॥
ತತ್ರ ತೀರ್ಥೇ ತು ಯಃ ಸ್ನಾತ್ವಾ ದದ್ಯಾದ್ವಿಪ್ರಾಯ ಕಾಂಚನಂ ।
ನಾಭಿಮಾತ್ರೇ ಜಲೇ ತಿಷ್ಠನ್ ಸ ಲಭೇತಾರ್ಬುದಂ ಫಲಂ ॥ ೭ ॥
ದಧಿಸ್ಕಂದೇ ಮಧುಸ್ಕಂದೇ ನಂದೀಶೇ ವರುಣಾಲಯೇ ।
ಆಗ್ನೇಯೇ ಯತ್ಫಲಂ ತಾತ ಸ್ನಾತ್ವಾ ತತ್ಫಲಮಾಪ್ನುಯಾತ್ ॥ ೮ ॥
ತೇ ವಂದ್ಯಾ ಮಾನುಷೇ ಲೋಕೇ ಧನ್ಯಾಃ ಪೂರ್ಣಮನೋರಥಾಃ ।
ಯೈಸ್ತು ದೃಷ್ಟಂ ಮಹಾಪುಣ್ಯಂ ನರ್ಮದಾತೀರ್ಥಪಂಚಕಂ ॥ ೯ ॥
ತೇ ಯಾಂತಿ ಭಾಸ್ಕರೇ ಲೋಕೇ ಪರಮೇ ದುಃಖನಾಶನೇ ।
ಭಾಸ್ಕರಾದೈಶ್ವರೇ ಲೋಕೇ ಚೈಶ್ವರಾದನಿವರ್ತಕೇ ॥ ೧೦ ॥
ನೀಯತೇ ಸ ಪರೇ ಲೋಕೇ ಯಾವದಿಂದ್ರಾಶ್ಚತುರ್ದಶ ।
ತತಃ ಸ್ವರ್ಗಾಚ್ಚ್ಯುತೋ ಮರ್ತ್ಯೇ ರಾಜಾ ಭವತಿ ಧಾರ್ಮಿಕಃ ॥ ೧೧ ॥
ಸರ್ವರೋಗವಿನಿರ್ಮುಕ್ತೋ ಭುನಕ್ತಿ ಸಚರಾಚರಂ ।
ವಿಷ್ಣುಶ್ಚ ದೇವತಾ ಯೇಷಾಂ ನರ್ಮದಾತೀರ್ಥಸೇವಿನಾಂ ॥ ೧೨ ॥
ಅಖಂಡಿತಪ್ರತಾಪಾಸ್ತೇ ಜಾಯಂತೇ ನಾತ್ರ ಸಂಶಯಃ ।
ಗಂಗಾ ಕನಖಲೇ ಪುಣ್ಯಾ ಕುರುಕ್ಷೇತ್ರೇ ಸರಸ್ವತೀ ॥ ೧೩ ॥

---

೬. ಆ ತೀರ್ಥದಲ್ಲಿ ಮಾನವನು ಮಿಂದು ಉಮೆಯೊಡನೆ ಈಶ್ವರನನ್ನು ಅರ್ಚಿಸಿದರೆ ಸಮಸ್ತಪಾಪಗಳಿಂದಲೂ ಬಿಡುಗಡೆ ಹೊಂದುವನು.

೭. ಆ ತೀರ್ಥದಲ್ಲಿ ಮಿಂದು ನಾಭಿಪ್ರಮಾಣದ ನೀರಿನಲ್ಲಿ ನಿಂತು ಬ್ರಾಹ್ಮಣನಿಗೆ ಸುವರ್ಣವನ್ನಿತ್ತವನು ಅರ್ಬುದಸಂಖ್ಯೆಯ ಫಲವನ್ನು ಪಡೆಯುವನು.

೮. ಅಲ್ಲಿ ಸ್ನಾನಮಾಡುವುದರಿಂದ ದಧಿಸ್ಕಂದ, ಮಧುಸ್ಕಂದ, ನಂದೀಶ, ವರುಣಾಲಯ, ಆಗ್ನೇಯತೀರ್ಥಗಳಲ್ಲಿ ಮಿಂದ ಫಲವು ಲಭಿಸುವುದು.

೯. ಅತಿಪುಣ್ಯಕರವಾದ ನರ್ಮದಾ ಮೊದಲಾದ ಐದು ತೀರ್ಥಗಳನ್ನು ನೋಡಿದವರು ಮನುಷ್ಯಲೋಕದಲ್ಲಿ ವಂದ್ಯರೂ, ಧನ್ಯರೂ, ಸಂಪೂರ್ಣಮನೋರಥವುಳ್ಳವರೂ ಆಗುವರು.

೧೦–೧೩. ಅವರು ಉತ್ತಮವೂ, ದುಃಖನಿವಾರಕವೂ ಆದ ಸೂರ್ಯಲೋಕಕ್ಕೂ, ಅದರಿಂದ ಈಶ್ವರಲೋಕಕ್ಕೂ, ಅದರಿಂದ ಅನಿವರ್ತಕಲೋಕಕ್ಕೂ ಹೋಗಿ ಹದಿನಾಲ್ಕುಮಂದಿ ಇಂದ್ರರಿರುವವರೆಗೆ ವಾಸಿಸಿ ಅನಂತರ ಆ ಸ್ವರ್ಗದಿಂದ ತಪ್ಪಿ ಭೂಲೋಕದಲ್ಲಿ ಧಾರ್ಮಿಕರಾಜರಾಗಿ ಚರಾಚರಾತ್ಮಕಪ್ರಪಂಚವನ್ನನುಭವಿಸುವರು. ನರ್ಮದಾತೀರವಾಸಿಗಳಾದವರಿಗೆ ವಿಷ್ಣುವು ದೇವತೆಯಾಗಿರುವನು. ಅವರು ನಿಶ್ಚಯವಾಗಿಯೂ ತಡೆಯಿಲ್ಲದ ಪ್ರತಾಪವುಳ್ಳವರಾಗುವರು.

**ಗ್ರಾಮೇ ವಾ ಯದಿ ವಾಽರಣ್ಯೇ ಪುಣ್ಯಾ ಸರ್ವತ್ರ ನರ್ಮದಾ ।**
**ರೇವಾತೀರೇ ವಸೇನ್ನಿತ್ಯಂ ರೇವಾತೋಯಂ ಸದಾ ಪಿಬೇತ್ ॥ ೧೪ ॥**
**ಸುಸ್ನಾತಃ ಸರ್ವತೀರ್ಥೇಷು ಸೋಮಪಾನಂ ದಿನೇ ದಿನೇ ।**
**ಗಂಗಾದ್ಯಾಃ ಸರಿತಃ ಸರ್ವಾಃ ಸಮುದ್ರಾಶ್ಚ ಸರಾಂಸಿ ಚ ।**
**ಕಲ್ಪಾಂತೇ ಸಂಕ್ಷಯಂ ಯಾಂತಿ ನ ಮೃತಾ ತೇನ ನರ್ಮದಾ ॥ ೧೫ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಅವಂತ್ಯಖಂಡೇ ತೃತೀಯೇ ರೇವಾಖಂಡೇ "ಪಂಚತೀರ್ಥಮಾಹಾತ್ಮ್ಯವರ್ಣನಂ"ನಾಮ ದ್ವ್ಯಶೀತಿತಮೋಽಧ್ಯಾಯಃ**

---

ಕನಖಲದಲ್ಲಿ ಗಂಗೆಯೂ, ಕುರುಕ್ಷೇತ್ರದಲ್ಲಿ ಸರಸ್ವತೀನದಿಯೂ ಪುಣ್ಯಕರವಾಗಿರುವುದು.

೧೪–೧೫. ನರ್ಮದಾನದಿಯು ಗ್ರಾಮದಲ್ಲಾಗಲಿ, ಅರಣ್ಯದಲ್ಲಾಗಲಿ ಎಲ್ಲೆಡೆಯಲ್ಲಿಯೂ ಪುಣ್ಯಕರವಾಗಿರುವುದು. ನರ್ಮದಾನದಿಯ ದಡದಲ್ಲಿ ವಾಸ ಮಾಡುವವನೂ, ಅದರ ನೀರನ್ನು ಯಾವಾಗಲೂ ಕುಡಿಯುವವನೂ, ಸಕಲ ತೀರ್ಥಗಳಲ್ಲಿ ಮಿಂದವನೂ ಪ್ರತಿದಿನವೂ ಸೋಮಪಾನ ಮಾಡಿದವನೇ ಆಗುವನು. ಗಂಗಾದಿ ಸಮಸ್ತನದಿಗಳೂ, ಸಮುದ್ರಗಳೂ, ಸರೋವರಗಳೂ ಕಲ್ಪಾವಸಾನದಲ್ಲಿ ಕ್ಷಯಿಸುವುವು. ನರ್ಮದಾನದಿಯು ಮಾತ್ರ ನಾಶವಾಗುವುದಿಲ್ಲ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಅವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ "ಪಂಚತೀರ್ಥಮಹಾತ್ಮ್ಯವರ್ಣನ"ವೆಂಬ ಎಂಬತ್ತೆರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ತ್ರ್ಯಶೀತಿತಮೋಽಧ್ಯಾಯಃ

## ಹನೂಮಂತೇಶ್ವರತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ತತೋ ಗಚ್ಛೇನ್ಮಹಾರಾಜ ತೀರ್ಥಂ ಪರಮಶೋಭನಂ ।
ಬ್ರಹ್ಮಹತ್ಯಾಹರಂ ಪ್ರೋಕ್ತಂ ರೇವಾತಟಸಮಾಶ್ರಯಂ ।
ಹನೂಮತಾಽಭಿಧಂ ಹ್ಯತ್ರ ವಿದ್ಯತೇ ಲಿಂಗಮುತ್ತಮಂ ॥ ೧ ॥

ಯುಧಿಷ್ಠಿರ ಉವಾಚ :—

ಹನೂಮಂತೇಶ್ವರಂ ನಾಮ ಕಥಂ ಜಾತಂ ವದಸ್ವ ಮೇ ।
ಬ್ರಹ್ಮಹತ್ಯಾಹರಂ ತೀರ್ಥಂ ರೇವಾದಕ್ಷಿಣಸಂಸ್ಥಿತಂ ॥ ೨ ॥

ಶ್ರೀ ಮಾರ್ಕಂಡೇಯ ಉವಾಚ :—

ಸಾಧು ಸಾಧು ಮಹಾಬಾಹೋ ಸೋಮವಂಶವಿಭೂಷಣ ।
ಗುಹ್ಯಾದ್ಗುಹ್ಯತರಂ ತೀರ್ಥಂ ನಾಖ್ಯಾತಂ ಕಸ್ಯಚಿನ್ಮಯಾ ॥ ೩ ॥
ತವ ಸ್ನೇಹಾತ್ಪ್ರವಕ್ಷ್ಯಾಮಿ ಪೀಡಿತೋ ವಾರ್ಧಕೇನ ತು ।
ಪೂರ್ವಂ ಜಾತಂ ಮಹದ್ಯುದ್ಧಂ ರಾಮರಾವಣಯೋರಪಿ ॥ ೪ ॥

---

## ಕನ್ನಡದ ಅನುವಾದ

### ಹನುಮಂತೇಶ್ವರತೀರ್ಥಮಾಹಾತ್ಮ್ಯವರ್ಣನ

೧. ಶ್ರೀ ಮಾರ್ಕಂಡೇಯನು ಹೇಳುತ್ತಾನೆ :—ಮಹಾರಾಜ ! ಬಳಿಕ ಬ್ರಹ್ಮಹತ್ಯೆಯನ್ನು ನಿವಾರಿಸುವುದೂ, ನರ್ಮದಾದಡದಲ್ಲಿರುವುದೂ, ಹನುಮಂತೇಶ್ವರವೆಂಬ ಉತ್ತಮಲಿಂಗವಿರುವುದೂ ಆದ ಉತ್ತಮತೀರ್ಥಕ್ಕೆ ಹೋಗಬೇಕು.

೨. ಯುಧಿಷ್ಠಿರನು ಹೇಳುತ್ತಾನೆ.–ಬ್ರಹ್ಮಹತ್ಯೆಯನ್ನು ಪರಿಹರಿಸುವುದೂ, ನರ್ಮದಾನದಿಯ ದಕ್ಷಿಣದಲ್ಲಿರುವುದೂ ಆದ ಆ ತೀರ್ಥವು ಹನುಮಂತೇಶ್ವರವೆಂಬ ಹೆಸರನ್ನು ಹೇಗೆ ಪಡೆಯಿತು ? ಹೇಳು.

೩–೪. ಶ್ರೀ ಮಾರ್ಕಂಡೇಯನು ಹೇಳುತ್ತಾನೆ :—ಮಹಾಬಾಹುವೂ, ಚಂದ್ರವಂಶಕ್ಕೆ ಅಲಂಕಾರಪ್ರಾಯನೂ ಆದ ಯುಧಿಷ್ಠಿರನೆ! ಒಳ್ಳೆಯದು. ಅತಿ ಗುಟ್ಯಾದ ಈ ತೀರ್ಥವನ್ನು ನಾನು ಯಾರಿಗೂ ಹೇಳಲಿಲ್ಲ. ಮುಪ್ಪಿನಿಂದ ಪೀಡಿತನಾಗಿದ್ದರೂ ನಿನ್ನಲ್ಲಿರುವ ವಾತ್ಸಲ್ಯದಿಂದ ಅದನ್ನು ನಿನಗೆ ಹೇಳುವೆನು. ಹಿಂದೆ ರಾಮರಾವಣರಿಗೆ ಘೋರಯುದ್ಧವು ನಡೆಯಿತು.

**ಪುಲಸ್ತ್ಯೋ ಬ್ರಹ್ಮಣಃ ಪುತ್ರೋ ವಿಶ್ರವಾಸ್ತಸ್ಯ ವೈ ಸುತಃ ।**
**ರಾವಣಸ್ತೇನ ಸಂಜಾತೋ ದಶಾಸ್ಯೋ ಬ್ರಹ್ಮರಾಕ್ಷಸಃ ॥ ೫ ॥**
**ತ್ರೈಲೋಕ್ಯವಿಜಯೀಭೂತಃ ಪ್ರಸಾದಾಚ್ಛೂಲಿನಃ ಸ ಚ ।**
**ಗೀರ್ವಾಣಾ ವಿಜಿತಾಃ ಸರ್ವೇ ರಾಮಸ್ಯ ಗೃಹಿಣೀ ಹೃತಾ ॥ ೬ ॥**
**ವಾರಿತಃ ಕುಂಭಕರ್ಣೇನ ಸೀತಾಂ ಮೋಚಯ ಮೋಚಯ ।**
**ವಿಭೀಷಣೇನ ವೈ ಪಾಪೋ ಮಂದೋದರ್ಯಾ ಪುನಃ ಪುನಃ ॥ ೭ ॥**
**ತ್ವಂ ಜಿತಃ ಕಾರ್ತವೀರ್ಯೇಣ ರೈಣುಕೇಯೇನ ಸೋಽಪಿ ಚ ।**
**ಸ ರಾಮೋ ರಾಮಭದ್ರೇಣ ತಸ್ಯ ಸಂಖ್ಯೇ ಕಥಂ ಜಯಃ ॥ ೮ ॥**

**ರಾವಣ ಉವಾಚ :—**

**ವಾನರೈಶ್ಚ ನರೈರೃಕ್ಷೈರ್ವರಾಹೈಶ್ಚ ನಿರಾಯುಧೈಃ ।**
**ದೇವಾಽಸುರಸಮೂಹೈಶ್ಚ ನ ಜಿತೋಽಹಂ ಕದಾಚನ ॥ ೯ ॥**

**ಶ್ರೀ ಮಾರ್ಕಂಡೇಯ ಉವಾಚ :—**

**ಸುಗ್ರೀವಹನುಮದ್ಭ್ಯಾಂ ಚ ಕುಮುದೇನಾಂಗದೇನ ಚ ।**
**ಏತೈರನ್ಯೈಃ ಸಹಾಯೈಶ್ಚ ರಾಮಚಂದ್ರೇಣ ವೈ ಜಿತಃ ॥ ೧೦ ॥**
**ರಾಮಚಂದ್ರೇಣ ಪೌಲಸ್ತ್ಯೋ ಹತಃ ಸಂಖ್ಯೇ ಮಹಾಬಲಃ ।**
**ವನಂ ಭಗ್ನಂ ಹತಾಃ ಶೂರಾಃ ಪ್ರಭಂಜನಸುತೇನ ಚ ॥ ೧೧ ॥**

---

೫. ಬ್ರಹ್ಮನ ಮಗನಾದ ಪುಲಸ್ತ್ಯನಿಗೆ ವಿಶ್ರವಸ್ಸೆಂಬ ಪುತ್ರನಿದ್ದನು. ಅವನಿಂದ ಹತ್ತುಮುಖವುಳ್ಳ ರಾವಣನೆಂಬ ಬ್ರಹ್ಮರಾಕ್ಷಸನು ಜನಿಸಿದನಷ್ಟೆ.

೬. ಅವನು ಶಿವನ ಅನುಗ್ರಹದಿಂದ ಮೂರುಲೋಕಗಳನ್ನು ಜಯಿಸಿದನು. ಸಮಸ್ತದೇವತೆಗಳನ್ನೂ ಸೋಲಿಸಿ ರಾಮನ ಪತ್ನಿಯಾದ ಸೀತೆಯನ್ನು ಅಪಹರಿಸಿದನು.

೭–೮. ಅವನನ್ನು ಕುಂಭಕರ್ಣ, ವಿಭೀಷಣ, ಮಂಡೋದರಿ ಇವರು "ನೀನು ಸೀತೆಯನ್ನು ಬಿಟ್ಟುಬಿಡು. ನಿನ್ನನ್ನು ಕಾರ್ತವೀರ್ಯನು ಗೆದ್ದಿರುವನು. ಆ ಕಾರ್ತವೀರ್ಯನನ್ನು ಪರಶುರಾಮನು ಸೋಲಿಸಿದನು. ಆ ಪರಶುರಾಮನನ್ನು ರಾಮಚಂದ್ರನು ಸೋಲಿಸಿದನು. ಆದುದರಿಂದ ನಿನಗೆ ಯುದ್ಧದಲ್ಲಿ ಹೇಗೆ ಜಯವು ಲಭಿಸುವುದು?" ಎಂದು ತಡೆದರು.

೯. ರಾವಣನು ಹೇಳುತ್ತಾನೆ —ಆಯುಧಗಳಿಲ್ಲದ ಕಪಿಗಳು, ಮನುಷ್ಯರು, ಕರಡಿಗಳು, ಹಂದಿಗಳು, ದೇವತೆಗಳು, ಅಸುರರು ಇವರು ನನ್ನನ್ನು ಸೋಲಿಸಲಾರರು.

೧೦–೧೧. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:—ಇತ್ತ ಶ್ರೀರಾಮನು ಸುಗ್ರೀವ, ಆಂಜನೇಯ, ಕುಮುದ, ಅಂಗದ ಇವರ ಮತ್ತು ಇತರರ ಸಹಾಯ

ರಾವಣಸ್ಯ ಸುತೋ ಜನ್ಯೇ ಹತಶ್ಚಾಽಕ್ಷಕುಮಾರಕಃ ।
ಆಯಾಮೋ ರಕ್ಷಸಾಂ ಭೀಮಃ ಸಂಪಿಷ್ಟೋ ವಾನರೇಣ ತು ॥ ೧೨ ॥
ಏವಂ ರಾಮಾಯಣೇ ವೃತ್ತೇ ಸೀತಾಮೋಕ್ಷಂ ಕೃತೇ ಸತಿ ।
ಅಯೋಧ್ಯಾಂ ತು ಗತೇ ರಾಮೇ ಹನುಮಾನ್ ಸ ಮಹಾಕಪಿಃ ॥ ೧೩ ॥
ಕೈಲಾಸಾಖ್ಯಂ ಗತಃ ಶೈಲಂ ಪ್ರಣಾಮಾಯ ಮಹೇಶಿತುಃ ।
ತಿಷ್ಠ ತಿಷ್ಠೇತ್ಯಸೌ ಪ್ರೋಕ್ತೋ ನಂದಿನಾ ವಾನರೋತ್ತಮಃ ॥ ೧೪ ॥
ಬ್ರಹ್ಮಹತ್ಯಾಯುತಸ್ತ್ವಂ ಹಿ ರಾಕ್ಷಸಾನಾಂ ವಧೇನ ಹಿ ।
ಭೈರವಸ್ಯ ಸಭಾ ನೂನಂ ನ ದ್ರಷ್ಟವ್ಯಾ ತ್ವಯಾ ಕಪೇ ॥ ೧೫ ॥

ಹನುಮಾನುವಾಚ :—

ನಂದಿನಾಥ ಹರಂ ಪೃಚ್ಛ ಪಾತಕಸ್ಯೋಪಶಾಂತಿದಂ ।
ಪಾಪೋಽಹಂ ಪ್ಲವಗೋ ಯಸ್ಮಾತ್ಸಂಜಾತಃ ಕಾರಣಾಂತರಾತ್ ॥ ೧೬ ॥

ನಂದ್ಯುವಾಚ :—

ರುದ್ರದೇಹೋದ್ಭವಾಂ ಕಿಂ ತೇ ನಶ್ರುತಾ ಭೂತಲೇ ಸ್ಥಿತಾ ।
ಶ್ರವಣಾಜ್ಜನ್ಮಜನಿತಂ ದ್ವಿಗುಣಂ ಕೀರ್ತನಾದ್ವ್ರಜೇತ್ ॥ ೧೭ ॥
ತ್ರಿಂಶಜ್ಜನ್ಮಾರ್ಜಿತಂ ಪಾಪಂ ನಶ್ಯೇದ್ರೇವಾಽವಗಾಹನಾತ್ ।
ತಸ್ಮಾತ್ತ್ವಂ ನರ್ಮದಾತೀರಂ ಗತ್ವಾ ಚರ ತಪೋ ಮಹತ್ ॥ ೧೮ ॥

---

ದಿಂದ ರಾವಣನನ್ನು ಯುದ್ಧದಲ್ಲಿ ಜಯಿಸಿ ಕೊಂದನು. ವಾಯುಪುತ್ರನಾದ ಆಂಜನೇಯನು ಅಶೋಕವನವನ್ನು ಮುರಿದನು. ಶೂರರನ್ನು ಕೊಂದನು.

೧೨ ಮತ್ತು ರಾವಣನ ಮಗನಾದ ಅಕ್ಷಕುಮಾರನನ್ನೂ, ಭಯಂಕರವಾದ ರಾಕ್ಷಸರ ಸಮೂಹವನ್ನೂ ಪುಡಿಮಾಡಿದನು.

೧೩–೧೫. ಹೀಗೆ ರಾಮಾಯಣವು ನಡೆದು ಸೀತೆಯು ಬಂಧನಮುಕ್ತಳಾಗಲು ರಾಮನು ಅಯೋಧ್ಯೆಗೆ ತೆರಳಿದನು. ಬಳಿಕ ಆಂಜನೇಯನು ಶಿವನನ್ನು ವಂದಿಸುವುದಕ್ಕಾಗಿ ಕೈಲಾಸಕ್ಕೆ ತೆರಳಿದನು. ಅಲ್ಲಿ ನಂದಿಯು, "ಎಲೈ ಕಪಿಯೆ! ನಿಲ್ಲು, ನಿಲ್ಲು. ನೀನು ರಾಕ್ಷಸರನ್ನು ಕೊಂದಿರುವುದರಿಂದ ಬ್ರಹ್ಮಹತ್ಯೆಯುಳ್ಳವನಾಗಿರುವೆ. ನೀನು ನಿಜವಾಗಿಯೂ ಭೈರವನ ಸಭೆಯನ್ನು ನೋಡಬಾರದು" ಎಂದನು.

೧೬. ಹನುಮಂತನು ಹೇಳುತ್ತಾನೆ.—ನಂದಿನಾಥ! ಕಪಿಯಾದ ನಾನು ಯಾವ ಕಾರಣಾಂತರದಿಂದ ಪಾಪಿಯಾದೆನು. ಈ ಪಾಪವು ಶಾಂತಿಯಾಗುವ ಕ್ರಮವನ್ನು ಈಶ್ವರನನ್ನು ಕೇಳು.

೧೭–೧೮. ನಂದಿಯು ಹೇಳುತ್ತಾನೆ:—ನೀನು ಭೂಲೋಕದಲ್ಲಿರುವ ರುದ್ರದೇಹದಿಂದ ಹುಟ್ಟಿದ ನರ್ಮದಾನದಿಯನ್ನು ಕೇಳಿಲ್ಲವೆ? ಆ ನದಿಯು ನಾಮಶ್ರವಣ

ಗಂಧವಾಹ ಸುತೋಽಪ್ಯೇವಂ ನಂದಿನೋಕ್ತಂ ನಿಶಮ್ಯ ಚ ।
ಪ್ರಯಾತೋ ನರ್ಮದಾತೀರಮಾರ್ವ್ಯಾ ದಕ್ಷಿಣಸಂಗಮಂ ॥ ೧೯ ॥
ದಧ್ಯೌ ಸುದಕ್ಷಿಣೇ ದೇವಂ ವಿರೂಪಾಕ್ಷಂ ತ್ರಿಶೂಲಿನಂ ।
ಜಟಾಮುಕುಟಸಂಯುಕ್ತಂ ವ್ಯಾಲಯಜ್ಞೋಪವೀತಿನಂ ॥ ೨೦ ॥
ಭಸ್ಮೋಪಚಿತಸರ್ವಾಂಗಂ ಡಮರುಸ್ವರನಾದಿತಂ ।
ಉಮಾರ್ಧಾಂಗಹರಂ ಶಾಂತಂ ಗೋನಾಥಾಸನಸಂಸ್ಥಿತಂ ॥ ೨೧ ॥
ವತ್ಸರಾನ್ಸುಬಹೂನ್ಯಾವದುಪಾಸಾಂಚಕ್ರ ಈಶ್ವರಂ ।
ತಾವತ್ತುಷ್ಟೋ ಮಹಾದೇವ ಆಜಗಾಮ ಸಹೋಮಯಾ ॥ ೨೨ ॥
ಉವಾಚ ಮಧುರಾಂ ವಾಣೀಂ ಮೇಘಗಂಭೀರನಿಃಸ್ವನಾಂ ।
ಸಾಧುಸ್ವಾಧ್ವಿತ್ಯುವಾಚೇಶಃ ಕಷ್ಟಂ ವತ್ಸ ತ್ವಯಾ ಕೃತಂ ॥ ೨೩ ॥
ನ ಚ ಪೂರ್ವಂ ತ್ವಯಾ ಪಾಪಂ ಕೃತಂ ರಾವಣಸಂಕ್ಷಯೇ ।
ಸ್ವಾಮಿಕಾರ್ಯರತಸ್ತ್ವಂ ಹಿ ಸಿದ್ಧೋಽಸಿ ಮಮ ದರ್ಶನಾತ್ ॥ ೨೪ ॥
ಹನುಮಾಂಶ್ಚ ಹರಂ ದೃಷ್ಟ್ವಾ ಉಮಾರ್ಧಾಂಗಹರಂ ಸ್ಥಿರಂ ।
ಸಾಷ್ಟಾಂಗಂ ಪ್ರಣತೋಽವೋಚಜ್ಜಯಶಂಭೋ ನಮೋಽಸ್ತು ತೇ ।
ಜಯಾಂಧಕವಿನಾಶಾಯ ಜಯಗಂಗಾಶಿರೋಧರ ॥ ೨೫ ॥

---

ದಿಂದ ಒಂದು ಜನ್ಮದ ಪಾಪವನ್ನೂ, ಕೀರ್ತನದಿಂದ ಇದರ ಇಮ್ಮಡಿ ಪಾಪವನ್ನೂ, ಸ್ನಾನಮಾಡುವುದರಿಂದ ಮೂವತ್ತು ಜನ್ಮಗಳಲ್ಲಿಸಗಿದ ಪಾಪವನ್ನೂ, ಪರಿಹರಿಸುವುದು. ಆದುದರಿಂದ ನೀನು ನರ್ಮದಾತೀರಕ್ಕೆ ಹೋಗಿ ಮಹಾತಪಸ್ಸನ್ನಾಚರಿಸು.

೧೯. ಆಂಜನೇಯನೂ ನಂದಿಯು ಹೇಳಿದ ಮಾತನ್ನು ಕೇಳಿ ಭೂಮಿಗೆ ದಕ್ಷಿಣದಿಕ್ಕಿನಲ್ಲಿರುವ ನರ್ಮದಾನದಿಯ ತಟಕ್ಕೆ ಹೋದನು.

೨೦–೨೨. ಆ ದಕ್ಷಿಣ ತಟದಲ್ಲಿ ಅವನು ತ್ರಿಶೂಲಧಾರಿಯೂ, ಜಟಾಮುಕುಟ ಸಹಿತನೂ, ಸರ್ಪಯಜ್ಞೋಪವೀತವುಳ್ಳವನೂ, ಭಸ್ಮಲಿಪ್ತವಾದ ಸಂಪೂರ್ಣಾವಯವಗಳುಳ್ಳವನೂ, ಡಮರುಧ್ವನಿಯನ್ನು ಮಾಡುತ್ತಿರುವವನೂ, ಅರ್ಧನಾರೀಶ್ವರನೂ, ಶಾಂತನೂ, ವೃಷಭವಾಹನನೂ ಆದ ವಿರೂಪಾಕ್ಷನನ್ನು ಧ್ಯಾನಿಸಿದನು. ಅವನು ಅನೇಕ ವರ್ಷಗಳಕಾಲ ಈಶ್ವರನನ್ನು ಧ್ಯಾನಿಸುತ್ತಿರಲು ಮಹಾದೇವನು ಸಂತುಷ್ಟನಾಗಿ ಪಾರ್ವತಿಯೊಡನೆ ಅಲ್ಲಿಗೈತಂದನು.

೨೩–೨೪. ಆ ಶಂಕರನು ಮೇಘದಂತೆ ಗಂಭೀರವಾದ ಮಾತಿನಿಂದ "ವತ್ಸ! ಒಳ್ಳೆಯದು. ನೀನು ಬಹಳ ಕಷ್ಟಪಟ್ಟಿರುವೆ. ರಾವಣನಾಶದಲ್ಲಿ ನೀನಾವ ಪಾಪವನ್ನೂ ಮಾಡಲಿಲ್ಲ. ಸ್ವಾಮಿಕಾರ್ಯನಿರತನಾದ ನೀನು ನನ್ನ ದರ್ಶನದಿಂದ ಸಿದ್ಧನಾಗಿರುವೆ" ಎಂದನು.

೨೫. ಹನುಮಂತನೂ ಪಾರ್ವತಿಯು ಅರ್ಧಾಂಗಿಯಾಗುಳ್ಳ ಹರನನ್ನು

ಏವಂ ಸ್ತುತೋ ಮಹಾದೇವೋ ವರದೋ ವಾಕ್ಯಮಬ್ರವೀತ್ ।
ವರಂ ಪ್ರಾರ್ಥಯ ಮೇ ವತ್ಸ ಪ್ರಾಣಸಂಭವ ಸಂಭವ ॥ ೨೬ ॥
ಶ್ರೀ ಹನುಮಾನುವಾಚ :—
ಬ್ರಹ್ಮರಕ್ಷೋವಧಾಜ್ಜಾತಾ ಮಮ ಹತ್ಯಾ ಮಹೇಶ್ವರ ।
ನ ಪಾಪೋಽಹಂ ಭವೇದೇವ ಯುಷ್ಮತ್ಸಂಭಾಷಣೇಕ್ಷಣಾತ್ ॥ ೨೭ ॥
ಈಶ್ವರ ಉವಾಚ :—
ನರ್ಮದಾತೀರ್ಥಮಾಹಾತ್ಮ್ಯಾದ್ಧರ್ಮಯೋಗಪ್ರಭಾವತಃ ।
ಮನ್ಮೂರ್ತಿದರ್ಶನಾತ್ಪುತ್ರ ನಿಷ್ಪಾಪೋಽಸಿ ನ ಸಂಶಯಃ ॥ ೨೮ ॥
ಅನ್ಯಚ್ಚ ತೇ ಪ್ರಯಚ್ಛಾಮಿ ವರಂ ವಾನರಪುಂಗವ ।
ಉಪಕಾರಾಯ ಲೋಕಾನಾಂ ನಾಮಾನಿ ತವ ಮಾರುತೇ ॥ ೨೯ ॥
ಹನೂಮಾನಂಜನಿಸುತೋ ವಾಯುಪುತ್ರೋ ಮಹಾಬಲಃ ।
ರಾಮೇಷ್ಟಃ ಫಾಲ್ಗುನೋ ಗೋತ್ರಃ ಪಿಂಗಾಕ್ಷೋಽಮಿತವಿಕ್ರಮಃ॥ ೩೦ ॥
ಉದಧಿಕ್ರಮಣೇ ಶ್ರೇಷ್ಠೋ ದಶಗ್ರೀವಸ್ಯ ದರ್ಪಹಾ ।
ಲಕ್ಷ್ಮಣಪ್ರಾಣದಾತಾ ಚ ಸೀತಾಶೋಕನಿವರ್ತನಃ ॥ ೩೧ ॥

---

ನೋಡಿ ಸಾಷ್ಟಾಂಗನಮಸ್ಕಾರ ಮಾಡಿ ಹೀಗೆಂದನು. "ಶಂಕರ! ನೀನು ಜಯಿಸು. ನಿನಗೆ ನಮಸ್ಕಾರವು. ಅಂಧಕನಾಶಕನೂ, ಗಂಗಾಧರನೂ ಆದ ಶಂಕರ! ಜಯಿಸು."

೨೬. ಆಂಜನೇಯನು ಹೀಗೆ ಸ್ತುತಿಸಲು, ವರವನ್ನು ಕೊಡುವ ಮಹಾದೇವನು, "ವಾಯುತನಯ! ವರವನ್ನು ಕೇಳಿಕೊ" ಎಂದನು.

೨೭. "ಶಂಕರ! ನನಗೆ ಬ್ರಾಹ್ಮಣರಾದ ರಾಕ್ಷಸರ ನಾಶದಿಂದ ಬ್ರಹ್ಮಹತ್ಯೆಯುಂಟಾಗಿದೆ. ನಿನ್ನನ್ನು ಸಂದರ್ಶಿಸಿ ನಿನ್ನೊಡನೆ ಮಾತಾಡಿದುದರಿಂದ ಈ ಕ್ಷಣವೇ ನಾನು ಪಾಪಿಯಾಗದಂತೆ ಮಾಡು."

೨೮. "ವತ್ಸ! ನೀನು ನರ್ಮದಾತೀರ್ಥಮಾಹಾತ್ಮ್ಯದಿಂದಲೂ, ಧರ್ಮಯೋಗದಿಂದಲೂ, ನನ್ನ ಈ ಮೂರ್ತಿಯನ್ನು ನೋಡಿದುದರಿಂದಲೂ ಪಾಪವಿಲ್ಲದವನಾಗಿರುವೆ.

೨೯. ವಾನರೋತ್ತಮ! ಲೋಕೋಪಕಾರಕ್ಕಾಗಿ ನಿನಗೆ ಈ ನಾಮಗಳನ್ನು ಮತ್ತೊಂದನ್ನು ವರವನ್ನಾಗಿ ಕೊಡುತ್ತೇನೆ.

೩೦–೩೧. ಹನುಮಾನ್, ಅಂಜನಾಸುತ, ವಾಯುಪುತ್ರ, ಮಹಾಬಲ, ರಾಮೇಷ್ಟ, ಫಾಲ್ಗುನ, ಗೋತ್ರ, ಪಿಂಗಾಕ್ಷ, ಅಮಿತವಿಕ್ರಮ, ಉದಧಿಕ್ರಮಶ್ರೇಷ್ಠ, ದಶಗ್ರೀವದರ್ಪಹಾ, ಲಕ್ಷ್ಮಣಪ್ರಾಣದಾತ, ಸೀತಾಶೋಕನಿವರ್ತನ.

ಇತ್ಯುಕ್ತ್ವಾಂತರ್ದಧೇ ದೇವ ಉಮಯಾ ಸಹ ಶಂಕರಃ ।
ಹನೂಮಾನೀಶ್ವರಂ ತತ್ರ ಸ್ಥಾಪಯಾಮಾಸ ಭಕ್ತಿತಃ ॥ ೩೨ ॥
ಆತ್ಮಯೋಗಬಲೇನೈವ ಬ್ರಹ್ಮಚರ್ಯಪ್ರಭಾವತಃ ।
ಈಶ್ವರಸ್ಯ ಪ್ರಸಾದೇನ ಲಿಂಗಂ ಕಾಮಪ್ರದಂ ಹಿ ತತ್ ।
ಅಚ್ಛೇದ್ಯಮಪ್ರತರ್ಕ್ಯಂ ಚ ವಿನಾಶೋತ್ಪತ್ತಿವರ್ಜಿತಂ ॥ ೩೩ ॥

ಶ್ರೀ ಮಾರ್ಕಂಡೇಯ ಉವಾಚ :—

ಹನೂಮಂತೇಶ್ವರಂ ಪುತ್ರ ಪ್ರತ್ಯಕ್ಷಪ್ರತ್ಯಯಂ ಶೃಣು ।
ಯದ್ವೃತ್ತಂ ದ್ವಾಪರಸ್ಯಾದೌ ತ್ರೇತಾಂತೇ ಪಾಂಡುನಂದನ ॥ ೩೪ ॥
ಸುಪರ್ವಾ ನಾಮ ಭೂಪಾಲೋ ಬಭೂವ ವಸುಧಾತಲೇ ।
ತಸ್ಯ ರಾಜ್ಞಃ ಸದಾ ಸೌಖ್ಯಂ ನರಾ ದೀರ್ಘಾಯುಷಃ ಸದಾ ॥ ೩೫ ॥
ಸ ಪುತ್ರಧನಸಂಯುಕ್ತಶ್ಚೌರೋಪದ್ರವವರ್ಜಿತಃ ।
ಶತಬಾಹುರ್ಬಭೂವಾಸ್ಯ ಪುತ್ರೋ ಭೀಮಪರಾಕ್ರಮಃ ॥ ೩೬ ॥
ಆಸಕ್ತೋಽಸೌ ಸದಾಕಾಲಂ ಪಾಪಧರ್ಮೈರ್ನರೇಶ್ವರ ।
ಅಟಾಟ್ಯತ ಧರಾಂ ಸರ್ವಾಂ ಪರ್ವತಾಂಶ್ಚ ವನಾನಿ ಚ ॥ ೩೭ ॥

---

೩೨. ಶಂಕರನು ಈ ಪ್ರಕಾರವಾಗಿ ಆ ಮಾರುತಿಗೆ ಶುಭನಾಮಗಳನ್ನಿತ್ತು, ಪಾರ್ವತಿಯೊಡನೆ ಅದೃಶ್ಯನಾದನು. ಹನುಮಂತನು ಅಲ್ಲಿ ಭಕ್ತಿಯಿಂದ ಈಶ್ವರನನ್ನು ಸ್ಥಾಪಿಸಿದನು.

೩೩. ಆ ಲಿಂಗವು ಹನುಮಂತನ ಯೋಗಬಲದಿಂದಲೂ, ಬ್ರಹ್ಮಚರ್ಯದ ಪ್ರಭಾವದಿಂದಲೂ, ಈಶ್ವರಾನುಗ್ರಹದಿಂದಲೂ, ಇಷ್ಟಾರ್ಥವನ್ನು ನೀಡುವುದೂ, ಅಚ್ಛೇದ್ಯವೂ, ಅಪ್ರಮೇಯವೂ, ವಿನಾಶೋತ್ಪತ್ತಿಗಳಿಲ್ಲದಿರುವುದೂ ಆಯಿತು.

೩೪. ಶ್ರೀ. ಮಾರ್ಕಂಡೇಯನು ಹೇಳುತ್ತಾನೆ :—ಯುಧಿಷ್ಠಿರ! ಇನ್ನು ದ್ವಾಪರಯುಗದ ಆದಿಯಲ್ಲಿಯೂ, ತ್ರೇತಾಯುಗದ ಅಂತ್ಯದಲ್ಲಿಯೂ ಆ ಹನುಮಂತೇಶ್ವರದಲ್ಲಿ ನಡೆದ ಒಂದು ಸಮಾಚಾರವನ್ನು ಕೇಳು.

೩೫. ಭೂಲೋಕದಲ್ಲಿ ಸುಪರ್ವನೆಂಬ ದೊರೆಯೊಬ್ಬನಿದ್ದನು. ಅವನ ಪ್ರಜೆಗಳು ಯಾವಾಗಲೂ ಸುಖಿಗಳೂ, ದೀರ್ಘಾಯುಷ್ಮಂತರೂ ಆಗಿದ್ದರು.

೩೬. ಆ ರಾಜನು ಪುತ್ರಧನಗಳಿಂದ ಕೂಡಿದವನೂ, ಕಳ್ಳರ ತೊಂದರೆಯಿಲ್ಲದವನೂ ಆಗಿದ್ದನು. ಅವನಿಗೆ ಅತ್ಯಂತ ಪರಾಕ್ರಮಶಾಲಿಯಾದ ಶತಬಾಹುವು ಮಗನಾಗಿದ್ದನು.

೩೭. ಈ ಶತಬಾಹುವು ಯಾವಾಗಲೂ ಪಾಪಕರ್ಮಾಸಕ್ತನಾಗಿ ಭೂಮಿಯಲ್ಲಿಯೂ, ಪರ್ವತವನಗಳಲ್ಲಿಯೂ ಅಲೆಯುತ್ತಿದ್ದನು.

ವಧಾರ್ಥಂ ಮೃಗಯೂಥಾನಾಮಾಗತೋ ವಿಂಧ್ಯಪರ್ವತಂ ।
ತರುಜಾತಿಸಮಾಕೀರ್ಣೇ ಹಸ್ತಿಯೂಥಸಮಾಚಿತೇ ॥ ೩೮ ॥
ಸಿಂಹಚಿತ್ರಕಶೋಭಾಢ್ಯೇ ಮೃಗವಾರಾಹಸಂಕುಲೇ ।
ಕ್ರೀಡಿತ್ವಾ ಸ ವನೇ ರಾಜಾ ನರ್ಮದಾಮಾಗತಃ ಕ್ವಚಿತ್ ॥ ೩೯ ॥
ಹನೂಮಂತವನೇ ಪ್ರಾಪ್ತಃ ಶತಕ್ರೋಶಪ್ರಮಾಣಕೇ ।
ಚಿಂಚಿಣೀವನಶೋಭಾಢ್ಯೇ ಕದಂಬತರುಸಂಕುಲೇ ॥ ೪೦ ॥
ನಿತ್ಯಂ ಪಾಲಾಶಜಂಬೀರೈಃ ಕರಂಜಖದಿರೈಸ್ತಥಾ ।
ಪಾಟಲೈರ್ಬದರೈರ್ಯುಕ್ತೈಃ ಶಮೀತಿಂದುಕಶೋಭಿತಂ ॥ ೪೧ ॥
ಮೃಗಯೂಥೈಃ ಸಮಾಚ್ಛನ್ನಶಿಖಂಡಿಸ್ವರನಾದಿತಂ ।
ಪಾರಾವತಕ ಸಂಘಾನಾಂ ಸಮಂತಾತ್ಸ್ವನುಶೋಭಿತಂ ॥ ೪೨ ॥
ಶರತ್ಕಾಲೇಽರಮುದ್ರಾಜಾ ಬಹುಲೇ ಚಾಶ್ವಿನಸ್ಯ ಚಃ ।
ವನಮಧ್ಯಂಗತೋಽದ್ರಾಕ್ಷೀದ್ಭ್ರಮಂತಂ ಪಿಂಗಲದ್ವಿಜಂ ॥ ೪೩ ॥
ಪುಸ್ತಿಕಾಕರಸಂಸ್ಥಂ ಚ ಪಪ್ರಚ್ಛ ಚಪಲಂ ದ್ವಿಜಂ ॥ ೪೪ ॥

ಶತಬಾಹುರುವಾಚ :—

ಏಕಾಕೀ ತ್ವಂ ವನೇ ಕಸ್ಮಾದ್ಭ್ರಮಸೇ ಪುಸ್ತಿಕಾಕರಃ ।
ಇತಸ್ತತೋಽಪಿ ಸಂಪಶ್ಯನ್ಕಥಯಸ್ವ ದ್ವಿಜೋತ್ತಮ ॥ ೪೫ ॥

---

೩೮–೩೯. ಅವನು ಮೃಗಗಳ ಹಿಂಡನ್ನು ಕೊಲ್ಲಲು ವಿಂಧ್ಯಪರ್ವತಕ್ಕೆ ಬಂದು ವೃಕ್ಷಗಳಿಂದ ತುಂಬಿರುವುದೂ, ಆನೆಗಳ ಹಿಂಡಿನಿಂದ ವ್ಯಾಪ್ತವಾದುದೂ, ಸಿಂಹ, ಚಿರತೆಗಳಿಂದ ಶೋಭಿಸುವುದೂ, ಮೃಗ, ವರಾಹಗಳಿಂದ ತುಂಬಿರುವುದೂ ಆದ ಆ ಕಾಡಿನಲ್ಲಿ ವಿನೋದಗೊಂಡು ನರ್ಮದಾನದಿಗೆ ಬಂದನು.

೪೦. ಅವನು ಇನ್ನೂರು ಮೈಲಿಗಳು ವಿಸ್ತೀರ್ಣವಾಗಿರುವುದೂ, ಹುಣಸೇ ಮರಗಳ ಕಾಡಿನಿಂದ ಕೂಡಿರುವುದೂ, ಈಚಲಮರಗಳಿಂದ ತುಂಬಿರುವುದೂ ಆದ ಹನುಮಂತವನಕ್ಕೆ ಬಂದನು.

೪೧–೪೪. ಅಲ್ಲಿ ಅವನು ಪಾಲಾಶ, ಜಂಬೀರ, ಕರಂಜ, ಖದಿರ, ಪಾಟಲ, ಬದರ, ಶಮಿ, ತಿಂದುಕ ಇವುಗಳಿಂದ ಶೋಭಿಸುವುದೂ, ಮೃಗಗಳ ಹಿಂಡುಗಳಿಂದ ಕೂಡಿರುವುದೂ, ನವಿಲುಗಳ ಧ್ವನಿಯಿಂದ ಧ್ವನಿಗೊಂಡುದೂ, ಸುತ್ತಲೂ ಪಾರಿವಾಳಗಳ ಮಂಜುಳಸ್ವರದಿಂದ ಶೋಭಿಸುವುದೂ ಆದ ಆ ವನಮಧ್ಯದಲ್ಲಿ ಶರದೃತುವಿನ ಆಶ್ವಯುಜ ಬಹುಳದಲ್ಲಿ ವಿಹರಿಸುತ್ತ ಸಂಚರಿಸುತ್ತಿರುವ ಪಿಂಗಳ ಬ್ರಾಹ್ಮಣನನ್ನು ಕಂಡನು. ಅವನು ಕೈಯಲ್ಲಿ ಪುಸ್ತಕವನ್ನು ಹಿಡಿದುಕೊಂಡಿರುವ ಚಂಚಲನಾದ ಆ ಬ್ರಾಹ್ಮಣನನ್ನು ಹೀಗೆ ಪ್ರಶ್ನಿಸಿದನು.

೪೫. ಶತಬಾಹುವು ಹೇಳುತ್ತಾನೆ:—ಎಲೈ ದ್ವಿಜನೆ! ನೀನು ಕೈಯಲ್ಲಿ

ಬ್ರಾಹ್ಮಣ ಉವಾಚ :—
ಕಾನ್ಯಕುಬ್ಜಾತ್ಸಮಾಯಾತಃ ಪ್ರೇಷಿತೋ ರಾಜಕನ್ಯಯಾ ।
ಅಸ್ಥಿಕ್ಷೇಪಾಯ ವೈ ರಾಜನ್ ಹನೂಮಂತೇಶ್ವರೇ ಜಲೇ ॥ ೪೬ ॥
ರಾಜೋವಾಚ :—
ಅಸ್ಥಿಕ್ಷೇಪೋ ಜಲೇ ಕಸ್ಮಾದ್ಧನೂಮಂತೇಶ್ವರೇ ದ್ವಿಜ ।
ಕ್ರಿಯತೇ ಕೇನ ಕಾರ್ಯೇಣ ಸಾಶ್ಚರ್ಯಂ ಕಥ್ಯತಾಂ ಮಮ ॥ ೪೭ ॥
ಸುಪರ್ವಣಃ ಸುತೋ ಯಾನಂ ತ್ಯಕ್ತ್ವಾ ಭೂಮೌ ಪ್ರಣಮ್ಯ ಚ ।
ಕೃತಾಂಜಲಿಪುಟೋ ಭೂತ್ವಾ ಬ್ರಾಹ್ಮಣಾಯ ನರೇಶ್ವರ ।
ಸಮಸ್ತಂ ಕಥಯಾಮಾಸ ವೃತ್ತಾಂತಂ ಸ್ವಂ ಪುರಾತನಂ ॥ ೪೮ ॥
ಬ್ರಾಹ್ಮಣ ಉವಾಚ :—
ಶಿಖಂಡೀ ನಾಮ ರಾಜಾಽಸ್ತಿ ಕಾನ್ಯಕುಬ್ಜೇ ಪ್ರತಾಪವಾನ್ ।
ಅಪುತ್ರೋಽಸೌ ಮಹಿಪಾಲಃ ಕನ್ಯಾ ಜಾತಾ ಮನೋರಥೈಃ ॥ ೪೯ ॥
ಜಾತಿಸ್ಮರಾ ಸುಚಾರ್ವಂಗೀ ನರ್ಮದಾಯಾಃ ಪ್ರಭಾವತಃ ।
ಪಿತ್ರಾ ಚ ಸೈಕದಾ ಕನ್ಯಾ ವಿವಾಹಾಯ ಪ್ರಜಲ್ಪಿತಾ ॥ ೫೦ ॥

---

ಪುಸ್ತಕವನ್ನು ಹಿಡಿದುಕೊಂಡು ಒಬ್ಬಂಟಿಗನಾಗಿ ಕಾಡಿನಲ್ಲಿ ಏಕೆ ಸಂಚರಿಸುತ್ತಿರುವೆ? ಅಲ್ಲಿ ಇಲ್ಲಿ ನೋಡುತ್ತಲಿರುವೆಯೇಕೆ? ಹೇಳು.

೪೬. ಬ್ರಾಹ್ಮಣನು ಹೇಳುತ್ತಾನೆ —ನಾನು ಕಾನ್ಯಕುಬ್ಜದಿಂದ ಬಂದಿರುವೆನು. ರಾಜಪುತ್ರಿಯು ಹನೂಮಂತೇಶ್ವರದ ನೀರಿನಲ್ಲಿ ಮೂಳೆಗಳನ್ನು ಹಾಕುವುದಕ್ಕಾಗಿ ನನ್ನನ್ನು ಕಳುಹಿಸಿದ್ದಾಳೆ.

೪೭. ರಾಜನು ಹೇಳುತ್ತಾನೆ:—ಅಯ್ಯಾ ಬ್ರಾಹ್ಮಣನೆ! ಹನೂಮಂತೇಶ್ವರದ ನೀರಿನಲ್ಲಿ ಅಸ್ಥಿಗಳನ್ನು ಏಕೆ ಹಾಕುವರು? ಆಶ್ಚರ್ಯಕರವಾದ ಈ ವಿಷಯವನ್ನು ನನಗೆ ಹೇಳು.

೪೮. ಸುಪರ್ವನ ಮಗನಾದ ಆ ಶತಬಾಹುವು ವಾಹನವನ್ನು ತ್ಯಜಿಸಿ ಭೂಮಿಯಲ್ಲಿಳಿದು ವಂದಿಸಿ ಕೈಮುಗಿದುಕೊಂಡು ಬ್ರಾಹ್ಮಣನಿಗೆ ತನ್ನ ಹಿಂದಿನ ಎಲ್ಲ ವೃತ್ತಾಂತವನ್ನು ಹೇಳಿದನು.

೪೯—೫೦. ಬ್ರಾಹ್ಮಣನು ಹೇಳುತ್ತಾನೆ:—ಕಾನ್ಯಕುಬ್ಜದಲ್ಲಿ ಶಿಖಂಡಿಯೆಂಬ ಪ್ರತಾಪಶಾಲಿಯಾದ ರಾಜನಿರುವನು. ಮಕ್ಕಳಿಲ್ಲದ ಈ ದೊರೆಗೆ ನರ್ಮದಾ ನದಿಯ ಪ್ರಭಾವದಿಂದ ಪೂರ್ವಜಾತಿಸ್ಮರಣೆಯುಳ್ಳವಳೂ, ಸುಂದರಿಯೂ ಆದ ಓರ್ವ ಕನ್ಯೆಯು ಜನಿಸಿದಳು. ಒಂದಾನೊಂದು ದಿನ ತಂದೆಯು ಆ ಕನ್ಯೆಯನ್ನು ಕುರಿತು ಮದುವೆಯ ವಿಷಯದಲ್ಲಿ ಹೀಗೆಂದನು.

ಅನಿತ್ಯೇ ಪುತ್ರಿ ಸಂಸಾರೇ ಕನ್ಯಾದಾನಂ ಕರೋಮ್ಯಹಂ ।
ಶ್ವಃ ಕೃತ್ಯಮದ್ಯ ಕುರ್ವೀತ ಪೂರ್ವಾಹ್ಣೇ ಚಾಽಪರಾಹ್ಣಿಕಂ ।
ನ ಹಿ ಪ್ರತೀಕ್ಷತೇ ಮೃತ್ಯುಃ ಕೃತಂ ಚಾಽಸ್ಯ ನ ಚಾಕೃತಂ ॥ ೫೧ ॥
ಕನ್ಯೋವಾಚ :—
ಇಚ್ಛೇಯಂ ಯತ್ರ ಕಾಲೇ ಹಿ ತತ್ರ ದೇಯಾ ತ್ವಯಾ ಪಿತುಃ ।
ಪುತ್ರೀ ವಾಕ್ಯಾದಸೌ ರಾಜಾ ವಿಸ್ಮಿತೋ ವಾಕ್ಯಮಬ್ರವೀತ್ ॥ ೫೨ ॥
ಶಿಖಂಡ್ಯುವಾಚ :—
ಕಥ್ಯತಾಂ ಮೇ ಮಹಾಭಾಗೇ ಸಾಶ್ಚರ್ಯಂ ಭಾಷಿತಂ ತ್ವಯಾ ।
ಪಿತುರ್ವಾಕ್ಯೇನ ಸಾ ಬಾಲಾ ಉತ್ತಮಾ ಹ್ಯಾಗತಾಂತಿಕಂ ॥ ೫೩ ॥
ಕಥಯಾಮಾಸ ಯದ್ವೃತ್ತಂ ಹನೂಮಂತೇಶ್ವರೇ ನೃಪ ।
ಕಲಾಪಿನೀ ಹ್ಯಹಂ ತಾತ ಯುತಾ ಭರ್ತ್ರಾಽವಸಂ ತದಾ ॥ ೫೪ ॥
ರೇವೌರ್ವ್ಯಾಸಂಗಮಾಂತಿಸ್ಥಾ ರೇವಾಯಾ ದಕ್ಷಿಣೇ ತಟೇ ।
ಹನೂಮಂತವನೇ ಪುಣ್ಯೇ ಚಿಕ್ರೀಡಾಽಹಂ ಯದೃಚ್ಛಯಾ ॥ ೫೫ ॥
ಭರ್ತ್ರಾಯುಕ್ತಾ ಚ ಸಂಸುಪ್ತಾ ರಜನ್ಯಾಂ ಸರಲೇ ನಗೇ ।
ಆಗತಾ ಲುಬ್ಧಕಾಸ್ತತ್ರ ಕ್ಷುಧಾರ್ತಾ ವನಮುತ್ತಮಂ ॥ ೫೬ ॥

---

೫೧. ಮಗು! ನಾನು ಕನ್ಯಾದಾನವನ್ನು ಮಾಡುವೆನು. ಅನಿತ್ಯವಾದ ಈ ಸಂಸಾರದಲ್ಲಿ ನಾಳೆ ಮಾಡುತಕ್ಕುದನ್ನು ಈ ದಿನ ಮಾಡಬೇಕು. ಅಪರಾಹ್ಣದಲ್ಲಿ ಮಾಡತಕ್ಕುದನ್ನು ಪೂರ್ವಾಹ್ಣದಲ್ಲಿಯೇ ಮಾಡಬೇಕು. ಮೃತ್ಯುವು ಇವನು ಕೆಲಸವನ್ನು ಮಾಡಿರುವುದನ್ನೂ, ಮಾಡದಿರುವುದನ್ನೂ ನಿರೀಕ್ಷಿಸುವುದಿಲ್ಲ.

೫೨. ಕನ್ಯೆಯು ಹೇಳುತ್ತಾಳೆ —"ನಾನು ಯಾವಾಗ ಮದುವೆಮಾಡ ಬೇಕೆಂದು ಹೇಳುವೆನೊ ಆಗ ಮಾಡು." ಮಗಳ ಈ ಮಾತಿನಿಂದ ಆಶ್ಚರ್ಯ ಗೊಂಡ ಈ ರಾಜನು ಇಂತೆಂದನು.

೫೩–೫೪. ಶಿಖಂಡಿಯು ಹೇಳುತ್ತಾನೆ :—"ಮಗಳೆ! ನೀನು ಆಶ್ಚರ್ಯದ ಮಾತನ್ನಾಡಿರುವೆ. ನನಗೆ ಅದನ್ನು ಹೇಳು." ತಂದೆಯ ಮಾತನ್ನು ಕೇಳಿ ಉತ್ತಮಳಾದ ಆ ಬಾಲಿಕೆಯು ಹತ್ತಿರ ಬಂದು ನಡೆದ ವೃತ್ತಾಂತವನ್ನು ಹೇಳಿ ದಳು. "ತಂದೆಯೆ! ಪೂರ್ವಜನ್ಮದಲ್ಲಿ ನವಿಲಾಗಿದ್ದ ನಾನು ಹನುಮಂತೇಶ್ವರ ದಲ್ಲ ಪತಿಯೊಡನೆ ವಾಸಮಾಡಿದೆನು.

೫೫–೫೬. ರೇವೋರ್ವೀಸಂಗಮದಲ್ಲಿರುವ ನಾನು ನರ್ಮದಾನದಿಯ ದಕ್ಷಿಣದಡದಲ್ಲಿರುವ ಪುಣ್ಯಕರವಾದ ಹನುಮಂತವನದಲ್ಲಿ ಸ್ವೇಚ್ಛೆಯಾಗಿ ವಿಹರಿ ಸುತ್ತಿದ್ದೆನು. ರಾತ್ರಿ ಸರಳಪರ್ವತದಲ್ಲಿ ಪತಿಯೊಡನೆ ಮಲಗಿದೆನು. ಆಗ ಹಸಿವು ಗೊಂಡ ಬೇಡರು ಉತ್ತಮವಾದ ಆ ಕಾಡಿಗೆ ಬಂದರು.

**ಭರ್ತೃಯೋಗಯುತಾ ಪಾಪೈರ್ದೃಷ್ಟ್ವಾಽಹಂ ವಧಚಿಂತಕೈಃ ।**
**ಪಾಶಬಂಧಂ ಸಮಾದಾಯ ಬದ್ಧಾಽಹಂ ಸ್ವಾಮಿನಾ ಸಹ ॥ ೫೭ ॥**
**ಗ್ರೀವಾಂತೇ ಮೋಟಯಾಮಾಸುಃ ಪಿಚ್ಛಾಚ್ಛೋಟನಕಂ ಕೃತಂ ।**
**ಹುತಾಶನಮುಖೇ ತೈಸ್ತು ಸಹ ಕಾಂತೇನ ಲುಬ್ಧಕೈಃ ॥ ೫೮ ॥**
**ಪರಿಭಜ್ಯಾವಯೋರ್ಮಾಂಸಂ ಭಕ್ಷಯಿತ್ವಾ ಯಥೇಷ್ಟತಃ ।**
**ಸುಪ್ತಾಃ ಸ್ವಸ್ಥೇಂದ್ರಿಯಾ ರಾತ್ರೌ ಸಾ ಗತಾ ಶರ್ವರೀ ಕ್ಷಯಂ ॥ ೫೯ ॥**
**ಪ್ರಭಾತೇ ಮಾಂಸಶೇಷಂ ಚ ಜಂಬುಕೈರ್ಗೃಧ್ರಘಾತಿಭಿಃ ।**
**ಮಚ್ಛರೀರೋದ್ಭವಂ ಚಾಽಸ್ಥಿ ಸ್ನಾಯುಮಾಂಸೇನ ಚಾವೃತಂ ॥ ೬೦ ॥**
**ಗೃಹೀತಂ ಘಾತಿನೈಕೇನ ಚಾಕಾಶಾತ್ಪತಿತಂ ತದಾ ।**
**ತಂ ಮಾಂಸಭಕ್ಷಣಂ ದೃಷ್ಟ್ವಾ ಪರೇ ಪಕ್ಷಿಣ ಆಗತಾಃ ॥ ೬೧ ॥**
**ದೃಷ್ಟ್ವಾ ಪಕ್ಷಿಸಮೂಹಂತು ಅಸ್ಥಿಖಂಡಂ ವ್ಯಸರ್ಜಯತ್ ।**
**ವಿಹಗಾನಾಂ ಸಮುಸ್ತಾನಾಂ ಧಾವತಾಂ ಚೈವ ಪಶ್ಯತಾಂ ॥ ೬೨ ॥**
**ಪತಿತಂ ನರ್ಮದಾತೋಯೇ ಹನೂಮಂತೇಶ್ವರೇ ನೃಪ ।**
**ಮದೀಯಮಸ್ಥಿಖಂಡಂ ಚ ಪತಿತಂ ನರ್ಮದಾಜಲೇ ॥ ೬೩ ॥**
**ತಸ್ಯ ತೀರ್ಥಸ್ಯ ಪುಣ್ಯೇನ ಜಾತಾಽಹಂ ಪುತ್ರಿಕಾ ತವ ।**
**ಭೂಪಕನ್ಯಾ ತ್ವಹಂ ಜಾತಾ ಪೂರ್ಣಚಂದ್ರನಿಭಾನನಾ ॥ ೬೪ ॥**

---

೫೭. ವಧೆಯನ್ನೇ ಆಲೋಚಿಸುತ್ತಿರುವ ಪಾಪಿಗಳಾದ ಅವರು ಪ್ರಿಯ ನೊಡನೆ ಇರುವ ನನ್ನನ್ನು ನೋಡಿ ಹಗ್ಗವನ್ನು ತೆಗೆದುಕೊಂಡುಬಂದು ಆತನೊಡನೆ ನನ್ನನ್ನು ಕಟ್ಟಿದರು.

೫೮–೬೦. ಅವರು ನಮ್ಮ ಕುತ್ತಿಗೆಯನ್ನು ತಿರುವಿ ರೆಕ್ಕೆಗಳನ್ನು ಕಿತ್ತು ಬೆಂಕಿಯಲ್ಲಿ ಹುರಿದು ಸ್ವೇಚ್ಛೆಯಾಗಿ ಮಾಂಸವನ್ನು ತಿಂದು ರಾತ್ರಿಯಲ್ಲಿ ಸುಖ ವಾಗಿ ನಿದ್ರಿಸಿದರು. ಬೆಳಗಾಗಲು ಉಳಿದ ನನ್ನ ಶರೀರದ ಮಾಂಸವನ್ನು ಗೃಧ್ರ ಘಾತಿಗಳಾದ ನರಿಗಳು ಸುತ್ತುವರಿದುವು.

೬೧. ಆಗ ಒಂದು ಘಾತುಕಪಕ್ಷಿಯು ಆಕಾಶದಿಂದ ಇಳಿದು ಆ ಮಾಂಸ ವನ್ನು ತೆಗೆದುಕೊಳ್ಳಲು ಬಂದಿತು. ಆ ಮಾಂಸಭಕ್ಷಣವನ್ನು ನೋಡಿ ಇತರ ಪಕ್ಷಿಗಳೂ ಬಂದುವು.

೬೨. ಆಕಾಶದಿಂದ ಇಳಿದ ಪಕ್ಷಿಯು ಓಡುತ್ತಿರುವ ಸಕಲಪಕ್ಷಿಗಳೂ ನೋಡುತ್ತಿರುವಾಗಲೆ ಆ ಅಸ್ಥಿಶಕಲವನ್ನು ಕೆಳಗೆ ಕೆಡವಿಬಿಟ್ಟಿತು.

೬೩. ಆಗ ಆ ನನ್ನ ಮೂಳೆಯ ತುಂಡು ಹನುಮಂತೇಶ್ವರದಲ್ಲಿರುವ ನರ್ಮದಾನದಿಯ ನೀರಿನಲ್ಲಿ ಬಿದ್ದಿತು.

೬೪–೬೬. ನಾನು ಆ ತೀರ್ಥದ ಪುಣ್ಯದಿಂದ ನಿನ್ನ ಮನೆಯಲ್ಲಿ ಸುಂದರಿಯೂ,

ಜಾತಿಸ್ಮರಾ ನರೇಂದ್ರಸ್ಯ ಸಂಜಾತಾ ಭವತಃ ಕುಲೇ ।
ತಸ್ಮಾದ್ವಿವಾಹಂ ನೇಚ್ಛಾಮಿ ಮಮ ಭರ್ತಾ ನೃಪೋತ್ತಮ ॥ ೬೫ ॥
ವಿಷಮೇ ವರ್ತತೇಽದ್ಯಾಪಿ ಶಕುಂತಮೃಗಜಾತಿಷು ।
ತಸ್ಯಾಸ್ಥಿಶೇಷಂ ರಾಜೇಂದ್ರ ತಸ್ಮಿಂಸ್ತೀರ್ಥೇ ಭವಿಷ್ಯತಿ ॥ ೬೬ ॥
ತತ್ಕ್ಷೇಪಣಾರ್ಥಂ ವೈ ತಾತ ಪ್ರೇಷಯಾಽದ್ಯ ದ್ವಿಜೋತ್ತಮಂ ।
ಏತತ್ತೇ ಸರ್ವಮಾಖ್ಯಾತಂ ಕಾರಣಂ ನೃಪಸತ್ತಮ ॥ ೬೭ ॥
ಮದ್ಭರ್ತಾ ವಿಷಮೇ ಸ್ಥಾನೇ ಶಕುಂತಮೃಗಜಾತಿಷು ।
ಯದಿ ಪ್ರೇಷಯಸೇ ತಾತ ಕಂಚಿತ್ತ್ವಂ ನರ್ಮದಾತಟೇ ॥ ೬೮ ॥
ತಸ್ಯಾಽಹಂ ಕಥಯಿಷ್ಯಾಮಿ ಸ್ಥಾನೈಶ್ಚಿಹ್ನೈಶ್ಚ ಲಕ್ಷಿತಂ ।
ಶಿಖಂಡಿನ್ಯಾಽಪ್ಯಹಂ ತತ್ರ ಹ್ಯಾಹೂತೋ ಹ್ಯವನೀಪತೇ ॥ ೬೯ ॥
ದಾಸ್ಯಾಮಿ ವಿಂಶತಿಗ್ರಾಮಾನ್ಗಚ್ಛ ತ್ವಂ ನರ್ಮದಾತಟೇ ।
ಪ್ರೇಷಣಂ ಮೇ ಪ್ರತಿಜ್ಞಾತಮಲಕ್ಷ್ಮ್ಯಾ ಪೀಡಿತೇನ ತು ॥ ೭೦ ॥

ಕನ್ಯೋವಾಚ :—

ಗಚ್ಛ ತ್ವಂ ನರ್ಮದಾಂ ಪುಣ್ಯಾಂ ಸರ್ವಪಾಪಕ್ಷಯಂಕರೀಂ ।
ಆಗ್ನೇಯಾಂ ಸೋಮನಾಥಸ್ಯ ಹನೂಮಂತೇಶ್ವರೋ ಪರಃ ॥ ೭೧ ॥

---

ಪೂರ್ವಜಾತಿಯ ಸ್ಮರಣೆಯುಳ್ಳವಳೂ ಆದ ರಾಜಪುತ್ರಿಯಾಗಿ ಜನಿಸಿದೆನು. ಆದುದರಿಂದ ನಾನು ಮದುವೆಮಾಡಿಕೊಳ್ಳಲು ಬಯಸುವುದಿಲ್ಲ. ನನ್ನ ಪತಿಯು ಈಗಲೂ ಪಕ್ಷಿಜಾತಿಯಲ್ಲಿ ಕಷ್ಟವನ್ನನುಭವಿಸುತ್ತಿರುವನು. ಈಗ ಅವನ ಅಸ್ಥಿಶೇಷವು ಆ ಹನುಮಂತತೀರ್ಥದಲ್ಲಿ ಬೀಳಬೇಕು.

೬೭. ಅಪ್ಪ! ಈಗ ನನ್ನ ಪ್ರಿಯನ ಅಸ್ಥಿಯನ್ನು ಅಲ್ಲಿ ಹಾಕುವುದಕ್ಕಾಗಿ ಒಬ್ಬ ಬ್ರಾಹ್ಮಣನನ್ನು ಕಳುಹಿಸು. ನೃಪವರ್ಯ! ನಿನಗೆ ಈ ಕಾರಣವನ್ನೆಲ್ಲ ಹೇಳಿರುವೆನು.

೬೮–೬೯. ನನ್ನ ಪ್ರಿಯನು ಮೃಗ, ಪಕ್ಷಿಗಳ ಜಾತಿಯಲ್ಲಿ ಕಷ್ಟಪಡುತ್ತಿರುವನು. ನೀನು ನರ್ಮದಾನದಿಯ ದಡಕ್ಕೆ ಯಾರನ್ನಾದರೂ ಕಳುಹಿಸುವುದಾದರೆ ಅವನಿಗೆ ನಾನು ನನ್ನ ಪತಿಯಿರುವ ಸ್ಥಳವನ್ನೂ, ಚಿಹ್ನೆಗಳನ್ನೂ ಹೇಳುವೆನು.'' ದೊರೆಯೆ! ಕನ್ಯಾಪಿತನಾದ ಆ ಶಿಖಂಡಿಯು ನನ್ನನ್ನು ಕರೆಯಿಸಿದನು.

೭೦. ''ಇಪ್ಪತ್ತು ಗ್ರಾಮಗಳನ್ನು ಕೊಡುವೆನು. ನೀನು ಆ ನರ್ಮದಾ ತೀರಕ್ಕೆ ಹೋಗು'' ಎಂದನು. ಬಡವನಾದ ನಾನು ಅದನ್ನು ಒಪ್ಪಿಕೊಂಡೆನು.

೭೧. ಕನ್ಯೆಯು ಹೇಳುತ್ತಾಳೆ.—''ದ್ವಿಜನೆ! ನೀನು ಪುಣ್ಯಕರವೂ, ಸಕಲ ಪಾಪಗಳನ್ನು ಪರಿಹರಿಸುವುದೂ ಆದ ನರ್ಮದಾನದಿಗೆ ಹೋಗು. ಸೋಮನಾಥನ ಆಗ್ನೇಯದಿಕ್ಕಿನಲ್ಲಿ ಉತ್ತಮನಾದ ಹನುಮಂತೇಶ್ವರನಿರುವನು.

ಅರ್ಧಕ್ರೋಶೇನ ರೇವಾಯಾ ವಿಸ್ತೀರ್ಣೋ ವಟಪಾದಪಃ ।
ಕರಂಜಃ ಕಟಹಶ್ಚೈವ ಸನ್ನಿಧಾನೇ ವಟಸ್ಯಚ ॥ ೭೨ ॥
ನ್ಯಗ್ರೋಧಮೂಲಸಾನ್ನಿಧ್ಯೇ ಸೂಕ್ಷ್ಮಾನ್ಯಸ್ಥೀನಿ ದ್ರಕ್ಷ್ಯಸಿ ।
ಸಮೂಹ್ಯ ತಾನಿ ಸಂಗೃಹ್ಯ ಗಚ್ಛ ರೇವಾಂ ದ್ವಿಜೋತ್ತಮ ॥ ೭೩ ॥
ಆಶ್ವಿನಸ್ಯಾಸಿತೇ ಪಕ್ಷೇ ತ್ರಿಪುರಾರೇಸ್ತು ವೈ ತಿಥೌ ।
ಸ್ನಾಪ್ಯ ತ್ರಿಶೂಲಿನಂ ಭಕ್ತ್ಯಾ ರಾತ್ರೌ ತ್ವಂ ಕುರು ಜಾಗರಂ ॥ ೭೪ ॥
ಕ್ಷಿಪೇಃ ಪ್ರಭಾತೇ ತಾನಿ ತ್ವಂ ನಾಭಿಮಾತ್ರಜಲೇ ಸ್ಥಿತಃ ।
ಇತ್ಯುಚ್ಚಾರ್ಯ ದ್ವಿಜಶ್ರೇಷ್ಠ ವಿಮುಕ್ತಸ್ಯ ಜಾಯತಾಂ ॥ ೭೫ ॥
ಕ್ಷಿಪ್ತ್ವಾಽಸ್ಥೀನಿ ಪುನಃ ಸ್ನಾನಂ ಕರ್ತವ್ಯಂ ತ್ವಘನಾಶನಂ ।
ಏವಂ ಕೃತೇತು ರಾಜೇಂದ್ರ ಗತಿಸ್ತಸ್ಯ ಭವಿಷ್ಯತಿ ॥ ೭೬ ॥
ಕಥಿತಂ ಕನ್ಯಯಾ ಯಚ್ಚ ತತ್ಸರ್ವಂ ಪುಸ್ತಿಕಾಕೃತಂ ।
ಆಗತೋಽಹಂ ನೃಪಶ್ರೇಷ್ಠ ತೀರ್ಥೇಽತ್ರ ದುರಿತಾಪಹೇ ॥ ೭೭ ॥
ಸೋಽಭಿಜ್ಞಾನಂ ತತೋ ದೃಷ್ಟ್ವಾ ನೀತ್ವಾಽಸ್ಥೀನಿ ನರೇಶ್ವರ ।
ಪೂರ್ವೋಕ್ತೇನ ವಿಧಾನೇನ ಪ್ರಾಕ್ಷಿಪನ್ನರ್ಮದಾಂಭಸಿ ॥ ೭೮ ॥

---

೭೨. ಆ ನರ್ಮದಾನದಿಗೆ ಒಂದು ಮೈಲಿಯ ದೂರದಲ್ಲಿ ವಿಶಾಲವಾದ ಆಲದಮರವಿದೆ. ಅದರ ಹತ್ತಿರ ಕರಂಜ ಮತ್ತು ಕಟಹ ವೃಕ್ಷಗಳೂ ಇವೆ.

೭೩. ಆ ಆಲದಮರದ ಬುಡದ ಹತ್ತಿರ ಸಣ್ಣ ಸಣ್ಣ ಮೂಳೆಗಳನ್ನು ನೋಡುವೆ. ಅವುಗಳನ್ನು ಒಟ್ಟುಕೂಡಿಸಿ ತೆಗೆದುಕೊಂಡು ನರ್ಮದಾನದಿಗೆ ಹೋಗು.

೭೪. ಆಶ್ವಿನಬಹುಳ ಅಮಾವಾಸ್ಯೆಯ ದಿನ ನೀನು ಭಕ್ತಿಯಿಂದ ಶಿವನಿಗೆ ಅಭಿಷೇಕಮಾಡಿ ರಾತ್ರಿ ಜಾಗರಣೆ ಮಾಡು.

೭೫. ಬೆಳಗ್ಗೆ ನಾಭಿಪ್ರಮಾಣದ ನೀರಿನಲ್ಲಿ ನಿಂತು ಮೃತನಿಗೆ ಮುಕ್ತಿಯಾಗಲೆಂದು ಹೇಳಿ ಆ ಅಸ್ಥಿಗಳನ್ನು ನೀರಿನಲ್ಲಿ ಹಾಕು.

೭೬. ಅಸ್ಥಿಗಳನ್ನು ನೀರಿನಲ್ಲಿ ಹಾಕಿದಮೇಲೆ ಪಾಪವನ್ನು ಪರಿಹರಿಸುವುದಕ್ಕಾಗಿ ಸ್ನಾನಮಾಡು.'' ದೊರೆಯೇ! ಇವನು ಹೀಗೆ ಮಾಡಿದರೆ ಆ ನನ್ನ ಪ್ರಿಯನಿಗೆ ಉತ್ತಮಗತಿಯಾಗುವುದು ಎಂದು ಹೇಳಿದಳು.

೭೭. ನಾನು ಆ ಕನ್ಯೆಯು ಹೇಳಿದ್ದನ್ನೆಲ್ಲ ಪುಸ್ತಕದಲ್ಲಿ ಬರೆದುಕೊಂಡು ಪಾಪವನ್ನು ನಿವಾರಿಸುವ ಈ ತೀರ್ಥಕ್ಕೆ ಬಂದೆನು ಎಂದನು.

೭೮. ಅನಂತರ ಆ ಬ್ರಾಹ್ಮಣನು ಗುರುತನ್ನು ನೋಡಿ ಅಸ್ಥಿಗಳನ್ನು ತೆಗೆದುಕೊಂಡುಹೋಗಿ ಹಿಂದೆ ಹೇಳಿದ ಕ್ರಮದಿಂದ ನರ್ಮದಾನದಿಯ ನೀರಿನಲ್ಲಿ ಹಾಕಿದನು.

ಪುಷ್ಪವೃಷ್ಟಿಃ ಪಪಾತಾಶು ಸಾಧುಸಾಧ್ವಿತಿ ಪಾಂಡವ ।
ವಿಮಾನಂ ಚ ತತೋ ದಿವ್ಯಮಾಗತಂ ಬರ್ಹಿಣಸ್ತದಾ ॥ ೭೯ ॥
ದಿವ್ಯರೂಪಧರೋ ಭೂತ್ವಾ ಗತೋ ನಾಕೇ ಕಲಾಪವಾನ್ ।
ಏವಂ ತು ಪ್ರತ್ಯಯಂ ದೃಷ್ಟ್ವಾ ಹನೂಮಂತೇಶ್ವರೇ ನೃಪ ॥ ೮೦ ॥
ಚಕಾರಾಽನಶನಂ ವಿಪ್ರಃ ಶತಬಾಹುಶ್ಚ ಭೂಪತಿಃ ।
ಶೋಷಯಾಮಾಸತುಸ್ತೌ ಸ್ವಮಿಾಶ್ವರಾರಾಧನೇ ರತೌ ॥ ೮೧ ॥
ಧ್ಯಾಯಂತೌ ತಸ್ಥತುರ್ದೇವಂ ಶತಬಾಹುದ್ವಿಜೋತ್ತಮೌ ।
ಮಾಸಾರ್ಧೇನ ಮೃತೋ ರಾಜಾ ಶತಬಾಹುರ್ಮಹಾಮುನಾಃ ॥ ೮೨ ॥
ಕಿಂಕಿಣೀಜಾಲಶೋಭಾಢ್ಯಂ ವಿಮಾನಂ ತತ್ರ ಚಾಗತಂ ।
ಸಾಧು ಸಾಧು ನೃಪಶ್ರೇಷ್ಠ ವಿಮಾನಾರೋಹಣಂ ಕುರು ॥ ೮೩ ॥

ಶತಬಾಹುರುವಾಚ :—

ನ ಯಾಮಿ ಸ್ವರ್ಗಮಾರ್ಗಾಗ್ರಂ ವಿಪ್ರೋ ಯಾವನ್ನ ಸಂಸ್ಥಿತಃ
ಉಪದೇಶಪ್ರದೋ ಮಹ್ಯಂ ಗುರುರೂಪೀ ದ್ವಿಜೋತ್ತಮಃ ॥ ೮೪ ॥

ಅಪ್ಸರಸ ಊಚುಃ :—

ಲೋಭಾವೃತೋ ಹ್ಯಯಂ ವಿಪ್ರೋ ಲೋಭಾತ್ಪಾಪಸ್ಯ ಸಂಗ್ರಹಃ ।
ಹನೂಮಂತೇಶ್ವರೇ ರಾಜನ್ಯೇ ಮೃತಾಃ ಸತ್ವಮಾಸ್ಥಿತಾಃ ॥ ೮೫ ॥
ತೇ ಯಾಂತಿ ಶಾಂಕರೇ ಲೋಕೇ ಸರ್ವಪಾಪಕ್ಷಯಂಕರೇ ।
ನೈವ ಪಾಪಕ್ಷಯಶ್ಚಾಽಸ್ಯ ಬ್ರಾಹ್ಮಣಸ್ಯ ನರೇಶ್ವರ ॥ ೮೬ ॥

---

೭೯. ಯುಧಿಷ್ಠಿರ! ಕೂಡಲೆ "ಒಳ್ಳೆಯದು. ಒಳ್ಳೆಯದು" ಎಂದು ಧ್ವನಿಯಾಗಿ ಹೂಮಳೆ ಸುರಿಯಿತು. ಆ ನವಿಲಿಗೆ ದಿವ್ಯವಿಮಾನವು ಬಂದಿತು.

೮೦–೮೧. ಅದು ದಿವ್ಯರೂಪವನ್ನು ಧರಿಸಿ ಸ್ವರ್ಗಕ್ಕೆ ತೆರಳಿತು. ಆ ಬ್ರಾಹ್ಮಣನೂ, ಶತಬಾಹುರಾಜನೂ ಹನುಮಂತೇಶ್ವರದಲ್ಲಿ ನಡೆದ ಆ ಅದ್ಭುತವನ್ನು ನೋಡಿ ಶಿವನ ಪೂಜೆಯಲ್ಲಿ ನಿರತರಾಗಿ ತಮ್ಮ ಶರೀರಗಳನ್ನು ಒಣಗಿಸಿದರು.

೮೨. ಆ ಶತಬಾಹು ಮತ್ತು ಆ ಬ್ರಾಹ್ಮಣನು ಶಂಕರನನ್ನು ಧ್ಯಾನಿಸುತ್ತಿದ್ದರು. ಹದಿನೈದು ದಿನಗಳಲ್ಲಿ ಶತಬಾಹುವು ಮೃತನಾದನು.

೮೩. ಘಂಟೆಗಳಿಂದ ಕೂಡಿದ ದೇವವಿಮಾನವು ಅಲ್ಲಿಗೆ ಬಂದಿತು. ಅಪ್ಸರೆಯರು, "ನೃಪವರ್ಯನೆ! ಒಳ್ಳೆಯದು. ವಿಮಾನವನ್ನೇರು" ಎಂದರು.

೮೪. ಶತಬಾಹುವು ಹೇಳುತ್ತಾನೆ.— ನಾನು ನನಗೆ ಉಪದೇಶಮಾಡಿ ಗುರುವಿನಂತಿರುವ ಬ್ರಾಹ್ಮಣನು ಮುಡಿಯುವವರೆಗೆ ಮುಂದಾಗಿ ವಿಮಾನವನ್ನೇರುವುದಿಲ್ಲ.

೮೫–೮೬. ಅಪ್ಸರೆಯರು ಹೇಳುತ್ತಾರೆ:—" ಈ ಬ್ರಾಹ್ಮಣನು ಆಶೆಯುಳ್ಳವನು. ಆಶೆಯಿಂದ ಪಾಪವು ಸಂಭವಿಸುವುದು. ದೊರೆಯೆ! ಹನುಮಂತೇಶ್ವರದಲ್ಲಿ

ಗೃಹಂ ಚ ಗೃಹಿಣೀಚಿತ್ತೇ ಬ್ರಾಹ್ಮಣಸ್ಯ ಪ್ರವರ್ತತೇ ।
ಶತಬಾಹುಸ್ತತೋ ವಿಪ್ರಮುವಾಚ ವಿನಯಾನ್ವಿತಃ ॥ ೮೭ ॥
ತ್ಯಜ ಮೂಲಮನರ್ಥಸ್ಯ ಲೋಭಮೇನಂ ದ್ವಿಜೋತ್ತಮ ।
ಇತ್ಯುಕ್ತ್ವಾ ಸ್ವರ್ಯಯೌ ರಾಜಾ ಸ್ವರ್ಗಕನ್ಯಾಸಮಾವೃತಃ ॥ ೮೮ ॥
ದಿನೈಃ ಕೈಶ್ಚಿದ್ಗತೋ ವಿಪ್ರಃ ಸ್ವರ್ಗಂ ವೈತಾಲಿಕೈರ್ವೃತಃ ।
ಬರ್ಹೀ ಚ ಕಾಶೀ ರಾಜಸ್ಯ ಪುತ್ರಸ್ತೀರ್ಥಪ್ರಭಾವತಃ ॥ ೮೯ ॥
ಆತ್ಮಾನಂ ಕನ್ಯಯಾ ದತ್ತಂ ಪೂರ್ವಜನ್ಮ ವ್ಯಚಿಂತಯನ್ ।
ಸಾ ಚ ತಂ ಪ್ರೌಢಮಾಲೋಕ್ಯ ಪಿತುರಾಜ್ಞಾಮವಾಪ್ಯ ಚ ।
ಸ್ವಯಂವರೇ ಸ್ವಭರ್ತಾರಂ ಲೇಭೇ ಸಾಧ್ವೀ ನೃಪಾತ್ಮಜಂ ॥ ೯೦ ॥

ಶ್ರೀ ಮಾರ್ಕಂಡೇಯ ಉವಾಚ :—

ಏತದ್ವೃತ್ತಾಂತಮಭವತ್ತಸ್ಮಿಂಸ್ತೀರ್ಥೇ ನೃಪೋತ್ತಮ ।
ಏತಸ್ಮಾತ್ಕಾರಣಾನ್ಮೇಧ್ಯಂ ತೀರ್ಥಮೇತತ್ಸದಾ ನೃಪ ॥ ೯೧ ॥
ಅಷ್ಟಮ್ಯಾಂ ವಾ ಚತುರ್ದಶ್ಯಾಂ ಸರ್ವಕಾಲಂ ನರೇಶ್ವರ ।
ವಿಶೇಷಾಚ್ಛಾಶ್ವಿನೇ ಮಾಸಿ ಕೃಷ್ಣಪಕ್ಷೇ ಚತುರ್ದಶೀಂ ॥ ೯೨ ॥

---

ಸಾತ್ವಿಕಭಾವದಿಂದ ಮೃತರಾದವರು ಮಾತ್ರ ಸಕಲ ಪಾಪಗಳನ್ನು ನೀಗಿಸುವ ಶಿವಲೋಕಕ್ಕೆ ಹೋಗುವರು. ಈ ಬ್ರಾಹ್ಮಣನ ಪಾಪವು ಕ್ಷಯಿಸಲಿಲ್ಲ.

೮೭. ಇವನು ಮನಸ್ಸಿನಲ್ಲಿ ಮನೆಯನ್ನೂ, ಪತ್ನಿಯನ್ನೂ ಆಲೋಚಿಸುತ್ತಿರುವನು.'' ಅವರು ಹೀಗೆ ಹೇಳಲು, ಶತಬಾಹುವು ವಿನಯದಿಂದ ಬ್ರಾಹ್ಮಣನನ್ನು ಕುರಿತು ಇಂತೆಂದನು.

೮೮. ''ದ್ವಿಜವರ್ಯನೆ! ಅನರ್ಥಕ್ಕೆ ಕಾರಣವಾದ ಈ ಆಶೆಯನ್ನು ತ್ಯಜಿಸು.'' ದೊರೆಯು ಹೀಗೆ ಹೇಳಿ ಅಪ್ಸರೆಯರೊಡನೆ ಸ್ವರ್ಗಕ್ಕೆ ತೆರಳಿದನು.

೮೯–೯೦. ಆ ಬ್ರಾಹಣನೂ ಕೆಲವು ದಿನಗಳಲ್ಲಿಯೆ ಸ್ತುತಿಪಾಠಕರೊಡನೆ ಸ್ವರ್ಗಕ್ಕೆ ಹೋದನು. ನವಿಲೂ ಕನ್ಯೆಯು ಕೊಟ್ಟ ಪುನರ್ಜನ್ಮವನ್ನು ಚಿಂತಿಸುತ್ತ ತೀರ್ಥದ ಪ್ರಭಾವದಿಂದ ಕಾಶಿರಾಜನ ಪುತ್ರನಾಯಿತು. ಅವಳೂ ಅವನು ಯುವಕನಾದುದನ್ನು ನೋಡಿ ತಂದೆಯ ಆಜ್ಞೆಯನ್ನು ಪಡೆದು ಸ್ವಯಂವರದಲ್ಲಿ ಅವನನ್ನು ಪತಿಯನ್ನಾಗಿ ವರಿಸಿದಳು.

೯೧. ಶ್ರೀ ಮಾರ್ಕಂಡೇಯನು ಹೇಳುತ್ತಾನೆ —ಯುಧಿಷ್ಠಿರ! ಆ ತೀರ್ಥದಲ್ಲಿ ಈ ಅದ್ಭುತವೃತ್ತಾಂತವು ನಡೆಯಿತು. ಈ ಕಾರಣದಿಂದ ಆ ತೀರ್ಥವು ಯಾವಾಗಲೂ ಪವಿತ್ರವಾಯಿತು.

೯೨–೯೪. ದೊರೆಯೆ! ಅಷ್ಟಮಿ, ಚತುರ್ದಶೀ ದಿನಗಳಲ್ಲಿಯೂ, ವಿಶೇಷವಾಗಿ ಆಶ್ವಿನ ಕೃಷ್ಣಚತುರ್ದಶೀ ದಿನದಲ್ಲಿಯೂ ಭಕ್ತಿಯಿಂದ ಮಧು, ಕ್ಷೀರ,

ಸ್ನಾಪಯೇದೀಶ್ವರಂ ಭಕ್ತ್ಯಾ ಕ್ಷೌದ್ರಕ್ಷೀರೇಣ ಸರ್ಪಿಷಾ ।
ದಧ್ನಾಚ ಖಂಡಯುಕ್ತೇನ ಕುಶತೋಯೇನ ವೈ ಪುನಃ ॥ ೯೩ ॥
ಶ್ರೀಖಂಡೇನ ಸುಗಂಧೇನ ಗುಂಠಯೇಚ್ಚ ಮಹೇಶ್ವರಂ ।
ತತಃ ಸುಗಂಧಪುಷ್ಪೈಶ್ಚ ಬಿಲ್ವಪತ್ರೈಶ್ಚ ಪೂಜಯೇತ್ ॥ ೯೪ ॥
ಮುಚಕುಂದೇನ ಕುಂದೇನ ಜಾತೀಕಾಶಕುಶೋದ್ಭವೈಃ ।
ಉನ್ಮತ್ತಮುನಿಪುಷ್ಪೌಘೈಃ ಪುಷ್ಪೈಸ್ತತ್ಕಾಲಸಂಭವೈಃ ॥ ೯೫ ॥
ಅರ್ಚಯೇತ್ಪರಯಾ ಭಕ್ತ್ಯಾ ಹನೂಮಂತೇಶ್ವರಂ ಶಿವಂ ।
ಘೃತೇನ ದಾಪಯೇದ್ದೀಪಂ ತೈಲೇನ ತದಭಾವತಃ ॥ ೯೬ ॥
ಶ್ರಾದ್ಧಂ ಚ ಕಾರಯೇತ್ತತ್ರ ಬ್ರಾಹ್ಮಣೈರ್ವೇದಪಾರಗೈಃ ।
ಸರ್ವಲಕ್ಷಣಸಂಪೂರ್ಣೈಃ ಕುಲೀನೈರ್ಗೃಹಪಾಲಕೈಃ ॥ ೯೭ ॥
ತರ್ಪಯೇದ್ಬ್ರಾಹ್ಮಣಾನ್ಭಕ್ತ್ಯಾ ವಸನಾಽನ್ನಹಿರಣ್ಯತಃ ।
ನರಕಸ್ಥಾ ದಿವಂ ಯಾಂತು ಪ್ರೋಚ್ಯೇತಿ ಪ್ರಣಮೇದ್ದ್ವಿಜಾನ್ ॥ ೯೮ ॥
ಪತಿತಾನ್ವರ್ಜಯೇದ್ವಿಪ್ರಾನ್ವೃಷಲೀ ಯಸ್ಯ ಗೇಹಿನೀ ।
ಸ್ವವೃಷಂ ಚಾಽಪರಿತ್ಯಜ್ಯ ವೃಷೈರನ್ಯೈರ್ವೃಷಾಯತೇ ॥ ೯೯ ॥
ವೃಷಲೀ ತಾಂ ವಿದುರ್ದೇವಾ ನ ಶೂದ್ರೀ ವೃಷಲೀ ಭವೇತ್ ।
ಬ್ರಹ್ಮಹತ್ಯಾ ಸುರಾಪಾನಂ ಗುರುದಾರನಿಷೇವಣಂ ॥ ೧೦೦ ॥

---

ತುಪ್ಪ, ಮೊಸರು, ದರ್ಭೆ, ನೀರು, ಇವುಗಳಿಂದ ಅಭಿಷೇಕಮಾಡಿ ಸುವಾಸನೆಯಾದ ಗಂಧವನ್ನು ಲೇಪಿಸಿ, ಪರಿಮಳಪುಷ್ಪಗಳಿಂದಲೂ, ಬಿಲ್ವಪತ್ರೆಗಳಿಂದಲೂ ಮಹೇಶ್ವರನನ್ನು ಪೂಜಿಸಬೇಕು.

೯೫–೯೬. ಮತ್ತು ಮುಚುಕುಂದ, ಕುಂದ, ಜಾತಿ, ಕಾಶ, ಕುಶ, ಉನ್ಮತ್ತ, ಮುನಿ ಮೊದಲಾದ ವಿವಿಧ ಪುಷ್ಪಗಳಿಂದಲೂ, ಆ ಕಾಲದಲ್ಲಿ ದೊರಕುವ ಇತರ ಪುಷ್ಪಗಳಿಂದಲೂ ಅತಿಭಕ್ತಿಯಿಂದ ಹನುಮಂತೇಶ್ವರನನ್ನು ಅರ್ಚಿಸಿ ತುಪ್ಪದಿಂದ ದೀಪವನ್ನು ಹೊತ್ತಿಸಬೇಕು. ಅದಿಲ್ಲದಿದ್ದರೆ ಎಣ್ಣೆಯಿಂದಾದರೂ ದೀಪವನ್ನು ಹೊತ್ತಿಸಬೇಕು.

೯೭–೯೮. ಅಲ್ಲಿ ವೇದವೇದಾಂಗಪಾರಂಗತರೂ, ಸಮಸ್ತಲಕ್ಷಣಗಳಿಂದ ತುಂಬಿದವರೂ, ಸತ್ಕುಲಪ್ರಸೂತರೂ, ಗೃಹಸ್ಥರೂ ಆದ ಬ್ರಾಹ್ಮಣರಿಂದ ಶ್ರಾದ್ಧ ಮಾಡಬೇಕು. ಅವರನ್ನು ವಸ್ತ್ರ, ಅನ್ನ, ಸುವರ್ಣಗಳಿಂದ ಸಂತೋಷಗೊಳಿಸಬೇಕು. ''ನರಕದಲ್ಲಿರುವ ನನ್ನ ಪಿತೃಗಳು ಸ್ವರ್ಗವನ್ನು ಸೇರಲಿ'' ಎಂದು ಬ್ರಾಹ್ಮಣರನ್ನು ವಂದಿಸಬೇಕು.

೯೯–೧೦೧. ಪತಿತರೂ, ವೃಷಲೀಪತಿಗಳೂ ಆದ ವಿಪ್ರರನ್ನು ತ್ಯಜಿಸಬೇಕು. ತನ್ನ ಪತಿಯನ್ನು ಬಿಡದೆ ಅನ್ಯಪುರುಷನನ್ನು ಕಾಮಿಸುವ ಸ್ತ್ರೀಯನ್ನು ವೃಷಲಿ

ಸುವರ್ಣಹರಣನ್ಯಾಸಮಿತ್ರದ್ರೋಹೋದ್ಭವಂ ತಥಾ ।
ನಶ್ಯತೇ ಪಾತಕಂ ಸರ್ವಮಿತ್ಯೇವಂ ಶಂಕರೋಽಬ್ರವೀತ್ ॥ ೧೦೧ ॥
ಶ್ರೀ ಮಾರ್ಕಂಡೇಯ ಉವಾಚ :—
ವಾಕ್ಪ್ರಲಾಪೇನ ಭೋ ವತ್ಸ ಬಹುನೋಕ್ತೇನ ಕಿಂ ಮಯಾ ।
ಸರ್ವಪಾತಕಸಂಯುಕ್ತೋ ದದ್ಯಾದ್ದಾನಂ ದ್ವಿಜನ್ಮನೇ ॥ ೧೦೨ ॥
ಗೋದಾನಂ ಚ ಪ್ರಕರ್ತವ್ಯಮಸ್ಮಿಂಸ್ತೀರ್ಥೇ ವಿಶೇಷತಃ ।
ಗೋದಾನಂ ಹಿ ಯತಃ ಪಾರ್ಥ ಸರ್ವದಾನಾಽಧಿಕಂ ಸ್ಮೃತಂ ॥ ೧೦೩ ॥
ಸರ್ವದೇವಮಯಾ ಗಾವಃ ಸರ್ವೇ ದೇವಾಸ್ತದಾತ್ಮಕಾಃ ।
ಶೃಂಗಾಗ್ರೇಷು ಮಹೀಪಾಲ ಶಕ್ರೋ ವಸತಿ ನಿತ್ಯಶಃ ॥ ೧೦೪ ॥
ಉರಃ ಸ್ಕಂದಃ ಶಿರೋ ಬ್ರಹ್ಮಾ ಲಲಾಟೇ ವೃಷಭಧ್ವಜಃ ।
ಚಂದ್ರಾರ್ಕೌ ಲೋಚನೇ ದೇವೌ ಜಿಹ್ವಾಯಾಂ ಚ ಸರಸ್ವತೀ ॥ ೧೦೫ ॥
ಮರುದ್ಗಣಾಃ ಸದಾ ಸಾಧ್ಯಾ ಯಸ್ಯಾ ದಂತಾ ನರೇಶ್ವರ ।
ಹುಂಕಾರೇ ಚತುರೋ ವೇದಾನ್ವಿದ್ಯಾತ್ಸಾಂಗಪದಕ್ರಮಾನ್ ॥ ೧೦೬ ॥
ಋಷಯೋ ರೋಮಕೂಪೇಷು ಹ್ಯಸಂಖ್ಯಾತಾಸ್ತಪಸ್ವಿನಃ ।
ದಂಡಹಸ್ತೋ ಮಹಾಕಾಯಃ ಕೃಷ್ಣೋ ಮಹಿಷವಾಹನಃ ॥ ೧೦೭ ॥
ಯಮಃ ಪೃಷ್ಠಸ್ಥಿತೋ ನಿತ್ಯಂ ಶುಭಾಽಶುಭಪರೀಕ್ಷಕಃ ।
ಚತ್ವಾರಃ ಸಾಗರಾಃ ಪುಣ್ಯಾಃ ಕ್ಷೀರಧಾರಾಃ ಸ್ತನೇಷು ಚ ॥ ೧೦೮ ॥

---

ಯೆನ್ನುವರು. ಶೂದ್ರಸ್ತ್ರೀಯು ವೃಷಲಿಯಲ್ಲ. ಇಲ್ಲಿ ಬ್ರಹ್ಮಹತ್ಯೆ, ಮದ್ಯಪಾನ, ಗುರುಪತ್ನೀಗಮನ, ಸ್ವರ್ಣಸ್ತೇಯ, ನ್ಯಾಸ, ಮಿತ್ರದ್ರೋಹ ಇವುಗಳಿಂದುಂಟಾದ ಪಾತಕವೆಲ್ಲ ನಾಶವಾಗುವುದೆಂದು ಶಂಕರನು ಹೇಳಿರುವನು.

೧೦೨. ಶ್ರೀ ಮಾರ್ಕಂಡೇಯನು ಹೇಳುತ್ತಾನೆ.—ಮಗು! ಬಹಳ ಮಾತನಾಡಿ ಪ್ರಯೋಜನವೇನು? ಸಕಲ ಪಾಪಗಳಿಂದ ಕೂಡಿದವನು ದ್ವಿಜರಿಗೆ ದಾನವನ್ನು ಕೊಡಬೇಕು.

೧೦೩. ಗೋದಾನವು ಸಮಸ್ತದಾನಗಳಿಗಿಂತಲೂ ಅಧಿಕವಾಗಿರುವುದರಿಂದ ಈ ತೀರ್ಥದಲ್ಲಿ ವಿಶೇಷವಾಗಿ ಗೋದಾನ ಮಾಡಬೇಕು.

೧೦೪–೧೧೯. ಗೋವುಗಳು ಸಕಲದೇವತಾರೂಪವಾಗಿರುವುವು. ಅವುಗಳಲ್ಲಿ ಎಲ್ಲದೇವತೆಗಳೂ ವಾಸಿಸುವರು. ಅವುಗಳ ಕೊಂಬುಗಳ ಕೊನೆಗಳಲ್ಲಿ ಇಂದ್ರನೂ, ಎದೆಯಲ್ಲಿ ಸ್ಕಂದನೂ, ತಲೆಯಲ್ಲಿ ಬ್ರಹ್ಮನೂ, ಹಣೆಯಲ್ಲಿ ಶಂಕರನೂ, ಕಣ್ಣುಗಳಲ್ಲಿ ಚಂದ್ರಸೂರ್ಯರೂ, ನಾಲಗೆಯಲ್ಲಿ ಸರಸ್ವತಿಯೂ, ಹಲ್ಲುಗಳಲ್ಲಿ ಮರುದ್ಗಣಗಳೂ, ಸಾಧ್ಯರೂ, ಹುಂಕಾರದಲ್ಲಿ ಸಾಂಗವಾದ ವೇದಗಳೂ, ರೋಮಕೂಪಗಳಲ್ಲಿ ಅಸಂಖ್ಯಾತ ಋಷಿಗಳೂ, ಬೆನ್ನಿನಲ್ಲಿ ದಂಡಧಾರಿಯೂ, ಮಹಾ

ವಿಷ್ಣುಪಾದೋದ್ಭವಾ ಗಂಗಾ ದರ್ಶನಾತ್ಪಾಪನಾಶನೀ ।
ಪ್ರಸ್ರಾವೇ ಸಂಸ್ಥಿತಾ ಯಸ್ಮಾತ್ತಸ್ಮಾದ್ವಂದ್ಯಾ ಸದಾ ಬುಧೈಃ ॥ ೧೦೯ ॥
ಲಕ್ಷ್ಮೀಶ್ಚ ಗೋಮಯೇ ನಿತ್ಯಂ ಪವಿತ್ರಾ ಸರ್ವಮಂಗಲಾ ।
ಗೋಮಯಾಲೇಪನಂ ತಸ್ಮಾತ್ಕರ್ತವ್ಯಂ ಪಾಂಡುನಂದನ ॥ ೧೧೦ ॥
ಗಂಧರ್ವಾಽಪ್ಸರಸೋ ನಾಗಾಃ ಖುರಾಗ್ರೇಷು ವ್ಯವಸ್ಥಿತಾಃ ।
ಪೃಥಿವ್ಯಾಂ ಸಾಗರಾಂತಾಯಾಂ ಯಾನಿ ತೀರ್ಥಾನಿ ಭಾರತ ।
ತಾನಿ ಸರ್ವಾಣಿ ಜಾನೀಯಾದ್ಗೌರ್ಗವ್ಯಂ ತೇನ ಪಾವನಂ ॥ ೧೧೧ ॥

ಯುಧಿಷ್ಠಿರ ಉವಾಚ :—

ಸರ್ವದೇವಮಯೀ ಧೇನುರ್ಗೀರ್ವಾಣಾದ್ಯೈರಲಂಕೃತಾ ।
ಏತತ್ಕಥಯ ಮೇ ತಾತ ಕಸ್ಮಾದ್ಗೋಷು ಸಮಾಶ್ರಿತಾಃ ॥ ೧೧೨ ॥

ಶ್ರೀ ಮಾರ್ಕಂಡೇಯ ಉವಾಚ :—

ಸರ್ವದೇವಮಯೋ ವಿಷ್ಣುರ್ಗಾವೋ ವಿಷ್ಣುಶರೀರಜಾಃ ।
ದೇವಾಸ್ತದುಭಯಾತ್ತಸ್ಮಾತ್ಕಲ್ಪಿತಾ ವಿವಿಧಾ ಜನೈಃ ॥ ೧೧೩ ॥
ಶ್ವೇತಾ ವಾ ಕಪಿಲಾವಾಽಪಿ ಕ್ಷೀರಿಣೀ ಪಾಂಡುನಂದನ ।
ಸವತ್ಸಾ ಚ ಸುಶೀಲಾ ಚ ಸಿತವಸ್ತ್ರಾಽವಗುಂಠಿತಾ ॥ ೧೧೪ ॥

---

ಕಾಯನೂ, ಕೃಷ್ಣವರ್ಣನೂ, ಮಹಿಷವಾಹನನೂ, ಶುಭಾಶುಭ ಪರೀಕ್ಷಕನೂ ಆಗಿರುವ ಯಮನೂ, ಸ್ತನಗಳಲ್ಲಿರುವ ಕ್ಷೀರಧಾರೆಗಳಲ್ಲಿ ನಾಲ್ಕು ಪುಣ್ಯಕರವಾದ ಸಮುದ್ರಗಳೂ, ಕ್ಷೀರಸ್ರಾವದಲ್ಲಿ ದರ್ಶನದಿಂದ ಪಾಪವನ್ನು ನಾಶಗೊಳಿಸುವ ವಿಷ್ಣುಪಾದದಿಂದುಂಟಾದ ಗಂಗೆಯೂ ಇರುವುದರಿಂದ ಗೋವನ್ನು ಬುಧರು ಯಾವಾಗಲೂ ವಂದಿಸಬೇಕು.

೧೧೦. ಯುಧಿಷ್ಠಿರ! ಗೋಮಯದಲ್ಲಿ ಸರ್ವಮಂಗಳಕರಳಾದ ಲಕ್ಷ್ಮಿಯು ನೆಲಸಿರುವುದರಿಂದ ಗೋಮಯಲೇಪನ ಮಾಡಿಕೊಳ್ಳಬೇಕು.

೧೧೧. ಗೊರಸುಗಳ ಕೊನೆಯಲ್ಲಿ ಗಂಧರ್ವರೂ, ಅಪ್ಸರೆಯರೂ, ನಾಗರೂ ಇರುವರು. ಗವ್ಯವು ಸಮಸ್ತಭೂಮಿಯಲ್ಲಿರುವ ತೀರ್ಥಗಳಾಗಿರುವುದರಿಂದ ಪವಿತ್ರವಾಗಿರುವುದು.

೧೧೨. ಯುಧಿಷ್ಠಿರನು ಹೇಳುತ್ತಾನೆ — ತಾತ! ಸಮಸ್ತದೇವತೆಗಳೂ ಆ ಗೋವಿನಲ್ಲಿ ಆಶ್ರಯಿಸಿರುವರೇಕೆ? ಇದನ್ನು ನನಗೆ ಹೇಳು.

೧೧೩. ಶ್ರೀ ಮಾರ್ಕಂಡೇಯನು ಹೇಳುತ್ತಾನೆ.— ವಿಷ್ಣುವು ಸಕಲ ದೇವತಾರೂಪನು. ಗೋವುಗಳು ವಿಷ್ಣುಶರೀರದಿಂದ ಹುಟ್ಟಿರುವುವು. ಈ ಎರಡು ಕಾರಣಗಳಿಂದ ಜನರು ಗೋವನ್ನು ನಾನಾ ವಿಧವಾಗಿ ಕಲ್ಪಿಸಿ ಪೂಜಿಸುತ್ತಾರೆ.

೧೧೪–೧೧೬. ಅನಂತಕಾಲ ಸ್ವರ್ಗವಾಸವನ್ನು ಬಯಸುವವನು ಹಸು

**ಕಾಂಸ್ಯದೋಹನಿಕಾ ದೇಯಾ ಸ್ವರ್ಣಶೃಂಗೀ ಸುಭೂಷಿತಾ ।**
**ಹನೂಮಂತೇಶ್ವರಸ್ಯಾಗ್ರೇ ಭಕ್ತ್ಯಾ ವಿಪ್ರಾಯ ದಾಪಯೇತ್ ॥ ೧೧೫ ॥**
**ನಿಯಮಸ್ಥೇನ ಸಾ ದೇಯಾ ಸ್ವರ್ಗಮಾನಂತ್ಯಮಿಚ್ಛತಾ ।**
**ಅಸಮರ್ಥಾಯ ಯೇ ದದ್ಯುರ್ವಿಷ್ಣುಲೋಕಂ ಪ್ರಯಾಂತಿ ತೇ ॥ ೧೧೬ ॥**
**ಅಸೌ ಲೋಕೇ ಚ್ಯುತೋ ರಾಜನ್ಭೂತಲೇ ದ್ವಿಜಮಂದಿರೇ ।**
**ಕುಶಲೋ ಜಾಯತೇ ಪುತ್ರೋ ಗುಣವಿದ್ಯಾಧನರ್ಧಿಮಾನ್ ॥ ೧೧೭ ॥**
**ಸರ್ವಪಾಪಹರಂ ತೀರ್ಥಂ ಹನೂಮಂತೇಶ್ವರಂ ನೃಪ ।**
**ಶೃಣ್ವನ್ವಿಮುಚ್ಯತೇ ಪಾಪಾದ್ವರ್ಣಸಂಕರಸಂಭವಾತ್**
**ದೂರಸ್ಥಶ್ಚಿಂತಯನ್ಪಶ್ಯನ್ಮುಚ್ಯತೇ ನಾಽತ್ರ ಸಂಶಯಃ ॥ ೧೧೮ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ**
**ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ**
**"ಹನೂಮಂತೇಶ್ವರತೀರ್ಥಮಾಹಾತ್ಮ್ಯವರ್ಣನಂ"**
**ನಾಮ ತ್ರ್ಯಶೀತಿತಮೋಽಧ್ಯಾಯಃ**

---

ಮಂತೇಶ್ವರನ ಮುಂದೆ ಹಾಲನ್ನು ಕರೆಯುವುದೂ, ಕರುವಿನಿಂದ ಸಹಿತವಾದುದೂ, ಒಳ್ಳೆಯ ನಡತೆಯುಳ್ಳದೂ, ಬಿಳಿಯ ವಸ್ತ್ರವನ್ನು ಹೊದ್ದಿಸಿರುವುದೂ, ಕಂಚಿನಪಾತ್ರೆಯಿಂದ ಕೂಡಿರುವುದೂ, ಚಿನ್ನದಿಂದ ಅಲಂಕಾರಗೊಂಡ ಕೊಂಬುಗಳುಳ್ಳದೂ ಆದ ಶ್ವೇತ ಅಥವಾ ಕಪಿಲ ಗೋವನ್ನು ಭಕ್ತಿಯಿಂದ ಬ್ರಾಹ್ಮಣನಿಗೆ ದಾನಮಾಡಬೇಕು. ಅಸಮರ್ಥನಿಗೆ ದಾನಮಾಡಿದವರು ವಿಷ್ಣುಲೋಕಕ್ಕೆ ತೆರಳುವರು.

೧೧೭. ಈ ಲೋಕವು ತಪ್ಪಿದಕೂಡಲೆ ಅವನು ಭೂಮಿಯಲ್ಲಿ ಬ್ರಾಹ್ಮಣನ ಮನೆಯಲ್ಲಿ ಸಮರ್ಥನೂ, ಗುಣ, ವಿದ್ಯೆ, ಧನಗಳಿಂದ ಸಮೃದ್ಧನೂ ಆದ ಪುತ್ರನಾಗಿ ಜನಿಸುವನು.

೧೧೮. ಸಕಲಪಾಪಗಳನ್ನೂ ಪರಿಹರಿಸುವ ಹನುಮಂತೇಶ್ವರತೀರ್ಥಮಾಹಾತ್ಮ್ಯವನ್ನು ಕೇಳುವವನು ಜಾತಿಸಾಂಕರ್ಯದಿಂದುಂಟಾದ ಪಾಪದಿಂದ ಮುಕ್ತನಾಗುವನು. ದೂರದಲ್ಲಿರುವವನು ಇದನ್ನು ಚಿಂತಿಸುತ್ತಿದ್ದರೆ ಪಾಪಮುಕ್ತನಾಗುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಹನೂಮಂತೇಶ್ವರತೀರ್ಥಮಾಹಾತ್ಮ್ಯವರ್ಣನ"ವೆಂಬ
ಎಂಬತ್ತಮೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಚತುರಶೀತಿತಮೋಽಧ್ಯಾಯಃ

### ಕಪಿತೀರ್ಥರಾಮೇಶ್ವರ ಲಕ್ಷ್ಮಣೇಶ್ವರ ಕುಂಭೇಶ್ವರಮಾಹಾತ್ಮ್ಯವರ್ಣನಂ

**ಶ್ರೀ ಮಾರ್ಕಂಡೇಯ ಉವಾಚ :—**

**ಅತ್ರೈವೋದಾಹರಂತೀಮಮಿತಿಹಾಸಂ ಪುರಾತನಂ ।**
**ಕೈಲಾಸೇ ಪೃಚ್ಛತೇ ಭಕ್ತ್ಯಾ ಷಣ್ಮುಖಾಯ ಶಿವೋದಿತಂ ॥ ೧ ॥**

**ಈಶ್ವರ ಉವಾಚ :—**

**ಪೂರ್ವಂ ತ್ರೇತಾಯುಗೇ ಸ್ಕಂದ ಹತೋ ರಾಮೇಣ ರಾವಣಃ ।**
**ಚತುರ್ದಶ ತದಾ ಕೋಟ್ಯೋ ನಿಹತಾ ಬ್ರಹ್ಮರಕ್ಷಸಾಃ ॥ ೨ ॥**
**ಹತೇಷು ತೇಷು ವೈ ತತ್ರ ರಕ್ಷಣಾಯ ದಿವೌಕಸಾಂ ।**
**ಮಹಾನಂದಸ್ತದಾ ಜಾತಸ್ತ್ರಿಷು ಲೋಕೇಷು ಪುತ್ರಕ ॥ ೩ ॥**
**ತತಃ ಸೀತಾಂ ಸಮಾಸಾದ್ಯ ಸಮಂ ವಾನರಪುಂಗವೈಃ ।**
**ರಾಮೋಽಪ್ಯಯೋಧ್ಯಾಮಾಯಾತೋ ಭರತೇನ ಕೃತೋತ್ಸವಃ ।**
**ತಸ್ಮೈ ಸಮರ್ಪಯಾಮಾಸ ಸ ರಾಜ್ಯಂ ಲಕ್ಷ್ಮಣಾಗ್ರಜಃ ॥ ೪ ॥**
**ತಸ್ಮಿನ್ಪ್ರಶಾಸತಿ ತತೋ ರಾಜ್ಯಂ ನಿಹತಕಂಟಕಂ ।**
**ಕೃತಕಾರ್ಯೋಽಥ ಹನುಮಾನ್ ಕೈಲಾಸಮಗಮತ್ಪುರಾ ॥ ೫ ॥**

---

### ಕನ್ನಡದ ಅನುವಾದ

#### ಕಪಿತೀರ್ಥಾದಿಮಾಹಾತ್ಮ್ಯವರ್ಣನ

೧. ಶ್ರೀ ಮಾರ್ಕಂಡೇಯನು ಹೇಳುತ್ತಾನೆ —ಈ ವಿಷಯದಲ್ಲಿ ಕೈಲಾಸ ಪರ್ವತದಲ್ಲಿ ಭಕ್ತಿಯಿಂದ ಪ್ರಶ್ನೆಮಾಡಿದ ಸ್ಕಂದನಿಗೆ ಶಿವನು ಹೇಳಿದ ಪುರಾತನೇತಿಹಾಸವನ್ನು ಹೇಳುತ್ತಾರೆ.

೨. ಈಶ್ವರನು ಹೇಳುತ್ತಾನೆ:—ಸ್ಕಂದ! ಹಿಂದೆ ತ್ರೇತಾಯುಗದಲ್ಲಿ ರಾಮನು ರಾವಣನನ್ನೂ, ಹದಿನಾಲ್ಕುಕೋಟಿ ರಾಕ್ಷಸರನ್ನೂ ಕೊಂದನು.

೩. ದೇವತೆಗಳ ರಕ್ಷಣೆಗಾಗಿ ರಾಮನು ಅವರನ್ನು ಕೊಲ್ಲಲು ಮೂರು ಲೋಕಗಳಲ್ಲಿಯೂ ಅತ್ಯಂತವಾಗಿ ಆನಂದವುಂಟಾಯಿತು.

೪. ಬಳಿಕ ರಾಮನು ಸೀತೆಯನ್ನು ಹೊಂದಿ ವಾನರೋತ್ತಮರೊಡನೆ ಅಯೋಧ್ಯೆಗೆ ಬಂದನು. ಲಕ್ಷ್ಮಣನ ಅಣ್ಣನಾದ ಭರತನು ಉತ್ಸವವನ್ನು ಮಾಡಿ ರಾಮನಿಗೆ ರಾಜ್ಯವನ್ನು ಒಪ್ಪಿಸಿದನು.

೫. ಬಳಿಕ ರಾಮನು ಶತ್ರುಗಳಿಲ್ಲದ ಆ ರಾಜ್ಯವನ್ನಾಳುತ್ತಿರಲು, ಕೃತಕಾರ್ಯನಾದ ಆಂಜನೇಯನು ಕೈಲಾಸಕ್ಕೆ ಹೋದನು.

ತತೋ ನಂದೀ ಪ್ರತೀಹಾರೋ ರುದ್ರಾಂಶಮಪಿ ತಂ ಕಪಿಂ ।
ನ ಚ ಸಂಗಮಯಾಮಾಸ ರುದ್ರೇಣಾಽಘೌಘಹಾರಿಣಾ ॥ ೬ ॥
ತೇನ ಪೃಷ್ಟಸ್ತದಾ ನಂದೀ ಕಿಂ ಮಯಾ ಪಾತಕಂ ಕೃತಂ ।
ಯೇನ ರುದ್ರವಪುಃ ಪುಣ್ಯಂ ನ ಪಶ್ಯಾಮ್ಯಂಬಿಕಾನ್ವಿತಂ ॥ ೭ ॥

ನಂದ್ಯುವಾಚ :—

ತ್ವಯಾಽವತರಣಂ ಚಕ್ರೇ ಕಪೀಂದ್ರಾಽಸುರಹೇತುನಾ ।
ತಥಾಽಪಿ ಹಿ ಕೃತಂ ಪಾಪಮುಪಭೋಗೇನ ಶಾಮ್ಯತಿ ॥ ೮ ॥

ಹನುಮಾನುವಾಚ :—

ಕಿಂ ಮಯಾಽಕಾರಿ ತತ್ಪಾಪಂ ನಂದಿನ್ದೇವಾರ್ಥಕಾರಿಣಾ ।
ರಾಕ್ಷಸಾಶ್ಚ ಹತಾ ದುಷ್ಟಾ ವಿಪ್ರಯಜ್ಞಾಂಗಘಾತಿನಃ ॥ ೯ ॥

ತತಸ್ತದಾಲಾಪ ಕುತೂಹಲೀ ಹರೋ
ನಿಜಾಂಶಭಾಜಂ ಕಪಿಮುಗ್ರತೇಜಸಂ ।
ಉವಾಚ ದ್ವಾರಾಂತರ ದತ್ತದೃಷ್ಟಿಃ
ಪುರಃಸ್ಥಿತಂ ಪ್ರೇಕ್ಷ್ಯ ಕಪೀಶ್ವರಂ ಪುನಃ ॥ ೧೦ ॥

---

೬. ಅಲ್ಲಿ ಬಾಗಿಲನ್ನು ಕಾಯುತ್ತಿದ್ದ ನಂದಿಯು ಆಂಜನೇಯನು ರುದ್ರಾಂಶನಾದಾಗ್ಯೂ ಅವನನ್ನು ರುದ್ರನೊಡನೆ ಸೇರಿಸಲಿಲ್ಲ.

೭. ಆಗ ಆಂಜನೇಯನು ನಂದಿಯನ್ನು ಕುರಿತು, "ನಾನು ಯಾವ ಪಾಪವನ್ನು ಮಾಡಿರುವೆನು? ಯಾವುದರಿಂದ ನಾನು ಪಾರ್ವತಿಯೊಡನಿರುವ ಪುಣ್ಯಕರವಾದ ರುದ್ರನ ಶರೀರವನ್ನು ನೋಡಲಾರದಾಗಿರುವೆನು?" ಎಂದು ಪ್ರಶ್ನೆಮಾಡಿದನು.

೮. ನಂದಿಯು ಹೇಳುತ್ತಾನೆ.—ಕಪಿಶ್ರೇಷ್ಠನೆ! ನೀನು ದೇವತೆಗಳಿಗಾಗಿ ಅವತಾರವನ್ನು ಮಾಡಿರುವೆ. ನೀನು ಮಾಡಿದ ಪಾಪವು ಅನುಭವದಿಂದ ಶಾಂತವಾಗುವುದು.

೯. ಹನುಮಂತನು ಹೇಳುತ್ತಾನೆ:—ನಂದಿಯೆ! ದೇವತೆಗಳ ಕಾರ್ಯವನ್ನೆಸಗಿರುವ ನಾನು ಯಾವ ಪಾಪವನ್ನು ಮಾಡಿದೆನು? ಬ್ರಾಹ್ಮಣರ ಯಜ್ಞವನ್ನು ಹಾಳುಮಾಡಿದ ದುಷ್ಟರಾದ ರಾಕ್ಷಸರನ್ನು ಮಾತ್ರ ಕೊಂದಿರುವೆನಷ್ಟೆ.

೧೦. ಬಳಿಕ ಆ ಆಂಜನೇಯನೊಡನೆ ಮಾತಾಡಲು ಕುತೂಹಲವುಳ್ಳ ಹರನು ಬಾಗಿಲ ರಂಧ್ರದಲ್ಲಿ ದೃಷ್ಟಿಯನ್ನಿಟ್ಟು ತನ್ನ ಅಂಶದವನಾಗಿ ತೇಜಸ್ವಿಯಾಗಿ ಮುಂದಿರುವ ಆಂಜನೇಯನನ್ನು ನೋಡಿ ಇಂತೆಂದನು.

ಈಶ್ವರ ಉವಾಚ :—

ಗಂಗಾ ಗಯಾ ಕಪೇ ರೇವಾ ಯಮುನಾ ಚ ಸರಸ್ವತೀ ।
ಸರ್ವಪಾಪಹರಾ ನದ್ಯಸ್ತಾಸು ಸ್ನಾನಂ ಸಮಾಚರ ॥ ೧೧ ॥
ನರ್ಮದಾ ದಕ್ಷಿಣೇ ಕೂಲೇ ತೀರ್ಥಂ ಪರಮಶೋಭನಂ ।
ಸೋಮನಾಥಸಮೀಪಸ್ಥಂ ತತ್ರ ತ್ವಂ ಗಚ್ಛ ವಾನರ ॥ ೧೨ ॥
ತತ್ರ ಸ್ನಾತ್ವಾ ಮಹಾಪಾಪಂ ಶಮಿಷ್ಯತಿ ಮಮಾಜ್ಞಯಾ ।
ಉತ್ಪತ್ಯ ವೇಗಾದ್ಧನುಮಾಂಛ್ರೀರೇವಾದಕ್ಷಿಣೇ ತಟೇ ॥ ೧೩ ॥
ಜಗಾಮ ಸುಮಹಾನಾದಸ್ತಪಶ್ಚಕ್ರೇ ಸುದುಷ್ಕರಂ ।
ತಸ್ಯ ವೈ ತಪ್ಯಮಾನಸ್ಯ ರಕ್ಷೋವಧಕೃತಂ ತಮಃ ॥ ೧೪ ॥
ವಿಲೀನಂ ಸ್ವಲ್ಪ ಕಾಲೇನ ಕ್ರಿಯತೇಶಪ್ರಸಾದತಃ ।
ತತೋ ದೇವೈಃ ಸಮಂ ದೇವಸ್ತತ್ತೀರ್ಥಮಗಮದ್ಧರಃ ॥ ೧೫ ॥
ಕಪಿಮಾಲಿಂಗಯಾಮಾಸ ವರಂ ತಸ್ಮೈ ಪ್ರದತ್ತವಾನ್ ।
ಅದ್ಯಪ್ರಭೃತಿ ತೇ ತೀರ್ಥಂ ಭವಿಷ್ಯತಿ ನ ಸಂಶಯಃ ॥ ೧೬ ॥
ಕಪಿತೀರ್ಥಂ ತತೋ ಜಾತಂ ತಸ್ಥೌ ತತ್ರ ಸ್ವಯಂ ಹರಃ ।
ಹನೂಮಂತೇಶ್ವರೋ ನಾಮ್ನಾ ಸರ್ವಹತ್ಯಾಹರಸ್ತದಾ ॥ ೧೭ ॥

---

೧೧. ಈಶ್ವರನು ಹೇಳುತ್ತಾನೆ —" ಕಪಿಯೆ ! ಗಂಗೆ, ಗಯೆ, ನರ್ಮದಾ, ಯಮುನಾ, ಸರಸ್ವತೀನದಿಗಳು ಸಕಲಪಾಪಗಳನ್ನೂ ಪರಿಹರಿಸುವುವು. ಅವುಗಳಲ್ಲಿ ಸ್ನಾನವನ್ನು ಮಾಡು.

೧೨. ವಾನರ! ನರ್ಮದಾನದಿಯ ದಕ್ಷಿಣದಡದಲ್ಲಿ ಸೋಮನಾಥನ ಬಳಿ ಅತ್ಯಂತ ಮಂಗಳಕರವಾದ ತೀರ್ಥವಿರುವುದು. ನೀನು ಅಲ್ಲಿಗೆ ಹೋಗು.

೧೩–೧೫. ಅಲ್ಲಿ ಮಿಂದರೆ ನನ್ನ ಆಜ್ಞೆಯಿಂದ ಮಹಾಪಾಪವು ಪರಿಹಾರವಾಗುವುದು." ಹನುಮಂತನು ಮೇಲಕ್ಕೆ ಹಾರಿ ಅತ್ಯಂತವಾಗಿ ದನಿಗೈಯುತ್ತ ನರ್ಮದಾನದಿಯ ದಕ್ಷಿಣತೀರವನ್ನು ಸೇರಿ ದುಷ್ಕರವಾದ ತಪವಂಗೈದನು. ತಪಸ್ಸನ್ನು ಮಾಡುತ್ತಿರಲು, ರಾಕ್ಷಸವಧೆಯಿಂದುಂಟಾದ ಅವನ ಪಾಪವು ಈಶ್ವರನ ಅನುಗ್ರಹದಿಂದ ಸ್ವಲ್ಪಕಾಲದಲ್ಲಿಯೇ ಪರಿಹಾರವಾಯಿತು. ಬಳಿಕ ಹರನು ದೇವತೆಗಳೊಡನೆ ಆ ತೀರ್ಥಕ್ಕೆ ಹೋದನು.

೧೬. ಹನುಮಂತನನ್ನು ಆಲಿಂಗಿಸಿ, " ಇದು ಮೊದಲ್ಗೊಂಡು ಈ ತೀರ್ಥವು ನಿನ್ನ ತೀರ್ಥವಾಗುವುದು " ಎಂದು ಅವನಿಗೆ ವರವನ್ನಿತ್ತನು.

೧೭. ಬಳಿಕ ಅದು ಕಪಿತೀರ್ಥವಾಯಿತು. ಅಲ್ಲಿ ಹರನು ತಾನೇ ನೆಲೆಸಿದನು. ಅದು ಸಕಲಪಾಪವನ್ನು ಪರಿಹರಿಸುವ ಹನುಮಂತೇಶ್ವರವೆಂದು ಹೆಸರನ್ನು ಪಡೆಯಿತು.

ತತ್ರ ತೀರ್ಥೇ ತು ಯಃ ಸ್ನಾತ್ವಾ ಭಕ್ತ್ಯಾ ಲಿಂಗಂ ಪ್ರಪೂಜಯೇತ್ ।
ಸರ್ವಪಾಪಾನಿ ನಶ್ಯಂತಿ ಹರಸ್ಯ ವಚನಂ ಯಥಾ ॥ ೧೮ ॥
ತತ್ರಾಽಸ್ಥೀ ನಿಲೀಯಂತೇ ಪಿಂಡದಾನೇಽಕ್ಷಯಾಗತಿಃ ।
ಯತ್ಕಿಂಚಿದ್ದೀಯತೇ ತತ್ರ ತದ್ಧಿ ಕೋಟಿಗುಣಂ ಭವೇತ್ ॥ ೧೯ ॥
ಹನುಮಾನಪ್ಯಯೋಧ್ಯಾಯಾಂ ರಾಮಂ ದ್ರಷ್ಟುಮಥಾಗಮತ್ ।
ಚಕಾರ ಕುಶಲಪ್ರಶ್ನಂ ಸ್ವಸ್ವರೂಪಂ ನ್ಯವೇದಯತ್ ॥ ೨೦ ॥

ಶ್ರೀ ರಾಮ ಉವಾಚ :—

ಕುರ್ವತೋ ದೇವಕಾರ್ಯಂ ತೇ ಮಮ ಕಾರ್ಯಂ ಚ ಕುರ್ವತಃ ।
ತತೋಽಹಮಪಿ ಪಾಪೀಯಾಂಸ್ತಪಸ್ತಪ್ಸ್ಯಾಮ್ಯಸಂಶಯಂ ॥ ೨೧ ॥
ತತ್ರೈವ ದಕ್ಷಿಣೇ ಕೂಲೇ ರೇವಾಯಾಃ ಪಾಪಹಾರಿಣಿ ।
ಚತುರ್ವಿಂಶತಿವರ್ಷಾಣಿ ತಪಸ್ತೇಪೇಽಥ ರಾಘವಃ ॥ ೨೨ ॥
ಜ್ಯೋತಿಷ್ಮತೀ ಪುರೀಸಂಸ್ಥಃ ಶ್ರೀರೇವಾಸ್ನಾನಮಾಚರನ್ ।
ತಸ್ಯ ಶುಶ್ರೂಷಣಂ ಚಕ್ರೇ ಲಕ್ಷ್ಮಣೋಽಪಿ ತದಾಜ್ಞಯಾ ।
ಸ್ಥಾಪಯಾಮಾಸತುರ್ಲಿಂಗೇ ತೌ ತದಾ ರಾಮಲಕ್ಷ್ಮಣೌ ॥ ೨೩ ॥

---

೧೮. ಆ ತೀರ್ಥದಲ್ಲಿ ಮಿಂದು ಭಕ್ತಿಯಿಂದ ಲಿಂಗವನ್ನು ಪೂಜಿಸಿದವನ ಸಕಲ ಪಾಪಗಳು ಶಿವನ ಮಾತಿನಂತೆ ಪರಿಹಾರವಾಗುವುವು.

೧೯. ಅಲ್ಲಿ ಅಸ್ಥಿಗಳು ಅಡಗಿಹೋಗುವುವು; ಪಿಂಡದಾನ ಮಾಡಿದರೆ ಶಾಶ್ವತವಾದ ಗತಿಯುಂಟಾಗುವುದು, ಸ್ವಲ್ಪವನ್ನಿತ್ತರೂ ಅದು ಕೋಟಿಮಡಿ ಯಷ್ಟು ಹೆಚ್ಚುವುದು.

೨೦. ಬಳಿಕ ಆಂಜನೇಯನು ರಾಮನನ್ನು ನೋಡುವುದಕ್ಕಾಗಿ ಅಯೋಧ್ಯೆಗೆ ಹೋಗಿ ಕುಶಲಪ್ರಶ್ನೆಯನ್ನು ಮಾಡಿ ತನ್ನ ಸ್ವರೂಪವನ್ನು ತಿಳಿಸಿದನು.

೨೧. ಶ್ರೀರಾಮನು ಹೇಳುತ್ತಾನೆ:—ದೇವಕಾರ್ಯವನ್ನೂ, ನನ್ನ ಕಾರ್ಯ ವನ್ನೂ ಮಾಡುತ್ತಿರುವ ನಿನಗೆ ಪಾಪವುಂಟಾದರೆ ನಾನೂ ಪಾಪಿಯಾಗುವೆನು. ಆದುದರಿಂದ ನಾನೂ ತಪಸ್ಸನ್ನು ಮಾಡುವೆನು.

೨೨. ರಾಮನು ಅದರಂತೆ ಆ ನರ್ಮದಾನದಿಯಲ್ಲಿ ತನ್ನ ಪಾಪವನ್ನು ನಿವಾರಿಸಲು ದಕ್ಷಿಣದಡದಲ್ಲಿ ಇಪ್ಪತ್ತುನಾಲ್ಕು ವರ್ಷಗಳಕಾಲ ತಪಸ್ಸನ್ನು ಮಾಡಿದನು.

೨೩. ಅವನು ಜ್ಯೋತಿಷ್ಮತೀಪುರದಲ್ಲಿ ವಾಸಿಸುತ್ತ ನರ್ಮದಾನದಿಯಲ್ಲಿ ಸ್ನಾನವನ್ನು ಮಾಡುತ್ತಿದ್ದನು. ಲಕ್ಷ್ಮಣನೂ ಅವನ ಆಜ್ಞೆಯಿಂದ ಅಣ್ಣನನ್ನು ಸೇವಿಸುತ್ತಿದ್ದನು.

ಪ್ರಭಾವಾತ್ತಸ್ಯ ತಪಸೋ ರೇವಾತೀರೇ ಮಹಾಮತೀ ।
ನಿಷ್ಪಾಪತಾಂ ತದಾ ವೀರೌ ಜಗ್ಮತೂ ರಾಮಲಕ್ಷ್ಮಣೌ ॥ ೨೪ ॥
ತತಸ್ತದಾ ದೇವಪುರೋಗಮೋ ಹರೋ
ಗತೋ ಹಿ ವೈ ಪುಣ್ಯಮುನೀಶ್ವರೈಃ ಸಹ ।
ಆಗತ್ಯ ತೀರ್ಥಂ ಚ ವರಂ ದದೌ ತದಾ
ನಿಜಾಂ ಕಲಾಂ ತತ್ರ ವಿಮುಚ್ಯ ತೀರ್ಥೇ ॥ ೨೫ ॥
ಮುನಿಭಿಃ ಸರ್ವತೀರ್ಥಾನಾಂ ಕ್ಷಿಪ್ತಂ ಕುಂಭೋದಕಂ ಭುವಿ ।
ಏಕಸ್ಥಂ ಲಿಂಗನಾಮಾಽಥ ಕಲಾಕುಂಭಸ್ತಥಾಽಭವತ್ ॥ ೨೬ ॥
ಕುಂಭೇಶ್ವರ ಇತಿ ಖ್ಯಾತಸ್ತದಾ ದೇವಗಣಾರ್ಚಿತಃ ।
ರಾಮೋಽಪಿ ಪೂಜಯಾಮಾಸ ತಲ್ಲಿಂಗಂ ದೇವಸೇವಿತಂ ॥ ೨೭ ॥
ತತೋ ವರಂ ದದೌ ದೇವೋ ರಾಮಕೀರ್ತ್ಯಭಿವೃದ್ಧಯೇ ।
ಚತುರ್ವಿಂಶತಿಮೇ ವರ್ಷೇ ರಾಮೋ ನಿಷ್ಪಾಪತಾಂ ಗತಃ ॥ ೨೮ ॥
ಯದಾ ಕನ್ಯಾ ಗತಃ ಪಂಗುರ್ಗುರುಣಾ ಸಹಿತೋ ಭವೇತ್ ।
ತದೇವ ದೇವಯಾತ್ರೇಯಮಿತಿ ದೇವಾ ಜಗುರ್ಮುದಾ ॥ ೨೯ ॥
ಯಥಾ ಗೋದಾವರೀತೀರ್ಥೇ ಸರ್ವತೀರ್ಥಫಲಂ ಭವೇತ್ ।
ತಥಾಽತ್ರ ರೇವಾಸ್ನಾನೇನ ಲಿಂಗಾನಾಂ ದರ್ಶನೈರ್ನೃಣಾಂ ॥ ೩೦ ॥

---

೨೪. ಆ ರಾಮಲಕ್ಷ್ಮಣರು ಸತ್ಯತಪಸ್ಸುಗಳ ಪ್ರಭಾವದಿಂದ ರೇವಾತೀರದಲ್ಲಿ ಲಿಂಗಗಳನ್ನು ಪ್ರತಿಷ್ಠೆಮಾಡಿ ಪಾಪರಹಿತರಾದರು.

೨೫. ಬಳಿಕ ದೇವೋತ್ತಮನಾದ ಹರನು ಪುಣ್ಯವಂತರಾದ ಮುನಿಗಳೊಡನೆ ಆ ತೀರ್ಥಕ್ಕೆ ಬಂದು ತನ್ನ ಕಲೆಯನ್ನು ಅಲ್ಲಿ ಸ್ಥಾಪಿಸಿ ವರವನ್ನಿತ್ತನು.

೨೬–೨೭. ಮುನಿಗಳು ಸಕಲ ತೀರ್ಥಗಳ ಜಲವನ್ನು ಕುಂಭದಲ್ಲಿ ಸೇರಿಸಿ ಭೂಮಿಯಮೇಲೆ ಒಂದೆಡೆಯಲ್ಲಿ ಹಾಕಿದರು. ಅದರಿಂದ ಆ ತೀರ್ಥವು ಕಲಾಕುಂಭವೆಂದು ಹೆಸರನ್ನು ಪಡೆಯಿತು. ಆ ಕುಂಭೇಶ್ವರನನ್ನು ಸಮಸ್ತದೇವತೆಗಳು ಅರ್ಚಿಸಿದರು. ರಾಮನೂ ದೇವತೆಗಳು ಸೇವಿಸಿದ ಆ ಲಿಂಗವನ್ನು ಆರಾಧಿಸಿದನು.

೨೮. ತರುವಾಯ ಶಂಕರನು ರಾಮನ ಕೀರ್ತಿಯು ಹೆಚ್ಚಲೆಂದು ವರವನ್ನು ಕೊಟ್ಟನು. ಹೀಗೆ ರಾಮನು ಇಪ್ಪತ್ತನಾಲ್ಕನೆಯ ವರ್ಷದಲ್ಲಿ ಪಾಪರಹಿತನಾದನು.

೨೯. ಕನ್ಯಾಗತನಾದ ಶನಿಯು ಗುರುವಿನಿಂದ ಸಹಿತನಾದಾಗ ಈ ಕುಂಭೇಶ್ವರನ ಯಾತ್ರೆಯನ್ನು ಮಾಡಬೇಕೆಂದು ದೇವತೆಗಳು ಸಂತೋಷದಿಂದ ಹೇಳಿದರು.

೩೦. ಗೋದಾವರೀತೀರದಲ್ಲಿ ಮನುಷ್ಯರಿಗೆ ಸಕಲ ತೀರ್ಥಗಳ ಫಲವು ದೊರೆಯುವಂತೆ ನರ್ಮದಾನದಿಯ ಸ್ನಾನದಿಂದಲೂ, ಶಿವಲಿಂಗಗಳ ದರ್ಶನದಿಂದಲೂ ಸಮಸ್ತತೀರ್ಥಗಳ ಫಲವೂ ದೊರೆಯುವುದು.

ಕರಿಷ್ಯಂತ್ಯತ್ರ ಯೇ ಶ್ರಾದ್ಧಂ ಪಿತೄಣಾಂ ನರ್ಮದಾತಟೇ ।
ಕುಂಭೇಶ್ವರಸಮೀಪಸ್ಥಾಸ್ತತ್ಫಲಂ ಶೃಣು ಷಣ್ಮುಖ ॥ ೩೧ ॥
ಯಾವಂತೋ ರೋಮಕೂಪಾಃಸ್ಯುಃ ಶರೀರೇ ಸರ್ವದೇಹಿನಾಂ ।
ತಾವದ್ವರ್ಷಪ್ರಮಾಣೇನ ಪಿತೄಣಾಮಕ್ಷಯಾ ಗತಿಃ ॥ ೩೨ ॥
ಪೃಥಿವ್ಯಾಂ ದೇವತಾಃ ಸರ್ವಾ ಸರ್ವತೀರ್ಥಾನಿ ಯಾನಿ ತು ।
ಲಭಂತೇ ತತ್ಫಲಂ ಮರ್ತ್ಯಾ ಲಿಂಗತ್ರಯವಿಲೋಕನಾತ್ ॥ ೩೩ ॥
ಅಪುತ್ರೋ ಲಭತೇ ಪುತ್ರಂ ನಿರ್ಧನೋ ಧನಮಾಪ್ನುಯಾತ್ ।
ಸರೋಗೋ ಮುಚ್ಯತೇ ರೋಗಾನ್ನಾಽತ್ರ ಕಾರ್ಯಾ ವಿಚಾರಣಾ ॥ ೩೪ ॥
ಸಿಂಹರಾಶಿಂ ಗತೇ ಜೀವೇ ಯತ್ಸ್ಯಾದ್ಗೋದಾವರೀಫಲಂ ।
ತದ್ದ್ವಾದಶಗುಣಂ ಸ್ಕಂದ ಕುಂಭೇಶ್ವರಸಮೀಪತಃ ॥ ೩೫ ॥
ಯೇ ಜಾನಂತಿ ನ ಪಶ್ಯಂತಿ ಕುಂಭಶಂಭುಮುಮಾಪತಿಂ ।
ನರ್ಮದಾದಕ್ಷಿಣೇ ಕೂಲೇ ತೇಷಾಂ ಜನ್ಮ ನಿರರ್ಥಕಂ ॥ ೩೬ ॥
ಯಥಾ ಗೋದಾವರೀಯಾತ್ರಾ ಕರ್ತವ್ಯಾ ಮುನಿಶಾಸನಾತ್ ।
ಚತುರ್ವಿಂಶತಿಮೇ ವರ್ಷೇ ತಥೇಯಂ ದೇವಭಾಷಿತಂ ॥ ೩೭ ॥

---

೩೧. ಸ್ಕಂದ! ಈ ನರ್ಮದಾತಟದಲ್ಲಿರುವ ಕುಂಭೇಶ್ವರನ ಬಳಿ ಪಿತೃಗಳಿಗೆ ಶ್ರಾದ್ಧಮಾಡಿದರೆ ದೊರಕುವ ಫಲವನ್ನು ಕೇಳು.

೩೨. ಸಮಸ್ತಪ್ರಾಣಿಗಳ ದೇಹದಲ್ಲಿ ಎಷ್ಟು ರೋಮಕೂಪಗಳಿರುವುವೊ, ಅಷ್ಟುವರ್ಷಕಾಲ ಪಿತೃಗಳಿಗೆ ಅಕ್ಷಯವಾದ ಗತಿಯುಂಟಾಗುವುದು.

೩೩. ಈ ಮೂರು ಲಿಂಗಗಳನ್ನು ನೋಡುವುದರಿಂದ ಭೂಮಿಯಲ್ಲಿರುವ ಸಕಲದೇವತೆಗಳ ಮತ್ತು ತೀರ್ಥಗಳ ದರ್ಶನದಿಂದಾಗುವ ಫಲವು ಲಭಿಸುವುದು.

೩೪. ಪುತ್ರನಿಲ್ಲದವನು ಪುತ್ರನನ್ನೂ, ಧನವಿಲ್ಲದವನು ಧನವನ್ನೂ ಪಡೆಯುವನಲ್ಲದೆ, ರೋಗಿಯು ರೋಗದಿಂದಲೂ ಮುಕ್ತನಾಗುವನು. ಈ ವಿಷಯದಲ್ಲಿ ವಿಚಾರವಿಲ್ಲ.

೩೫–೩೬. ಸ್ಕಂದ! ಬೃಹಸ್ಪತಿಯು ಸಿಂಹರಾಶಿಯನ್ನು ಸೇರಲು ಗೋದಾವರಿಯಲ್ಲುಂಟಾಗುವ ಫಲಕ್ಕಿಂತಲೂ ಹನ್ನೆರಡರಷ್ಟು ಫಲವು ಕುಂಭೇಶ್ವರನ ಸಮೀಪದಲ್ಲಿ ಉಂಟಾಗುವುದು. ನರ್ಮದಾನದಿಯ ದಕ್ಷಿಣದಡದಲ್ಲಿರುವ ಕುಂಭೇಶ್ವರನನ್ನು ತಿಳಿಯದ ಮತ್ತು ನೋಡದ ಮಾನವನ ಜನ್ಮವು ನಿಷ್ಫಲವು.

೩೭. ಮುನಿಯ ಶಾಸನದಂತೆ ಗೋದಾವರೀಯಾತ್ರೆಯನ್ನು ಇಪ್ಪತ್ತನಾಲ್ಕನೆಯ ವರ್ಷದಲ್ಲಿ ಮಾಡುವಂತೆ ಈ ತೀರ್ಥದ ಯಾತ್ರೆಯನ್ನೂ ಮಾಡಬೇಕೆಂದು ಶಂಕರನು ಹೇಳಿರುತ್ತಾನೆ.

ಯಾವಚ್ಚಂದ್ರಶ್ಚ ಸೂರ್ಯಶ್ಚ ಯಾವದ್ದ್ಯೌ ದಿವಿ ತಾರಕಾಃ ।
ತಾವತ್ತದಕ್ಷಯಂ ದಾನಂ ರೇವಾಕುಂಭೇಶ್ವರಾಂತಿಕೇ ॥ ೩೮ ॥
ಮಹಾದಾನಾನಿ ದೇಯಾನಿ ತತ್ರ ಲೋಕೈರ್ವಿಚಕ್ಷಣೈಃ ।
ಗೋದಾನಮತ್ರ ಶಂಸಂತಿ ಸೌವರ್ಣಂ ರಾಜತಂ ತಥಾ ॥ ೩೯ ॥
ಯಸ್ಯಾಃ ಸ್ಮರಣಮಾತ್ರೇಣ ನಶ್ಯತೇ ಪಾಪಸಂಚಯಃ ।
ಸ್ನಾನೇನ ಕಿಂ ಪುನಃ ಸ್ಕಂದ ಬ್ರಹ್ಮಹತ್ಯಾ ವ್ಯಪೋಹತಿ ॥ ೪೦ ॥
ತತ್ರ ತೀರ್ಥೇ ತು ಯಃ ಸ್ನಾತ್ವಾ ಶ್ರಾದ್ಧಂ ಕುರ್ಯಾದ್ಯುಧಿಷ್ಠಿರ ।
ಏಕೋತ್ತರಂ ಕುಲಶತಮುದ್ಧರೇಚ್ಛಿವಶಾಸನಾತ್ ॥ ೪೧ ॥
ಯಾನಿ ಕಾನಿಚ ತೀರ್ಥಾನಿ ಚಾಸಮುದ್ರಸರಾಂಸಿ ಚ ।
ಶಿವಲಿಂಗಾರ್ಚನಸ್ಯೇಹ ಕಲಾಂ ನಾರ್ಹಂತಿ ಷೋಡಶೀಂ ॥ ೪೨ ॥
ಏವಂ ದೇವಾ ವರಂ ದತ್ವಾ ಹರೀಶ್ವರಪುರೋಗಮಾಃ ।
ಸ್ವಸ್ಥಾನಮಗಮನ್ಪೂರ್ವಮುಕ್ತ್ವಾ ತನ್ನಾಮಚೋತ್ತಮಂ ॥ ೪೩ ॥
ತೀರ್ಥಸ್ಯಾಸ್ಯ ವರಂ ದತ್ವಾ ಸ ರಾಮೋ ಲಕ್ಷ್ಮಣಾಗ್ರಜಃ ।
ಅಯೋಧ್ಯಾಂ ಪ್ರವಿವೇಶಾಽಸೌ ನಿಷ್ಪಾಪೋ ನರ್ಮದಾಜಲಾತ್ ॥ ೪೪ ॥
ಸೌವರ್ಣೀಂ ಚ ತತಃ ಕೃತ್ವಾ ಸೀತಾಂ ಯಜ್ಞಂ ಚಕಾರ ಸಃ ।
ಅನುಮಂತ್ರ್ಯ ಮುನೀಂಲ್ಲೋಕಾನ್ದೇವತಾಶ್ಚ ನಿಜಂ ಕುಲಂ ॥ ೪೫ ॥

---

೩೮–೩೯. ಆಕಾಶದಲ್ಲಿ ಚಂದ್ರಸೂರ್ಯರೂ, ನಕ್ಷತ್ರಗಳೂ ಇರುವಷ್ಟು ಕಾಲ ನರ್ಮದಾನದಿಯ ಹತ್ತಿರವಿರುವ ಕುಂಭೇಶ್ವರನ ಸಮೀಪದಲ್ಲಿ ಮಾಡಿದ ದಾನವು ಅಕ್ಷಯವಾಗುವುದು. ಅಲ್ಲಿ ಕುಶಲರಾದ ನರರು ಮಹಾದಾನಗಳನ್ನು ಕೊಡಬೇಕು. ಚಿನ್ನ ಅಥವಾ ಬೆಳ್ಳಿಯ ಗೋದಾನವು ಅಲ್ಲಿ ಸ್ತುತ್ಯವಾದುದು.

೪೦. ಸ್ಕಂದ! ಅದರ ಸ್ಮರಣೆಯಿಂದಲೇ ಪಾಪಸಮೂಹವು ನಾಶವಾಗುವುದು. ಸ್ನಾನದಿಂದಿನ್ನೇನು? ಬ್ರಹ್ಮಹತ್ಯೆಯೂ ಪರಿಹಾರವಾಗುವುದು.

೪೧. ಯುಧಿಷ್ಠಿರ! ಆ ತೀರ್ಥದಲ್ಲಿ ಮಿಂದು ಶ್ರಾದ್ಧಗೈದರೆ ಶಿವನ ಆಜ್ಞೆಯಂತೆ ಇಪ್ಪತ್ತೊಂದು ಕುಲಗಳು ಉದ್ಧಾರವಾಗುವುವು.

೪೨–೪೩. ಸಮುದ್ರದವರೆಗೆ ಇರುವ ಸಕಲ ತೀರ್ಥಗಳೂ ಶಿವಲಿಂಗದ ಪೂಜೆಯ ಹದಿನಾರನೆ ಒಂದಂಶಕ್ಕೂ ಸರಿಯಲ್ಲ. ವಿಷ್ಣುವೂ, ದೇವತೆಗಳೂ ಹೀಗೆ ವರವನ್ನಿತ್ತು ಅದಕ್ಕೆ ಉತ್ತಮವಾದ ಹೆಸರನ್ನಿಟ್ಟು ತಮ್ಮ ಸ್ಥಳಕ್ಕೆ ಹೊರಟುಹೋದರು.

೪೪. ಲಕ್ಷ್ಮಣನ ಅಣ್ಣನಾದ ಆ ರಾಮನು ಈ ತೀರ್ಥಕ್ಕೆ ವರವನ್ನಿತ್ತು ನರ್ಮದಾನದಿಯ ನೀರಿನಿಂದ ಪಾಪರಹಿತನಾಗಿ ಅಯೋಧ್ಯೆಯನ್ನು ಸೇರಿದನು.

೪೫. ಬಳಿಕ ಮುನಿಗಳನ್ನೂ, ಪ್ರಜೆಗಳನ್ನೂ, ದೇವತೆಗಳನ್ನೂ, ತನ್ನ ವಂಶದವರನ್ನೂ ಕರೆಯಿಸಿ ಸುವರ್ಣದಿಂದ ಸೀತೆಯ ಪ್ರತಿಮೆಯನ್ನು ನಿರ್ಮಿಸಿ ಯಜ್ಞಮಾಡಿದನು.

ಪುರಾ ತ್ರೇತಾಯುಗೇ ರಾಜನ್ ತತ್ತೀರ್ಥಂ ಸ್ಕಂದನಾಮಕಂ ।
ನಿಯಮೇನ ತತೋ ಲೋಕೈಃ ಕರ್ತವ್ಯಂ ಲಿಂಗದರ್ಶನಂ ॥ ೪೬ ॥
ತಾವತ್ಪಾಪಾನಿ ದೇಹೇಷು ಮಹಾಪಾತಕಜಾನ್ಯಪಿ ।
ಯಾವನ್ನ ಪ್ರೇಕ್ಷತೇ ಜಂತುಸ್ತತ್ತೀರ್ಥಂ ದೇವಸೇವಿತಂ ॥ ೪೭ ॥
ತೇ ಧನ್ಯಾಸ್ತೇ ಮಹಾತ್ಮಾನಸ್ತೇಷಾಂ ಜನ್ಮ ಸುಜೀವಿತಂ ।
ಜ್ಯೋತಿಷ್ಮತೀ ಪುರೀ ಸಂಸ್ಥಂ ಯೇ ದ್ರಕ್ಷ್ಯಂತಿ ಹರಂ ಪರಂ ॥ ೪೮ ॥
ತಸ್ಮಾನ್ಮೋಹಂ ಪರಿತ್ಯಜ್ಯ ಜನೈರ್ಗಂತವ್ಯಮಾದರಾತ್ ।
ತೀರ್ಥಾಽಶೇಷಫಲಾಽವಾಪ್ತ್ಯೈ ತೀರ್ಥಂ ಕುಂಭೇಶ್ವರಾಹ್ವಯಂ ॥ ೪೯ ॥

ಮಾರ್ಕಂಡೇಯ ಉವಾಚ :—

ಶ್ರುತ್ವೇತಿ ಶಂಭುವಚಸಾ ಸ ಷಡಾನನೋಽಥ
ನತ್ವಾ ಪಿತುಃ ಪದಯುಗಾಂಬುಜಮಾದರೇಣ ।
ಸಂಪ್ರಾಪ್ಯ ದಕ್ಷಿಣತಟಂ ಗಿರಿಶಸ್ರವಂತ್ಯಾಃ
ಕೀಶಾಗ್ರ್ಯರಾಮ ಕಲಶಾಖ್ಯ ಶಿವಾನ್ದದರ್ಶ ॥ ೫೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ಕಪಿತೀರ್ಥ ರಾಮೇಶ್ವರ ಲಕ್ಷ್ಮಣೇಶ್ವರ ಕುಂಭೇಶ್ವರಮಾಹಾತ್ಮ್ಯವರ್ಣನಂ"
ನಾಮ ಚತುರಶೀತಿತಮೋಽಧ್ಯಾಯಃ

---

೪೬–೪೭. ಹಿಂದೆ ತ್ರೇತಾಯುಗದಲ್ಲಿ ಆ ತೀರ್ಥವು ಸ್ಕಂದನೆಂದು ಹೆಸರುಳ್ಳದ್ದಾಗಿದ್ದಿತು. ಆದುದರಿಂದ ಜನರು ನಿಶ್ಚಯವಾಗಿಯೂ ಆ ಲಿಂಗವನ್ನು ದರ್ಶನ ಮಾಡಬೇಕು. ಪ್ರಾಣಿಯು ದೇವತೆಗಳು ಸೇವಿಸಿದ ಆ ತೀರ್ಥವನ್ನು ನೋಡದಿರುವ ವರೆಗೆ ದೇಹದಲ್ಲಿ ಪಾತಕಮಹಾಪಾತಕಗಳಿರುವುವು.

೪೮. ಜ್ಯೋತಿಷ್ಮತೀಪಟ್ಟಣದಲ್ಲಿರುವ ಶಿವನನ್ನು ನೋಡುವವರು ಧನ್ಯರು; ಮಹಾತ್ಮರು; ಅವರ ಜನ್ಮವು ಒಳ್ಳೆಯ ಜೀವನವುಳ್ಳದು.

೪೯. ಆದುದರಿಂದ ಜನರು ಭ್ರಾಂತಿಯನ್ನು ಬಿಟ್ಟು ಪ್ರೀತಿಯಿಂದ ಸಮಸ್ತ ತೀರ್ಥಗಳ ಫಲವನ್ನು ಹೊಂದುವುದಕ್ಕಾಗಿ ಕುಂಭೇಶ್ವರತೀರ್ಥಕ್ಕೆ ಹೋಗಬೇಕು.

೫೦. ಮಾರ್ಕಂಡೇಯನು ಹೇಳುತ್ತಾನೆ:—ಸ್ಕಂದನು ಹೀಗೆ ಆ ತೀರ್ಥದ ಮಾಹಾತ್ಮ್ಯವನ್ನು ಶಿವನ ಮಾತಿನಿಂದ ಕೇಳಿ ತಂದೆಯ ಅಡಿದಾವರೆಗಳಿಗೆ ಎರಗಿ, ನರ್ಮದಾನದಿಯ ದಕ್ಷಿಣದಡವನ್ನು ಸೇರಿ ಹನುಮಂತ, ರಾಮ, ಕುಂಭೇಶ್ವರರನ್ನು ನೋಡಿದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಕಪಿತೀರ್ಥಾದಿಮಾಹಾತ್ಮ್ಯವರ್ಣನ"ವೆಂಬ
ಎಂಬತ್ತನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಪಂಚಾಶೀತಿತಮೋಽಧ್ಯಾಯಃ

### ಸೋಮನಾಥತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ತತೋ ಗಚ್ಛೇತ್ತು ರಾಜೇಂದ್ರ ನರ್ಮದಾಯಾಃ ಪುರಾತನಂ ।
ಬ್ರಹ್ಮಹತ್ಯಾಹರಂ ತೀರ್ಥಂ ವಾರಾಣಸ್ಯಾಸಮಂ ಹಿ ತತ್ ॥ ೧ ॥

ಯುಧಿಷ್ಠಿರ ಉವಾಚ :—

ಆಶ್ಚರ್ಯಂ ಕಥ್ಯತಾಂ ಬ್ರಹ್ಮನ್ಯದ್ವೃತ್ತಂ ನರ್ಮದಾ ತಟೇ ।
ವಾರಾಣಸ್ಯಾ ಸಮಂ ಕಸ್ಮಾದೇತತ್ಕಥಯ ಮೇ ಪ್ರಭೋ ॥ ೨ ॥
ನಿಮಗ್ನೋ ದುಃಖಸಂಸಾರೇ ಹೃತರಾಜ್ಯೋ ದ್ವಿಜೋತ್ತಮ ।
ಯುಷ್ಮದ್ವಾಣೀಜಲಸ್ನಾತೋ ನಿರ್ದುಃಖಃ ಸಹ ಬಾಂಧವೈಃ ॥ ೩ ॥

ಶ್ರೀ ಮಾರ್ಕಂಡೇಯ ಉವಾಚ :—

ಸಾಧುಸಾಧು ಮಹಾಬಾಹೋ ಸೋಮವಂಶವಿಭೂಷಣ ।
ಪೃಷ್ಟೋಽಸ್ಮಿ ದುರ್ಲಭಂ ತೀರ್ಥಂ ಗುಹ್ಯಾದ್ಗುಹ್ಯತರಂ ಪರಂ ॥ ೪ ॥
ಆದೌ ಪಿತಾಮಹಸ್ತಾವತ್ಸಮಸ್ತಜಗತಃ ಪ್ರಭುಃ ।
ಮನಸಾ ತಸ್ಯ ಸಂಜಾತಾ ದಶೈವ ಋಷಿಪುಂಗವಾಃ ॥ ೫ ॥

---

## ಕನ್ನಡದ ಅನುವಾದ

### ಸೋಮನಾಥತೀರ್ಥಮಾಹಾತ್ಮ್ಯವರ್ಣನ

೧. ಶ್ರೀ ಮಾರ್ಕಂಡೇಯನು ಹೇಳುತ್ತಾನೆ —ದೊರೆಯೆ! ಅನಂತರ ಪುರಾತನವೂ, ಬ್ರಹ್ಮಹತ್ಯೆಯನ್ನು ನಿವಾರಿಸುವುದೂ, ಕಾಶಿಗೆ ಸಮವೂ ಆದ ನರ್ಮದಾನದಿಯ ತೀರ್ಥವೊಂದಕ್ಕೆ ಹೋಗಬೇಕು.

೨. ಯುಧಿಷ್ಠಿರನು ಹೇಳುತ್ತಾನೆ —ಮುನಿಯೆ! ನರ್ಮದಾನದಿಯ ದಡದಲ್ಲಿ ನಡೆದ ಆಶ್ಚರ್ಯವನ್ನು ಹೇಳು. ಇದು ಕಾಶಿಗೆ ಹೇಗೆ ಸಮವಾಯಿತೆಂಬುದನ್ನೂ ತಿಳಿಸು.

೩. ರಾಜ್ಯವನ್ನು ಕಳೆದುಕೊಂಡ ನಾನು ದುಃಖಕರವಾದ ಸಂಸಾರದಲ್ಲಿ ಮುಳುಗಿರುವೆನು. ಈಗ ಬಾಂಧವರೊಡನೆ ನಿಮ್ಮ ಮಾತೆಂಬ ಜಲದಲ್ಲಿ ಮಿಂದು ದುಃಖರಹಿತನಾಗುವೆನು.

೪. ಶ್ರೀಮಾರ್ಕಂಡೇಯನು ಹೇಳುತ್ತಾನೆ:—ಚಂದ್ರವಂಶಕ್ಕೆ ಅಲಂಕಾರನೂ, ಮಹಾಬಾಹುವೂ ಆದ ಧರ್ಮರಾಜನೆ! ಒಳ್ಳೆಯದು. ದುರ್ಲಭವೂ, ಅತಿಗುಹ್ಯವೂ ಆದ ಆ ತೀರ್ಥವನ್ನು ಕೇಳುವೆ.

೫—೭. ಮೊದಲು ಸಮಸ್ತಜಗತ್ತುಗಳಿಗೆ ಸ್ವಾಮಿಯಾದ ಪಿತಾಮಹನ

ಮರೀಚಿಮತ್ರ್ಯಂಗಿರಸೌ ಪುಲಸ್ತ್ಯಂ ಪುಲಹಂ ಕ್ರತುಂ ।
ಪ್ರಚೇತಸಂ ವಸಿಷ್ಠಂ ಚ ಭೃಗುಂ ನಾರದಮೇವ ಚ ॥ ೬ ॥
ಜಜ್ಞೇ ಪ್ರಾಚೇತಸಂ ದಕ್ಷಂ ಮಹಾತೇಜಾಃ ಪ್ರಜಾಪತಿಃ ।
ದಕ್ಷಸ್ಯಾಽಪಿ ತಥಾ ಜಾತಾಃ ಪಂಚಾಶದ್ದುಹಿತಾಃ ಕಿಲ ॥ ೭ ॥
ದದೌ ಸ ದಶ ಧರ್ಮಾಯ ಕಶ್ಯಪಾಯ ತ್ರಯೋದಶ ।
ತಥೈವ ಸ ಮಹಾಭಾಗಃ ಸಪ್ತವಿಂಶತಿಮಿಂದವೇ ॥ ೮ ॥
ರೋಹಿಣೀ ನಾಮ ಯಾ ತಾಸಾಮಭೀಷ್ಟಾ ಸಾಽಭವದ್ವಿಧೋಃ ।
ಶೇಷಾಸು ಕರುಣಾಂ ಕೃತ್ವಾ ಶಪ್ತೋ ದಕ್ಷೇಣ ಚಂದ್ರಮಾಃ ॥ ೯ ॥
ಕ್ಷಯರೋಗ್ಯಭವಚ್ಚಂದ್ರೋ ದಕ್ಷಸ್ಯಾಽಯಂ ಪ್ರಜಾಪತೇಃ ।
ಸ ಚ ಶಾಪಪ್ರಭಾವೇಣ ನಿಸ್ತೇಜಾಃ ಶರ್ವರೀಪತಿಃ ॥ ೧೦ ॥
ಗತಃ ಪಿತಾಮಹಂ ಸೋಮೋ ವೇಪಮಾನೋಽಮೃತಾಂಶುಮಾನ್ ।
ಪದ್ಮಯೋನೇ ನಮಸ್ತುಭ್ಯಂ ವೇದಗರ್ಭ ನಮೋಽಸ್ತುತೇ ।
ಶರಣಂ ತ್ವಾಂ ಪ್ರಪನ್ನೋಽಸ್ಮಿ ಪಾಹಿ ಮಾಂ ಕಮಲಾಸನ ॥ ೧೧ ॥

ಬ್ರಹ್ಮೋವಾಚ:—

ನಿಸ್ತೇಜಾಃ ಶರ್ವರೀನಾಥ ಕಲಾಹೀನಶ್ಚ ದೃಶ್ಯಸೇ ।
ಉದ್ವಿಗ್ನಮಾನಸಸ್ತ್ವಾತ ಸಂಜಾತಃ ಕೇನ ಹೇತುನಾ ॥ ೧೨ ॥

---

ಮನಸ್ಸಿನಿಂದ ಮರೀಚಿ, ಅತ್ರಿ, ಅಂಗಿರಸ್ಸು, ಪುಲಸ್ತ್ಯ, ಪುಲಹ, ಕ್ರತು, ವಸಿಷ್ಠ, ಭೃಗು, ನಾರದ, ದಕ್ಷ ಎಂಬ ಹತ್ತುಮಂದಿ ಮುನಿಗಳು ಹುಟ್ಟಿದರು. ದಕ್ಷನಿಗೂ ಐವತ್ತುಮಂದಿ ಹೆಣ್ಣುಮಕ್ಕಳಾದರು.

೮. ಆ ದಕ್ಷನು ಹತ್ತುಮಂದಿ ಕನ್ಯೆಯರನ್ನು ಯಮಧರ್ಮನಿಗೂ, ಹದಿಮೂರು ಮಂದಿಗಳನ್ನು ಕಶ್ಯಪನಿಗೂ, ಇಪ್ಪತ್ತೇಳು ಮಂದಿಗಳನ್ನು ಚಂದ್ರನಿಗೂ ಮದುವೆ ಮಾಡಿಕೊಟ್ಟನು.

೯. ಅವರಲ್ಲಿ ರೋಹಿಣಿಯೆಂಬವಳು ಚಂದ್ರನಿಗೆ ಪ್ರಿಯಳಾದಳು. ಅದರಿಂದ ದಕ್ಷನು ಉಳಿದ ಮಕ್ಕಳಲ್ಲಿ ಕರುಣೆಗೊಂಡು ಚಂದ್ರನನ್ನು ಶಪಿಸಿದನು.

೧೦. ಆ ಚಂದ್ರನು ದಕ್ಷನ ಶಾಪದ ಪ್ರಭಾವದಿಂದ ಕ್ಷಯರೋಗವನ್ನು ಹೊಂದಿ ತೇಜೋಹೀನನಾದನು.

೧೧. ಬಳಿಕ ಅಮೃತಕಿರಣಗಳುಳ್ಳ ಆ ಚಂದ್ರನು ನಡುಗುತ್ತ ಬ್ರಹ್ಮನೆಡೆಗೆ ಹೋಗಿ, "ಪದ್ಮಸಂಭವನೂ, ವೇದಗರ್ಭನೂ ಆದ ಬ್ರಹ್ಮನೆ! ನಮಸ್ಕಾರವು. ನಿನ್ನನ್ನು ಮರೆಹೊಕ್ಕಿರುವೆನು. ನನ್ನನ್ನು ಕಾಪಾಡು" ಎಂದು ಬೇಡಿಕೊಂಡನು.

೧೨. ಬ್ರಹ್ಮನು ಹೇಳುತ್ತಾನೆ:—ನಿಶಾನಾಥ! ನೀನು ತೇಜೋಹೀನನೂ,

**ಸೋಮ ಉವಾಚ :—**
**ದಕ್ಷಶಾಪೇನ ಮೇ ಬ್ರಹ್ಮನ್ನಿಸ್ತೇಜತ್ವಂ ಜಗತ್ಪತೇ ।**
**ನಿರ್ಹಾರಶ್ಚಾಽಸ್ಯ ಶಾಪಸ್ಯ ಕಥ್ಯತಾಂ ಮೇ ಪಿತಾಮಹ ॥ ೧೩**
**ಬ್ರಹ್ಮೋವಾಚ :—**
**ಸರ್ವತ್ರ ಸುಲಭಾ ರೇವಾ ತ್ರಿಷು ಸ್ಥಾನೇಷು ದುರ್ಲಭಾ ।**
**ಓಂಕಾರೇಽಥ ಭೃಗುಕ್ಷೇತ್ರೇ ತಥಾ ಚೈವೌರ್ವಸಂಗಮೇ ॥ ೧೪ ॥**
**ತತ್ರ ಗಚ್ಛ ಕ್ಷಪಾನಾಥ ಯತ್ರ ರೇವಾಂತರಂ ತಟಂ ।**
**ತ್ವರಿತೋಽಸೌ ಗತಸ್ತತ್ರ ಯತ್ರ ರೇವೌರ್ವಿಸಂಗಮಃ ॥ ೧೫ ॥**
**ಕಾಷ್ಠಾವಸ್ಥಃ ಸ್ಥಿತಃ ಸೋಮೋ ದಧ್ಯೌ ತ್ರಿಪುರವೈರಿಣಂ ।**
**ಯಾವದ್ವರ್ಷಶತಂ ಪೂರ್ಣಂ ತಾವತ್ತುಷ್ಟೋ ಮಹೇಶ್ವರಃ ॥ ೧೬ ॥**
**ಪ್ರತ್ಯಕ್ಷಃ ಸೋಮರಾಜಸ್ಯ ವೃಷಾಸನ ಉಮಾಪತಿಃ ।**
**ಸಾಷ್ಟಾಂಗಂ ಪ್ರಣಿಪತ್ಯೋಚ್ಚೈರ್ಜಯ ಶಂಭೋ ನಮೋಽಸ್ತು ತೇ ॥ ೧೭ ॥**
**ಜಯ ಶಂಕರ ಪಾಪಹರಾಯ ನಮೋ**
**ಜಯ ಈಶ್ವರ ಹೇ ಜಗದೀಶ ನಮಃ ।**
**ಜಯ ವಾಸುಕಿಭೂಷಣಧಾರ ನಮೋ**
**ಜಯ ಶೂಲಕಪಾಲಧರಾಯ ನಮಃ ॥ ೧೮ ॥**

---

ಕಳೆಯಿಲ್ಲದವನೂ, ವ್ಯಥೆಗೊಂಡ ಮನಸ್ಸುಳ್ಳವನೂ ಆಗಿ ಕಾಣುವೆ, ಏಕೆ ಹೀಗಾದೆ ?

೧೩. ಸೋಮನು ಹೇಳುತ್ತಾನೆ —'' ಪಿತಾಮಹ! ನಾನು ದಕ್ಷನ ಶಾಪದಿಂದ ತೇಜೋಹೀನನಾಗಿರುವೆನು. ಈ ಶಾಪಕ್ಕೆ ಪ್ರತೀಕಾರವನ್ನು ನನಗೆ ಹೇಳು.

೧೪. ಬ್ರಹ್ಮನು ಹೇಳುತ್ತಾನೆ –ನರ್ಮದಾನದಿಯು ಸಕಲ ಸ್ಥಳಗಳಲ್ಲಿಯೂ ಸುಲಭವಾಗಿರುವುದು ಆದರೆ ಓಂಕಾರ, ಭೃಗು, ಔರ್ವ ಸಂಗಮಕ್ಷೇತ್ರಗಳಲ್ಲಿ ದುರ್ಲಭವಾದುದು.

೧೫. ಚಂದ್ರ! ನೀನು ನದಿಯಾದ ಊರಿಯು ನೇರಿರುವ ನರ್ಮದಾತಟಕ್ಕೆ ಶೀಘ್ರವಾಗಿ ಹೋಗು.

೧೬–೧೭. ಚಂದ್ರನು ಅಲ್ಲಿಗೈತಂದು ತಪಸ್ಸುಮಾಡಿ ಕಾಷ್ಠದಂತಾಗಿ ಶಂಕರನನ್ನು ಧ್ಯಾನಿಸಿದನು. ಹೀಗೆ ನೂರುವರ್ಷಗಳಾಗಲು ಶಂಕರನು ವೃಷಭಾರೂಢನಾಗಿ ಪ್ರತ್ಯಕ್ಷನಾದನು. ಆಗ ಚಂದ್ರನು ಸಾಷ್ಟಾಂಗ ನಮಸ್ಕಾರಮಾಡಿ ಹೀಗೆ ಸ್ತುತಿಸಿದನು. '' ಶಂಕರ! ನಿನಗೆ ನಮಸ್ಕಾರವು.

೧೮–೧೯. ಅಂಧಕಾಸುರ ದೇಹವನ್ನು ನಾಶಗೊಳಿಸಿದ ಶಂಕರ! ಜಯಿಸು.

ಜಯ ಅಂಧಕ ದೇಹ ವಿನಾಶ ನಮೋ
ಜಯದಾನವವೃಂದವಧಾಯ ನಮಃ ।
ಜಯ ನಿಷ್ಕಲರೂಪ ಸಕಲಾಯ ನಮೋ
ಜಯ ಕಾಲ ಕಾಮದಹಾಯ ನಮಃ ॥ ೧೯ ॥
ಜಯ ಮೇಚಕಕಂಠಧರಾಯ ನಮೋ
ಜಯಸೂಕ್ಷ್ಮನಿರಂಜನಶಬ್ದ ನಮಃ ।
ಜಯ ಆದಿರನಾದಿರನಂತ ನಮೋ
ಜಯ ಶಂಕರ ಕಿಂಕರಮಾಶು ಭಜೇ ॥ ೨೦ ॥
ಏವಂ ಸ್ತುತೋ ಮಹಾದೇವಃ ಸೋಮರಾಜೇನ ಪಾಂಡವ ।
ತುಷ್ಟಸ್ತಸ್ಯ ನೃಪಶ್ರೇಷ್ಠ ಶಿವಯಾ ಶಂಕರೋಽಬ್ರವೀತ್ ॥ ೨೧ ॥
ಈಶ್ವರ ಉವಾಚ :—
ವರಂ ಪ್ರಾರ್ಥಯ ಮೇ ಭದ್ರ ಯತ್ತೇ ಮನಸಿ ವರ್ತತೇ ।
ಸಾಧು ಸಾಧು ಮಹಾಸತ್ವ ತುಷ್ಟೋಽಹಂ ತಪಸಾ ತವ ॥ ೨೨ ॥
ಸೋಮ ಉವಾಚ :—
ದಕ್ಷಶಾಪೇನ ದಗ್ಧೋಽಹಂ ಕ್ಷೀಣಸತ್ವೋ ಮಹೇಶ್ವರ ।
ಶಾಪಸ್ಯೋಪಶಮಂ ದೇವ ಕುರು ಶರ್ಮ ಮಮ ಪ್ರಭೋ ॥ ೨೩ ॥

---

ನಿನಗೆ ನಮಸ್ಕಾರವು. ದಾನವರ ಸಮೂಹವನ್ನು ನಾಶಗೊಳಿಸಿದ ಶಂಕರ! ಜಯಿಸು. ನಿನಗೆ ನಮಸ್ಕಾರವು. ನಿಷ್ಕಲನೂ, ಸಕಲನೂ, ಕಾಲನೂ, ಕಾಮದಾಹಕನೂ ಆದ ಶಂಕರ! ಜಯಿಸು. ನಿನಗೆ ನಮಸ್ಕಾರವು.

೨೦. ನೀಲಕಂಠನೂ, ಸೂಕ್ಷ್ಮನೂ, ದೋಷರಹಿತನೂ, ವೇದಪ್ರತಿಪಾದ್ಯನೂ, ಆದಿಯೂ, ಅನಾದಿಯೂ ಆದ ಶಂಕರ! ಜಯಿಸು. ನಿನಗೆ ನಮಸ್ಕಾರವು. ಸೇವಕನಾದ ನನ್ನನ್ನು ರಕ್ಷಿಸು.

೨೧. ಯುಧಿಷ್ಠಿರ! ಚಂದ್ರನು ಹೀಗೆ ಸ್ತುತಿಸಲು ಪಾರ್ವತಿಯೊಡನೆ ಸಂತುಷ್ಟನಾದ ಶಂಕರನು ಹೀಗೆಂದನು.

೨೨. ಈಶ್ವರನು ಹೇಳುತ್ತಾನೆ —ಮಹಾ ಸತ್ವಶಾಲಿಯಾದ ಚಂದ್ರನೆ! ನಿನ್ನ ತಪಸ್ಸಿನಿಂದ ನಾನು ಸಂತುಷ್ಟನಾಗಿದ್ದೇನೆ. ನಿನ್ನ ಮನಸ್ಸಿನಲ್ಲಿರುವ ವರವನ್ನು ಬೇಡಿಕೊ.

೨೩. ಸೋಮನು ಹೇಳುತ್ತಾನೆ:—ಮಹೇಶ್ವರ! ನಾನು ದಕ್ಷನ ಶಾಪದಿಂದ ದಗ್ಧನಾಗಿ ಕ್ಷೀಣತೇಜಸ್ಸುಳ್ಳವನಾಗಿರುವೆನು. ನನ್ನ ಶಾಪವನ್ನು ಪರಿಹರಿಸಿ ಸುಖವನ್ನುಂಟುಮಾಡು.

ಈಶ್ವರ ಉವಾಚ:—

ತವ ಭಕ್ತ್ಯಾಗೃಹೀತೋಽಹಮುಮಯಾ ಸಹ ತೋಷಿತಃ ।
ನಿಷ್ಪಾಪಃ ಸೋಮನಾಥಸ್ತ್ವಂ ಸಂಜಾತಸ್ತೀರ್ಥಸೇವನಾತ್ ॥ ೨೪ ॥
ಇತ್ಯುಕ್ತೇ ದೇವದೇವೇಶಃ ಕ್ಷಣಂ ಧ್ಯಾತ್ವೇಂದುನಾ ತತಃ ।
ಸ್ಥಾಪಿತಂ ಪರಮಂ ಲಿಂಗಂ ಕಾಮದಂ ಪ್ರಾಣಿನಾಂ ಭುವಿ ।
ಸರ್ವದುಃಖಹರಂ ತತ್ತು ಬ್ರಹ್ಮಹತ್ಯಾವಿನಾಶನಂ ॥ ೨೫ ॥

ಯುಧಿಷ್ಠಿರ ಉವಾಚ:—

ಸೋಮನಾಥಪ್ರಭಾವಂ ಮೇ ಸಂಕ್ಷೇಪಾತ್ಕಥಯ ಪ್ರಭೋ ।
ದುಃಖಾರ್ಣವನಿಮಗ್ನಾನಾಂ ತ್ರಾತಾ ಪ್ರಾಪ್ತೋ ದ್ವಿಜೋತ್ತಮ ॥ ೨೬ ॥

ಶ್ರೀ ಮಾರ್ಕಂಡೇಯ ಉವಾಚ:—

ಶೃಣು ತೀರ್ಥಪ್ರಭಾವಂ ತೇ ಸಂಕ್ಷೇಪಾತ್ಕಥಯಾಮ್ಯಹಂ ।
ಯದ್ವೃತ್ತಮುತ್ತರೇ ಕೂಲೇ ರೇವಾಯಾ ಉರಿಸಂಗಮೇ ॥ ೨೭ ॥
ಶಂಬರೋ ನಾಮ ರಾಜಾಽಭೂತ್ತಸ್ಯ ಪುತ್ರಸ್ತ್ರಿಲೋಚನಃ ।
ತ್ರಿಲೋಚನಸುತಃ ಕಣ್ವಃ ಸ ಪಾಪರ್ಧಿಪರೋಽಭವತ್ ॥ ೨೮ ॥

---

೨೪. ಈಶ್ವರನು ಹೇಳುತ್ತಾನೆ.—ನಾನು ನಿನ್ನ ಭಕ್ತಿಯಿಂದ ಪಾರ್ವತೀ ಸಹಿತನಾಗಿ ಸಂತೋಷಗೊಂಡಿರುವೆನು. ಚಂದ್ರ! ನೀನು ಈ ತೀರ್ಥಸೇವನೆಯಿಂದ ಪಾಪರಹಿತನಾಗಿರುವೆ.

೨೫. ಶಂಕರನು ಹೀಗೆನ್ನಲು, ಚಂದ್ರನು ಸ್ವಲ್ಪಹೊತ್ತು ಚಿಂತಿಸಿ ಭೂಮಿಯಲ್ಲಿರುವ ಪ್ರಾಣಿಗಳಿಗೆ ಇಷ್ಟಾರ್ಥವನ್ನು ನೀಡುವುದೂ, ಸಮಸ್ತದುಃಖವನ್ನು ಪರಿಹರಿಸುವುದೂ, ಬ್ರಹ್ಮಹತ್ಯೆಯನ್ನು ನಿವಾರಿಸುವುದೂ ಆದ ಲಿಂಗವನ್ನು ಪ್ರತಿಷ್ಠೆಮಾಡಿದನು.

೨೬. ಯುಧಿಷ್ಠಿರನು ಹೇಳುತ್ತಾನೆ.—ಮುನಿವರ್ಯನೆ! ನೀನು ದುಃಖಸಾಗರದಲ್ಲಿ ಮುಳುಗಿದವರನ್ನು ರಕ್ಷಿಸುವ ಸೋಮನಾಥನ ಮಾಹಾತ್ಮ್ಯವನ್ನು ನನಗೆ ಸಂಕ್ಷೇಪವಾಗಿ ಹೇಳು.

೨೭. ಶ್ರೀ ಮಾರ್ಕಂಡೇಯನು ಹೇಳುತ್ತಾನೆ —ನರ್ಮದಾನದಿಯ ಉತ್ತರದಡದಲ್ಲಿರುವ ಉರಿಸಂಗಮದಲ್ಲಿ ನಡೆದ ಈ ತೀರ್ಥದ ಪ್ರಭಾವವನ್ನು ನಿನಗೆ ಸಂಕ್ಷೇಪವಾಗಿ ಹೇಳುವೆನು, ಕೇಳು.

೨೮. ಪೂರ್ವದಲ್ಲಿ ಶಂಬರನೆಂಬ ಒಬ್ಬ ರಾಜನಿದ್ದನು. ಅವನಿಗೆ ತ್ರಿಲೋಚನನೆಂಬ ಸುತನಾದನು. ಆ ತ್ರಿಲೋಚನನಿಗೆ ಕಣ್ವನೆಂಬ ಸುತನು ಜನಿಸಿದನು. ಅವನು ಪಾಪವನ್ನು ಹೆಚ್ಚಿಸುವುದರಲ್ಲಿಯೆ ನಿರತನಾದನು.

ವನೇ ನಿತ್ಯಂ ಭ್ರಮನ್ ಸೋಽಥ ಮೃಗಯೂಥಂ ದದರ್ಶ ಹ ।
ಮೃಗಯೂಥಂ ಹತಂ ತತ್ತು ತ್ರಿಲೋಚನಸುತೇನ ಚ ॥ ೨೯ ॥
ಮೃಗರೂಪೀ ದ್ವಿಜೋ ಮಧ್ಯೇ ಚರತೇ ನಿರ್ಜನೇ ವನೇ ।
ಸಹತಸ್ತೇನ ಸಂಗೇನ ಕಣ್ವೇನ ಮುನಿಸತ್ತಮ ॥ ೩೦ ॥
ಬ್ರಹ್ಮಹತ್ಯಾನ್ವಿತಃ ಕಣ್ವೋ ನಿಸ್ತೇಜಾ ವ್ಯಚರನ್ಮಹೀಂ ।
ವ್ಯಚರಂಶ್ಚೈವ ಸಂಪ್ರಾಪ್ತೋ ನರ್ಮದಾಮುರಿಸಂಗಮೇ ॥ ೩೧ ॥
ಕಿಂಶುಕಾಶೋಕಬಹಲೇ ಜಂಬೀರಪನಸಾಕುಲೇ ।
ಕದಂಬಪಾಟಲಾಕೀರ್ಣೇ ಬಿಲ್ವನಾರಂಗಶೋಭಿತೇ ॥ ೩೨ ॥
ಚಿಂಚಿಣೀಚಂಪಕೋಪೇತೇ ಹ್ಯಗಸ್ತಿತರುಚ್ಛಾದಿತೇ ।
ಪ್ರಭೂತಭೂತಸಂಯುಕ್ತಂ ವನಂ ಸರ್ವತ್ರಶೋಭಿತಂ ॥ ೩೩ ॥
ಚಿತ್ರಕೈರ್ಮೃಗಮಾರ್ಜಾರೈರ್ಹಿಂಸ್ರೈಃ ಶಂಬರಸೂಕರೈಃ ।
ಶಶೈರ್ಗವಯಸಂಯುಕ್ತೈಃ ಶಿಖಂಡಿಖರಮಂಡಿತಂ ॥ ೩೪ ॥
ಪ್ರವಿಷ್ಟಸ್ತು ವನೇ ಕಣ್ವಸ್ತೃಷಾರ್ತಃ ಶ್ರಮಪೀಡಿತಃ ।
ಸ್ನಾತೋ ರೇವಾಜಲೇ ಪುಣ್ಯೇ ಸಂಗಮೇ ಪಾಪನಾಶನೇ ॥ ೩೫ ॥
ಅರ್ಚಿತಃ ಪರಯಾ ಭಕ್ತ್ಯಾ ಸೋಮನಾಥೋ ಯುಧಿಷ್ಠಿರ ।
ಪಪೌ ಸುವಿಮಲಂ ತೋಯಂ ಸರ್ವಪಾಪಕ್ಷಯಂಕರಂ ॥ ೩೬ ॥

---

೨೯. ಆ ಕಣ್ವನು ನಿತ್ಯವೂ ಕಾಡಿನಲ್ಲಿ ಸಂಚರಿಸುತ್ತ ಮೃಗಗಳ ಹಿಂಡನ್ನು ನೋಡಿ ಅದನ್ನು ಕೊಂದನು.

೩೦. ಅದರಿಂದ ಆ ಹಿಂಡಿನ ನಡುವೆ ಮೃಗರೂಪದಿಂದ ನಿರ್ಜನವನದಲ್ಲಿ ಸಂಚರಿಸುತ್ತಿದ್ದ ಬ್ರಾಹ್ಮಣನೊಬ್ಬನು ಹತನಾದನು.

೩೧–೩೬. ಅದರಿಂದ ಆ ಕಣ್ವನು ಬ್ರಹ್ಮಹತ್ಯೆಗೊಳಗಾದನು. ನಿಸ್ತೇಜಸ್ಕನಾಗಿ ಅವನು ಭೂಮಿಯಲ್ಲಿ ಸಂಚರಿಸುತ್ತ ನರ್ಮದಾನದಿಯಲ್ಲಿರುವ ಕಿಂಶುಕ, ಅಶೋಕ, ನಿಂಬೆ, ಹಲಸು, ಕದಂಬ, ಪಾಟಲ, ಬಿಲ್ವ, ಕಿತ್ತಳೆ, ಹುಣಸೆ, ಸಂಪಗೆ, ಅಗಸೆ ಮರಗಳಿಂದ ತುಂಬಿರುವ ಉರಿಸಂಗಮದಲ್ಲಿ ಅನೇಕ ಪ್ರಾಣಿಗಳಿಂದ ಕೂಡಿರುವುದೂ, ಎಲ್ಲೆಡೆಯಲ್ಲಿಯೂ ಶೋಭಿಸುವುದೂ, ಚಿರತೆ, ಜಿಂಕೆ, ಮಾರ್ಜಾರ, ಶಂಬರ, ಹಂದಿ, ಮೊಲ, ಗವಯ, ನವಿಲು, ಕತ್ತೆ ಇವುಗಳಿಂದ ಅಲಂಕಾರಗೊಂಡುದೂ ಆದ ವನವನ್ನು ಪ್ರವೇಶಿಸಿ ಬಾಯಾರಿಕೆ ಆಯಾಸಗಳಿಂದ ಪೀಡಿತನಾಗಿ ಪುಣ್ಯಕರವೂ, ಪಾಪನಾಶಕವೂ ಆದ ನರ್ಮದಾನದಿಯ ನೀರಿನಲ್ಲಿ ಮಿಂದು ಅತಿ ಭಕ್ತಿಯಿಂದ ಸೋಮನಾಥನನ್ನು ಪೂಜಿಸಿ ಸಮಸ್ತಪಾಪಗಳನ್ನೂ ಪರಿಹರಿಸುವ ಆ ನರ್ಮದಾಜಲವನ್ನು ಕುಡಿದನು.

ಫಲಾನಿ ಚ ವಿಚಿತ್ರಾಣಿ ಚಖಾದ ಸಹ ಕಿಂಕರೈಃ ।
ಸುಪ್ತಃ ಪಾದಪಚ್ಛಾಯಾಯಾಂ ಶ್ರಾಂತೋ ಮೃಗವಧೇನ ಚ ॥ ೩೭ ॥
ತಾವತ್ತೀರ್ಥವರಂ ವಿಪ್ರಃ ಸ್ನಾನಾರ್ಥಂ ಸಂಗಮಂ ಗತಃ ।
ಮಾರ್ಗಗೋ ಬ್ರಾಹ್ಮಣೋ ಹರ್ಷೋದ್ಯುಕ್ತಸ್ತದ್ಗತಮಾನಸಃ ॥ ೩೮ ॥
ಅಬಲಾ ತಮುವಾಚೇದಂ ತಿಷ್ಠ ತಿಷ್ಠ ದ್ವಿಜೋತ್ತಮ ।
ತ್ರಸ್ತೋ ನಿರೀಕ್ಷತೇ ಯಾವದ್ದಿಶಃ ಸರ್ವಾ ನರೇಶ್ವರ ॥ ೩೯ ॥
ತಾವದ್ವೃಕ್ಷಸಮಾರೂಢಾಂ ಸ್ತ್ರಿಯಂ ರಕ್ತಾಂಬರಾವೃತಾಂ ।
ರಕ್ತಮಾಲ್ಯಾಂ ತದಾ ಬಾಲಾ ರಕ್ತಚಂದನಚರ್ಚಿತಾಂ ।
ರಕ್ತಾಭರಣಶೋಭಾಢ್ಯಾಂ ಪಾಶಹಸ್ತಾಂ ದದರ್ಶ ಹ ॥ ೪೦ ॥

ಸ್ತ್ರ್ಯುವಾಚ :—

ಸಂದೇಶಂ ಶ್ರೂಯತಾಂ ವಿಪ್ರ ಯದಿ ಗಚ್ಛಸಿ ಸಂಗಮೇ ।
ಮದ್ಭರ್ತಾ ತಿಷ್ಠತೇ ತತ್ರ ಶೀಘ್ರಮೇವ ವಿಸರ್ಜಯ ॥ ೪೧ ॥
ಏಕಾಕಿನೀ ಚ ತೇ ಭಾರ್ಯಾ ತಿಷ್ಠತೇ ವನಮಧ್ಯಗಾ ।
ಇತ್ಯಾಕರ್ಣ್ಯ ಗತೋ ವಿಪ್ರಃ ಸಂಗಮೇ ಸುರದುರ್ಲಭೇ ॥ ೪೨ ॥

---

೩೭. ಸೇವಕರೊಡನೆ ವಿಚಿತ್ರಫಲಗಳನ್ನು ತಿಂದು ಮೃಗಗಳ ಬೇಟೆಯಿಂದ ಬಳಲಿದ ಆವನು ಮರದ ನೆರಳಿನಲ್ಲಿ ನಿದ್ರಿಸಿದನು.

೩೮. ಅಷ್ಟರಲ್ಲಿ ಮಾರ್ಗಸ್ಥನೂ, ಹರ್ಷಗೊಂಡವನೂ, ತೀರ್ಥಾಸಕ್ತ ಮನಸ್ಸುಳ್ಳವನೂ ಆದ ಒಬ್ಬ ಬ್ರಾಹ್ಮಣನು ಸ್ನಾನಕ್ಕಾಗಿ ಆ ಸಂಗಮತೀರ್ಥಕ್ಕೆ ಬಂದನು.

೩೯–೪೦. ಆಗ ಒಬ್ಬ ಹೆಂಗಸು, "ಬ್ರಾಹ್ಮಣೋತ್ತಮ ! ನಿಲ್ಲು, ನಿಲ್ಲು." ಎಂದಳು. ಬ್ರಾಹ್ಮಣನು ಭಯಗೊಂಡು ಸಮಸ್ತದಿಕ್ಕುಗಳನ್ನು ನೋಡುವಷ್ಟರಲ್ಲಿ ಮರವನ್ನೇರಿದವಳೂ, ಕೆಂಪುಬಟ್ಟೆಯನ್ನುಟ್ಟವಳೂ, ಕೆಂಪುಮಾಲೆಯುಳ್ಳವಳೂ, ಕೆಂಪುಗಂಧದಿಂದ ಲೇಪಿತಳೂ, ಕೆಂಪು ಆಭರಣಗಳ ಕಾಂತಿಯಿಂದ ಕೂಡಿದವಳೂ, ಪಾಶವನ್ನು ಹಿಡಿದವಳೂ ಆದ ಓರ್ವ ಹೆಂಗಸು ಕಾಣಿಸಿಕೊಂಡಳು.

೪೧–೪೨. ಸ್ತ್ರೀಯು ಹೇಳುತ್ತಾಳೆ:—"ವಿಪ್ರ ! ನೀನು ಸಂಗಮತೀರ್ಥಕ್ಕೆ ಹೋಗುವುದಾದರೆ ನನ್ನೀಸಂದೇಶವನ್ನು ಕೇಳು. ನನ್ನ ಪತಿಯು ಅಲ್ಲಿದ್ದಾನೆ. ನೀನು ಅವನಿಗೆ, 'ನಿನ್ನ ಪತ್ನಿಯು ವನಮಧ್ಯದಲ್ಲಿ ಒಬ್ಬಂಟಿಗಳಾಗಿದ್ದಾಳೆ' ಎಂದು ಹೇಳಿ ಬೇಗನೆ ಅವನನ್ನು ಇಲ್ಲಿಗೆ ಕಳುಹಿಸು." ಬ್ರಾಹ್ಮಣನು ಇದನ್ನು ಕೇಳಿ ದೇವದುರ್ಲಭವಾದ ಆ ಸಂಗಮತೀರ್ಥಕ್ಕೆ ಹೋದನು.

ವೃಕ್ಷಚ್ಛಾಯಾನ್ವಿತಃ ಕಣ್ವೋ ಬ್ರಾಹ್ಮಣೇನಾವಲೋಕಿತಃ ।
ಉವಾಚ ತಂ ಪ್ರತಿ ತದಾ ವಚನಂ ಬ್ರಾಹ್ಮಣೋತ್ತಮಃ ॥ ೪೩ ॥

ಬ್ರಾಹ್ಮಣ ಉವಾಚ :—

ವನಾಂತರೇ ಮಯಾ ದೃಷ್ಟಾ ಬಾಲಾ ಕಮಲಲೋಚನಾ ।
ರಕ್ತಾಂಬರಧರಾ ತನ್ವೀ ರಕ್ತಚಂದನಚರ್ಚಿತಾ ॥ ೪೪ ॥
ರಕ್ತಮಾಲ್ಯಾ ಸುಶೋಭಾಢ್ಯಾ ಪಾಶಹಸ್ತಾ ಮೃಗೇಕ್ಷಣಾ ।
ವೃಕ್ಷಾರೂಢಾಽವದದ್ವಾಕ್ಯಂ ಮದ್ಭರ್ತಾ ಪ್ರೇಷ್ಯತಾಮಿತಿ ॥ ೪೫ ॥

ಕಣ್ವ ಉವಾಚ :—

ಕಸ್ಮಿನ್ ಸ್ಥಾನೇ ತು ವಿಪ್ರೇಂದ್ರ ವಿದ್ಯತೇ ಮೃಗಲೋಚನಾ ।
ಕಸ್ಯ ಸಾ ಕೇನ ಕಾರ್ಯೇಣ ಸರ್ವಮೇತದ್ವದಾಶು ಮೇ ॥ ೪೬ ॥

ಬ್ರಾಹ್ಮಣ ಉವಾಚ :—

ಸಂಗಮಾದರ್ಧಕ್ರೋಶೇ ಸಾ ಉದ್ಯಾನಾಂತೇ ಹಿ ವಿದ್ಯತೇ ।
ವಚನಾದ್ಬ್ರಾಹ್ಮಣಸ್ಯೈಷಾ ನ ಜ್ಞಾತಾ ಪಾರ್ಥಿವೇನ ತು ॥ ೪೭ ॥
ತದಾ ಸ ಕಣ್ವಭೂಪಾಲಃ ಸ್ವಕಂ ದೂತಂ ಸಮಾದಿಶತ್ ।

ಕಣ್ವ ಉವಾಚ :—

ಗಚ್ಛ ತ್ವಂ ಪೃಚ್ಛ್ಯತಾಂ ತಾಂ ಕ್ವಾ ಗತಾ ಕ್ವಚ ಗಮಿಷ್ಯಸಿ ।
ಪ್ರೇಷಿತಸ್ತ್ವರಿತೋ ದೂತೋ ಗತೋ ನಾರೀಸಮೀಪತಃ ॥ ೪೮ ॥

---

೪೩. ಅವನು ಮರದ ನೆರಳಿನಲ್ಲಿರುವ ಕಣ್ವನನ್ನು ಕಂಡು ಹೀಗೆಂದನು.

೪೪–೪೫. ಬ್ರಾಹ್ಮಣನು ಹೇಳುತ್ತಾನೆ —"ನಾನು ವನಮಧ್ಯದಲ್ಲಿ ಕಮಲದಂತೆ ಕಣ್ಣುಗಳುಳ್ಳವಳೂ, ರಕ್ತವಸ್ತ್ರವನ್ನುಟ್ಟವಳೂ, ಕೃಶಳೂ, ಕೆಂಪುಗಂಧದಿಂದ ಲಿಪ್ತಳೂ, ಕೆಂಪುಮಾಲೆಯುಳ್ಳವಳೂ, ಅತ್ಯಂತ ಕಾಂತಿಯಿಂದ ಕೂಡಿದವಳೂ, ಕೈಯಲ್ಲಿ ಹಗ್ಗವನ್ನು ಹಿಡಿದಿರುವವಳೂ, ಮರವನ್ನೇರಿದವಳೂ ಆದ ಒಬ್ಬ ಸ್ತ್ರೀಯನ್ನು ಕಂಡೆನು. ಅವಳು ನನ್ನ ಪ್ರಿಯನನ್ನು ಕಳುಹಿಸು" ಎಂದಳು.

೪೬. ಕಣ್ವನು ಹೇಳುತ್ತಾನೆ.—ಬ್ರಾಹ್ಮಣೋತ್ತಮನೆ! ಆ ಮೃಗಾಕ್ಷಿಯು ಎಲ್ಲಿರುವಳು? ಯಾರ ಸಂಬಂಧಿಕಳು? ಯಾವ ಕೆಲಸಕ್ಕಾಗಿ ಅಲ್ಲಿರುವಳು? ಇದನ್ನೆಲ್ಲ ನನಗೆ ಬೇಗನೆ ಹೇಳು.

೪೭. ಬ್ರಾಹ್ಮಣನು ಹೇಳುತ್ತಾನೆ:—"ಆ ಸ್ತ್ರೀಯು ಸಂಗಮಕ್ಕಿಂತ ಒಂದು ಮೈಲಿ ದೂರದಲ್ಲಿರುವ ಉದ್ಯಾನದ ನಡುವೆ ಇರುವಳು." ದೊರೆಯು ಬ್ರಾಹ್ಮಣನ ಮಾತಿನಿಂದ ಅವಳನ್ನು ತಿಳಿಯಲಿಲ್ಲ.

೪೮. ಆಗ ಆ ಕಣ್ವರಾಜನು ತನ್ನ ದೂತನನ್ನು ಆಜ್ಞಾಪಿಸಿದನು. ಕಣ್ವನು

ವೃಕ್ಷಸ್ಥಾಂ ದದೃಶೇ ಬಾಲಾಮುವಾಚ ನೃಪಸತ್ತಮ ।
ಮನ್ನಾಥಃ ಪೃಚ್ಛತಿ ತ್ವಾಂ ತು ಕಾಽಸಿ ತ್ವಂ ಕ್ವ ಗಮಿಷ್ಯಸಿ ॥ ೪೯ ॥
ಕನ್ಯೋವಾಚ :—
ಗುರುರಾತ್ಮವತಾಂ ಶಾಸ್ತಾ ರಾಜಾ ಶಾಸ್ತಾ ದುರಾತ್ಮನಾಂ ।
ಇಹ ಪ್ರಚ್ಛನ್ನಪಾಪಾನಾಂ ಶಾಸ್ತಾ ವೈವಸ್ವತೋ ಯಮಃ ॥ ೫೦ ॥
ಬ್ರಹ್ಮಹತ್ಯಾ ಚ ಸಂಜಾತಾ ಮೃಗರೂಪಧರದ್ವಿಜಾತ್ ।
ಮಯಾ ಯುಕ್ತೋಽಪಿ ತೇ ರಾಜಾ ಮುಕ್ತಸ್ತೀರ್ಥಪ್ರಭಾವತಃ ॥ ೫೧ ॥
ಅರ್ಧಕ್ರೋಶಾಂತರಾನ್ಮಧ್ಯೇ ಬ್ರಹ್ಮಹತ್ಯಾ ನ ಸಂವಿಶೇತ್ ।
ಸೋಮನಾಥಪ್ರಭಾವೋಽಯಂ ವಾರಾಣಸ್ಯಾಃ ಸಮಃ ಸ್ಮೃತಃ ॥ ೫೨ ॥
ಗಚ್ಛ ತ್ವಂ ಪ್ರೇಷ್ಯತಾಂ ರಾಜಾ ಶೀಘ್ರಮತ್ರ ನ ಸಂಶಯಃ ।
ಗತೋ ಭೃತ್ಯಸ್ತತಃ ಶೀಘ್ರಂ ವೇಪಮಾನಃ ಸುವಿಹ್ವಲಃ ॥ ೫೩ ॥
ಸಮಸ್ತಂ ಕಥಯಾಮಾಸ ಯದ್ವೃತ್ತಂ ಹಿ ಪುರಾತನಂ ।
ತಸ್ಯ ವಾಕ್ಯಾದಸೌ ರಾಜಾ ಪತಿತೋ ಧರಣೀತಲೇ ॥ ೫೪ ॥

---

ಹೇಳುತ್ತಾನೆ —ದೂತ! ನೀನು ಹೋಗು. 'ಎಲ್ಲಿಂದ ಬಂದೆ? ಎಲ್ಲಿಗೆ ಹೋಗುವೆ' ಎಂದು ಆ ಹೆಂಗಸನ್ನು ಪ್ರಶ್ನಿಸು. ಹೀಗೆ ಹೇಳಿ ದೂತನನ್ನು ಕಳುಹಿಸಲು ಅವನು ಆ ಸ್ತ್ರೀಯ ಬಳಿಗೆ ಹೋದನು.

೪೯. ಮರದ ಮೇಲೆ ಕುಳಿತಿರುವ ಅಂಗನೆಯನ್ನು ಕಂಡು ಆ ದೂತನು "ನೀನು ಯಾರು? ಎಲ್ಲಿಗೆ ಹೋಗುವೆ? ಎಂದು ನಮ್ಮ ಸ್ವಾಮಿಯು ನಿನ್ನನ್ನು ಕೇಳುತ್ತಾನೆ" ಎಂದನು.

೫೦. ಕನ್ಯೆಯು ಹೇಳುತ್ತಾಳೆ —"ಜ್ಞಾನವುಳ್ಳವರಿಗೆ ಗುರುವೂ, ದುರಾತ್ಮರಿಗೆ ರಾಜನೂ, ಗುಟ್ಟಾಗಿ ಪಾಪಮಾಡಿದವರಿಗೆ ಯಮನೂ ಶಿಕ್ಷಿಸುವವರಾಗಿರುವರು.

೫೧. ನಿಮ್ಮ ರಾಜನಿಗೆ ಮೃಗರೂಪಿಯಾದ ಬ್ರಾಹ್ಮಣನನ್ನು ಕೊಂದುದರಿಂದ ಬ್ರಹ್ಮಹತ್ಯೆಯುಂಟಾಗಿದೆ. ಅವನು ನನ್ನಿಂದ ಸಹಿತನಾಗಿದ್ದರೂ ಈ ತೀರ್ಥದ ಪ್ರಭಾವದಿಂದ ಮುಕ್ತನಾಗಿರುವನು.

೫೨. ಆ ತೀರ್ಥದ ಒಂದು ಮೈಲಿ ದೂರದವರೆಗೆ ಬ್ರಹ್ಮಹತ್ಯೆಯು ಪ್ರವೇಶಿಸುವುದಿಲ್ಲ. ಈ ಸೋಮನಾಥ ತೀರ್ಥದ ಪ್ರಭಾವವು ಕಾಶಿಗೆ ಸಮವಾಗಿರುವುದು.

೫೩–೫೪. ನೀನು ಹೋಗು, ಬೇಗನೆ ರಾಜನನ್ನು ಇಲ್ಲಿಗೆ ಕಳುಹಿಸು." ಭೃತ್ಯನು ಬೇಗನೆ ಹೋಗಿ ಭಯದಿಂದ ನಡುಗುತ್ತ ನಡೆದ ಸಮಾಚಾರವನ್ನೆಲ್ಲವನ್ನೂ ಹೇಳಿದನು. ಅವನ ಮಾತಿನಿಂದ ರಾಜನು ಮೂರ್ಛಿತನಾಗಿಬಿದ್ದನು.

ಭೃತ್ಯ ಉವಾಚ :—
ಕಸ್ಮಾತ್ತ್ವಂ ಶೋಚಸೇ ನಾಥ ಪೂರ್ವೋಪಾತ್ತಂ ಶುಭಾಽಶುಭಂ ।
ಇತ್ಯಾಕರ್ಣ್ಯ ವಚಸ್ತಸ್ಯ ರಾಜಾ ವಚನಮಬ್ರವೀತ್ ॥ ೫೫ ॥
ಪ್ರಾಣತ್ಯಾಗಂ ಕರಿಷ್ಯಾಮಿ ಸೋಮನಾಥಸಮೀಪತಃ ।
ಶೀಘ್ರಮಾನೀಯತಾಂ ವಹ್ನಿರಿಂಧನಾನಿ ಬಹೂನಿ ಚ ॥ ೫೬ ॥
ಆನೀತಂ ತತ್ಕ್ಷಣಾತ್ಸರ್ವಂ ಭೃತ್ಯೈಸ್ತದ್ವಶವರ್ತಿಭಿಃ ।
ಸ್ನಾನಂ ಕೃತ್ವಾ ಶುಭೇ ತೋಯೇ ಸಂಗಮೇ ಪಾಪನಾಶನೇ ॥ ೫೭ ॥
ಅರ್ಚಿತಃ ಪರಯಾ ಭಕ್ತ್ಯಾ ಸೋಮನಾಥೋ ಮಹೀಭೃತಾ ।
ತ್ರಿಃಪ್ರದಕ್ಷಿಣತಃ ಕೃತ್ವಾ ಜ್ವಲಂತಂ ಜಾತವೇದಸಂ ॥ ೫೮ ॥
ಪ್ರವಿಷ್ಟಃ ಕಣ್ವರಾಜೋಽಸೌ ಹೃದಿ ಧ್ಯಾತ್ವಾ ಜನಾರ್ದನಂ ।
ಪೀತಾಂಬರಧರಂ ದೇವಂ ಜಟಾಮುಕುಟಧಾರಿಣಂ ॥ ೫೯ ॥
ಶ್ರಿಯಾ ಯುಕ್ತಂ ಸುಪರ್ಣಸ್ಥಂ ಶಂಖಚಕ್ರಗದಾಧರಂ ।
ಸುರಾಽರಿಸೂದನಂ ದಧ್ಯೌ ಸುಗತಿರ್ಮೇ ಭವತ್ವಿತಿ ॥ ೬೦ ॥
ಪಪಾತ ಪುಷ್ಪವೃಷ್ಟಿಸ್ತು ಸಾಧು ಸಾಧು ನೃಪಾತ್ಮಜ ।
ಆಶ್ಚರ್ಯಮತುಲಂ ದೃಷ್ಟ್ವಾ ನಿರೀಕ್ಷ್ಯ ಚ ಪರಸ್ಪರಂ ॥ ೬೧ ॥
ಮೃತಂ ತೈಃ ಪಾವಕೇ ಭೃತ್ಯೈರ್ಹೃದಿ ಧ್ಯಾತ್ವಾ ಗದಾಧರಂ ।
ವಿಮಾನಸ್ಥಾಸ್ತತಃ ಸರ್ವೇ ಸಂಜಾತಾಃ ಪಾಂಡುನಂದನ ॥ ೬೨ ॥

---

೫೫. ಭೃತ್ಯನು ಹೇಳುತ್ತಾನೆ:—ಸ್ವಾಮಿ! ನೀನು ಹಿಂದೆಮಾಡಿದ ಶುಭಾಶುಭವನ್ನು ಕುರಿತು ಏತಕ್ಕೆ ದುಃಖಿಸುತ್ತಿರುವೆ? ರಾಜನು ಭೃತ್ಯನ ಆ ಮಾತನ್ನು ಕೇಳಿ ಹೀಗೆಂದನು.

೫೬. "ನಾನು ಸೋಮನಾಥನ ಸಮೀಪದಲ್ಲಿ ಪ್ರಾಣವನ್ನು ತ್ಯಜಿಸುವೆನು. ಬೇಗನೆ ಬೆಂಕಿಯನ್ನೂ, ಬೇಕಾದಷ್ಟು ಕಟ್ಟಿಗೆಗಳನ್ನೂ ತೆಗೆದುಕೊಂಡು ಬಾ."

೫೭–೬೦. ಅವನ ಅಧೀನದಲ್ಲಿರುವ ಭೃತ್ಯರು ಅದನ್ನೆಲ್ಲ ಕೂಡಲೆ ತಂದರು. ಕಣ್ವರಾಜನು ಪಾಪವನ್ನು ನಿವಾರಿಸುವ ಆ ಸಂಗಮದ ಶುಭಜಲದಲ್ಲಿ ಮಿಂದು ಅತಿಭಕ್ತಿಯಿಂದ ಸೋಮನಾಥನನ್ನಾರಾಧಿಸಿ ಉರಿಯುತ್ತಿರುವ ಅಗ್ನಿಗೆ ಮೂರು ಪ್ರದಕ್ಷಿಣೆಮಾಡಿ ಪೀತಾಂಬರ, ಜಟೆ, ಮುಕುಟಗಳನ್ನು ಧರಿಸಿರುವವನೂ, ಲಕ್ಷ್ಮಿಯಿಂದ ಸಹಿತನೂ, ಗರುಡಾರೂಢನೂ, ಶಂಖ ಚಕ್ರ ಗದೆಗಳನ್ನು ಹಿಡಿದವನೂ, ರಾಕ್ಷಸನಾಶಕನೂ ಆದ ವಿಷ್ಣುವನ್ನು ಮನಸ್ಸಿನಲ್ಲಿ ಧ್ಯಾನಿಸಿ ನನಗೆ ಒಳ್ಳೆಯ ಗತಿಯಾಗಲೆಂದು ಹೇಳಿ ಅಗ್ನಿಯನ್ನು ಪ್ರವೇಶಿಸಿದನು.

೬೧–೬೩. "ರಾಜಕುಮಾರ! ಒಳ್ಳೆಯದು ಒಳ್ಳೆಯದು" ಎಂದು ಹೇಳಿ ದೇವತೆಗಳು ಹೂಮಳೆ ಸುರಿಸಿದರು. ಆ ಸೇವಕರೆಲ್ಲರೂ ಈ ಆಶ್ಚರ್ಯವನ್ನು ಕಂಡು

ನಿಷ್ಪಾಪಾಸ್ತೇ ದಿವಂ ಯಾತಃ ಸೋಮನಾಥಪ್ರಭಾವತಃ ।
ಬ್ರಾಹ್ಮಣೇ ಸಂಗಮೇ ತತ್ರ ಧ್ಯಾಯಮಾನೇ ವೃಷಧ್ವಜಂ ॥ ೬೩ ॥

ಶ್ರೀ ಮಾರ್ಕಂಡೇಯ ಉವಾಚ :—

ಸೋಮನಾಥಪ್ರಭಾವೋಽಯಂ ಶೃಣುಷ್ವೈಕಮನಾ ವಿಧಿಂ ।
ಅಷ್ಟಮ್ಯಾಂ ವಾ ಚತುರ್ದಶ್ಯಾಂ ಸರ್ವಕಾಲಂ ರವೇರ್ದಿನೇ ॥ ೬೪ ॥
ವಿಶೇಷಾಚ್ಛುಕ್ಲಪಕ್ಷೇ ಚೇತ್ಸೂರ್ಯವಾರೇಣ ಸಪ್ತಮೀ ।
ಉಪೋಷ್ಯ ಯೋ ನರೋ ಭಕ್ತ್ಯಾ ರಾತ್ರೌ ಕುರ್ವೀತ ಜಾಗರಂ ॥ ೬೫ ॥
ಪಂಚಾಮೃತೇನ ಗವ್ಯೇನ ಸ್ನಾಪಯೇತ್ಪರಮೇಶ್ವರಂ ।
ಶ್ರೀಖಂಡೇನ ತತೋ ಗಂಧ್ಯ ಪುಷ್ಪಧೂಪಾದಿಕಂ ದದೇತ್ ॥ ೬೬ ॥
ಘೃತೇನ ಬೋಧಯೇದ್ದೀಪಂ ನೃತ್ಯಂ ಗೀತಂ ಚ ಕಾರಯೇತ್ ।
ಸೋಮವಾರೇ ತಥಾಽಷ್ಟಮ್ಯಾಂ ಪ್ರಭಾತೇ ಪೂಜಯೇದ್ದ್ವಿಜಾನ್ ॥ ೬೭ ॥
ಜಿತಕ್ರೋಧಾನಾತ್ಮವತಃ ಪರನಿಂದಾವಿವರ್ಜಿತಾನ್ ।
ಸರ್ವಾಂಗರುಚಿರಾನ್ ಶಸ್ತಾನ್ ಸ್ವದಾರಪರಿಪಾಲಕಾನ್ ॥ ೬೮ ॥
ಗಾಯತ್ರೀಪಾಠಮಾತ್ರಾಂಶ್ಚ ವಿಕರ್ಮವಿರತಾನ್ ಸದಾ ।
ಪುನರ್ಭೂರ್ವೃಷಲೀ ಶೂದ್ರೀ ಚರೇಯುರ್ಯಸ್ಯ ಮಂದಿರೇ ॥ ೬೯ ॥

---

ಪರಸ್ಪರವಾಗಿ ನೋಡಿ ವಿಷ್ಣುವನ್ನು ಧ್ಯಾನಿಸಿ ಅಗ್ನಿಯಲ್ಲಿ ಬಿದ್ದು ಮೃತರಾದರು. ಆ ಬ್ರಾಹ್ಮಣನು ಶಂಕರನನ್ನು ಧ್ಯಾನಿಸುತ್ತಿರಲು ಅವರೆಲ್ಲರೂ ಸೋಮನಾಥನ ಪ್ರಭಾವದಿಂದ ಪಾಪರಹಿತರಾಗಿ ವಿಮಾನವನ್ನೇರಿ ಸ್ವರ್ಗಕ್ಕೆ ತೆರಳಿದರು.

೬೪–೬೫. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:—ಇದು ಸೋಮನಾಥನ ಪ್ರಭಾವವು. ಇದರಲ್ಲಿ ಅನುಷ್ಠಾನ ಮಾಡಬೇಕಾದ ವಿಧಿಯನ್ನು ಕೇಳು. ಮಾನವನು ಶುಕ್ಲಪಕ್ಷದ ಅಷ್ಟಮೀ, ಚತುರ್ದಶೀ, ಸಪ್ತಮೀ ಭಾನುವಾರದ ದಿನಗಳಲ್ಲಿ ಉಪವಾಸಮಾಡಿ ಭಕ್ತಿಯಿಂದ ರಾತ್ರಿ ಜಾಗರಣೆಮಾಡಬೇಕು.

೬೬. ಪಂಚಗವ್ಯ ಪಂಚಾಮೃತಗಳಿಂದ ಪರಮೇಶ್ವರನಿಗೆ ಅಭಿಷೇಕಮಾಡಿ ಗಂಧವನ್ನು ಲೇಪಿಸಿ ಪುಷ್ಪಧೂಪಾದಿಗಳನ್ನು ಸಮರ್ಪಿಸಬೇಕು.

೬೭–೭೦. ತುಪ್ಪದ ದೀಪವನ್ನು ಹೊತ್ತಿಸಿ ನೃತ್ಯಗೀತಗಳನ್ನು ಮಾಡಬೇಕು. ಅಷ್ಟಮೀ ಸೋಮವಾರ ಬೆಳಗ್ಗೆ ಕೋಪವಿಲ್ಲದವರೂ, ಜ್ಞಾನಿಗಳೂ, ಪರರ ನಿಂದೆಯನ್ನು ಮಾಡದವರೂ, ಸರ್ವಾವಯವಗಳಲ್ಲಿ ಸುಂದರರೂ, ಶ್ರೇಷ್ಠರೂ, ತಮ್ಮ ಪತ್ನಿಯನ್ನು ಪಾಲಿಸುವವರೂ, ಗಾಯತ್ರೀ ಮಂತ್ರವನ್ನು ಜಪಿಸುವವರೂ, ದುಷ್ಕರ್ಮಮಾಡದವರೂ ಆದ ಬ್ರಾಹ್ಮಣರನ್ನು ಪೂಜಿಸಬೇಕು. ಆತ್ಮಶ್ರೇಯಸ್ಸನ್ನು ಬಯಸುವವನು ಮನೆಯಲ್ಲಿ ಪುನರ್ಭೂ, ವೃಷಲೀ, ಶೂದ್ರೀ ಇವರನ್ನು ಇಟ್ಟುಕೊಂಡಿರುವ ಬ್ರಾಹ್ಮಣನನ್ನು ದೂರದಲ್ಲಿಯೇ ತ್ಯಜಿಸ

**ದೂರತೋಽಸೌ ದ್ವಿಜಸ್ತ್ಯಾಜ್ಯ ಆತ್ಮನಃ ಶ್ರೇಯ ಇಚ್ಛತಾ ।**
**ಹೀನಾಂಗಾನತಿರಿಕ್ತಾಂಗಾನ್ಯೇಷಾಂ ಪೂರ್ವಾಽಪರಂ ನ ಹಿ ॥ ೭೦ ॥**
**ವ್ರತೇ ಶ್ರಾದ್ಧೇ ತಥಾ ದಾನೇ ದೂರತಸ್ತಾನ್ವಿವರ್ಜಯೇತ್ ।**
**ಆಯಸೀ ತರುಣೀ ತುಲ್ಯಾ ದ್ವಿಜಾ ಸ್ವಾಧ್ಯಾಯವರ್ಜಿತಾಃ ॥ ೭೧ ॥**
**ಆತ್ಮಾನಂ ಸಹ ಯಾಜ್ಯೇನ ಪಾತಯಂತಿ ನ ಸಂಶಯಃ ।**
**ಶಾಲ್ಮಲೀನಾವತುಲ್ಯಾಃಸ್ಯುಃ ಷಟ್ಕರ್ಮನಿರತಾ ದ್ವಿಜಾಃ ॥ ೭೨ ॥**
**ದಾತಾರಂ ಚ ತಥಾತ್ಮಾನಂ ತಾರಯಂತಿ ತರಂತಿ ಚ ।**
**ಶ್ರಾದ್ಧಂ ಸೋಮೇಶ್ವರಃ ಪಾರ್ಥ ಯಃ ಕುರ್ಯಾದ್ಗತಮತ್ಸರಃ ॥ ೭೩ ॥**
**ಪ್ರೇತಾಸ್ತಸ್ಯಹಿ ಸುಪ್ರೀತಾ ಯಾವದಾಭೂತಸಂಪ್ಲವಂ ।**
**ಅನ್ನಂ ವಸ್ತ್ರಂ ಹಿರಣ್ಯಂ ಚ ಯೋ ದದ್ಯಾದಗ್ರಜನ್ಮನೇ ॥ ೭೪ ॥**
**ಸ ಯಾತಿ ಶಾಂಕರೇ ಲೋಕ ಇತಿ ಮೇ ಸತ್ಯಭಾಷಿತಂ ।**
**ಹಯಂ ಯೋ ಯಚ್ಛತೇ ತತ್ರ ಸಂಪೂರ್ಣಂ ತರುಣಂ ಸಿತಂ ॥ ೭೫ ॥**
**ರಕ್ತಂ ವಾ ಪೀತವರ್ಣಂ ವಾ ಸರ್ವಲಕ್ಷಣಸಂಯುತಂ ।**
**ಕುಂಕುಮೇನ ವಿಲಿಪ್ತಾಂಗಾವಗ್ರಜನ್ಮಹಯಾವಪಿ ॥ ೭೬ ॥**
**ಸ್ರಗ್ದಾಮಭೂಷಿತೌ ಕಾರ್ಯೌ ಸಿತವಸ್ತ್ರಾವಗುಂಠಿತೌ ।**
**ಅಂಘ್ರಿಃ ಪ್ರದೀಯತಾಂ ಸ್ಕಂಧೇ ಮದೀಯೇ ಹಯಮಾರುಹ ॥ ೭೭ ॥**

---

ಬೇಕು. ಅಂಗಹೀನರೂ, ಅಧಿಕಾಂಗರೂ, ಪೂರ್ವಾಪರವಿಲ್ಲದವರೂ ಆದ ಬ್ರಾಹ್ಮಣರನ್ನು ವ್ರತ, ಶ್ರಾದ್ಧ, ದಾನಗಳಲ್ಲಿ ದೂರದಲ್ಲಿಯೇ ತ್ಯಜಿಸಬೇಕು. ವೇದಾಧ್ಯಯನ ಮಾಡದ ಬ್ರಾಹ್ಮಣರು ಕಬ್ಬಿಣದ ಸ್ತ್ರೀ ಪ್ರತಿಮೆಗೆ ಸಮಾನರು.

೭೧. ಅವರು ಯಾಗಮಾಡುವನೊಡನೆ (ಯಜಮಾನನೊಡನೆ) ಪತಿತರಾಗುವರು.

೭೨–೭೮. ಷಟ್ಕರ್ಮನಿರತರಾದ ಬ್ರಾಹ್ಮಣರು ಬೂರುಗದ ನಾವೆಗಳಂತೆ ದಾನಮಾಡುವವನನ್ನೂ, ತಮ್ಮನ್ನೂ ದಾಟಿಸುವರು; ಮತ್ತು ದಾಟುವರು. ಸೋಮೇಶ್ವರ ತೀರ್ಥದಲ್ಲಿ ಮಾತ್ಸರ್ಯವಿಲ್ಲದೆ ಶ್ರಾದ್ಧಮಾಡಿದವನ ಪಿತೃಗಳು ಪ್ರಳಯಕಾಲದವರೆಗೆ ಸಂತುಷ್ಟರಾಗುವರು. ಬ್ರಾಹ್ಮಣನಿಗೆ ಅನ್ನ, ವಸ್ತ್ರ, ಸುವರ್ಣಗಳನ್ನು ಕೊಟ್ಟವನು ಶಿವಲೋಕಕ್ಕೆ ತೆರಳುವನು. ಈ ನನ್ನ ಮಾತು ನಿಜವಾದುದು. ಅಲ್ಲಿ ಸಂಪೂರ್ಣ ಬೆಳ್ಳಗಾಗಲಿ, ಕೆಂಪಾಗಲಿ, ಹಳದಿಯಾಗಲಿ ಆದ ಸಮಸ್ತ ಲಕ್ಷಣಗಳಿಂದ ಕೂಡಿರುವ ಅಶ್ವವನ್ನು ದಾನವಾಗಿ ತೆಗೆದು ಕೊಳ್ಳುವ ಬ್ರಾಹ್ಮಣನನ್ನು, ಹೂವಿನಮಾಲೆಯಿಂದ ಅಲಂಕಾರಮಾಡಿ, ಬೆಳ್ಳಗಿರುವ ಬಟ್ಟೆಯನ್ನುಡಿಸಿ "ನನ್ನ ಹೆಗಲಿನಲ್ಲಿ ಪಾದವನ್ನಿಟ್ಟು ಕುದುರೆಯನ್ನೇರು" ಎಂದು ಹೇಳಿ ಬ್ರಾಹ್ಮಣನು ಹತ್ತಿದಕೂಡಲೆ 'ಸೂರ್ಯನು ಪ್ರೀತನಾಗಲಿ' ಎಂದು ಕುದುರೆ

ಆರೂಢೇ ಬ್ರಾಹ್ಮಣೇ ಬ್ರೂಯಾದ್ಭಾಸ್ಕರಃ ಪ್ರೀಯತಾಮಿತಿ ।
ಸ ಯಾತಿ ಶಾಂಕರಂ ಲೋಕಂ ಸರ್ವಪಾಪವಿವರ್ಜಿತಃ ॥ ೭೮ ॥
ಉಪರಾಗೇ ತು ಸೋಮಸ್ಯ ತೀರ್ಥಂ ಗತ್ವಾ ಜಿತೇಂದ್ರಿಯಃ ।
ಸತ್ಯಲೋಕಾಚ್ಚ್ಯುತಶ್ಚಾಽಪಿ ರಾಜಾ ಭವತಿ ಧಾರ್ಮಿಕಃ ॥ ೭೯ ॥
ತಸ್ಯ ವಾಸಃ ಸದಾ ರಾಜನ್ನ ನಶ್ಯತಿ ಕದಾಚನ ।
ದೀರ್ಘಾಯುರ್ಜಾಯತೇ ಪುತ್ರೋ ಭಾರ್ಯಾ ಚ ವಶವರ್ತಿನೀ ॥ ೮೦ ॥
ಜೀವೇದ್ವರ್ಷಶತಂ ಸಾಗ್ರಂ ಸರ್ವದುಃಖವಿವರ್ಜಿತಃ ।
ಸೋಪವಾಸೋ ಜಿತಕ್ರೋಧೋ ಧೇನುಂ ದದ್ಯಾದ್ದ್ವಿಜನ್ಮನೇ ॥ ೮೧ ॥
ಸವತ್ಸಾಂ ಕ್ಷೀರಸಂಯುಕ್ತಾಂ ಶ್ವೇತವಸ್ತ್ರಾಽವಗುಂಠಿತಾಂ ।
ಶಬಲಾಂ ಪೀತವರ್ಣಾಂ ಚ ಧೂಮ್ರಾಂ ವಾ ನೀಲಕರ್ಬುರಾಂ ॥ ೮೨ ॥
ಕಪಿಲಾಂ ವಾಸವತ್ಸಾಂಚ ಘಂಟಾಭರಣಭೂಷಿತಾಂ ।
ರೂಪ್ಯಖುರಾಂ ಕಾಂಸ್ಯದೋಹಾಂ ಸ್ವರ್ಣಶೃಂಗೀಂ ನರೇಶ್ವರ ॥ ೮೩ ॥
ಶ್ವೇತಯಾ ವರ್ಧತೇ ವಂಶೋ ರಕ್ತಾ ಸೌಭಾಗ್ಯವರ್ಧಿನೀ ।
ಶಬಲಾ ಪೀತವರ್ಣಾಚ ದುಃಖಘ್ನ್ಯೌ ಸಂಪ್ರಕೀರ್ತಿತೇ ॥ ೮೪ ॥

---

ಯನ್ನು ದಾನಮಾಡಿದವನು ಸಮಸ್ತಪಾಪರಹಿತನಾಗಿ ಶಂಕರಲೋಕಕ್ಕೆ ಹೋಗುವನು.

೭೯. ಚಂದ್ರಗ್ರಹಣಕಾಲದಲ್ಲಿ ಜಿತೇಂದ್ರಿಯನಾಗಿ ಆ ತೀರ್ಥಕ್ಕೆ ಹೋದವನು ಸತ್ಯಲೋಕಭ್ರಷ್ಟನಾದರೂ ಧಾರ್ಮಿಕ ರಾಜನಾಗಿಹುಟ್ಟುವನು.

೮೦. ಚಿರಕಾಲ ಅವನು ಜೀವಿಸಿರುವನು. ಅವನ ಪುತ್ರನು ದೀರ್ಘಾಯುಷ್ಮಂತನೂ, ಪತ್ನಿಯು ಸ್ವಾಧೀನಳೂ ಆಗುವರು.

೮೧—೮೩. ಅವನು ಸಮಸ್ತ ದುಃಖರಹಿತನಾಗಿ ನೂರುವರ್ಷಕಾಲ ಜೀವಿಸುವನು. ಉಪವಾಸಮಾಡಿ ಕೋಪವನ್ನು ಜಯಿಸಿ ಬ್ರಾಹ್ಮಣನಿಗೆ ಕರುವಿನಿಂದ ಕೂಡಿರುವುದೂ, ಹಾಲನ್ನು ಕರೆಯುವುದೂ, ಶ್ವೇತವಸ್ತ್ರದಿಂದ ಅಲಂಕಾರಗೊಂಡುದೂ, ಘಂಟಾಭರಣದಿಂದ ಭೂಷಣಗೊಂಡುದೂ, ಬೆಳ್ಳಿಯ ಗೊರಸುಳ್ಳುದೂ, ಕರೆಯಲು ಕಂಚಿನ ಪಾತ್ರೆಯುಳ್ಳುದೂ, ಚಿನ್ನದ ಕೊಂಬುಳ್ಳುದೂ ಆದ ಶಬಲ, ಹಳದಿ, ಧೂಮ್ರ, ನೀಲ, ಅಥವಾ ಕಪಿಲವರ್ಣದ ಗೋವನ್ನು ದಾನಮಾಡಬೇಕು.

೮೪. ಶ್ವೇತಗೋವಿನ ದಾನದಿಂದ ವಂಶವು ವೃದ್ಧಿಯಾಗುವುದು. ಕೆಂಪು ಬಣ್ಣದ ಗೋವು ಸೌಭಾಗ್ಯವನ್ನು ಹೆಚ್ಚಿಸುವುದು. ಶಬಲ ಮತ್ತು ಪೀತವರ್ಣದ ಗೋವು ದುಃಖವನ್ನು ನೀಗಿಸುವುದು.

ಕಪಿಲಾ ನಾಶಯೇತ್ಪಾಪಂ ಸಪ್ತಜನ್ಮಸಮುದ್ಭವಂ ।
ಸತ್ಯಲೋಕಮವಾಪ್ನೋತಿ ಗೋಪ್ರದಾಯಿೀ ನರೇಶ್ವರ ॥ ೮೫ ॥
ಪಕ್ಷಾಂತೇಽಥ ವ್ಯತೀಪಾತೇ ವೈಧೃತೌ ರವಿಸಂಕ್ರಮೇ ।
ದಿನಕ್ಷಯೇ ಗಜಚ್ಛಾಯಾಂ ಗ್ರಹಣೇ ಭಾಸ್ಕರಸ್ಯ ಚ ॥ ೮೬ ॥
ಯೇ ವ್ರಜಂತಿ ಮಹಾತ್ಮಾನಃ ಸಂಗಮೇ ಸುರದುರ್ಲಭೇ ।
ಮೃದಾಽವಗುಂಠಯಿತ್ವಾತು ಚಾತ್ಮಾನಂ ಸಂಗಮೇ ವಿಶೇತ್ ॥ ೮೭ ॥
ಹೃದಯಾಂತರ್ಜಲೇ ಜಾಪ್ಯಾ ಪ್ರಾಣಾಯಾಮೋಽಥವಾ ನೃಪ ।
ಗಾಯತ್ರೀ ವೈಷ್ಣವೀ ಚೈವ ಗೌರೀ ಶೈವೀ ಯದೃಚ್ಛಯಾ ।
ತೇಽಪಿ ಪಾಪೈಃ ಪ್ರಮುಚ್ಯಂತ ಇತ್ಯೇವಂ ಶಂಕರೋಽಬ್ರವೀತ್ ॥ ೮೮ ॥
ಜಗತೀಂ ಸೋಮನಾಥಸ್ಯ ಯಸ್ತು ಕುರ್ಯಾತ್ಪ್ರದಕ್ಷಿಣಾಂ ।
ಪ್ರದಕ್ಷಿಣೀಕೃತಾ ತೇನ ಸಪ್ತದ್ವೀಪಾ ವಸುಂಧರಾ ॥ ೮೯ ॥
ಬ್ರಹ್ಮಹತ್ಯಾ ಸುರಾಪಾನಂ ಗುರುದಾರನಿಷೇವಣಂ ।
ಭ್ರೂಣಹಾ ಸ್ವರ್ಣಹರ್ತಾ ಚ ಮುಚ್ಯಂತೇ ನಾಽತ್ರ ಸಂಶಯಃ ॥ ೯೦ ॥
ತೀರ್ಥಾಖ್ಯಾನಮಿದಂ ಪುಣ್ಯಂ ಯಃ ಶೃಣೋತಿ ಜಿತೇಂದ್ರಿಯಃ ।
ವ್ಯಾಧಿತೋ ಮುಚ್ಯತೇ ರೋಗೀ ಚಾಽರೋಗೀಸುಖಮಾಪ್ನುಯಾತ್ ॥

---

೮೫. ಕಪಿಲಗೋವು ಏಳು ಜನ್ಮಗಳ ಪಾಪವನ್ನು ಪರಿಹರಿಸುವುದು. ಆಕಳನ್ನು ದಾನಮಾಡಿದವನು ಸತ್ಯಲೋಕವನ್ನು ಹೊಂದುವನು.

೮೬–೮೭. ಹುಣ್ಣಿಮೆ, ಅಮಾವಾಸ್ಯೆ, ವ್ಯತೀಪಾತ, ವೈಧೃತಿ, ಸೂರ್ಯ ಸಂಕ್ರಾಂತಿ, ಸಾಯಂಕಾಲ, ಗಜಚ್ಛಾಯಾ, ಸೂರ್ಯಗ್ರಹಣ, ಇವುಗಳಲ್ಲಿ ದೇವದುರ್ಲಭವಾದ ಸಂಗಮತೀರ್ಥಕ್ಕೆ ಹೋಗುವ ಮಹಾತ್ಮರು ದೇಹಕ್ಕೆ ಮೃತ್ತಿಕಾಲೇಪನಮಾಡಿಕೊಂಡು ತೀರ್ಥದಲ್ಲಿ ಇಳಿಯಬೇಕು.

೮೮. ಅಲ್ಲಿ ಎದೆಯವರೆಗೆ ನೀರಿನಲ್ಲಿ ನಿಂತು ಪ್ರಾಣಾಯಾಮ, ವಿಷ್ಣು ಗಾಯತ್ರೀ, ಸೂರ್ಯಗಾಯತ್ರೀ, ಅಥವಾ ಶಿವಗಾಯತ್ರಿಯನ್ನು ಸ್ವೇಚ್ಛೆಯಾಗಿ ಜಪಿಸುವವರು ಪಾಪಮುಕ್ತರಾಗುವರೆಂದು ಶಂಕರನು ಹೇಳಿರುತ್ತಾನೆ.

೮೯. ಸೋಮನಾಥನ ಸ್ಥಾನಕ್ಕೆ ಪ್ರದಕ್ಷಿಣೆಗೈದವನು ಏಳು ದ್ವೀಪಗಳುಳ್ಳ ಭೂಮಿಯನ್ನು ಪ್ರದಕ್ಷಿಣೆ ಮಾಡಿದವನಂತಾಗುವನು.

೯೦. ಇಲ್ಲಿ ಬ್ರಹ್ಮಹತ್ಯೆ, ಸುರಾಪಾನ, ಗುರುಪತ್ನೀಗಮನ, ಭ್ರೂಣಹತ್ಯೆ, ಸ್ವರ್ಣಸ್ತೇಯ, ಇವುಗಳು ಪರಿಹಾರವಾಗುವುವು.

೯೧. ಜಿತೇಂದ್ರಿಯನಾಗಿ ಪುಣ್ಯಕರವಾದ ಈ ತೀರ್ಥಾಖ್ಯಾನವನ್ನು ಕೇಳಿದವನು ರೋಗಿಯಾಗಿದ್ದರೆ ರೋಗಮುಕ್ತನಾಗುವನು. ರೋಗವಿಲ್ಲದವನಾಗಿದ್ದರೆ ಸುಖವನ್ನು ಪಡೆಯುವನು.

ಯತ್ತೇ ಸಂದಹ್ಯತೇ ಚೇತಃ ಶೃಣು ತನ್ಮೇ ಯುಧಿಷ್ಠಿರ ।
ನೈಕಾಪಿ ನೃಪ ಲೋಕೇಽಸ್ಮಿನ್ಭ್ರೂಣಹತ್ಯಾ ಸುದುಸ್ತ್ಯಜಾ ॥ ೯೨ ॥
ಕಿಮು ಷಡ್ವಿಂಶತಿಂ ಪಾರ್ಥ ಪ್ರಾಪ್ಯ ಯಾಃ ಕ್ಷಣದಾಕರಃ ।
ಸೋಽಪಿ ತೀರ್ಥಮಿದಂ ಪ್ರಾಪ್ಯ ತಪಸ್ತಪ್ತ್ವಾ ಸುದುಶ್ಚರಂ ॥ ೯೩ ॥
ವಿಮುಕ್ತಃ ಸರ್ವಪಾಪೇಭ್ಯಃ ಶೀತರಶ್ಮಿರಭೂತ್ಸುಖೀ ।
ಶ್ರೂಯತೇ ನೃಪ ಪೌರಾಣೇ ಗಾಥಾ ಗೀತಾ ಮಹರ್ಷಿಭಿಃ ॥ ೯೪ ॥
ಲಿಂಗಂ ಪ್ರತಿಷ್ಠಿತಂ ಹ್ಯೇಕಂ ದಶಭ್ರೂಣಹನಂ ಭವೇತ್ ।
ಅತೋ ಲಿಂಗತ್ರಯಂ ಸೋಮಃ ಸ್ಥಾಪಯಾಮಾಸ ಭಾರತ ॥ ೯೫ ॥
ರೇವೋರಿಸಂಗಮೇ ಹ್ಯಾದ್ಯಂ ದ್ವಿತೀಯಂ ಭೃಗುಕಚ್ಛಕೇ ।
ತತಃ ಸಿದ್ಧಿಂ ಪರಂ ಪ್ರಾಪ್ಯ ಪ್ರಭಾಸೇ ತು ತೃತೀಯಕಂ ॥ ೯೬ ॥
ಇತಿ ತೇ ಕಥಿತಂ ಸರ್ವಂ ತೀರ್ಥಮಾಹಾತ್ಮ್ಯಮುತ್ತಮಂ ।
ಧರ್ಮ್ಯಂ ಯಶಸ್ಯಮಾಯುಷ್ಯಂ ಸ್ವರ್ಗ್ಯಂ ಸಂಶುದ್ಧಿಕೃನ್ನೃಣಾಂ ॥ ೯೭ ॥
ಪುತ್ರಾರ್ಥೀ ಲಭತೇ ಪುತ್ರಾನ್ನಿಷ್ಕಾಮಃ ಸ್ವರ್ಗಮಾಪ್ನುಯಾತ್ ।
ಮುಚ್ಯತೇ ಸರ್ವಪಾಪೇಭ್ಯಸ್ತೀರ್ಥಂ ಕೃತ್ವಾ ಪರಂ ನೃಪ ॥ ೯೮ ॥

---

೯೨–೯೪. ಯುಧಿಷ್ಠಿರ! ನಿನ್ನ ಮನಸ್ಸು ಸಂದೇಹಗೊಳ್ಳುತ್ತಿದ್ದರೆ ಇದನ್ನು ಕೇಳು. ಈ ಲೋಕದಲ್ಲಿ ಒಂದು ಭ್ರೂಣಹತ್ಯೆಯೇ ಅಪರಿಹಾರ್ಯವಾದುದು. ಇಪ್ಪತ್ತಾರು ಬ್ರೂಣಹತ್ಯೆಗಳಿನ್ನೇನು. ಇದನ್ನು ಹೊಂದಿದ ಚಂದ್ರನು ಈ ತೀರ್ಥವನ್ನು ಸೇರಿ ಅಸಾಧ್ಯವಾದ ತಪಸ್ಸನ್ನುಮಾಡಿ ಸಕಲ ಪಾಪಮುಕ್ತನಾಗಿ ಸುಖಗೊಂಡನು. ಮಹರ್ಷಿಗಳು ಹೇಳಿದ ಒಂದು ಗಾದೆಯನ್ನು ಕೇಳುತ್ತೇನೆ.

೯೫. ಒಂದು ಲಿಂಗವನ್ನು ಪ್ರತಿಷ್ಠೆಮಾಡಿದರೆ ಹತ್ತು ಬ್ರೂಣಹತ್ಯೆಗಳು ಪರಿಹಾರವಾಗುವುದು. ಆದ್ದರಿಂದ ಚಂದ್ರನು ಇಲ್ಲಿ ಮೂರು ಲಿಂಗಗಳನ್ನು ಪ್ರತಿಷ್ಠೆಮಾಡಿದನು.

೯೬. ರೇವೋರಿ ಸಂಗಮದಲ್ಲಿ ಮೊದಲನೆಯದನ್ನೂ, ಭೃಗು ಕಚ್ಛಕದಲ್ಲಿ ಎರಡನೆಯದನ್ನೂ, ಪ್ರಭಾಸದಲ್ಲಿ ಮೂರನೆಯದನ್ನೂ ಪ್ರತಿಷ್ಠೆಮಾಡಿ ಉತ್ತಮ ಸಿದ್ಧಿಯನ್ನೂ ಪಡೆದನು.

೯೭. ಹೀಗೆ ನಿನಗೆ ಧರ್ಮದಿಂದ ಕೂಡಿರುವುದೂ, ಯಶಸ್ಸನ್ನುಂಟು ಮಾಡುವುದೂ, ಆಯುಸ್ಸು ಸ್ವರ್ಗ ಮತ್ತು ಶುದ್ಧಿಗಳನ್ನು ಕೊಡುವುದೂ ಆದ ಉತ್ತಮವಾದ ತೀರ್ಥಮಾಹಾತ್ಮ್ಯವನ್ನು ಹೇಳಿರುವೆನು.

೯೮. ಪುತ್ರರನ್ನು ಬಯಸುವವನು ಪುತ್ರರನ್ನೂ, ನಿಷ್ಕಾಮನು ಸ್ವರ್ಗವನ್ನೂ ಪಡೆಯುವನು. ಉತ್ತಮವಾದ ತೀರ್ಥವನ್ನು ರಚಿಸಿ ಸಕಲ ಪಾಪಮುಕ್ತನಾಗುವನು.

**ಏತತ್ತೇ ಸರ್ವಮಾಖ್ಯಾತಂ ಸೋಮನಾಥಸ್ಯ ಯತ್ಫಲಂ ।**
**ಶ್ರುತ್ವಾ ಪುತ್ರಮವಾಪ್ನೋತಿ ಸ್ನಾತ್ವಾ ಚಾಽಷ್ಟೌ ನ ಸಂಶಯಃ ॥ ೯೯ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ "ಸೋಮನಾಥತೀರ್ಥಮಾಹಾತ್ಮ್ಯವರ್ಣನಂ" ನಾಮ ಪಂಚಾಽಶೀತಿತಮೋಽಧ್ಯಾಯಃ**

---

೯೯. ಈ ಸೋಮನಾಥ ಕ್ಷೇತ್ರದರ್ಶನದಿಂದಾಗುವ ಫಲವನ್ನೆಲ್ಲ ನಿನಗೆ ಹೇಳಿದ್ದೇನೆ. ಇದನ್ನು ಕೇಳಿದವನು ಒಬ್ಬ ಪುತ್ರನನ್ನೂ, ಇದರಲ್ಲಿ ಸ್ನಾನಮಾಡಿದವನು ಎಂಟು ಮಂದಿ ಪುತ್ರರನ್ನೂ ಪಡೆಯುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ "ಸೋಮನಾಥತೀರ್ಥಮಾಹಾತ್ಮ್ಯವರ್ಣನ"ವೆಂಬ ಎಂಬತ್ತೈದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಷಡಶೀತಿತಮೋಽಧ್ಯಾಯಃ

### ಪಿಂಗಲೇಶ್ವರತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ತತೋ ಗಚ್ಛೇನ್ಮಹಾರಾಜ ಪಿಂಗಲಾವರ್ತಮುತ್ತಮಂ ।
ಸಂಗಮಸ್ಯ ಸಮೀಪಸ್ಥಂ ರೇವಾಯಾ ಉತ್ತರೇ ತಟೇ ।
ಹವ್ಯವಾಹೇನ ರಾಜೇಂದ್ರ ಸ್ಥಾಪಿತಃ ಪಿಂಗಲೇಶ್ವರಃ ॥ ೧ ॥

ಯುಧಿಷ್ಠಿರ ಉವಾಚ :—

ಹವ್ಯವಾಹೇನ ಭಗವನ್ನೀಶ್ವರಃ ಸ್ಥಾಪಿತಃ ಕಥಂ ।
ಏತದಾಖ್ಯಾಹಿ ಮೇ ಸರ್ವಂ ಪ್ರಸಾದಾದ್ವಕ್ತುಮರ್ಹಸಿ ॥ ೨ ॥

ಮಾರ್ಕಂಡೇಯ ಉವಾಚ :—

ಶಂಭುನಾ ರೇತಸಾ ರಾಜಂಸ್ತರ್ಪಿತೋ ಹವ್ಯವಾಹನಃ ।
ಪ್ರಾಪ್ತಸೌಖ್ಯೇನ ರೌದ್ರೇಣ ಗೌರ್ಯಾ ಕ್ರೀಡನಚೇತಸಾ ॥ ೩ ॥
ಹವ್ಯವಾಹಮುಖೇ ಕ್ಷಿಪ್ತಂ ರುದ್ರೇಣಾಮಿತತೇಜಸಾ ।
ರುದ್ರಸ್ಯ ರೇತಸಾ ದಗ್ಧಸ್ತೀರ್ಥಯಾತ್ರಾ ಕೃತಾದರಃ ॥ ೪ ॥
ಸಾಗರಾಂಶ್ಚ ನದೀರ್ಗತ್ವಾ ಕ್ರಮಾದ್ರೇವಾಂ ಸಮಾಗತಃ ।
ಚಚಾರ ಪರಯಾ ಭಕ್ತ್ಯಾ ಧ್ಯಾನಮುಗ್ರಂ ಹುತಾಶನಃ । ॥ ೫ ॥

---

## ಕನ್ನಡದ ಅನುವಾದ

### ಪಿಂಗಲೇಶ್ವರತೀರ್ಥಮಾಹಾತ್ಮ್ಯವರ್ಣನ

೧. ಶ್ರೀ ಮಾರ್ಕಂಡೇಯನು ಹೇಳುತ್ತಾನೆ :—ಮಹಾರಾಜ! ಬಳಿಕ ನರ್ಮದಾನದಿಯ ಉತ್ತರದಡದಲ್ಲಿ ಸಂಗಮದ ಸಮೀಪದಲ್ಲಿ ಅಗ್ನಿಯು ಸ್ಥಾಪಿಸಿರುವ ಪಿಂಗಲಾವರ್ತವೆಂಬ ಉತ್ತಮಕ್ಷೇತ್ರಕ್ಕೆ ಹೋಗಬೇಕು.

೨. ಯುಧಿಷ್ಠಿರನು ಹೇಳುತ್ತಾನೆ —ಪೂಜ್ಯನೆ! ಅಗ್ನಿಯು ಈಶ್ವರನನ್ನು ಏತಕ್ಕೆ ಸ್ಥಾಪಿಸಿದನು ? ಇದನ್ನು ನನಗೆ ಅನುಗ್ರಹಮಾಡಿ ಹೇಳಲರ್ಹನಾಗಿರುವೆ.

೩–೬. ಮಾರ್ಕಂಡೇಯನು ಹೇಳುತ್ತಾನೆ —ದೊರೆಯೆ! ಗೌರಿಯೊಡನೆ ಕ್ರೀಡಿಸುತ್ತಿದ್ದ ರುದ್ರನು ಅಗ್ನಿಯನ್ನು ತೃಪ್ತಿಗೊಳಿಸಲು ಅವನ ಬಾಯಿಯಲ್ಲಿ ತನ್ನ ರೇತಸ್ಸನ್ನು ಹಾಕಿ ಸೌಖ್ಯವನ್ನು ಹೊಂದಿ ಅದರಿಂದ ದಗ್ಧನಾದ ಅಗ್ನಿಯು ತೀರ್ಥಯಾತ್ರೆಮಾಡಲು ಆಶೆಯುಳ್ಳವನಾಗಿ ಸಮುದ್ರ ನದಿಗಳಿಗೆ ಹೋಗುತ್ತ ಕ್ರಮವಾಗಿ ನರ್ಮದಾನದಿಗೆ ಬಂದನು. ಅಲ್ಲಿ ಅವನು ಅತಿಭಕ್ತಿ

ವಾಯುಭಕ್ಷಃ ಶತಂ ಸಾಗ್ರಂ ಯಾವತ್ತೇಪೇ ಹುತಾಶನಃ ।
ತಾವತ್ತುಷ್ಟೋ ಮಹಾದೇವೋ ವರದೋ ಜಾತವೇದಸಃ ।
ಸನ್ನಿಧೌ ಸಮುಪೇತ್ಯಾಽಥ ವಚನಂ ಚೇದಮಬ್ರವೀತ್ ॥ ೬ ॥
ಈಶ್ವರ ಉವಾಚ :—
ವರಂ ವೃಣೀಷ್ವ ಹವ್ಯಾಶ ಯಸ್ತೇ ಮನಸಿ ವರ್ತತೇ ॥ ೭ ॥
ವಹ್ನಿರುವಾಚ :—
ನಮಸ್ತೇ ಸರ್ವಲೋಕೇಶ ಉಗ್ರಮೂರ್ತೇ ನಮೋಸ್ತುತೇ ।
ರೇತಸಾ ತವ ಸಂದಗ್ಧಃ ಕುಷ್ಠೀ ಜಾತೋ ಮಹೇಶ್ವರ ।
ಕೃಪಾಂ ಕುರು ಮಹಾದೇವ ಮಮ ರೋಗಂ ವಿನಾಶಯ ॥ ೮ ॥
ಈಶ್ವರ ಉವಾಚ :—
ಹವ್ಯವಾಹ ಭವಾರೋಗೋ ಮತ್ಪ್ರಸಾದಾಚ್ಚ ಸತ್ವರಂ ।
ಅತ್ರ ತೀರ್ಥೇ ಕೃತಸ್ನಾನಃ ಸ್ವರೂಪಂ ಪ್ರತಿಪತ್ಸ್ಯಸೇ ॥ ೯ ॥
ಇತ್ಯುಕ್ತ್ವಾ ಚ ಮಹಾದೇವಸ್ತತ್ರೈವಾಂತರಧೀಯತ ।
ಅನಂತರಂ ಹವ್ಯವಾಹಃ ಸಸ್ನೌ ರೇವಾಜಲೇ ತ್ವರನ್ ॥ ೧೦ ॥
ತದೈವ ರೋಗನಿರ್ಮುಕ್ತೋಽಭವದ್ದಿವ್ಯಸ್ವರೂಪವಾನ್ ।
ಸ್ಥಾಪಯಾಮಾಸ ದೇವೇಶಂ ಸ ವಹ್ನಿಃ ಪಿಂಗಲೇಶ್ವರಂ ॥ ೧೧ ॥

---

ಯಿಂದ ಧ್ಯಾನಿಸುತ್ತ ವಾಯುಭಕ್ಷನಾಗಿ ನೂರುವರ್ಷಕಾಲ ತಪಸ್ಸನ್ನು ಮಾಡಲು ಮಹಾದೇವನು ಸಂತುಷ್ಟನಾಗಿ ವರವನ್ನು ಕೊಡಲು ಆ ಅಗ್ನಿಯ ಬಳಿಗೆ ಬಂದು ಹೀಗೆಂದನು.

೭. ಈಶ್ವರನು ಹೇಳುತ್ತಾನೆ:—ಅಗ್ನಿಯೆ! ನಿನ್ನ ಮನಸ್ಸಿನಲ್ಲಿರುವ ವರವನ್ನು ಕೇಳಿಕೊ

೮. ಅಗ್ನಿಯು ಹೇಳುತ್ತಾನೆ — ಸಮಸ್ತಲೋಕದೊಡೆಯನೂ, ಉಗ್ರಮೂರ್ತಿಯೂ ಆದ ಶಂಕರನೆ! ನಿನಗ ನಮಸ್ಕಾರವು! ನಿನ್ನ ರೇತಸ್ಸಿನಿಂದ ದಗ್ಧನಾದ ನಾನು ಕುಷ್ಠರೋಗವುಳ್ಳವನಾಗಿರುವೆನು. ನನ್ನಮೇಲೆ ದಯೆಮಾಡು. ರೋಗವನ್ನು ನಿವಾರಿಸು.

೯. ಈಶ್ವರನು ಹೇಳುತ್ತಾನೆ —ಅಗ್ನಿಯೆ! ನೀನು ನನ್ನ ಅನುಗ್ರಹದಿಂದ ಬೇಗನೆ ರೋಗವಿಲ್ಲದವನಾಗು. ಈ ತೀರ್ಥದಲ್ಲಿ ಮಿಂದರೆ ನಿನ್ನ ಮೊದಲಿನ ರೂಪವನ್ನು ನೀನು ಹೊಂದುವೆ.

೧೦. ಶಂಕರನು ಹೀಗೆ ಹೇಳಿ ಅಲ್ಲಿಯೇ ಅದೃಶ್ಯನಾದನು. ಬಳಿಕ ಅಗ್ನಿಯು ಬೇಗನೆ ನರ್ಮದಾನದಿಯ ನೀರಿನಲ್ಲಿ ಮಿಂದನು.

೧೧. ಆಗಲೇ ಅವನು ರೋಗಮುಕ್ತನಾಗಿ ದಿವ್ಯರೂಪವನ್ನು ಪಡೆದು ಪಿಂಗಲೇಶ್ವರನನ್ನು ಪ್ರತಿಷ್ಠೆಮಾಡಿದನು.

ನಾಮ್ನಾ ಸಂಪೂಜಯಾಮಾಸ ತುಷ್ಟಾವಸ್ತುತಿಭಿರ್ಮುದಾ ।
ತತೋ ಜಗಾಮ ದೇಶಂ ಸ್ವಂ ದೇವಾನಾಂ ಹವ್ಯವಾಹನಃ ॥ ೧೨ ॥
ಹವ್ಯವಾಹೇನ ಭೂಪೈವಂ ಸ್ಥಾಪಿತಃ ಪಿಂಗಲೇಶ್ವರಃ ।
ಜಿತಕ್ರೋಧೋ ಹಿ ಯಸ್ತತ್ರ ಉಪವಾಸಂ ಸಮಾಚರೇತ್ ॥ ೧೩ ॥
ಅತಿರಾತ್ರಫಲಂ ತಸ್ಯ ಅಂತೇ ರುದ್ರತ್ವಮಾಪ್ನುಯಾತ್ ।
ಗುಣಾನ್ವಿತಾಯ ವಿಪ್ರಾಯ ಕಪಿಲಾಂ ತತ್ರ ಭಾರತ ॥ ೧೪ ॥
ಅಲಂಕೃತ್ಯ ಸವತ್ಸಾಂ ಚ ಶಕ್ತ್ಯಾಽಲಂಕಾರಭೂಷಿತಾಂ ।
ಯಃ ಪ್ರಯಚ್ಛತಿ ರಾಜೇಂದ್ರ ಸ ಗಚ್ಛೇತ್ಪರಮಾಂ ಗತಿಂ ॥ ೧೫ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ಪಿಂಗಲೇಶ್ವರತೀರ್ಥಮಾಹಾತ್ಮ್ಯವರ್ಣನಂ"
ನಾಮ ಷಡಶೀತಿತಮೋಽಧ್ಯಾಯಃ

---

೧೨. ಅವನನ್ನು ಪೂಜಿಸಿ ಸ್ತೋತ್ರಮಾಡಿ ತನ್ನ ದೇಶಕ್ಕೆ ತೆರಳಿದನು.

೧೩–೧೫. ದೊರೆಯೆ! ಅಗ್ನಿಯು ಹೀಗೆ ಪಿಂಗಲೇಶ್ವರನನ್ನು ಸ್ಥಾಪಿಸಿರುವನು. ಅಲ್ಲಿ ಕ್ರೋಧವನ್ನು ಜಯಿಸಿ ಉಪವಾಸವನ್ನು ಮಾಡಿದವನು ಅತಿರಾತ್ರ ಯಜ್ಞದ ಫಲವನ್ನು ಪಡೆದು ಅವಸಾನದಲ್ಲಿ ರುದ್ರತ್ವವನ್ನು ಹೊಂದುವನು. ಗುಣವಂತನಾದ ಬ್ರಾಹ್ಮಣನಿಗೆ ಕರುವಿನಿಂದ ಸಹಿತವಾದ ಕಪಿಲ ಗೋವುವನ್ನು ಶಕ್ತ್ಯನುಸಾರ ಅಲಂಕಾರಮಾಡಿ ದಾನಮಾಡಿದವನು ಉತ್ತಮಗತಿಯನ್ನು ಪಡೆಯುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಪಿಂಗಲೇಶ್ವರತೀರ್ಥಮಾಹಾತ್ಮ್ಯವರ್ಣನ"ವೆಂಬ
ಎಂಬತ್ತಾರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಸಪ್ತಾಽಶೀತಿತಮೋಽಧ್ಯಾಯಃ

### ಋಣತ್ರಯಮೋಚನತೀರ್ಥಮಾಹಾತ್ಮ್ಯವರ್ಣನಂ

**ಶ್ರೀ ಮಾರ್ಕಂಡೇಯ ಉವಾಚ :—**

**ತತೋ ಗಚ್ಛೇನ್ಮಹೀಪಾಲ ತೀರ್ಥಂ ಪರಮಶೋಭನಂ ।**
**ಸ್ಥಾಪಿತಂ ಮುನಿಸಂಘೈರ್ಯದ್ಬ್ರಹ್ಮವಂಶಸಮುದ್ಭವೈಃ ॥ ೧ ॥**
**ಋಣಮೋಚನಮಿತ್ಯಾಖ್ಯಂ ರೇವಾತಟಸಮಾಶ್ರಿತಂ ।**
**ಷಣ್ಮಾಸಂ ಮನುಜೋ ಭಕ್ತ್ಯಾ ತರ್ಪಯನ್ಪಿತೃದೇವತಾಃ ॥ ೨ ॥**
**ದೇವೈಃ ಪಿತೃಮನುಷ್ಯೈಶ್ಚ ಋಣಮಾತ್ಮಕೃತಂ ಚ ಯತ್ ।**
**ಮುಚ್ಯತೇ ತತ್ಕ್ಷಣಾನ್ಮರ್ತ್ಯಃ ಸ್ನಾತೋ ವೈ ನರ್ಮದಾಜಲೇ ॥ ೩ ॥**
**ಪ್ರತ್ಯಕ್ಷಂ ದುರಿತಂ ತತ್ರ ದೃಶ್ಯತೇ ಫಲರೂಪತಃ ।**
**ತತ್ರ ತೀರ್ಥೇ ತು ಯೋ ರಾಜನ್ನೇಕಚಿತ್ತೋ ಜಿತೇಂದ್ರಿಯಃ ॥ ೪ ॥**
**ಸ್ನಾತ್ವಾ ದಾನಂ ಚ ವೈ ದದ್ಯಾದರ್ಚಯೇದ್ಗಿರಿಜಾಪತಿಂ ।**
**ಋಣತ್ರಯವಿನಿರ್ಮುಕ್ತೋ ನಾಕೇ ದೀಪ್ಯತಿ ದೇವವತ್ ॥ ೫ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಽಶೀತಿಸಾಹಸ್ರ್ಯಾಂ ಸಂಹಿತಾಯಾಂ**
**ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ**
**" ಋಣತ್ರಯಮೋಚನತೀರ್ಥಮಾಹಾತ್ಮ್ಯವರ್ಣನಂ "**
**ನಾಮ ಸಪ್ತಾಽಶೀತಿತಮೋಽಧ್ಯಾಯಃ**

---

## ಕನ್ನಡದ ಅನುವಾದ

### ಋಣತ್ರಯಮೋಚನತೀರ್ಥಮಾಹಾತ್ಮ್ಯವರ್ಣನ

೧–೩. ಶ್ರೀ ಮಾರ್ಕಂಡೇಯನು ಹೇಳುತ್ತಾನೆ —ಯುಧಿಷ್ಠಿರ! ಬಳಿಕ ಬ್ರಹ್ಮವಂಶದ ಮುನಿಗಳು ಪ್ರತಿಷ್ಠೆಮಾಡಿರುವುದೂ ನರ್ಮದಾತಟದಲ್ಲಿರುವುದೂ, ಅತ್ಯಂತ ಮಂಗಳಕರವೂ ಆದ ಋಣಮೋಚನವೆಂಬ ತೀರ್ಥಕ್ಕೆ ಹೋಗಬೇಕು. ಮಾನವನು ಆರು ತಿಂಗಳಕಾಲ ನರ್ಮದಾಜಲದಲ್ಲಿ ಮಿಂದು ಪಿತೃದೇವತೆಗಳಿಗೆ ಭಕ್ತಿಯಿಂದ ತರ್ಪಣಗೈದರೆ ಕೂಡಲೆ ತಾನುಮಾಡಿದ ದೇವ ಪಿತೃ ಮನುಷ್ಯ ಸಂಬಂಧವಾದ ಋಣಗಳಿಂದ ಮುಕ್ತನಾಗುವನು.

೪–೫. ಅಲ್ಲಿ ಪಾಪವು ಫಲರೂಪದಿಂದ ಪ್ರತ್ಯಕ್ಷವಾಗಿ ಕಾಣುತ್ತಿರುವುದು. ಆ ತೀರ್ಥದಲ್ಲಿ ಒಮ್ಮನಸ್ಸುಳ್ಳವನೂ, ಜಿತೇಂದ್ರಿಯನೂ ಆಗಿ ಮಿಂದು, ದಾನ ಮಾಡಿ, ಪಾರ್ವತೀಪತಿಯಾದ ಈಶ್ವರನನ್ನು ಪೂಜಿಸಿದವನು ಋಣತ್ರಯ ಮುಕ್ತನಾಗಿ ದೇವಲೋಕದಲ್ಲಿ ದೇವತೆಯಂತೆ ಪ್ರಕಾಶಿಸುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
" ಋಣತ್ರಯಮೋಚನತೀರ್ಥಮಾಹಾತ್ಮ್ಯವರ್ಣನ "ವೆಂಬ
ಎಂಬತ್ತೇಳನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥಾಷ್ಟಾಽಶೀತಿತಮೋಽಧ್ಯಾಯಃ

## ಕಪಿಲೇಶ್ವರತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ತಸ್ಯೈವಾನಂತರಂ ಪಾರ್ಥ ಕಾಪಿಲಂ ತೀರ್ಥಮಾಶ್ರಯೇತ್ ।
ಸ್ಥಾಪಿತಂ ಕಪಿಲೇನೈವ ಸರ್ವಪಾತಕನಾಶನಂ ॥ ೧ ॥
ಅಷ್ಟಮ್ಯಾಂ ಚ ಸಿತೇ ಪಕ್ಷೇ ಚತುರ್ದಶ್ಯಾಂ ನರೇಶ್ವರ ।
ಸ್ನಾಪಯೇತ್ಪರಯಾ ಭಕ್ತ್ಯಾ ಕಪಿಲಾಕ್ಷೀರಸರ್ಪಿಷಾ ॥ ೨ ॥
ಶ್ರೀಖಂಡೇನ ಸುಗಂಧೇನ ಗುಂಠಯೇಚ್ಚ ಮಹೇಶ್ವರಂ ।
ತತಃ ಸುಗಂಧಪುಷ್ಪೈಶ್ಚ ಶ್ವೇತೈಶ್ಚ ನೃಪಸತ್ತಮ ॥ ೩ ॥
ಯೇಽರ್ಚಯಂತಿ ಜಿತಕ್ರೋಧಾ ನ ತೇ ಯಾಂತಿ ಯಮಾಲಯಂ ।
ಅಸಿಪತ್ರವನಂ ಘೋರಂ ಯಮಚುಲ್ಲೀ ಸುದಾರಣಾ ॥ ೪ ॥
ದೃಶ್ಯತೇ ನೈವ ವಿದ್ವದ್ಭಿಃ ಕಪಿಲೇಶ್ವರಪೂಜನಾತ್ ।
ಸ್ನಾತ್ವಾ ರೇವಾಜಲೇ ಪುಣ್ಯೇ ಭೋಜಯೇದ್ಬ್ರಾಹ್ಮಣಾನ್ ಶುಭಾನ್ ॥೫॥
ಗೋಪ್ರದಾನೇನ ವಸ್ತ್ರೇಣ ತಿಲದಾನೇನ ಭಾರತ ।
ಛತ್ರಶಯ್ಯಾಪ್ರದಾನೇನ ರಾಜಾ ಭವತಿ ಧಾರ್ಮಿಕಃ ॥ ೬ ॥

---

## ಕನ್ನಡದ ಅನುವಾದ

### ಕಪಿಲೇಶ್ವರತೀರ್ಥಮಾಹಾತ್ಮ್ಯವರ್ಣನ

೧. ಶ್ರೀ ಮಾರ್ಕಂಡೇಯನು ಹೇಳುತ್ತಾನೆ —ಇದಾದ ತರುವಾಯ ಕಪಿಲನು ಸ್ಥಾಪಿಸಿರುವ ಸಮಸ್ತ ಪಾಪಗಳನ್ನು ಪರಿಹರಿಸುವ ಕಪಿಲತೀರ್ಥವನ್ನಾಶ್ರಯಿಸಬೇಕು.

೨–೬. ಶುಕ್ಲಪಕ್ಷದ ಅಷ್ಟಮೀ ಚತುರ್ದಶೀ ದಿನಗಳಲ್ಲಿ ಮಹೇಶ್ವರನನ್ನು ಕಪಿಲಾ ಗೋವಿನ ಕ್ಷೀರ ಮತ್ತು ಘೃತಗಳಿಂದ ಅತಿಶಯವಾದ ಭಕ್ತಿಯಿಂದ ಅಭಿಷೇಕಮಾಡಿ ಸುಗಂಧದಿಂದ ಲೇಪನಮಾಡಿ ಸುವಾಸನೆಯಾದ ಶ್ವೇತಪುಷ್ಪಗಳಿಂದ ಕ್ರೋಧವನ್ನು ಜಯಿಸಿ ಪೂಜಿಸುವವರು ಯಮಾಲಯಕ್ಕೆ ಹೋಗುವುದಿಲ್ಲ. ಈ ಕಪಿಲೇಶ್ವರನ ಪೂಜೆಯಿಂದ ವಿದ್ವಾಂಸರು ಅಸಿಪತ್ರವನವನ್ನೂ, ದಾರುಣವಾದ ಯಮಚುಲ್ಲಿಯನ್ನೂ ನೋಡುವುದಿಲ್ಲ. ಪುಣ್ಯಕರವಾದ ನರ್ಮದಾ ನದಿಯ ನೀರಿನಲ್ಲಿ ಮಿಂದು ಬ್ರಾಹ್ಮಣರನ್ನು ಭೋಜನಮಾಡಿಸಿ ಗೋವು, ವಸ್ತ್ರ, ಎಳ್ಳು, ಕೊಡೆ, ಹಾಸಿಗೆ ಇವುಗಳನ್ನು ದಾನಮಾಡುವುದರಿಂದ

ತೀವ್ರತೇಜಾ ವಿಘೋರಶ್ಚ ಜೀವತ್ಪುತ್ರಃ ಪ್ರಿಯಂವದಃ ।
ಶತ್ರುವರ್ಗೋ ನ ತಸ್ಯ ಸ್ಯಾತ್ಕದಾಚಿತ್ಪಾಂಡುನಂದನ ॥ ೭ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ಕಪಿಲೇಶ್ವರತೀರ್ಥಮಾಹಾತ್ಮ್ಯವರ್ಣನಂ"
ನಾಮಾಷ್ಟಾಶೀತಿತಮೋಽಧ್ಯಾಯಃ

---

ಧಾರ್ಮಿಕನೂ, ಅತಿ ತೇಜಸ್ವಿಯೂ, ಶಾಂತನೂ, ಜೀವಿಸಿರುವ ಪುತ್ರನುಳ್ಳವನೂ, ಪ್ರಿಯವಾಗಿ ಮಾತಾಡುವವನೂ ಆದ ದೊರೆಯಾಗುವನು. ಅವನಿಗೆ ಯಾವಾಗಲೂ ಶತ್ರುಗಳಿರುವುದಿಲ್ಲ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಕಪಿಲೇಶ್ವರತೀರ್ಥಮಾಹಾತ್ಮ್ಯವರ್ಣನ"ವೆಂಬ
ಎಂಬತ್ತೆಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಷ್ಟೈಕೋನ ನವತಿತಮೋಽಧ್ಯಾಯಃ

## ಪೂತಿಕೇಶ್ವರತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ತತೋ ಗಚ್ಛೇತ್ತು ರಾಜೇಂದ್ರ ಪೂತಿಕೇಶ್ವರಮುತ್ತಮಂ ।
ನರ್ಮದಾದಕ್ಷಿಣೇ ಕೂಲೇ ಸರ್ವಪಾಪಕ್ಷಯಂಕರಂ ॥ ೧ ॥
ಸ್ಥಾಪಿತಂ ಜಾಂಬುವಂತೇನ ಲೋಕಾನಾಂ ತು ಹಿತಾರ್ಥಿನಾ ।
ರಾಜಾ ಪ್ರಸೇನಜಿನ್ನಾಮ ತಸ್ಯ ವಕ್ಷಸ್ಥಲಾನ್ಮಣೌ ॥ ೨ ॥
ಸಮುತ್ಕ್ಷಿಪ್ತೇ ತು ತೇನೈವ ಸಪೂತಿರಭವದ್ವ್ರಣಃ ।
ತತ್ರ ತೀರ್ಥೇ ತಪಸ್ತಪ್ತ್ವಾ ನಿರ್ವ್ರಣಃ ಸಮಜಾಯತ ॥ ೩ ॥
ತೇನ ತತ್ ಸ್ಥಾಪಿತಂ ಲಿಂಗಂ ಪೂತಿಕೇಶ್ವರಮುತ್ತಮಂ ।
ಯಸ್ತತ್ರ ಮನುಜೋ ಭಕ್ತ್ಯಾ ಸ್ನಾಯಾದ್ಭರತಸತ್ತಮ ॥ ೪ ॥

---

### ಕನ್ನಡದ ಅನುವಾದ

#### ಪೂತಿಕೇಶ್ವರತೀರ್ಥಮಾಹಾತ್ಮ್ಯವರ್ಣನ

೧–೩. ಶ್ರೀ ಮಾರ್ಕಂಡೇಯನು ಹೇಳುತ್ತಾನೆ —ದೊರೆಯೆ! ಬಳಿಕ ನರ್ಮದಾನದಿಯ ದಕ್ಷಿಣದಡದಲ್ಲಿರುವುದೂ, ಉತ್ತಮವೂ, ಸಮಸ್ತ ಪಾಪಗಳನ್ನು ನಾಶಗೊಳಿಸುವುದೂ, ಲೋಕಗಳಿಗೆ ಹಿತವನ್ನು ಬಯಸುವ ಜಾಂಬುವಂತನು ಪ್ರತಿಷ್ಠೆಮಾಡಿರುವುದೂ ಆದ ಪೂತಿಕೇಶ್ವರ ಕ್ಷೇತ್ರಕ್ಕೆ ಹೋಗಬೇಕು. (ಪೂರ್ವದಲ್ಲಿ ಶ್ರೀಕೃಷ್ಣನಿಗೆ ಭಯಪಟ್ಟು ಪ್ರಸೇನಜಿದ್ರಾಜನು ಶ್ಯಮಂತಕ ಮಣಿಯೊಡನೆ ಅಶ್ವಾರೂಢನಾಗಿ ಕಾಡಿನಲ್ಲಿ ಪಲಾಯನಗೈಯುತ್ತಿರಲು ಅಶುಚಿಯಾಗಿದ್ದ ಅವನನ್ನು ಸಿಂಹವೊಂದು ಕೊಂದಿತಷ್ಟೆ. ತರುವಾಯ ಜಾಂಬುವಂತನು ಆ ಸಿಂಹವನ್ನು ಕೊಂದು ಆ ರಾಜನ ಎದೆಯಲ್ಲಿದ್ದ ಆ ಅನರ್ಘ್ಯಮಣಿಯನ್ನು ಕಂಡನು.) ತರುವಾಯ ಅವನು ಆ ಶ್ಯಮಂತಕಮಣಿಯನ್ನು ಕಿತ್ತನು. ಕೂಡಲೆ ಅವನ ಶರೀರದಲ್ಲಿ ಆ ಮಣಿಯು ಹೊಡೆತದ ರಭಸದಿಂದ ಕೀವಿನಿಂದಕೂಡಿದ ಹುಣ್ಣಾಯಿತು. ಆ ಜಾಂಬುವಂತನು ಆ ತೀರ್ಥದಲ್ಲಿಯೇ ತಪಸ್ಸನ್ನುಮಾಡಿ ವ್ರಣರಹಿತನಾದನು.

೪–೫. ಇದಾದ ಬಳಿಕ ಅವನು ಅಲ್ಲಿ ಪೂತಿಕೇಶ್ವರವೆಂಬ ಉತ್ತಮಲಿಂಗವನ್ನು ಪ್ರತಿಷ್ಠೆಮಾಡಿದನು. ಅಲ್ಲಿ ಭಕ್ತಿಯಿಂದ ಆ ಪರಮೇಶ್ವರನನ್ನು ಪೂಜಿಸಿದವನು

**ಸರ್ವಾನ್ಕಾಮಾನವಾಪ್ನೋತಿ ಸಂಪೂಜ್ಯ ಪರಮೇಶ್ವರಂ ।**
**ಕೃಷ್ಣಾಷ್ಟಮ್ಯಾಂ ಚತುರ್ದಶ್ಯಾಂ ಸರ್ವಕಾಲಂ ನರಾಧಿಪ ।**
**ಯೇಽರ್ಚಯಂತಿ ನರಾ ದೇವಂ ತೇ ನ ಯಾಂತಿ ಯಮಾಲಯಂ ॥ ೫ ॥**

**ಇತೀ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ "ಪೂತಿಕೇಶ್ವರತೀರ್ಥಮಾಹಾತ್ಮ್ಯವರ್ಣನಂ" ನಾಮ್ನೈಕೋನನವತಿತಮೋಽಧ್ಯಾಯಃ**

---

ಸಮಸ್ತ ಇಷ್ಟಾರ್ಥಗಳನ್ನೂ ಪಡೆಯುವನು. ಆ ಲಿಂಗವನ್ನು ಕೃಷ್ಣಪಕ್ಷದ ಅಷ್ಟಮೀ ಚತುರ್ದಶೀ ದಿನಗಳಲ್ಲಿ ಯಾವಾಗಲೂ ಪೂಜಿಸುವ ಮನುಜರು ಯಮಲೋಕಕ್ಕೆ ಹೋಗುವುದಿಲ್ಲ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಪೂತಿಕೇಶ್ವರತೀರ್ಥಮಾಹಾತ್ಮ್ಯವರ್ಣನ"ವೆಂಬ
ಎಂಬತ್ತೊಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ನವತಿತಮೋಽಧ್ಯಾಯಃ

### ಜಲಶಾಯಿತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ರೇವಾಯಾ ಉತ್ತರೇ ಕೂಲೇ ವೈಷ್ಣವಂ ತೀರ್ಥಮುತ್ತಮಂ ।
ಜಲಶಾಯೀತಿ ವೈ ನಾಮ ವಿಖ್ಯಾತಂ ವಸುಧಾತಲೇ ॥ ೧ ॥
ದಾನವಾನಾಂ ವಧಂ ಕೃತ್ವಾ ಸುಪ್ತಸ್ತತ್ರ ಜನಾರ್ದನಃ ।
ಚಕ್ರಂ ಪ್ರಕ್ಷಾಲಿತಂ ತತ್ರ ದೇವದೇವೇನ ಚಕ್ರಿಣಾ ।
ಸುದರ್ಶನಂ ಚ ನಿಷ್ಪಾಪಂ ರೇವಾಜಲಸಮಾಶ್ರಯಾತ್ ॥ ೨ ॥

ಯುಧಿಷ್ಠಿರ ಉವಾಚ :—

ಚಕ್ರತೀರ್ಥಂ ಸಮಾಚಕ್ಷ್ವ ಮುನಿಸಂಘೈಶ್ಚ ವಂದಿತಂ ।
ವಿಷ್ಣೋಃ ಪ್ರಭಾವಮತುಲಂ ರೇವಾಯಾಶ್ಚೈವ ಯತ್ಫಲಂ ॥ ೩ ॥

ಶ್ರೀ ಮಾರ್ಕಂಡೇಯ ಉವಾಚ :—

ಸಾಧು ಸಾಧು ಮಹಾಪ್ರಾಜ್ಞ ವಿರಕ್ತಸ್ತ್ವಂ ಯುಧಿಷ್ಠಿರ ।
ಗುಹ್ಯಾದ್ಗುಹ್ಯತರಂ ತೀರ್ಥಂ ನಿರ್ಮಿತಂ ಚಕ್ರಿಣಾ ಸ್ವಯಂ ॥ ೪ ॥

---

### ಕನ್ನಡದ ಅನುವಾದ

#### ಜಲಶಾಯಿತೀರ್ಥಮಾಹಾತ್ಮ್ಯವರ್ಣನ

೧. ಶ್ರೀ ಮಾರ್ಕಂಡೇಯನು ಹೇಳುತ್ತಾನೆ —ನರ್ಮದಾನದಿಯ ಉತ್ತರ ದಡದಲ್ಲಿ ಜಲಶಾಯಿಯೆಂದು ವಿಖ್ಯಾತವಾದ ಒಂದು ವೈಷ್ಣವ ತೀರ್ಥವಿರುವುದು.

೨. ಅಲ್ಲಿ ವಿಷ್ಣುವು ದಾನವರನ್ನು ಕೊಂದಬಳಿಕ ಸುಖವಾಗಿ ಶಯನಿಸಿರುವನು. ಅಲ್ಲಿಯೆ ಆತನು ತನ್ನ ಚಕ್ರವನ್ನು ತೊಳೆದನು. ನರ್ಮದಾನದಿಯ ಜಲದ ಸಂಬಂಧದಿಂದ ಆ ಚಕ್ರವು ಪರಿಶುದ್ಧವಾಯಿತು.

೩. ಯುಧಿಷ್ಠಿರನು ಹೇಳುತ್ತಾನೆ —ಮುನಿಗಳಿಂದ ನಮಸ್ಕಾರ ಮಾಡಲ್ಪಟ್ಟ ಆ ಚಕ್ರತೀರ್ಥವನ್ನೂ ವಿಷ್ಣುವಿನ ಅಸದೃಶ ಪ್ರಭಾವವನ್ನೂ, ರೇವಾನದಿಯಲ್ಲಿ ದೊರಕುವ ಫಲವನ್ನೂ ಹೇಳು.

೪. ಶ್ರೀ ಮಾರ್ಕಂಡೇಯನು ಹೇಳುತ್ತಾನೆ.—ಪ್ರಾಜ್ಞನಾದ ಯುಧಿಷ್ಠಿರನೆ! ಒಳ್ಳೆಯದು. ನೀನು ಈ ವಿಷಯದಲ್ಲಿ ವಿಶೇಷವಾಗಿ ಅನುರಕ್ತನಾಗಿರುವೆ. ಕೇಳು ವಿಷ್ಣುವು ತಾನೇ ಸಾಕ್ಷಾತ್ತಾಗಿ ಅತಿಗುಹ್ಯವಾದ ಈ ತೀರ್ಥವನ್ನು ನಿರ್ಮಿಸಿರುವನು.

ತತ್ತೇಽಹಂ ಸಂಪ್ರವಕ್ಷ್ಯಾಮಿ ಕಥಾಂ ಪಾಪಪ್ರಣಾಶಿನೀಂ ।
ಆಸೀತ್ಪುರಾ ಮಹಾದೈತ್ಯಸ್ತಾಲಮೇಘ ಇತಿ ಶ್ರುತಃ ॥ ೫ ॥
ತೇನ ದೇವಾ ಜಿತಾಃ ಸರ್ವೇ ಹೃತರಾಜ್ಯಾ ನರಾಧಿಪ ।
ಯಜ್ಞಭಾಗಾನ್ ಸ್ವಯಂ ಭುಂಕ್ತೇ ಅಹಂ ವಿಷ್ಣುರ್ನಸಂಶಯಃ ॥ ೬ ॥
ಧನದಸ್ಯ ಹೃತಂ ಚಿತ್ತಂ ಹೃತಃ ಶಕ್ರಸ್ಯ ವಾರಣಃ ।
ಇಂದ್ರಾಣೀಂ ವಾಂಛತೇ ಪಾಪೋ ಹಯರತ್ನಂ ರವೇರಪಿ ॥ ೭ ॥
ತಾಲಮೇಘಭಯಾತ್ಪಾರ್ಥ ರವಿರುದ್ರಾಃ ಸವಾಸವಾಃ ।
ಯಮಃ ಸ್ಕಂದೋ ಜಲೇಶೋಽಗ್ನಿರ್ವಾಯುರ್ದೇವೋ ಧನೇಶ್ವರಃ ॥ ೮ ॥
ಸವಾಕ್ಪತಿಮಹೇಶಾಶ್ಚ ನಷ್ಟಚಿತ್ತಾಃ ಪಿತಾಮಹಂ ।
ಗತಾ ದೇವಾ ಬ್ರಹ್ಮಲೋಕಂ ತತ್ರ ದೃಷ್ಟ್ವಾ ಪಿತಾಮಹಂ ॥ ೯ ॥
ತುಷ್ಟುವುರ್ವಿವಿಧೈಃ ಸ್ತೋತ್ರೈರ್ವಾಗೀಶಪ್ರಮುಖಾಃ ಸುರಾಃ ।
ಗುಣತ್ರಯವಿಭಾಗಾಯ ಪಶ್ಚಾದ್ಭೇದಮುಪೇಯುಷೇ ॥ ೧೦ ॥
ದೃಷ್ಟ್ವಾ ದೇವಾನ್ನಿರುತ್ಸಾಹಾನ್ವಿವರ್ಣಾನವನೀಪತೇ ।
ಪ್ರಸಾದಾಭಿಮುಖೋ ದೇವಃ ಪ್ರತ್ಯುವಾಚ ದಿವೌಕಸಃ ॥ ೧೧ ॥

---

೫. ಆದ್ದರಿಂದ ನಾನು ನಿನಗೆ ಪಾಪವನ್ನು ನಿವಾರಿಸುವ ಈ ಕಥೆಯನ್ನು ಹೇಳುವೆನು. ಹಿಂದೆ ತಾಲಮೇಘನೆಂದು ಪ್ರಸಿದ್ಧನಾದ ಮಹಾದೈತ್ಯನೊಬ್ಬ ನಿದ್ದನು.

೬. ರಾಜನೆ! ಅವನು ದೇವತೆಗಳನ್ನೆಲ್ಲ ಜಯಿಸಿ ಅವರ ರಾಜ್ಯವನ್ನು ಅಪಹರಿಸಿದನು. ನಾನೇ ವಿಷ್ಣುವೆಂದು ತಿಳಿಯುತ್ತ ಯಜ್ಞಭಾಗಗಳನ್ನು ಭುಜಿಸುತ್ತಿದ್ದನು.

೭. ಅವನು ಕುಭೇರನ ದ್ರವ್ಯವನ್ನೂ, ಇಂದ್ರನ ಐರಾವತವನ್ನೂ ಅಪಹರಿಸಿದನು. ಪಾಪಿಯಾದ ಅವನು ಶಚೀದೇವಿಯನ್ನೂ, ಸೂರ್ಯನ ಕುದುರೆಯನ್ನೂ ಅಪೇಕ್ಷಿಸಿದನು.

೮–೧೦. ಪಾರ್ಥ! ಆ ತಾಲಮೇಘನ ಭಯದಿಂದ ಸೂರ್ಯರು, ರುದ್ರರು, ಇಂದ್ರ, ಯಮ, ಸ್ಕಂದ, ವರುಣ, ಅಗ್ನಿ, ವಾಯು, ಕುಬೇರ, ಬೃಹಸ್ಪತಿ, ಮಹೇಶ್ವರರು ನಷ್ಟಚಿತ್ತರಾಗಿ ಬ್ರಹ್ಮಲೋಕಕ್ಕೆ ಹೋಗಿ ಬ್ರಹ್ಮನನ್ನು ಈರೀತಿ ವಿವಿಧ ಸ್ತೋತ್ರಗಳಿಂದ ಸ್ತುತಿಸಿದರು. "ಸತ್ತ್ವರಜಸ್ತಮೋಗುಣಗಳ ವಿಭಾಗವುಳ್ಳವನಾಗಿ, ಅನಂತರ ಭೇದವನ್ನು ಹೊಂದುವವನಾದ ಬ್ರಹ್ಮನಿಗೆ ನಮಸ್ಕಾರವು."

೧೧. ಬ್ರಹ್ಮನು ಉತ್ಸಾಹವಿಲ್ಲದವರೂ, ಕಳೆಗುಂದಿದವರೂ ಆದ ದೇವತೆಗಳನ್ನು ನೋಡಿ ಅನುಗ್ರಹಾಭಿಮುಖನಾಗಿ ಇಂತೆಂದನು.

ಬ್ರಹ್ಮೋವಾಚ :—
ಸ್ವಾಗತಂ ಸುರಸಂಘಸ್ಯ ಕಾಂತಿರ್ನಷ್ಟಾ ಪುರಾತನೀ ।
ಹಿಮಕ್ಲಿಷ್ಟಪ್ರಭಾವೇಣ ಜ್ಯೋತೀಂಷೀವ ಮುಖಾನಿ ವಃ ॥ ೧೨ ॥
ಪ್ರಶಮಾದರ್ಚಿಷಾಮೇತದನುದ್ಗೀರ್ಣಂ ಸುರಾಯುಧಂ ।
ವೃತ್ರಸ್ಯ ಹಂತುಃ ಕುಲಿಶಂ ಕುಂಠಿತಶ್ರೀವ ಲಕ್ಷ್ಯತೇ ॥ ೧೩ ॥
ಕಿಂಚಾಽಯಮರಿದುರ್ವಾರಃ ಪಾಣೌ ಪಾಶಃ ಪ್ರಚೇತಸಃ ।
ಮಂತ್ರೇಣ ಹತವೀರ್ಯಸ್ಯ ಫಣಿನೋ ದೈನ್ಯಮಾಶ್ರಿತಃ ॥ ೧೪ ॥
ಕುಬೇರಸ್ಯ ಮನಃಶಲ್ಯಂ ಶಂಸತೀವ ಪರಾಭವಂ ।
ಅಪವಿದ್ಧಗತೋ ವಾಯುರ್ಭಗ್ನಶಾಖ ಇವ ದ್ರುಮಃ ॥ ೧೫ ॥
ಯಮೋಽಪಿ ವಿಲಿಖನ್ಭೂಮಿಂ ದಂಡೇನಾಸ್ತಮಿತತ್ವಿಷಾ ।
ಕುರುತೇಽಸ್ಮಿನ್ನಮೋಘೋಽಪಿ ನಿರ್ವಾಣಾಲಾತಲಾಘವಂ ॥ ೧೬ ॥
ಅಮೀಚ ಕಥಮಾದಿತ್ಯಾಃ ಪ್ರತಾಪಕ್ಷತಿಶೀತಲಾಃ ।
ಚಿತ್ರನ್ಯಸ್ತಾ ಇವ ಗತಾಃ ಪ್ರಕಾಮಾಲೋಕನೀಯತಾಂ ॥ ೧೭ ॥

---

೧೨. ಬ್ರಹ್ಮನು ಹೇಳುತ್ತಾನೆ.—ಸುರರ ಸಮೂಹಕ್ಕೆ ಸುಖಾಗಮನವಾಗಲಿ. ಆಹಾ! ನಿಮ್ಮ ಹಿಂದಿನ ಕಾಂತಿಯು ನಷ್ಟವಾಗಿದೆಯೇಕೆ? ನಿಮ್ಮ ಮುಖಗಳು ಹಿಮದಿಂದ ಕ್ಲೇಶಗೊಂಡ ನಕ್ಷತ್ರಗಳಂತಿವೆ.

೧೩. ಕಾಂತಿಯು ಶಾಂತವಾಗಿರುವುದರಿಂದ ಇಂದ್ರನ ವಜ್ರಾಯುಧವು ಪ್ರಕಾಶಿಸುತ್ತಿಲ್ಲ, ಕುಂಠಿತ ಕಾಂತಿಯುಳ್ಳಂತೆ ಕಾಣುತ್ತಿದೆ.

೧೪. ವರುಣನ ಕೈಯಲ್ಲಿರುವ ಶತ್ರುಗಳಿಗೆ ತಡೆಯಲಾಗದ ಈ ಪಾಶವು ಮಂತ್ರದಿಂದ ಅಡಗಿದ ಸಾಮರ್ಥ್ಯವುಳ್ಳ ಸರ್ಪದಂತೆ ದೈನ್ಯವನ್ನು ಹೊಂದಿದೆ.

೧೫. ಕುಬೇರನ ಮನಸ್ಸಿನ ವ್ಯಥೆಯು ಸೋಲನ್ನು ತಿಳಿಸುವಂತಿದೆ. ವಾಯುವು ತಡೆಯಲ್ಪಟ್ಟ ಗಮನವುಳ್ಳವನಾಗಿ ಮುರಿದ ಕೊಂಬೆಗಳುಳ್ಳ ವೃಕ್ಷದಂತಿರುವನು.

೧೬. ಯಮನೂ ಕಾಂತಿಹೀನವಾದ ದಂಡದಿಂದ ಭೂಮಿಯನ್ನು ಕೆರೆಯುತ್ತ ಈ ಅಮೋಘವಾದ ದಂಡದಲ್ಲಿ, ಆರಿಹೋದ ಬೆಂಕಿಕೊಳ್ಳಿಯಲ್ಲಿ ಎಂತೋ ಅಂತು ಲಾಘವವನ್ನು ತೋರಿಸುತ್ತಿರುವನು.

೧೭. ಈ ಸೂರ್ಯರು ಪ್ರತಾಪದ ನಾಶದಿಂದ ತಣ್ಣಗಾಗಿ ಚಿತ್ರದಲ್ಲಿ ಬರೆಯಲ್ಪಟ್ಟವರಂತೆ ಅತಿಶಯವಾಗಿ ನೋಡಲರ್ಹರಾಗಿರುವರೇಕೆ?

ತದ್ಬ್ರೂತ ವತ್ಸಾಃ ಕಿಮಿತಃ ಪ್ರಾರ್ಥಯಧ್ವಂ ಸಮಾಗತಾಃ ।
ಕಿಮಾಗಮನಕೃತ್ಯಂ ವೋ ಬ್ರೂತ ನಿಃಸಂಶಯಂ ಸುರಾಃ ।
ಮಯಿ ಸೃಷ್ಟಿರ್ಹಿ ಲೋಕಾನಾಂ ರಕ್ಷಾ ಯುಷ್ಮಾಸ್ವವಸ್ಥಿತಾ ॥ ೧೮ ॥
ತತೋ ಮಂದಾನಿಲೋದ್ಧೂತಕಮಲಾಕರ ಶೋಭಿನಾ ।
ಗುರುಂ ನೇತ್ರಸಹಸ್ರೇಣ ಪ್ರೇರಯಾಮಾಸ ವೃತ್ರಹಾ ॥ ೧೯ ॥
ಸ ದ್ವಿನೇತ್ರಂ ಹರೇಶ್ಚಕ್ಷುಃ ಸಹಸ್ರನಯನಾಧಿಕಂ ।
ವಾಚಸ್ಪತಿರುವಾಚೇದಂ ಪ್ರಾಂಜಲಿರ್ಜಲಜಾಸನಂ ॥ ೨೦ ॥
ಯುಷ್ಮದ್ವಂಶೋದ್ಭವಸ್ತಾತ ತಾಲಮೇಘೋ ಮಹಾಬಲಃ ।
ಉಪತಾಪಯತೇ ದೇವಾನ್ ಧೂಮಕೇತುರಿವೋಚ್ಛ್ರಿತಃ ॥ ೨೧ ॥
ತೇನ ದೇವಗಣಾಃ ಸರ್ವೇ ದುಃಖಿತಾ ದಾನವೇನ ಚ ।
ತಾಲಮೇಘೋ ದೈತ್ಯಪತಿಃ ಸರ್ವಾನ್ನೋ ಬಾಧತೇ ಬಲೀ ॥ ೨೨ ॥
ತಸ್ಮಾತ್ತ್ವಾಂ ಶರಣಂ ಪ್ರಾಪ್ತಾಃ ಶರಣಂ ನೋ ವಿಧೇ ಭವ ॥ ೨೩ ॥
ತತಃ ಪ್ರಸನ್ನೋ ಭಗವಾನ್ವೇಧಾಸ್ತಾನಬ್ರವೀದ್ವಚಃ ॥ ೨೪ ॥

ಬ್ರಹ್ಮೋವಾಚ :—

ತಾಲಮೇಘೇನ ವೋ ಮಧ್ಯೇ ಬಲೀ ತೇನ ಸಮಃ ಸುರಾಃ ।
ವಿನಾ ಮಾಧವದೇವೇನ ಸಾಧ್ಯೋ ಮೇ ನೈವ ದಾನವಃ ॥ ೨೫ ॥

---

೧೮. ಆದ್ದರಿಂದ ಎಲೈ ದೇವತೆಗಳೆ! ನನ್ನಿಂದೇನಾಗಬೇಕು? ಬೇಡಿರಿ. ನೀವು ಇಲ್ಲಿಗೆ ಬರಲು ಕಾರಣವೇನು? ಸಂಶಯವಿಲ್ಲದೆ ಹೇಳಿರಿ.

೧೯–೨೨. ಲೋಕಗಳ ಸೃಷ್ಟಿಯು ನನ್ನ ವಶದಲ್ಲಿರುವುದು. ನೀವು ಆ ಲೋಕಗಳನ್ನು ಕಾಪಾಡುವವರು.'' ಬಳಿಕ ಇಂದ್ರನು ಮಂದಮಾರುತದಿಂದ ಅಲುಗಾಡಿದ ಕಮಲಗಳಂತೆ ಶೋಭಿಸುವ ಸಾವಿರ ಕಣ್ಣುಗಳಿಂದಲೂ ಬೃಹಸ್ಪತಿಯನ್ನು ಮಾತನಾಡುವಂತೆ ಪ್ರೇರಿಸಿದನು. ಇಂದ್ರನ ಸಾವಿರ ಕಣ್ಣುಗಳಿಗಿಂತಲೂ ಅಧಿಕವಾದ ಎರಡು ಕಣ್ಣುಗಳಂತಿರುವ ಆ ಬೃಹಸ್ಪತಿಯು ಕೈಮುಗಿದುಕೊಂಡು ಬ್ರಹ್ಮನನ್ನು ಕುರಿತು ಇಂತೆಂದನು. ''ತಾತ! ನಿನ್ನ ವಂಶದಲ್ಲಿ ಜನಿಸಿದ ಮಹಾಬಲಿಷ್ಠನಾದ ತಾಲಮೇಘನು ಆಕಾಶದಲ್ಲಿ ಉದ್ಭವಿಸಿದ ಧೂಮಕೇತುವಿನಂತೆ ದೇವತೆಗಳನ್ನು ಪೀಡಿಸುತ್ತಿದ್ದಾನೆ. ಆ ದಾನವನಿಂದ ಸಮಸ್ತ ದೇವತೆಗಳೂ ದುಃಖಗೊಂಡಿರುವರು.

೨೩–೨೪. ಬಲಿಷ್ಠನೂ, ದೈತ್ಯರಾಜನೂ ಆದ ತಾಲಮೇಘನು ನಮ್ಮೆಲ್ಲರನ್ನೂ ಬಾಧಿಸುತ್ತಿರುವನು. ಆದ್ದರಿಂದ ನಾವು ನಿನ್ನನ್ನು ಮರೆಹೊಕ್ಕೆವು. ಎಲೈ ಬ್ರಹ್ಮನೆ! ನಮ್ಮನ್ನು ಕಾಪಾಡು.'' ಬಳಿಕ ಪೂಜ್ಯನಾದ ಬ್ರಹ್ಮನು ಪ್ರಸನ್ನನಾಗಿ ಅವರನ್ನು ಕುರಿತು ಹೀಗೆಂದನು.

೨೫. ಬ್ರಹ್ಮನು ಹೇಳುತ್ತಾನೆ:—ದೇವತೆಗಳೆ! ವಿಷ್ಣುವನ್ನು ಬಿಟ್ಟು

ತತಃ ಸುರಗಣಾಃ ಸರ್ವೇ ವಿರಿಂಚಿಪ್ರಮುಖಾ ನೃಪ ।
ಕ್ಷೀರೋದಂ ಪ್ರಸ್ಥಿತಾಃ ಸರ್ವೇ ದುಃಖಿತಾಸ್ತೇನ ವೈರಿಣಾ ॥ ೨೬ ॥
ತ್ವರಿತಾಃ ಪ್ರಸ್ಥಿತಾ ದೇವಾಃ ಕೇಶವಂ ದ್ರಷ್ಟುಕಾಮ್ಯಯಾ ।
ಕ್ಷೀರೋದಂ ಸಾಗರಂ ಗತ್ವಾಽಸ್ತುವಂಸ್ತೇ ಜಲಶಾಯಿನಂ ॥ ೨೭ ॥

ದೇವಾ ಊಚುಃ:—

ಜಗದಾದಿರನಾದಿಸ್ತ್ವಂ ಜಗದಂತೋಽಪ್ಯನಂತಕಃ ।
ಜಗನ್ಮೂರ್ತಿರಮೂರ್ತಿಸ್ತ್ವಂ ಜಯ ಗೀರ್ವಾಣ ಪೂಜಿತ ॥ ೨೮ ॥
ಜಯ ಕ್ಷೀರೋದಶಯನ ಜಯ ಲಕ್ಷ್ಮ್ಯಾ ಸದಾ ವೃತ ।
ಜಯ ದಾನವನಾಶಾಯ ಜಯ ದೇವಕಿನಂದನ ॥ ೨೯ ॥
ಜಯ ಶಂಖಗದಾಪಾಣೇ ಜಯ ಚಕ್ರಧರ ಪ್ರಭೋ ।
ಇತಿ ದೇವಸ್ತುತಿಂ ಶ್ರುತ್ವಾ ಪ್ರಬುದ್ಧೋ ಜಲಶಾಯ್ಯಥ ॥ ೩೦ ॥
ಉವಾಚ ಮಧುರಾಂ ವಾಣೀಂ ಮೇಘಗಂಭೀರನಿಃಸ್ವನಾಂ ।
ಕಿಮರ್ಥಂ ಬೋಧಿತೋ ಬ್ರಹ್ಮನ್ ಸಮರ್ಥೈರ್ವಃ ಸುರಾಸುರೈಃ ॥ ೩೧ ॥

---

ಆ ತಾಲಮೇಘನಿಗೆ ಸಮನಾದವನು ನಿಮ್ಮಲ್ಲಿ ಯಾರೂ ಇಲ್ಲ. ನಾನೂ ಅವನನ್ನು ಜಯಿಸಲು ಅಸಮರ್ಥನು.

೨೬. ಬಳಿಕ ಆ ಬ್ರಹ್ಮಾದಿ ದೇವತೆಗಳು ಆ ಶತ್ರುವಿನಿಂದ ಪೀಡಿತರಾಗಿ ಕ್ಷೀರಸಮುದ್ರಕ್ಕೆ ಹೊರಟರು.

೨೭. ವಿಷ್ಣುವನ್ನು ನೋಡಲಿಚ್ಛೆಯಿಂದ ಶೀಘ್ರವಾಗಿ ಹೊರಟ ದೇವತೆಗಳು ಕ್ಷೀರಸಮುದ್ರಕ್ಕೆ ಹೋಗಿ ವಿಷ್ಣುವನ್ನು ಸ್ತುತಿಸಿದನು.

೨೮. ದೇವತೆಗಳು ಹೇಳುತ್ತಾರೆ·—ಜಗತ್ತಿಗೆ ಆದಿಯೂ, ಅನಾದಿಯೂ, ಜಗನ್ನಾಶಕನೂ, ನಾಶರಹಿತನೂ, ಜಗನ್ಮೂರ್ತಿಯೂ, ಮೂರ್ತಿಯಿಲ್ಲದವನೂ, ದೇವತೆಗಳಿಂದ ಪೂಜಿತನೂ ಆದ ವಿಷ್ಣುವೆ! ಜಯಿಸು.

೨೯. ಕ್ಷೀರಸಮುದ್ರದಲ್ಲಿ ಮಲಗಿದವನೂ, ಯಾವಾಗಲೂ ಲಕ್ಷ್ಮಿಯಿಂದ ಕೂಡಿರುವವನೂ, ದಾನವಾಂತಕನೂ, ದೇವಕೀಪುತ್ರನೂ ಆದ ವಿಷ್ಣುವೆ! ಜಯಿಸು.

೩೦. ಶಂಖ, ಚಕ್ರ, ಗದೆಗಳನ್ನು ಹಿಡಿದಿರುವ ಓ ನಾರಾಯಣನೆ! ಜಯಿಸು.'' ವಿಷ್ಣುವು ದೇವತೆಗಳ ಈ ರೀತಿಯಾದ ಸ್ತುತಿಯನ್ನು ಕೇಳಿ ಎಚ್ಚರಗೊಂಡನು.

೩೧. ಇಂಪಾಗಿಯೂ, ಮೇಘದಂತೆ ಗಂಭೀರವೂ ಆದ ವಾಣಿಯಿಂದ "ಅಯ್ಯಾ ಬ್ರಹ್ಮನೆ! ಸಮರ್ಥರಾದ ಈ ದೇವತೆಗಳೊಡನೆ ನೀನು ನನ್ನನ್ನು ಏಕೆ ಎಚ್ಚರಗೊಳಿಸಿದೆ?'' ಎಂದು ಕೇಳಿದನು.

ಬ್ರಹ್ಮೋವಾಚ :—

ತಾಲಮೇಘಭಯಾತ್ಕೃಷ್ಣ ಸಂಪ್ರಾಪ್ತಾಸ್ತವಮಂದಿರಂ ।
ನ ವಧ್ಯಃ ಕಸ್ಯಚಿತ್ಪಾಪಸ್ತಾಲಮೇಘೋ ಜನಾರ್ದನ ॥ ೩೨ ॥
ತ್ವಮೇವ ಜಹಿ ತಂ ದುಷ್ಟಂ ಮೃತ್ಯುಂ ಯಾಸ್ಯತಿ ನಾಽನ್ಯಥಾ ॥ ೩೩ ॥

ಶ್ರೀ ಕೃಷ್ಣ ಉವಾಚ :—

ಸ್ವಸ್ಥಾನಂ ಗಮ್ಯತಾಂ ದೇವಾಃ ಸ್ವಕೀಯಾಂ ಲಭತ ಪ್ರಜಾಂ ।
ದುಷ್ಟಾತ್ಮಾನಂ ಹನಿಷ್ಯಾಮಿ ತಾಲಮೇಘಂ ಮಹಾಬಲಂ ॥ ೩೪ ॥
ಸ್ಥಾನಂ ಬ್ರುವಂತು ಮೇ ದೇವಾ ವಸೇದ್ಯತ್ರ ಸ ದಾನವಃ ॥ ೩೫ ॥

ದೇವಾ ಊಚುಃ :—

ಹಿಮಾಚಲಗುಹಾಯಾಂ ಸ ವಸತೇ ದಾನವೇಶ್ವರಃ ।
ಚತುರ್ವಿಂಶತಿಸಾಹಸ್ರೈಃ ಕನ್ಯಾಭಿಃ ಪರಿವಾರಿತಃ ॥ ೩೬ ॥
ತುರಂಗೈಃ ಸ್ಯಂದನೈಃ ಕೃಷ್ಣ ಸಂಖ್ಯಾ ತಸ್ಯ ನ ವಿದ್ಯತೇ ।
ನಟಾ ನಾನಾವಿಧಾಸ್ತತ್ರ ಅಸಂಖ್ಯಾತಗುಣಾ ಹರೇ ॥ ೩೭ ॥
ದ್ವಿರದಾಃ ಪರ್ವತಾಕಾರಾ ಹಯಾಶ್ಚ ದ್ವಿರದೋಪಮಾಃ ।
ಮಹಾಬಲೋ ವಸೇತ್ತತ್ರ ಗೀರ್ವಾಣಭಯದಾಯಕಃ ॥ ೩೮ ॥

---

೩೨. ಬ್ರಹ್ಮನು ಹೇಳುತ್ತಾನೆ —ಕೃಷ್ಣ ! ನಾವು ತಾಲಮೇಘ ದಾನವನ ಭಯದಿಂದ ನಿನ್ನೆಡೆಗೆ ಬಂದಿರುವೆವು. ಆ ತಾಲಮೇಘನನ್ನು ಕೊಲ್ಲಲು ಯಾರೂ ಸಮರ್ಥರಲ್ಲ.

೩೩. ನೀನೇ ಆ ದುಷ್ಟನನ್ನು ಕೊಲ್ಲು. ಬೇರೆ ವಿಧದಿಂದ ಅವನು ಮಡಿಯುವುದಿಲ್ಲ.

೩೪. ಶ್ರೀ ಕೃಷ್ಣನು ಹೇಳುತ್ತಾನೆ.—ಅಯ್ಯಾ ದೇವತೆಗಳಿರಾ ! ನೀವು ನಿಮ್ಮ ಸ್ಥಳಕ್ಕೆ ಹೋಗಿ ನಿಮ್ಮ ಪ್ರಜೆಗಳನ್ನು ಹೊಂದಿರಿ. ದುಷ್ಟನೂ, ಮಹಾಬಲಿಷ್ಠನೂ ಆದ ಆ ತಾಲಮೇಘನನ್ನು ನಾನು ಕೊಲ್ಲುವೆನು.

೩೫. ದೇವತೆಗಳೆ ! ಆ ದಾನವನು ಎಲ್ಲಿ ವಾಸಮಾಡುತ್ತಿರುವನೆಂಬುದನ್ನು ಮಾತ್ರ ನನಗೆ ತಿಳಿಸಿರಿ.

೩೬. ದೇವತೆಗಳು ಹೇಳುತ್ತಾರೆ.—ಆ ದಾನವೇಶ್ವರನು ಇಪ್ಪತ್ತನಾಲ್ಕು ಸಾವಿರ ಕನ್ಯೆಯರೊಡನೆ ಹಿಮಾಚಲದ ಗುಹೆಯಲ್ಲಿ ವಾಸಿಸುತ್ತಿರುವನು.

೩೭. ಕೃಷ್ಣ ! ಅವನಲ್ಲಿರುವ ಕುದುರೆಗಳು, ರಥಗಳು ಎಷ್ಟೆಂಬುದರ ಲೆಕ್ಕವೇ ಇರುವುದಿಲ್ಲ. ಅವನ ಬಳಿ ನಾನಾವಿಧರೂ, ಮಿತಿಯಿಲ್ಲದ ಗುಣವುಳ್ಳ ಬಗೆಬಗೆಯ ನಟರಿರುವರು.

೩೮. ಅವನ ಆನೆಗಳು ಪರ್ವತಗಳಂತೆಯೂ, ಕುದುರೆಗಳು ಆನೆಗಳಂತೆಯೂ

ಶ್ರುತ್ವಾ ದೇವೋ ವಚಸ್ತೇಷಾಂ ದೇವಾನಾಮಾತುರಾತ್ಮನಾಂ ।
ಅಚಿಂತಯದ್ಗರುತ್ಮಂತಂ ಶತ್ರುಸಂಘವಿನಾಶನಂ ॥ ೩೯ ॥
ಚಕ್ರಂ ಕರೇಣ ಸಂಗೃಹ್ಯ ಗದಾಚಕ್ರಧರಃ ಪ್ರಭುಃ ।
ಶಾರ್ಙ್ಗಂ ಚ ಮುಸಲಂ ಸೀರಂ ಕರೈರ್ಗೃಹ್ಯ ಜನಾರ್ದನಃ ॥ ೪೦ ॥
ಆರೂಢಃ ಪಕ್ಷಿರಾಜೇಂದ್ರಂ ವಧಾರ್ಥಂ ದಾನವಸ್ಯ ಚ ।
ದಾನವಸ್ಯ ಪುರೇ ಹೇತುರುತ್ಪಾತಾ ಘೋರರೂಪಿಣಃ ॥ ೪೧ ॥
ಗೋಮಾಯುರ್ಗೃಧ್ರಮಧ್ಯೇ ತು ಕಪೋತೈಃ ಸಮಮಾವಿಶತ್ ।
ವಿನಾ ವಾತೇನ ತಸ್ಯೈವ ಧ್ವಜದಂಡಃ ಪಪಾತ ಹ ॥ ೪೨ ॥
ಸರ್ಪಮೂಷಕಯೋರ್ಯುದ್ಧಂ ತಥಾ ಕೇಸರಿನಾಗಯೋಃ ।
ಉನ್ಮಾರ್ಗಾಃ ಸರಿತಸ್ತತ್ರಾಽವಹನ್ರಕ್ತವಿಮಿಶ್ರಿತಾಃ ।
ಅಕಾಲತರುಪುಷ್ಪಾಣಿ ದೃಶ್ಯಂತೇಽಸ್ಮ ಸಮಂತತಃ ॥ ೪೩ ॥
ತತಃ ಪ್ರಾಪ್ತೋ ಜಗನ್ನಾಥೋ ಹಿಮವಂತಂ ನಗೇಶ್ವರಂ ।
ಪಾಂಚಜನ್ಯಶ್ಚ ಸಹಸಾ ಪೂರಿತಃ ಪುರಸನ್ನಿಧೌ ॥ ೪೪ ॥
ತೇನ ಶಬ್ದೇನ ಮಹತಾ ಹ್ಯಾರೂಢೋ ದಾನವೇಶ್ವರಃ ।
ಉವಾಚ ಚ ತದಾ ವಾಕ್ಯಂ ತಾಲಮೇಘೋ ಮಹಾಬಲಃ ॥ ೪೫ ॥

---

ಇರುವುವು. ಅತಿ ಬಲಿಷ್ಠನಾದ ಅವನು ಅಲ್ಲಿ ದೇವತೆಗಳಿಗೆ ಭಯವನ್ನುಂಟು ಮಾಡುತ್ತ ವಾಸಿಸುತ್ತಿರುವನು.

೩೯. ವಿಷ್ಣುವು ದುಃಖಪೀಡಿತರಾದ ಆ ದೇವತಗಳ ಮಾತುಗಳನ್ನು ಕೇಳಿ ಶತ್ರುವ್ಯೂಹವನ್ನು ಭೇದಿಸುವ ಗರುಡನನ್ನು ಸ್ಮರಿಸಿದನು.

೪೦–೪೧. ಅವನು ಚಕ್ರ, ಗದೆ, ಶಾರ್ಙ್ಗ, ಮುಸಲ, ಸೀರಾದ್ಯಾಯುಧಗಳನ್ನು ಕೈಗಳಿಂದ ಹಿಡಿದುಕೊಂಡು ಆ ದಾನವನ ವಧೆಗಾಗಿ ಗರುಡನನ್ನು ಏರಿದನು. ಆಗ ದಾನವನ ಪಟ್ಟಣದಲ್ಲಿಯಾದರೂ ಭಯಂಕರವಾದ ಉತ್ಪಾತಗಳುಂಟಾದುವು.

೪೨. ನರಿಯು ಪಾರಿವಾಳಗಳೊಡನೆ ಹದ್ದುಗಳ ನಡುವೆ ಪ್ರವೇಶಿಸಿತು. ಗಾಳಿಯಿಲ್ಲದೆಯೇ ಆ ದಾನವನ ಧ್ವಜದಂಡವು ನೆಲಕ್ಕುರುಳಿತು.

೪೩. ಹಾವು ಮತ್ತು ಇಲಿಗಳಿಗೂ, ಆನೆ ಸಿಂಹಗಳಿಗೂ ಜಗಳವಾಯಿತು. ನದಿಗಳು ತಮ್ಮ ದಾರಿಯನ್ನು ಬಿಟ್ಟು ರಕ್ತಮಿಶ್ರವಾಗಿ ಹರಿದುವು. ಅಕಾಲದಲ್ಲಿ ಸುತ್ತಲೂ ಮರಗಳಲ್ಲಿ ಹೂವುಗಳು ಕಾಣಿಸಿಕೊಂಡುವು.

೪೪. ಬಳಿಕ ಜಗದೊಡೆಯನಾದ ನಾರಾಯಣನು ಹಿಮವತ್ಪರ್ವತಕ್ಕೆ ಬಂದು ಪಟ್ಟಣದಬಳಿ ನಿಂತು ಕೂಡಲೆ ಶಂಖವನ್ನು ಊದಿದನು.

೪೫. ಆ ಮಹಾಶಬ್ದದಿಂದ ಕುಪಿತನಾದ ತಾಲಮೇಘನು ಇಂತೆಂದನು.

ತಾಲಮೇಘ ಉವಾಚ :—

ಕೋಽಯಂ ಮೃತ್ಯುವಶಂ ಪ್ರಾಪ್ತೋ ಹ್ಯಜ್ಞಾತ್ವಾ ಮಮ ವಿಕ್ರಮಂ ।
ಧುಂಧುಮಾರಾಜ್ಞಯಾಹ್ಯಾಶು ಸ್ವಸೈನ್ಯಪರಿವಾರಿತಃ ॥ ೪೬ ॥
ಬಲಾದಾನಯ ತಂ ಬದ್ಧ್ವಾ ಮಮಾಗ್ರೇ ಬಾಹುಶಾಲಿನಂ ॥ ೪೭ ॥

ಧುಂಧುಮಾರ ಉವಾಚ :—

ಆನಯಾಮಿ ನ ಸಂದೇಹಃ ಸುರೋ ಯಕ್ಷೋಽಥ ಕಿನ್ನರಃ ।
ಸ್ಯಂದನೌಘೈಃ ಸಮಾಯುಕ್ತೋ ಗಜವಾಜಿಭಟೈಃಸಹ ॥ ೪೮ ॥
ಹೃಷ್ಟಸ್ತತೋ ಜಗದ್ಯೋನಿಃ ಸುಪರ್ಣಸ್ಥೋ ಮಹಾಬಲಃ ।
ಗೃಹ್ಯತಾಂ ಗೃಹ್ಯತಾಮೇಷ ಇತ್ಯುಕ್ತಾಸ್ತೇನ ಕಿಂಕರಾಃ ॥ ೪೯ ॥
ಚತುರ್ದಿಕ್ಷು ಪ್ರಧಾವಂತ ಇತಶ್ಚೇತಶ್ಚ ಸರ್ವತಃ ।
ಸುಪರ್ಣೇನಾಽಗ್ನಿರೂಪೇಣ ದಗ್ಧಾಸ್ತೇ ಶಲಭಾ ಯಥಾ ॥ ೫೦ ॥
ಧುಂಧುಮಾರೋಽಪಿ ಕೃಷ್ಣೇನ ಶರಘಾತೇನ ತಾಡಿತಃ ।
ಹತೋ ವಕ್ಷಸ್ಥಲೇ ಪ್ರಾಪ್ತೋ ಮೃತಾವಸ್ಥೋ ರಥೋಪರಿ ॥ ೫೧ ॥
ಹಾಹಾಕಾರಂ ತತಃಸರ್ವೇ ದಾನವಾಶ್ಚಕ್ರುರಾತುರಾಃ ।
ತಾಲಮೇಘಸ್ತತಃ ಕ್ರುದ್ಧೋ ರಥಾರೂಢೋ ವಿನಿರ್ಗತಃ ।
ದದೃಶೇ ಕೇಶವಂ ಪಾರ್ಥ ಶಂಖಚಕ್ರಗದಾಧರಂ ॥ ೫೨ ॥

---

೪೬–೪೭. ತಾಲಮೇಘನು ಹೇಳುತ್ತಾನೆ.—ನನ್ನ ಶಕ್ತಿಯನ್ನರಿಯದೆ ಮೃತ್ಯುವಿಗೆ ಅಧೀನನಾದ ಇವನಾರು? ಎಲೈ ಧುಂಧುಮಾರನೆ! ನೀನು ನನ್ನ ಅಪ್ಪಣೆಯಿಂದ ಶೀಘ್ರವಾಗಿ ಸೈನ್ಯದೊಡನೆಹೋಗಿ ಬಾಹುಶಾಲಿಯಾದ ಇವನನ್ನು ಕಟ್ಟಿ ಬಲಾತ್ಕಾರದಿಂದ ನನ್ನ ಮುಂದೆ ಎಳೆದುಕೊಂಡು ಬಾ.

೪೮. ಧುಂಧುಮಾರನು ಹೇಳುತ್ತಾನೆ·—ರಥಗಳ ಸಮೂಹಗಳಿಂದಲೂ, ಆನೆ, ಕುದುರೆ, ಕಾಲಾಳುಗಳಿಂದಲೂ ಸಹಿತನಾದ ನಾನು ಅವನು ದೇವತೆಯಾಗಲಿ, ಯಕ್ಷನಾಗಲಿ, ಕಿನ್ನರನಾಗಲಿ ನಿಶ್ಚಯವಾಗಿಯೂ ಅವನನ್ನು ಎಳೆದು ತರುತ್ತೇನೆ.

೪೯. ಬಳಿಕ ಅತಿಬಲಿಷ್ಠನೂ, ಗರುಡಾರೂಢನೂ ಆದ ನಾರಾಯಣ ನನ್ನು ಕಂಡು ಅವನು ಸೇವಕರನ್ನು ಕುರಿತು "ಎಲೈ ಕಿಂಕರರಿರಾ! ಇವನನ್ನು ಹಿಡಿಯಿರಿ. ಹಿಡಿಯಿರಿ" ಎಂದನು.

೫೦. ಇಲ್ಲಿ ಅಲ್ಲಿ ನಾಲ್ಕು ದಿಕ್ಕುಗಳಲ್ಲಿಯೂ ಓಡುತ್ತಿರುವ ಆ ದಾನವನ ಕಿಂಕರರು ಅಗ್ನಿರೂಪನಾದ ಗರುಡನಿಂದ ಮಿಡತೆಗಳಂತೆ ಸುಟ್ಟುಹೋದರು.

೫೧. ಕೃಷ್ಣನ ಬಾಣದಿಂದ ಎದೆಯಲ್ಲಿ ತಾಡಿತನಾದ ಧುಂಧುಮಾರನು ಮರಣಾವಸ್ಥೆಯುಳ್ಳವನಾಗಿ ರಥದಮೇಲೆಯೆ ಬಿದ್ದನು.

೫೨. ಬಳಿಕ ಅಳಿದುಳಿದಿದ್ದ ಸಕಲ ದಾನವರು ದುಃಖದಿಂದ ಹಾಹಾಕಾರ

ತಾಲಮೇಘ ಉವಾಚ :—

ಅನ್ಯೇ ತೇ ದಾನವಾಃ ಕೃಷ್ಣ ಯೇ ಹತಾಃ ಸಮರೇ ತ್ವಯಾ ।
ಹಿರಣ್ಯಕಶಿಪುಪ್ರಖ್ಯಾ ನ ಪುಮಾಂಸೋ ಹಿ ತೇಽಚ್ಯುತ ॥ ೫೩ ॥
ಇತ್ಯುಕ್ತ್ವಾ ದಾನವಃ ಪಾರ್ಥ ವರ್ಷಯಾಮಾಸ ಸಾಯಕೈಃ ।
ದಾನವಸ್ಯ ಶರಾನ್ಮುಕ್ತಾಂ ಛೇದಯಾಮಾಸ ಕೇಶವಃ ॥ ೫೪ ॥
ಗರುತ್ಮಾನವಧೀತ್ಸೈನ್ಯಮವಧ್ಯಂ ಯತ್ಸುರಾಽಸುರೈಃ ।
ಕೃಷ್ಣೇನ ದ್ವಿಗುಣಾಸ್ತಸ್ಯ ಪ್ರೇಷಿತಾಃ ಸ್ವಶಿಲೀಮುಖಾಃ ॥ ೫೫ ॥
ದ್ವಿಗುಣಂ ದ್ವಿಗುಣೀಕೃತ್ಯ ಪ್ರೇಷಯಾಮಾಸ ದಾನವಃ ।
ತಾನಪ್ಯಷ್ಟಗುಣೈಃ ಕೃಷ್ಣಶ್ಛಾದಯಾಮಾಸ ಸಾಯಕೈಃ ॥ ೫೬ ॥
ತತಃ ಕ್ರುದ್ಧೇನ ದೈತ್ಯೇನ ಹ್ಯಾಗ್ನೇಯಂ ಬಾಣಮುತ್ತಮಂ ॥ ೫೭ ॥
ವಾರುಣಂ ಪ್ರೇಷಯಾಮಾಸ ತ್ವಾಗ್ನೇಯಂ ಶಮಿತಂ ತತಃ ।
ವಾರುಣೇನೈವ ವಾಯವ್ಯಂ ತಾಲಮೇಘೋ ವ್ಯಸರ್ಜಯತ್ ॥ ೫೮ ॥
ಸಾರ್ಪಂ ಚೈವ ಹೃಷೀಕೇಶೋ ವಾಯವ್ಯಸ್ಯ ಪ್ರಶಾಂತಯೇ ।
ನಾರಸಿಂಹಂ ನೃಸಿಂಹೋಽಪಿ ಪ್ರೇಷಯಾಮಾಸ ಪಾಂಡವ ॥ ೫೯ ॥

---

ಮಾಡಿದರು. ಅನಂತರ ತಾಲಮೇಘನು ಕುಪಿತನಾಗಿ ರಥವನ್ನೇರಿ ಹೊರಟು ಶಂಖಚಕ್ರಗದೆಗಳನ್ನು ಹಿಡಿದಿರುವ ಆ ಕೇಶವನನ್ನು ನೋಡಿದನು.

೫೩. ತಾಲಮೇಘನು ಹೇಳುತ್ತಾನೆ —ಎಲೈ ಅಚ್ಯುತನೆ! ನೀನು ಸಮರದಲ್ಲಿ ಕೊಂದ ಹಿರಣ್ಯಕಶಿಪು ಮೊದಲಾದ ಇತರ ದಾನವರು ಪುರುಷರೇ ಆಗಿರಲಿಲ್ಲ.

೫೪. ಆ ತಾಲಮೇಘ ದಾನವನು ಹೀಗೆ ಹೇಳಿ ಬಾಣಗಳ ಮಳೆಯನ್ನು ಸುರಿಸಿದನು. ಕೇಶವನು ದಾನವನು ಪ್ರಯೋಗಿಸಿದ ಬಾಣಗಳನ್ನು ಕತ್ತರಿಸಿದನು.

೫೫–೫೬. ಗರುಡನು ದೇವಾಸುರರಿಗೆ ಅವಧ್ಯವಾದ ಆ ದಾನವನ ಸೈನ್ಯವನ್ನು ಕೊಂದನು. ವಿಷ್ಣುವು ಇಮ್ಮಡಿಯಾಗಿ ಅವನಮೇಲೆ ಬಾಣಗಳನ್ನು ಪ್ರಯೋಗಿಸಿದನು. ದಾನವನು ಅದಕ್ಕೆ ಇಮ್ಮಡಿಯಾಗಿ ಬಾಣಗಳನ್ನು ಪ್ರಯೋಗಿಸಿದನು. ಕೃಷ್ಣನು ಅದಕ್ಕೆ ಎಂಟರಷ್ಟು ಬಾಣಗಳನ್ನು ಪ್ರಯೋಗಿಸಿ ಅವುಗಳನ್ನು ಮುಚ್ಚಿದನು.

೫೭-೫೮. ಬಳಿಕ ಕುಪಿತನಾದ ಆ ದಾನವನು ಆಗ್ನೇಯಾಸ್ತ್ರವನ್ನು ಪ್ರಯೋಗಿಸಿದನು. ವಿಷ್ಣುವು ವಾರುಣಾಸ್ತ್ರವನ್ನು ಪ್ರಯೋಗಿಸಿ ಆ ಅಸ್ತ್ರವನ್ನು ಶಾಂತಗೊಳಿಸಿದನು. ತಾಲಮೇಘನು ವಾಯವ್ಯಾಸ್ತ್ರದಿಂದ ಅವನನ್ನು ನಿವಾರಿಸಿದನು.

೫೯. ವಿಷ್ಣುವು ವಾಯವ್ಯಾಸ್ತ್ರದ ಶಾಂತಿಗಾಗಿ ಸರ್ಪಾಸ್ತ್ರವನ್ನು, ಪ್ರಯೋಗಿಸಲು ನೃಸಿಂಹನಾದ ಮಹಾವಿಷ್ಣುವು ಅದಕ್ಕೆ ಪ್ರತಿಯಾಗಿ ನಾರಸಿಂಹಾಸ್ತ್ರವನ್ನು ಪ್ರಯೋಗಿಸಿದನು.

ನಾರಸಿಂಹಂ ತತೋ ದೃಷ್ಟ್ವಾ ತಾಲಮೇಘೋ ಮಹಾಬಲಃ ।
ಉತ್ತೀರ್ಯ ಸ್ಯಂದನಾಚ್ಛೀಘ್ರಂ ಗೃಹೀತ್ವಾ ಖಡ್ಗಚರ್ಮಣೀ ॥ ೬೦ ॥
ಕೃಷ್ಣ ತ್ವಾಂ ಪ್ರೇಷಯಿಷ್ಯಾಮಿ ಯಮಮಾರ್ಗಂ ಸುದಾರುಣಂ ।
ಇತ್ಯುಕ್ತ್ವಾ ದಾನವಃ ಪಾರ್ಥ ಆಗತಃ ಕೇಶವಂ ಪ್ರತಿ ॥ ೬೧ ॥
ಖಡ್ಗೇನಾತಾಡಯದ್ದೈತ್ಯೋ ಗದಾಪಾಣಿಂ ಜನಾರ್ದನಂ ।
ಮಂಡಲಾಗ್ರಂ ತತೋ ಗೃಹ್ಯ ಕೇಶವೋ ಹೃಷ್ಟಮಾನಸಃ ॥ ೬೨ ॥
ಜಘನೋರಃಸ್ಥಲೇ ಪಾರ್ಥ ತಾಲಮೇಘಂ ಮಹಾಹವೇ ।
ಜನಾರ್ದನಸ್ತದಾ ದೈತ್ಯಂ ದೈತ್ಯೋ ಹರಿಮಹನ್ಮೃಧೇ ॥ ೬೩ ॥
ಜನಾರ್ದನಸ್ತತಃ ಕ್ರುದ್ಧಸ್ತಾಲಮೇಘಾಯ ಭಾರತ ।
ಅಮೋಘಂ ಚಕ್ರಮಾದಾಯ ಮುಕ್ತಂ ತಸ್ಯ ಚ ಮೂರ್ಧನಿ ॥ ೬೪ ॥
ನಿಪಪಾತ ಶಿರಸ್ತಸ್ಯ ಪರ್ವತಾಶ್ಚ ಚಕಂಪಿರೇ ।
ಸಮುದ್ರಾಃ ಕ್ಷುಭಿತಾಃ ಪಾರ್ಥ ನದ್ಯ ಉನ್ಮಾರ್ಗಗಾಮಿನೀಃ ॥ ೬೫ ॥
ಪುಷ್ಪವೃಷ್ಟಿಂ ತತೋ ದೇವಾ ಮುಮುಚುಃ ಕೇಶವೋಪರಿ ।
ಅವಧ್ಯಃ ಸುರಸಂಘಾನಾಂ ಸೂದಿತಃ ಕೇಶವ ತ್ವಯಾ ॥ ೬೬ ॥

---

೬೦–೬೩. ಬಳಿಕ ಮಹಾಬಲಿಷ್ಠನಾದ ತಾಲಮೇಘನು ಆ ನಾರಸಿಂಹಾಸ್ತ್ರವನ್ನು ನೋಡಿ ಬೇಗನೆ ರಥದಿಂದ ಕೆಳಗಿಳಿದು ಕತ್ತಿ ಗುರಾಣಿಗಳನ್ನು ಹಿಡಿದು "ಕೃಷ್ಣ! ನಿನ್ನನ್ನು ದಾರುಣವಾದ ಯಮಮಾರ್ಗಕ್ಕೆ ಕಳುಹಿಸುವೆನು" ಎಂದು ಹೇಳಿ ವಿಷ್ಣುವಿನ ಬಳಿಗೆಬಂದು ಗದೆಯನ್ನು ಹಿಡಿದುಕೊಂಡಿರುವ ಆತನನ್ನು ಕತ್ತಿಯಿಂದ ಹೊಡೆದನು. ವಿಷ್ಣುವು ಸಂತೋಷದಿಂದ ಕತ್ತಿಯನ್ನು ಹಿಡಿದುಕೊಂಡು ತಾಲಮೇಘನ ಜಘನ ಮತ್ತು ಎದೆಯಮೇಲೆ ಹೊಡೆದನು. ಹೀಗೆ ಯುದ್ಧದಲ್ಲಿ ವಿಷ್ಣುವು ದೈತ್ಯನನ್ನೂ, ದೈತ್ಯನು ವಿಷ್ಣುವನ್ನೂ ಹೊಡೆದರು.

೬೪. ತರುವಾಯ ಕುಪಿತನಾದ ವಿಷ್ಣುವು ತಾಲಮೇಘನ ತಲೆಯಮೇಲೆ ಚಕ್ರವನ್ನು ಪ್ರಯೋಗಿಸಿದನು.

೬೫. ಅದರಿಂದ ಆ ದಾನವನ ತಲೆಯು ಕತ್ತರಿಸಿ ಕೆಳಗೆ ಬಿದ್ದಿತು. ಪರ್ವತಗಳು ನಡುಗಿದುವು. ಸಮುದ್ರಗಳು ಅಲ್ಲೋಲಕಲ್ಲೋಲವಾದುವು. ನದಿಗಳು ದಾರಿಬಿಟ್ಟು ಹರಿದುವು.

೬೬. ಬಳಿಕ ದೇವತೆಗಳು ವಿಷ್ಣುವಿನಮೇಲೆ ಹೂಮಳೆ ಸುರಿಸಿದರು. "ಕೇಶವ! ದೇವತೆಗಳಿಗೆ ಅವಧ್ಯನಾದ ಈ ದೈತ್ಯನನ್ನು ನೀನು ಕೊಂದು ಉಪಕರಿಸಿರುವೆ" ಎಂದು ಆ ಸ್ವಾಮಿಯನ್ನು ಸ್ತುತಿಸಿದರು.

ಸ್ವಸ್ಥಾಶ್ಚೈವ ತತೋ ದೇವಾಸ್ತಾಲಮೇಘೇ ನಿಪಾತಿತೇ ।
ಜನಾರ್ದನೋಽಪಿ ಕೌಂತೇಯ ನರ್ಮದಾತಟಮಾಶ್ರಿತಃ ॥ ೬೭ ॥
ಕ್ಷೀರೋದಾಂ ನರ್ಮದಾಂ ಮತ್ವಾ ಹ್ಯನಂತಭುಜಗೋಪರಿ ।
ಲಕ್ಷ್ಮ್ಯಾ ಸಮನ್ವಿತಃ ಕೃಷ್ಣೋ ನಿಲೀನಶ್ಚೋತ್ತರೇ ತಟೇ ॥ ೬೮ ॥
ಚಕ್ರಂ ವಿಭೀಷಣಂ ಮರ್ತ್ಯೇ ಜ್ವಾಲಾಮಾಲಾಸಮನ್ವಿತಂ ।
ಪತಿತಂ ನರ್ಮದಾತೋಯೇ ಜಲಶಾಯಿಸಮೀಪತಃ ॥ ೬೯ ॥
ನಿರ್ಧೂತಕಲ್ಮಷಂ ಜಾತಂ ನರ್ಮದಾತೋಯಯೋಗತಃ ।
ತಾಲಮೇಘವಧೋತ್ಪನ್ನಂ ಯತ್ಪಾಪಂ ನೃಪನಂದನ ॥ ೭೦ ॥
ತತ್ಸರ್ವಂ ಕ್ಷಾಲಿತಂ ಸದ್ಯೋ ನರ್ಮದಾಂಭಸಿ ಭಾರತ ।
ತದಾ ಪ್ರಭೃತಿ ಲೋಕೇಽಸ್ಮಿನ್ ಜಲಶಾಯೀ ಮಹೀಪತೇ ॥ ೭೧ ॥
ಚಕ್ರತೀರ್ಥಂ ವದಂತ್ಯನ್ಯೇ ಕೇಚಿತ್ಕಾಲಾಘನಾಶನಂ ।
ವಿಖ್ಯಾತಂ ಭಾರತೇ ವರ್ಷೇ ನರ್ಮದಾಯಾಂ ಮಹೀಪತೇ ॥ ೭೨ ॥
ತತ್ತೀರ್ಥಸ್ಯ ಪ್ರಭಾವೋಽಯಂ ಶ್ರೂಯತಾಮವನೀಪತೇ ।
ಯಥಾಽನಂತೋ ಹಿ ನಾಗಾನಾಂ ದೇವಾನಾಂ ಚ ಜನಾರ್ದನಃ ॥ ೭೩ ॥
ಮಾಸಾನಾಂ ಮಾರ್ಗಶೀರ್ಷೋಽಸ್ತಿ ನದೀನಾಂ ನರ್ಮದಾ ಯಥಾ ।
ಮಾಸಿ ಮಾರ್ಗಶಿರೇ ಪಾರ್ಥ ಹ್ಯೇಕಾದಶ್ಯಾಂ ಸಿತೇಽಹನಿ ॥ ೭೪ ॥

---

೬೭. ಹೀಗೆ ತಾಲಮೇಘನು ಮಡಿಯಲು ದೇವತೆಗಳೆಲ್ಲರೂ ಸುಖಗೊಂಡರು. ತರುವಾಯ ವಿಷ್ಣುವು ನರ್ಮದಾನದಿಯ ದಡವನ್ನಾಶ್ರಯಿಸಿದನು.

೬೮. ಅವನು ನರ್ಮದಾನದಿಯನ್ನು ಕ್ಷೀರಸಮುದ್ರವೆಂದೇ ಅರಿತು ಲಕ್ಷ್ಮಿಯೊಡನೆ ಉತ್ತರದಡದಲ್ಲಿ ಶೇಷನಾಗನಮೇಲೆ ಪವಳಿಸಿದನು.

೬೯. ಭಯಂಕರವೂ, ಜ್ವಾಲೆಗಳಿಂದ ಕೂಡಿರುವುದೂ ಆದ ಚಕ್ರವು ನರ್ಮದಾಜಲದಲ್ಲಿ ವಿಷ್ಣುವಿನ ಬಳಿ ಬಿದ್ದಿತು.

೭೦–೭೨. ನರ್ಮದಾನದಿಯ ನೀರಿನಿಂದ ತೊಳೆಯಲ್ಪಟ್ಟುದರಿಂದ ತಾಲಮೇಘನ ವಧೆಯಿಂದುಂಟಾದ ಅದರ ಪಾಪವು ನೀಗಿತು. ಅದು ಮೊದಲ್ಗೊಂಡು ಆ ಜಲಶಾಯಿಯನ್ನು ಕೆಲವರು ಚಕ್ರತೀರ್ಥವೆಂದೂ, ಕೆಲವರು ಅಘನಾಶನವೆಂದೂ ಹೇಳುವರು. ಹೀಗೆ ನರ್ಮದಾನದಿಯಲ್ಲಿರುವ ಈ ತೀರ್ಥವು ಭಾರತವರ್ಷದಲ್ಲೆಲ್ಲ ಪ್ರಸಿದ್ಧಿಗೊಂಡಿತು.

೭೩–೭೫. ದೊರೆಯೆ! ಆ ತೀರ್ಥದ ಪ್ರಭಾವವನ್ನು ಕೇಳು. ನಾಗಗಳಲ್ಲಿ ಅನಂತನೂ, ದೇವತೆಗಳಲ್ಲಿ ಜನಾರ್ದನನೂ, ಮಾಸಗಳಲ್ಲಿ ಮಾರ್ಗಶೀರ್ಷ ಮಾಸವೂ ಹೇಗೋ ಹಾಗೆಯೇ ನದಿಗಳಲ್ಲಿ ನರ್ಮದಾನದಿಯೆಂದು ತಿಳಿ. ನರನು

ಗತ್ವಾ ಯೋ ಮನುಜೋ ಭಕ್ತ್ಯಾ ಕಾಮಕ್ರೋಧವಿವರ್ಜಿತಃ ।
ವೈಷ್ಣವೀಂ ಭಾವನಾಂ ಕೃತ್ವಾ ಜಲೇಶಂ ತು ವ್ರಜೇತ ವೈ ॥ ೭೫ ॥
ಏಕಭುಕ್ತಂ ಚ ನಕ್ತಂ ಚ ತಥೈವಾಽಯಾಚಿತಂ ನೃಪ ।
ಉಪವಾಸಂ ತಥಾ ದಾನಂ ಬ್ರಾಹ್ಮಣಾನಾಂ ಚ ಭೋಜನಂ ॥ ೭೬ ॥
ಕರೋತಿ ಚ ಕುರುಶ್ರೇಷ್ಠ ನ ಸ ಯಾತಿ ಯಮಾಲಯಂ ।
ಯಮಲೋಕಭಯಾದ್ಭೀತಾ ಯೇ ಲೋಕಾಃ ಪಾಂಡುನಂದನ ॥ ೭೭ ॥
ತೇ ಪಶ್ಯಂತು ಶ್ರಿಯಃಕಾಂತಂ ನಾಗಪರ್ಯಂಕಶಾಯಿನಂ ।
ಗೋಪೀಜನಸಮಾವೃತ್ತಂ ಯೋಗನಿದ್ರಾಂ ಸಮಾಶ್ರಿತಂ ।
ವಿಶ್ವರೂಪಂ ಜಗನ್ನಾಥಂ ಸಂಸಾರಭಯನಾಶನಂ ॥ ೭೮ ॥
ಸ್ನಾಪಯೇತ್ಪರಯಾ ಭಕ್ತ್ಯಾ ಕ್ಷೌದ್ರಕ್ಷೀರೇಣ ಸರ್ಪಿಷಾ ।
ಖಂಡೇನ ತೋಯಮಿಶ್ರೇಣ ಜಗದ್ಯೋನಿಂ ಜನಾರ್ದನಂ ॥ ೭೯ ॥
ಸ್ನಾಪ್ಯಮಾನಂ ಚ ಪಶ್ಯಂತಿ ಯೇ ಲೋಕಾ ಗತಮತ್ಸರಾಃ ।
ತೇ ಯಾಂತಿ ಪರಮಂ ಲೋಕಂ ಸುರಾಸುರನಮಸ್ಕೃತಂ ॥ ೮೦ ॥
ಘೃತೇನ ಬೋಧಯೇದ್ದೀಪಮಥವಾ ತೈಲಪೂರಿತಂ ।
ರಾತ್ರೌ ಜಾಗರಣಂ ಕೃತ್ವಾ ದೇವಸ್ಯಾಗ್ರೇ ವಿಮತ್ಸರಾಃ ॥ ೮೧ ॥

---

ಮಾರ್ಗಶಿರಮಾಸದ ಶುಕ್ಲಪಕ್ಷೈಕಾದಶಿಯ ದಿನ ಕಾಮಕ್ರೋಧಗಳಿಲ್ಲದೆ ಭಕ್ತಿಯಿಂದ ವಿಷ್ಣುವನ್ನು ಧ್ಯಾನಿಸಿ ಜಲಶಾಯಿತೀರ್ಥಕ್ಕೆ ಹೋಗಬೇಕು.

೭೬–೭೮. ಅಲ್ಲಿ ಏಕಭುಕ್ತ, ನಕ್ತ, ಅಯಾಚಿತ, ಉಪವಾಸ, ದಾನ, ಬ್ರಾಹ್ಮಣಭೋಜನ ಇವುಗಳನ್ನು ಮಾಡಿದವನು ಯಮಲೋಕಕ್ಕೆ ಹೋಗುವುದಿಲ್ಲ. ಯುಧಿಷ್ಠಿರ! ಯಮಲೋಕದಿಂದ ಭಯಗೊಂಡ ಮಾನವರು ಲಕ್ಷ್ಮೀಪತಿಯೂ, ಶೇಷಶಾಯಿಯೂ, ಗೋಪಿಯರಿಂದ ಕೂಡಿದವನೂ, ಯೋಗನಿದ್ರೆಯನ್ನಾಶ್ರಯಿಸಿರುವವನೂ, ವಿಶ್ವರೂಪನೂ, ಜಗದೊಡೆಯನೂ, ಸಂಸಾರಭಯವನ್ನು ನಿವಾರಿಸುವವನೂ ಆದ ವಿಷ್ಣುವನ್ನು ದರ್ಶನಮಾಡಬೇಕು.

೭೯. ಜಗತ್ಕಾರಣನಾದ ನಾರಾಯಣನನ್ನು ಮಧು, ಕ್ಷೀರ, ಆಜ್ಯ, ಸಕ್ಕರೆ, ನೀರು ಇವುಗಳಿಂದ ಅಭಿಷೇಕಮಾಡಬೇಕು.

೮೦. ಅಭಿಷೇಕ ಮಾಡಲ್ಪಡುತ್ತಿರುವ ನಾರಾಯಣನನ್ನು ಮಾತ್ಸರ್ಯವಿಲ್ಲದೆ ನೋಡುವ ಜನರು ದೇವಾಸುರರಿಂದ ವಂದಿತವಾದ ಉತ್ತಮಲೋಕವನ್ನು ಹೊಂದುವರು.

೮೧–೮೨. ರಾತ್ರಿಯವೇಳೆಯಲ್ಲಿಯ ವಿಷ್ಣುವಿನ ಮುಂದೆ ತುಪ್ಪ ಅಥವಾ ಎಣ್ಣೆಯದೀಪವನ್ನು ಹೊತ್ತಿಸಿ ಮಾತ್ಸರ್ಯವಿಲ್ಲದೆ ಜಾಗರಣೆಗೈದು ವಿಷ್ಣುವಿನ

ಯೇ ಕಥಾಂ ವೈಷ್ಣವೀಂ ಭಕ್ತ್ಯಾ ಶೃಣ್ವಂತಿ ಚ ನೃಪೋತ್ತಮ ।
ಬ್ರಹ್ಮಹತ್ಯಾದಿ ಪಾಪಾಶ್ಚ ನಶ್ಯಂತೇ ನಾಽತ್ರ ಸಂಶಯಃ ॥ ೮೨ ॥
ಪ್ರದಕ್ಷಿಣಂತಿ ಯೇ ಮರ್ತ್ಯಾ ಜಲಶಾಯಿಜಗದ್ಗುರುಂ ।
ಪ್ರದಕ್ಷಿಣೀಕೃತಾ ತೈಸ್ತು ಸಪ್ತದ್ವೀಪಾ ವಸುಂಧರಾ ॥ ೮೩ ॥
ತತಃ ಪ್ರಭಾತೇ ವಿಮಲೇ ಪಿತೄನ್ ಸಂತರ್ಪಯೇಜ್ಜಲೈಃ ।
ಶ್ರಾದ್ಧಂ ಚ ಬ್ರಾಹ್ಮಣೈಸ್ತತ್ರ ಯೋಗ್ಯೈಃ ಪಾಂಡವ ಮಾನವಾಃ ॥ ೮೪ ॥
ಸ್ವದಾರನಿರತೈಃ ಶಾಂತೈಃ ಪರದಾರವಿವರ್ಜಕೈಃ ।
ವೇದಾಭ್ಯಸನಶೀಲೈಶ್ಚ ಸ್ವಕರ್ಮನಿರತೈಃ ಶುಭೈಃ ॥ ೮೫ ॥
ನಿತ್ಯಂ ಯಜನಶೀಲೈಶ್ಚ ತ್ರಿಸಂಧ್ಯಾಪರಿಪಾಲಕೈಃ ।
ಶ್ರದ್ಧಯಾ ಕಾರಯೇಚ್ಛ್ರಾದ್ಧಂ ಯದೀಚ್ಛೇಚ್ಛ್ರೇಯ ಆತ್ಮನಃ ॥ ೮೬ ॥
ತೇ ಧನ್ಯಾ ಮಾನುಷೇ ಲೋಕೇ ವಂದ್ಯಾ ಹಿ ಭುವಿ ಮಾನವಾಃ ।
ಯೇ ವಸಂತಿ ಸದಾಕಾಲಂ ಪಾದಪದ್ಮಾಶ್ರಯಾ ಹರೇಃ ॥ ೮೭ ॥
ಜಲಶಾಯಿಂ ಪ್ರಪಶ್ಯಂತಿ ಪ್ರತ್ಯಕ್ಷಂ ಸುರನಾಯಕಂ ।
ಪಕ್ಷೋಪವಾಸಂ ಪಾರಾಕಂ ವ್ರತಂ ಚಾಂದ್ರಾಯಣಂ ಶುಭಂ ॥ ೮೮ ॥
ಮಾಸೋಪವಾಸಮುಗ್ರಂ ಚ ಷಷ್ಠಾನ್ನಂ ಪಂಚಮಂ ವ್ರತಂ ।
ತತ್ರ ತೀರ್ಥೇ ತು ಯಃ ಕುರ್ಯಾತ್ಸೋಽಕ್ಷಯಾಂ ಗತಿಮಾಪ್ನುಯಾತ್ ॥

---

ಕಥೆಯನ್ನು ಭಕ್ತಿಯಿಂದ ಕೇಳುವವರ ಬ್ರಹ್ಮಹತ್ಯಾದಿಪಾಪಗಳು ನಿಶ್ಚಯವಾಗಿಯೂ ನಾಶವಾಗುವುವು.

೮೩. ಜಲಶಾಯಿಯಾದ ವಿಷ್ಣುವನ್ನು ಪ್ರದಕ್ಷಿಣೆಮಾಡುವ ಮಾನವರು ಸಪ್ತದ್ವೀಪಗಳುಳ್ಳ ಭೂಮಿಯನ್ನು ಪ್ರದಕ್ಷಿಣೆ ಮಾಡಿದವರಂತಾಗುವರು.

೮೪–೮೬. ಬಳಿಕ ಬೆಳಗ್ಗೆ ನೀರಿನಿಂದ ಪಿತೃಗಳಿಗೆ ತರ್ಪಣಮಾಡಬೇಕು. ಶ್ರೇಯಸ್ಸನ್ನು ಬಯಸುವ ಮಾನವನು ಯೋಗ್ಯರೂ, ಸ್ವಪತ್ನಿಯಲ್ಲಿ ನಿರತರೂ, ಶಾಂತರೂ, ಪರಪತ್ನಿಯರನ್ನು ಸ್ಪರ್ಶಮಾಡದವರೂ, ವೇದಾಭ್ಯಾಸ ಶೀಲರೂ, ಸ್ವಕರ್ಮಾಸಕ್ತರೂ, ಯಾವಾಗಲೂ ಯಾಗಮಾಡುವ ಸ್ವಭಾವವುಳ್ಳವರೂ, ಮೂರು ಸಂಧ್ಯಾಕಾಲಗಳಲ್ಲಿ ಸಂಧ್ಯಾವಂದನೆಯನ್ನು ಮಾಡುವವರೂ ಆದ ಬ್ರಾಹ್ಮಣರಿಂದ ಶ್ರದ್ಧೆಯಿಂದ ಶ್ರಾದ್ಧಮಾಡಬೇಕು.

೮೭. ಯಾವಾಗಲೂ ಹರಿಯ ಪಾದಪದ್ಮವನ್ನಾಶ್ರಯಿಸಿ ವಾಸಿಸುವ ಮಾನವರು ಮನುಷ್ಯ ಲೋಕದಲ್ಲಿ ಧನ್ಯರೂ, ವಂದನಾರ್ಹರೂ ಆಗಿರುವರು.

೮೮–೮೯. ಸುರರ ಒಡೆಯನಾದ ಜಲಶಾಯಿಯನ್ನು ನೋಡುವವನೂ, ಪಕ್ಷೋಪವಾಸ, ಪರಾಕ, ಚಾಂದ್ರಾಯಣ, ಮಾಸೋಪವಾಸ, ಕಠಿನವಾದ ಷಷ್ಠಕಾಲೀನ ಭೋಜನ ಎಂಬ ಪಂಚವ್ರತಗಳನ್ನು ಆ ತೀರ್ಥದಲ್ಲಿ ಮಾಡಿದವನೂ ಸ್ಥಿರಗತಿಯನ್ನು ಪಡೆಯುವನು.

ಶ್ರೀ ಮಾರ್ಕಂಡೇಯ ಉವಾಚ :—

ಅತಃಪರಂ ಪ್ರವಕ್ಷ್ಯಾಮಿ ತಿಲಧೇನೋಶ್ಚ ಯತ್ಫಲಂ ।
ಯಥಾ ಯಸ್ಮಿನ್ಯದಾ ದೇಯಾ ದಾನೇ ತಸ್ಯಾಃ ಶುಭಂ ಫಲಂ ॥ ೯೦ ॥
ಏತತ್ಕಥಾಂತರಂ ಪುಣ್ಯಮ್ಪೃಷೇದ್ವ್ಯೈಸಾಯನಾತ್ಪುರಾ ।
ಶ್ರುತಂ ಹಿ ನೈಮಿಷೇ ಪುಣ್ಯೇ ನಾರದಾದ್ಯೈರನೇಕಧಾ ॥ ೯೧ ॥
ಇದಂ ಪರಮಮಾಯುಷ್ಯಂ ಮಂಗಲ್ಯಂ ಕೀರ್ತಿವರ್ಧನಂ ।
ವಿಪ್ರಾಣಾಂ ಶ್ರಾವಯನ್ವಿದ್ವಾನ್ ಫಲಾನಂತ್ಯಂ ಸಮಶ್ನುತೇ ॥ ೯೨ ॥
ಬಹುಭ್ಯೋ ನ ಪ್ರದೇಯಾನಿ ಗೌರ್ಗೃಹಂ ಶಯನಂ ಸ್ತ್ರಿಯಃ ।
ವಿಭಕ್ತದಕ್ಷಿಣಾ ಹ್ಯೇತಾ ದಾತಾರಂ ನಾಪ್ನುವಂತಿ ಚ ॥ ೯೩ ॥
ಏಕನೇತತ್ಪ್ರದಾತವ್ಯಂ ನ ಬಹೂನಾಂ ಯುಧಿಷ್ಠಿರ ।
ಸಾ ಚ ವಿಕ್ರಯಮಾಪನ್ನಾ ದಹತ್ಯಾಸಪ್ತಮಂ ಕುಲಂ ॥ ೯೪ ॥
ತಿಲಾಃ ಶ್ವೇತಾಸ್ತಿಲಾಃ ಕೃಷ್ಣಾಸ್ತಿಲಾ ಗೋಮೂತ್ರಸನ್ನಿಭಾಃ ।
ತಿಲಾನಾಂ ತು ವಿಚಿತ್ರಾಣಾಂ ಧೇನುಂ ವತ್ಸಂ ಚ ಕಾರಯೇತ್ ॥ ೯೫ ॥

---

೯೦. ಶ್ರೀ ಮಾರ್ಕಂಡೇಯನು ಹೇಳುತ್ತಾನೆ.—ಇನ್ನುಮುಂದೆ ತಿಲಧೇನುವಿನ ಶುಭಫಲವನ್ನೂ, ಅದನ್ನು ಯಾವಾಗ ಎಲ್ಲಿ ದಾನಮಾಡಬೇಕು ಎಂಬುದನ್ನೂ, ಹೇಳುವೆನು.

೯೧. ಪುಣ್ಯಕರವಾದ ಈ ಕಥೆಯನ್ನು ಹಿಂದೆ ನೈಮಿಷಾರಣ್ಯದಲ್ಲಿ ನಾರದಾದಿಗಳು ವ್ಯಾಸಮುನಿಯಿಂದ ಕೇಳಿರುವರು.

೯೨. ಉತ್ತಮವೂ, ಆಯುಷ್ಯವನ್ನು ಹೆಚ್ಚಿಸುವುದೂ, ಮಂಗಳಪ್ರದವೂ, ಕೀರ್ತಿಯನ್ನು ವೃದ್ಧಿಗೊಳಿಸುವುದೂ ಆದ ಕಥೆಯನ್ನು ಬ್ರಾಹ್ಮಣರಿಗೆ ಹೇಳುವ ವಿದ್ವಾಂಸನು ಅನಂತಫಲವನ್ನು ಪಡೆಯುವನು.

೯೩. ಗೋವು, ಮನೆ, ಹಾಸಿಗೆ, ಸ್ತ್ರೀ ಇವರನ್ನು ಅನೇಕರಿಗೆ ಕೊಡಬಾರದು. ವಿಭಾಗಿಸಲ್ಪಟ್ಟ ದಕ್ಷಿಣೆಯುಳ್ಳ ಇವು ದಾನಮಾಡುವವರನ್ನು ಸೇರುವುದಿಲ್ಲ.

೯೪. ಯುಧಿಷ್ಠಿರ! ಒಂದು ಗೋವೇ ಮೊದಲಾದುವನ್ನು ಅನೇಕರಿಗೆ ದಾನಮಾಡಿದರೆ ಅವು ವಿಕ್ರಯಕ್ಕೀಡಾಗಿ ಏಳು ಕುಲದವರೆಗಿನವರನ್ನು ಹಾಳುಮಾಡುವುವು.

೯೫. ಎಳ್ಳು ಶ್ವೇತ, ಕೃಷ್ಣ, ಗೋಮೂತ್ರಕ್ಕೆ ಸಮಾನವಾದ ಬಣ್ಣ ಈ ರೀತಿ ಅನೇಕ ವರ್ಣಗಳಾಗಿರುವುವು. ಇಂತಹ ನಾನಾಬಣ್ಣದ ಎಳ್ಳುಗಳಿಂದ ಧೇನು ಮತ್ತು ವತ್ಸಗಳನ್ನು ಮಾಡಿಸಬೇಕು.

ಯಥಾ ಲಾಭಾ ತು ಸರ್ವೇಷಾಂ ಚತುರ್ದ್ರೋಣಾ ತು ಗೌಃ ಸ್ಮೃತಾ ।
ದ್ರೋಣಸ್ಯ ವತ್ಸಕಃ ಕಾರ್ಯೋ ಬಹುನಾ ವಾಽಪಿ ಕಾವುತಃ ॥ ೯೬ ॥
ಯಸ್ಮಿನ್ದೇಶೇ ತು ಯನ್ಮಾನಂ ವಿಷಯೇ ವಾ ವಿಚಾರಿತಂ ।
ತೇನ ಮಾನೇನ ತಾಂ ಕುರ್ವನ್ನಕ್ಷಯಂ ಫಲಮಶ್ನುತೇ ॥ ೯೭ ॥
ಸುಖಪೂರ್ವಂ ಶುಚೌ ಭೂಮೌ ಪುಷ್ಪಧೂಪಾಕ್ಷತೈಸ್ತಥಾ ।
ಕರ್ಣಾಭ್ಯಾಂ ರತ್ನೇ ದಾತವ್ಯೇ ದೀಪೌ ನೇತ್ರದ್ವಯೇ ತಥಾ ॥ ೯೮ ॥
ಶ್ರೀಖಂಡಮುರಸಿ ಸ್ಥಾಪ್ಯಂ ತಾಭ್ಯಾಂ ಚೈವ ತು ಕಾಂಚನಂ ।
ಊರ್ಧ್ವೇ ಮಧು ಘೃತಂ ದೇಯಂ ಕುರ್ಯಾತ್ಸರ್ಷಪರೋಮಕಂ॥ ೯೯ ॥
ಕಂಬಲೇ ಕಂಬಲಂ ದದ್ಯಾಚ್ಛ್ರೋಣ್ಯಾಂ ಮಧುಘೃತಂ ತಥಾ ।
ಯವಸಂ ಪಾಯಸಂ ದದ್ಯಾದ್ಘೃತಂ ಕ್ಷೌದ್ರಸಮನ್ವಿತಂ ॥ ೧೦೦ ॥
ಸ್ವರ್ಣಶೃಂಗೀ ರೂಪ್ಯಶಿಫಾ ರುಕ್ಮಲಾಂಗೂಲಸಂಯುತಾ ।
ರತ್ನಪೃಷ್ಠೀ ತು ದಾತವ್ಯಾ ಕಾಂಸ್ಯಪಾತ್ರಾವದೋಹಿನೀ ॥ ೧೦೧ ॥
ಯತ್ಸ್ಯಾದ್ಬಾಲ್ಯಕೃತಂ ಪಾಪಂ ಯದ್ವಾ ಕೃತಮಜಾನತಾ ।
ವಾಚಾ ಕೃತಂ ಕರ್ಮಕೃತಂ ಮನಸಾ ಯದ್ವಿಚಿಂತಿತಂ ॥ ೧೦೨ ॥
ಜಲೇ ನಿಷ್ಠೀವಿತಂ ಚೈವ ಮುಸಲಂ ವಾಽಪಿ ಲಂಘಿತಂ ।
ವೃಷಲೀಗಮನಂ ಚೈವ ಗುರುದಾರನಿಷೇವಣಂ ॥ ೧೦೩ ॥
ಕನ್ಯಾಯಾ ಗಮನಂ ಚೈವ ಸುವರ್ಣಸ್ತೇಯಮೇವ ಚ ।
ಸುರಾಪಾನಂ ತಥಾ ಚಾಽನ್ಯತ್ತಿಲಧೇನುಃ ಪುನಾತಿ ಹಿ ॥ ೧೦೪ ॥

---

೯೬. ಎಲ್ಲವೂ ಸೇರಿ ನಾಲ್ಕು ಕೊಳಗ ಎಳ್ಳಿನಿಂದ ಧೇನುವನ್ನೂ, ಒಂದು ಅಥವಾ ಅನೇಕ ಬಣ್ಣದ ಒಂದು ಕೊಳಗ ಎಳ್ಳುಗಳಿಂದ ಕರುವನ್ನೂ ರಚಿಸಬೇಕು.

೯೭. ಯಾವ ದೇಶದಲ್ಲಿ ಯಾವ ಅಳತೆಯು ಇರುವುದೊ, ಅದನ್ನು ವಿಚಾರಿಸಿ ಆ ಅಳತೆಯಂತೆ ಧೇನುವನ್ನು ನಿರ್ಮಿಸುವವನು ಅಕ್ಷಯಫಲವನ್ನು ಪಡೆಯುವನು.

೯೮–೧೦೧. ಆ ಗೋವನ್ನು ಶುದ್ಧವಾದ ಭೂಮಿಯಲ್ಲಿಟ್ಟು ಕಿವಿಗಳಲ್ಲಿ ರತ್ನಗಳನ್ನೂ, ಎರಡು ಕಣ್ಣುಗಳಲ್ಲಿ ದೀಪಗಳನ್ನೂ, ಎದೆಯಲ್ಲಿ ಗಂಧವನ್ನೂ, ನಾಭಿಯಲ್ಲಿ ಚಿನ್ನವನ್ನೂ, ಅದರ ಮೇಲ್ಭಾಗದಲ್ಲಿ ಮಧು, ಘೃತಗಳನ್ನೂ, ರೋಮಗಳಲ್ಲಿ ಸಾಸಿವೆಯನ್ನೂ, ಪೃಷ್ಠಭಾಗದಲ್ಲಿ ರತ್ನವನ್ನೂ, ಕೆಚ್ಚಲಲ್ಲಿ ಕಂಚಿನ ಪಾತ್ರೆಯನ್ನೂ, ಇಟ್ಟು ಪುಷ್ಪ, ಧೂಪ, ಅಕ್ಷತೆಗಳಿಂದ ಅರ್ಚಿಸಬೇಕು.

೧೦೨–೧೦೪. ಈ ತಿಲಧೇನುವು, ಬಾಲ್ಯದಲ್ಲಿ ಮಾಡಿರುವುದೂ, ಅರಿಯದೆ ಮಾಡಿರುವುದೂ, ವಾಕ್ಕರ್ಮಗಳಿಂದ ಮಾಡಿರುವುದೂ, ನೀರಿನಲ್ಲಿ ಉಗುಳು ವುದು, ಒನಕೆಯನ್ನು ದಾಟುವುದು, ವೃಷಲೀಗಮನ, ಗುರುಪತ್ನೀ ಮತ್ತು

ಅಹೋರಾತ್ರೋಪವಾಸೇನ ವಿಧಿವತ್ತಾಂ ವಿಸರ್ಜಯೇತ್ ।
ಯಾ ಸಾ ಯಮಪುರೇ ಘೋರೇ ನದೀ ವೈತರಣೀ ಸ್ಮೃತಾ ॥ ೧೦೫ ॥
ವಾಲುಕಾಯೋಽಶ್ಮಸ್ಥಲಾಚ ಪಚ್ಯತೇ ಯತ್ರ ದುಷ್ಕೃತೀ ।
ಅವೀಚಿರ್ನರಕೋ ಯತ್ರ ಯತ್ರ ಯಾಮಲಪರ್ವತೌ ॥ ೧೦೬ ॥
ಯತ್ರ ಲೋಹಮುಖಾಃ ಕಾಕಾ ಯತ್ರ ಶ್ವಾನೋ ಭಯಂಕರಾಃ ।
ಅಸಿಪತ್ರವನಂ ಚೈವ ಯತ್ರ ಸಾ ಕೂಟಶಾಲ್ಮಲೀ ॥ ೧೦೭ ॥
ತತ್ಸುಖೇನ ವ್ಯತಿಕ್ರಮ್ಯ ಧರ್ಮರಾಜಾಲಯಂ ವ್ರಜೇತ್ ।
ಧರ್ಮರಾಜಸ್ತು ತಂ ದೃಷ್ಟ್ವಾ ಸೂನೃತಂ ವಕ್ತಿ ಭಾರತ ॥ ೧೦೮ ॥
ವಿಮಾನಮುತ್ತಮಂ ಯೋಗ್ಯಂ ಮಣಿರತ್ನವಿಭೂಷಿತಂ ।
ಅತ್ರಾರುಹ್ಯ ನರಶ್ರೇಷ್ಠ ಪ್ರಯಾಹಿ ಪರಮಾಂ ಗತಿಂ ॥ ೧೦೯ ॥
ಮಾಚ ಚಾಟು ಭಟೇ ದೇಹಿ ನೈವ ದೇಹಿ ಪುರೋಹಿತೇ ।
ಮಾಚ ಕಾಣೇ ವಿರೂಪೇಚ ನೂನಾಂಗೇ ನ ಚ ದೇವಲೇ ॥ ೧೧೦ ॥
ಅವೇದವಿದುಷೇ ನೈವ ಬ್ರಾಹ್ಮಣೇ ಸರ್ವವಿಕ್ರಯೇ ।
ಮಿತ್ರಘ್ನೇ ಚ ಕೃತಘ್ನೇ ಚ ಮಂತ್ರಹೀನೇ ತಥೈವ ಚ ॥ ೧೧೧ ॥
ವೇದಾಂತಗಾಯ ದಾತವ್ಯಾ ಶ್ರೋತ್ರಿಯಾಯ ಕುಟುಂಬಿನೇ ।
ವೇದಾಂತಗಸುತೇ ದೇಯಾ ಶ್ರೋತ್ರಿಯೇ ಗೃಹಪಾಲಕೇ ॥ ೧೧೨ ॥

---

ಕನ್ಯಾಗಮನಗಳಿಂದಲೂ, ಸುವರ್ಣಸ್ತೇಯ, ಸುರಾಪಾನಗಳಿಂದಲೂ ಉಂಟಾಗಿರುವ ಪಾಪಗಳನ್ನು ಪರಿಹರಿಸುವುದು.

೧೦೫–೧೦೯. ಒಂದು ದಿನ ಉಪವಾಸಮಾಡಿ ಆ ಧೇನುವನ್ನು ವಿಸರ್ಜಿಸಬೇಕು. ಹೀಗೆ ಮಾಡಿದವನು ಘೋರವಾದ ಯಮನ ಪಟ್ಟಣದಲ್ಲಿರುವ ವೈತರಣೀ ನದೀ, ಪಾಪಿಯನ್ನು ಬೇಯಿಸುವ ಮರಳು, ಕಬ್ಬಿಣ, ಕಲ್ಲಿನ ನೆಲ, ಅವೀಚಿಯೆಂಬ ನರಕ, ಯಾಮಲಪರ್ವತ, ಲೋಹಮುಖವಾದ ಕಾಗೆಗಳು, ಭಯಂಕರವಾದ ನಾಯಿಗಳು, ಅಸಿಪತ್ರವನ, ಕೂಟಶಾಲ್ಮಲಿಗಳನ್ನು ಸುಖವಾಗಿ ದಾಟಿ ಧರ್ಮರಾಜನ ಮನೆಗೆ ಹೋಗುವನು. ಅಲ್ಲಿ ಧರ್ಮರಾಜನು ಅವನನ್ನು ನೋಡಿ, "ಉತ್ತಮವೂ, ಯೋಗ್ಯವೂ, ರತ್ನಗಳಿಂದ ಅಲಂಕಾರಗೊಂಡುದೂ ಆದ ಈ ವಿಮಾನವನ್ನೇರಿ ಉತ್ತಮಲೋಕಕ್ಕೆ ಹೋಗು" ಎಂದು ಹಿತವಾಗಿ ಮಾತನ್ನಾಡುವನು.

೧೧೦–೧೧೧. ಈ ತಿಲಧೇನುದಾನವನ್ನು ಭಟ, ಪುರೋಹಿತ, ಕುರುಡ, ಕುರೂಪಿ, ಅಂಗಹೀನ, ದೇವಪೂಜಕ, ವೇದವನ್ನರಿಯದವ, ಸಮಸ್ತವನ್ನೂ ವಿಕ್ರಯಿಸುವವ, ಮಿತ್ರದ್ರೋಹಿ, ಕೃತಘ್ನ, ಮಂತ್ರಹೀನ ಇವರಿಗೆ ದಾನಮಾಡಕೂಡದು.

೧೧೨–೧೧೫. ವೇದಾಂತಜ್ಞನೂ, ಶ್ರೋತ್ರಿಯನೂ, ಕುಟುಂಬಿಯೂ,

ಸರ್ವಾಂಗರುಚಿರೇ ವಿಪ್ರೇ ಸದ್ವೃತ್ತೇ ಚ ಪ್ರಿಯಂವದೇ ।
ಪೂರ್ಣಿಮಾಯಾಂ ತು ಮಾಘಸ್ಯ ಕಾರ್ತಿಕ್ಯಾಮಥ ಭಾರತ ॥ ೧೧೩ ॥
ವೈಶಾಖ್ಯಾಂ ಮಾರ್ಗಶೀರ್ಷ್ಯಾಂ ವಾಽಷಾಢ್ಯಾಂ ಚೈತ್ರ್ಯಾಮಥಾಪಿ ವಾ ।
ಅಯನೇ ವಿಷುವೇ ಚೈವ ವ್ಯತೀಪಾತೇ ಚ ಸರ್ವದಾ ॥ ೧೧೪ ॥
ಷಡಶೀತಿಮುಖೇ ಪುಣ್ಯೇ ಛಾಯಾಯಾಂ ಕುಂಜರಸ್ಯ ವಾ ।
ಏಷ ತೇ ಕಥಿತಃ ಕಲ್ಪಸ್ತಿಲಧೇನೋರ್ಮಯಾಽನಘ ॥ ೧೧೫ ॥
ವ್ರಜಂತಿ ವೈಷ್ಣವಂ ಲೋಕಂ ದತ್ವಾ ಪಾದಂ ಯಮೋಪರಿ ।
ಪ್ರಾಣತ್ಯಾಗಾತ್ಪರಂ ಲೋಕಂ ವೈಷ್ಣವಂ ನಾಽತ್ರ ಸಂಶಯಃ ।
ಭಿತ್ವಾಽಶು ಭಾಸ್ಕರಂ ಯಾಂತಿ ನಾಽತ್ರ ಕಾರ್ಯಾ ವಿಚಾರಣಾ ॥ ೧೧೬ ॥
ಏತತ್ತೇ ಸರ್ವಮಾಖ್ಯಾತಂ ಚಕ್ರತೀರ್ಥಫಲಂ ನೃಪ ।
ಯಚ್ಛ್ರುತ್ವಾ ಮಾನವೋ ಭಕ್ತ್ಯಾ ಸರ್ವಪಾಪೈಃ ಪ್ರಮುಚ್ಯತೇ ॥ ೧೧೭ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಅವಂತ್ಯಖಂಡೇ ತೃತೀಯೇ ರೇವಾಖಂಡೇ
"ಜಲಶಾಯಿತೀರ್ಥಮಾಹಾತ್ಮ್ಯವರ್ಣನಂ"
ನಾಮ ನವತಿತಮೋಽಧ್ಯಾಯಃ

---

ವೇದಾಂತವನ್ನರಿತವನ ಮಗನೂ, ಶ್ರೋತ್ರಿಯನೂ, ಗೃಹಸ್ಥನೂ, ಸುಂದರನೂ, ಸಚ್ಚರಿತನೂ, ಹಿತವಾಗಿ ಮಾತನಾಡುವವನೂ ಆದ ಬ್ರಾಹ್ಮಣನಿಗೆ ದಾನಮಾಡಬೇಕು. ಮಾಘ, ಕಾರ್ತಿಕ, ವೈಶಾಖ, ಮಾರ್ಗಶೀರ್ಷ, ಆಷಾಢ, ಅಥವಾ ಚೈತ್ರಮಾಸದ ಹುಣ್ಣಿಮೆ, ಅಯನ ಪುಣ್ಯಕಾಲ, ವಿಷುವಕಾಲ, ವ್ಯತೀಪಾತ, ಷಡಶೀತಿ ಪುಣ್ಯಕಾಲ, ಗಜಚ್ಛಾಯಾ ಇವುಗಳಲ್ಲಿ ಈ ತಿಲಧೇನುವನ್ನು ದಾನಮಾಡಬೇಕು. ದೊರೆಯೆ! ನಾನೀಗ ನಿನಗೆ ಈ ತಿಲಧೇನುದಾನಕಲ್ಪವನ್ನು ಹೇಳಿರುವೆನು.

೧೧೬. ಇದನ್ನಾಚರಿಸಿದವರು ಮರಣಾನಂತರ ಯಮನಮೇಲೆ ಕಾಲಿಟ್ಟು ಸೂರ್ಯನನ್ನು ಭೇದಿಸಿ ಶೀಘ್ರವಾಗಿ ವಿಷ್ಣುಲೋಕಕ್ಕೆ ಹೋಗುವರು. ಈ ವಿಷಯದಲ್ಲಿ ವಿಚಾರಮಾಡಕೂಡದು.

೧೧೭. ದೊರೆಯೆ! ನಿನಗೆ ನಾನು ಈ ಚಕ್ರತೀರ್ಥದ ಫಲವನ್ನು ಹೇಳಿರುವೆನು. ಇದನ್ನು ಭಕ್ತಿಯಿಂದ ಕೇಳಿದ ಮನುಷ್ಯನು ಸಕಲ ಪಾಪಗಳಿಂದಲೂ ಮುಕ್ತನಾಗುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಅವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಜಲಶಾಯಿತೀರ್ಥಮಾಹಾತ್ಮ್ಯವರ್ಣನ"ವೆಂಬ
ತೊಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥೈಕನವತಿತಮೋಽಧ್ಯಾಯಃ

## ಚಂಡಾದಿತ್ಯತೀರ್ಥಮಾಹಾತ್ಮ್ಯವರ್ಣನಂ

**ಶ್ರೀ ಮಾರ್ಕಂಡೇಯ ಉವಾಚ :—**

**ತತೋ ಗಚ್ಛೇನ್ಮಹೀಪಾಲ ತೀರ್ಥಂ ಪರಮಪಾವನಂ ।**
**ಚಂಡಾದಿತ್ಯಂ ನೃಪಶ್ರೇಷ್ಠ ಸ್ಥಾಪಿತಂ ಚಂಡಮುಂಡಯೋಃ ॥ ೧ ॥**
**ಆಸ್ತಾಂ ಪುರಾ ಮಹಾದೈತ್ಯೌ ಚಂಡಮುಂಡೌ ಸುದಾರುಣೌ ।**
**ನರ್ಮದಾತೀರಮಾಶ್ರಿತ್ಯ ಚೇರತುರ್ವಿಪುಲಂ ತಪಃ ॥ ೨ ॥**
**ಧ್ಯಾಯಂತೌ ಭಾಸ್ಕರಂ ದೇವಂ ತಮೋನಾಶಂ ಜಗತ್ತ್ರಯೇ ।**
**ತುಷ್ಟಸ್ತತ್ತಪಸಾ ದೇವಃ ಸಹಸ್ರಾಂಶುರುವಾಚ ಹ ॥ ೩ ॥**
**ಸಾಧುಸಾಧ್ವಿತಿ ತೌ ಪಾರ್ಥ ನರ್ಮದಾಯಾಃ ಶುಭೇ ತಟೇ ।**
**ವರಂ ಪ್ರಾರ್ಥಯತಂ ವೀರೌ ಯಥೇಷ್ಟಂ ಚೇತಸೇಪ್ಸಿತಂ ॥ ೪ ॥**

**ಚಂಡಮುಂಡಾವೂಚತುಃ :—**

**ಅಜೇಯೌ ಸರ್ವದೇವಾನಾಂ ಭೂಯಾಸ್ವಾವಾಂ ಸಮಾಹಿತೌ ।**
**ಸರ್ವರೋಗೈಃ ಪರಿತ್ಯಕ್ತೌ ಸರ್ವಕಾಲಂ ದಿವಾಕರ ॥ ೫ ॥**

---

## ಕನ್ನಡದ ಅನುವಾದ

### ಚಂಡಾದಿತ್ಯತೀರ್ಥಮಾಹಾತ್ಮ್ಯವರ್ಣನ

೧. ಶ್ರೀ ಮಾರ್ಕಂಡೇಯನು ಹೇಳುತ್ತಾನೆ —ಯುಧಿಷ್ಠಿರ! ಬಳಿಕ ಚಂಡಮುಂಡರು ಸ್ಥಾಪಿಸಿರುವ ಅತ್ಯಂತ ಪವಿತ್ರವಾದ ಚಂಡಾದಿತ್ಯತೀರ್ಥಕ್ಕೆ ಹೋಗಬೇಕು.

೨–೩. ಹಿಂದೆ ಚಂಡಮುಂಡರೆಂಬ ಮಹಾಭಯಂಕರರಾದ ದೈತ್ಯರಿದ್ದರು. ಅವರು ನರ್ಮದಾತೀರವನ್ನಾಶ್ರಯಿಸಿ ಮೂರು ಲೋಕಗಳ ಕತ್ತಲೆಯನ್ನು ನಿವಾರಿಸುವ ಸೂರ್ಯನನ್ನು ಧ್ಯಾನಿಸುತ್ತ ಅತಿಶಯವಾದ ತಪಸ್ಸನ್ನಾಚರಿಸಿದರು. ಬಳಿಕ ಅವರ ತಪಸ್ಸಿನಿಂದ ಸಂತುಷ್ಟನಾದ ಸೂರ್ಯನು ಇಂತೆಂದನು.

೪. "ದೈತ್ಯವೀರರೆ! ಒಳ್ಳೆಯದು; ಒಳ್ಳೆಯದು. ನಿಮಗಿಷ್ಟವಾದ ವರವನ್ನು ಬೇಡಿಕೊಳ್ಳಿರಿ."

೫. ಚಂಡಮುಂಡರು ಹೇಳುತ್ತಾರೆ:—ದಿವಾಕರ! ನಾವು ಸಮಸ್ತದೇವತೆಗಳಿಗೂ ಜಯಿಸಲಶಕ್ಯರಾಗಿ, ಯಾವಾಗಲೂ ಸಮಸ್ತರೋಗರಹಿತರಾಗಿರುವಂತೆ ವರವನ್ನು ಕೊಡು.

ಏವಮುಸ್ತ್ವಿತಿ ತೌ ಪ್ರಾಹ ಭಾಸ್ಕರೋ ವಾರಿ ತಸ್ಕರಃ ।
ಇತ್ಯುಕ್ತ್ವಾಂತರ್ದಧೇ ಭಾನುರ್ದೈತ್ಯಾಭ್ಯಾಂ ತತ್ರ ಭಾಸ್ಕರಃ ॥ ೬ ॥
ಸ್ಥಾಪಿತಃ ಪರಯಾ ಭಕ್ತ್ಯಾ ತಂ ಗಚ್ಛೇದಾತ್ಮಸಿದ್ಧಯೇ ।
ಗೀರ್ವಾಣಾಂಶ್ಚ ಮನುಷ್ಯಾಂಶ್ಚ ಪಿತೄಂಸ್ತತ್ರಾಽಪಿ ತರ್ಪಯೇತ್ ॥ ೭ ॥
ಸ ವಸೇದ್ಭಾಸ್ಕರೇ ಲೋಕೇ ವಿರಂಚಿದಿವಸಂ ನೃಪ ।
ಘೃತೇನ ಬೋಧಯೇದ್ದೀಪಂ ಷಷ್ಠ್ಯಾಂ ಸ ಚ ನರೇಶ್ವರ ।
ಮುಚ್ಯತೇ ಸರ್ವಪಾಪೈಸ್ತು ಪ್ರತಿಯಾತಿ ಪುರಂ ರವೇಃ ॥ ೮ ॥
ಉತ್ಪತ್ತಿಂ ಚಂಡಭಾನೋರ್ಯಃ ಶೃಣೋತಿ ಭರತರ್ಷಭ ।
ವಿಜಯೀ ಸ ಸದಾ ನೂನಮಾಧಿವ್ಯಾಧಿವಿವರ್ಜಿತಃ ॥ ೯ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ಚಂಡಾದಿತ್ಯತೀರ್ಥಮಾಹಾತ್ಮ್ಯವರ್ಣನಂ"
ನಾಮೈಕನವತಿತಮೋಽಧ್ಯಾಯಃ.

---

೬-೮. ಜಲತಸ್ಕರನಾದ ಭಾಸ್ಕರನು ಹೀಗೆಯೇ ಆಗಲೆಂದು ಅವರನ್ನು ಕುರಿತು ಹೇಳಿ ಅಲ್ಲಿಯೇ ಅದೃಶ್ಯನಾದನು. ಆ ಇಬ್ಬರು ದೈತ್ಯರೂ ಅತಿಭಕ್ತಿಯಿಂದ ಅಲ್ಲಿ ಸೂರ್ಯನನ್ನು ಪ್ರತಿಷ್ಠೆಮಾಡಿದರು. ಮಾನವರು ಕಾರ್ಯಸಿದ್ಧಿಗಾಗಿ ಅಲ್ಲಿಗೆ ಹೋಗಿ ದೇವಪಿತೃಮನುಷ್ಯರಿಗೆ ತರ್ಪಣಮಾಡಿದರೆ ಅವರು ಬ್ರಹ್ಮನ ಒಂದುದಿವಸದವರೆಗೆ ಸೂರ್ಯಲೋಕದಲ್ಲಿ ವಾಸಮಾಡುವರು. ನರೇಂದ್ರ! ಅಲ್ಲಿ ಷಷ್ಠೀದಿನ ತುಪ್ಪದ ದೀಪವನ್ನು ಹೊತ್ತಿಸಿದವನು ಸಮಸ್ತಪಾಪಮುಕ್ತನಾಗಿ ಸೂರ್ಯಲೋಕವನ್ನು ಸೇರುವನು.

೯. ಯುಧಿಷ್ಠಿರ! ಚಂಡಾದಿತ್ಯನ ಉತ್ಪತ್ತಿಯನ್ನು ಕೇಳಿದವನು ಜಯಶಾಲಿಯೂ, ಆಧಿವ್ಯಾಧಿರಹಿತನೂ ಆಗುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಚಂಡಾದಿತ್ಯಮಾಹಾತ್ಮ್ಯವರ್ಣನ"ವೆಂಬ
ತೊಂಬತ್ತೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ದ್ವಿನವತಿತಮೋಽಧ್ಯಾಯಃ

### ಯಮಹಾಸ್ಯತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ತತೋ ಗಚ್ಛೇತ್ತು ರಾಜೇಂದ್ರ ಯಮಹಾಸ್ಯಮನುತ್ತಮಂ ।
ಸರ್ವಪಾಪಹರಂ ತೀರ್ಥಂ ನರ್ಮದಾತಟಮಾಶ್ರಿತಂ ॥ ೧ ॥

ಯುಧಿಷ್ಠಿರ ಉವಾಚ :—

ಯಮಹಾಸ್ಯಂ ಕಥಂ ಜಾತಂ ಪೃಥಿವ್ಯಾಂ ದ್ವಿಜಪುಂಗವ ।
ಏತತ್ಸರ್ವಂ ಮಮಾಖ್ಯಾಹಿ ಪರಂ ಕೌತೂಹಲಂ ಹಿ ಮೇ ॥ ೨ ॥

ಶ್ರೀ ಮಾರ್ಕಂಡೇಯ ಉವಾಚ :—

ಸಾಧು ಸಾಧು ಮಹಾಪ್ರಾಜ್ಞ ಪೃಷ್ಟೋಽಹಂ ನೃಪನಂದನ ।
ಸ್ನಾನಾರ್ಥಂ ನರ್ಮದಾಂ ಪುಣ್ಯಾಮಾಗತಸ್ತೇ ಪಿತಾ ಪುರಾ ॥ ೩ ॥
ರಜಕೇನ ಯಥಾ ಧೌತಂ ವಸ್ತ್ರಂ ಭವತಿ ನಿರ್ಮಲಂ ।
ತಥಾಽಸೌ ನಿರ್ಮಲೋ ಜಾತೋ ಧರ್ಮರಾಜೋ ಯುಧಿಷ್ಠಿರ ॥ ೪ ॥
ಸ ಪಶ್ಯನ್ನಿರ್ಮಲಂ ದೇಹಂ ಹಸನ್ನ್ಪ್ರೋವಾಚ ವಿಸ್ಮಿತಃ ॥ ೫ ॥

---

### ಕನ್ನಡದ ಅನುವಾದ

#### ಯಮಹಾಸ್ಯತೀರ್ಥಮಾಹಾತ್ಮ್ಯವರ್ಣನ

೧. ಶ್ರೀ ಮಾರ್ಕಂಡೇಯನು ಹೇಳುತ್ತಾನೆ —ದೊರೆಯೆ! ಬಳಿಕ ನರ್ಮದಾತೀರದಲ್ಲಿರುವ ಸಮಸ್ತಪಾಪಗಳನ್ನೂ ಪರಿಹರಿಸುವ ಯಮಹಾಸ್ಯ ತೀರ್ಥಕ್ಕೆ ಹೋಗಬೇಕು.

೨. ಯುಧಿಷ್ಠಿರನು ಹೇಳುತ್ತಾನೆ.—ಮುನಿವರ್ಯನೆ! ಆ ಯಮಹಾಸ್ಯ ತೀರ್ಥವು ಭೂಮಿಯಲ್ಲಿ ಉಂಟಾದುದು ಹೇಗೆ? ಇದನ್ನೆಲ್ಲ ನನಗೆ ಹೇಳು. ಅತ್ಯಂತಕುತೂಹಲವುಂಟಾಗಿದೆ.

೩. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:—ಪ್ರಾಜ್ಞನಾದ ಯುಧಿಷ್ಠಿರನೆ! ನೀನು ಚೆನ್ನಾಗಿ ಪ್ರಶ್ನಿಸಿದೆ. ನಿನ್ನ ತಂದೆಯಾದ ಯಮನು ಹಿಂದೆ ಸ್ನಾನಕ್ಕಾಗಿ ಪುಣ್ಯಕರವಾದ ನರ್ಮದಾನದಿಗೆ ಬಂದನು.

೪. ಅವನು ಅಲ್ಲಿ ಸ್ನಾನಮಾಡಿದುದರಿಂದ, ಅಗಸನು ಒಗೆದ ವಸ್ತ್ರವು ಹೇಗೆಯೋ ಹಾಗೆ ನಿರ್ಮಲನಾದನು.

೫. ಅವನು ನಿರ್ಮಲವಾದ ತನ್ನ ಶರೀರವನ್ನು ಕಂಡು ಆಶ್ಚರ್ಯದಿಂದ ನಗುತ್ತ ಇಂತೆಂದನು.

ಯಮ ಉವಾಚ:—

ಮತ್ಪುರಂ ಕಥಮಾಯಾಂತಿ ಮನುಜಾಃ ಪಾಪಬೃಂಹಿತಾಃ ।
ಸ್ನಾನೇನೈಕೇನ ರೇವಾಯಾಃ ಪ್ರಾಪ್ಯತೇ ವೈಷ್ಣವಂ ಪದಂ ॥ ೬ ॥
ಸಮರ್ಥಾ ಯೇನ ಪಶ್ಯಂತಿ ರೇವಾಂ ಪುಣ್ಯಜಲಾಂ ಶುಭಾಂ ।
ಜಾತ್ಯಂಧೈಸ್ತೇ ಸಮಾ ಜ್ಞೇಯಾ ಮೃತೈಃ ಪಂಗುಭಿರೇವ ವಾ ॥ ೭ ॥
ಸಮರ್ಥಾ ಯೇ ನ ಪಶ್ಯಂತಿ ರೇವಾಂ ಪುಣ್ಯಜಲಾಂ ನದೀಂ ।
ಏತಸ್ಮಾತ್ಕಾರಣಾದ್ರಾಜನ್ ಹಸಿತೋ ಲೋಕಶಾಸನಃ ॥ ೮ ॥
ಸ್ಥಾಪಯಿತ್ವಾ ಯಮಸ್ತತ್ರ ದೇವಂ ಸ್ವರ್ಗಂ ಜಗಾಮ ಹ ।
ಯಮಹಾಸೇಶ್ವರೇ ರಾಜನ್ ಜಿತಕ್ರೋಧೋ ಜಿತೇಂದ್ರಿಯಃ ॥ ೯ ॥
ವಿಶೇಷಾಚ್ಚಾಶ್ವಿನೇ ಮಾಸಿ ಕೃಷ್ಣಪಕ್ಷೇ ಚತುರ್ದಶೀಂ ।
ಉಪೋಷ್ಯ ಪರಯಾ ಭಕ್ತ್ಯಾ ಸರ್ವಪಾಪೈಃ ಪ್ರಮುಚ್ಯತೇ ॥ ೧೦ ॥
ರಾತ್ರೌ ಜಾಗರಣಂ ಕುರ್ಯಾದ್ದೀಪಂ ದೇವಸ್ಯ ಬೋಧಯೇತ್ ।
ಘೃತೇನ ಚೈವ ರಾಜೇಂದ್ರ ಶೃಣು ತತ್ರಾಸ್ತಿ ಯತ್ಫಲಂ ॥ ೧೧ ॥
ಮುಚ್ಯತೇ ಪಾತಕೈಃ ಸರ್ವೈರಗಮ್ಯಾಗಮನೋದ್ಭವೈಃ ।
ಅಭಕ್ಷ್ಯಭಕ್ಷಣೋದ್ಭೂತೈರಪೇಯಾಪೇಯಜೈರಪಿ ॥ ೧೨ ॥

---

೬. "ನರ್ಮದಾನದಿಯಲ್ಲಿ ಸ್ನಾನಮಾಡುವುದರಿಂದಲೆ ವಿಷ್ಣುಲೋಕವು ಸಿಕ್ಕುವಾಗ ಪಾಪಿಗಳಾದ ಮಾನವರು ನನ್ನ ಪಟ್ಟಣಕ್ಕೆ ಏಕೆ ಬರುತ್ತಾರೆ?

೭. ಶಕ್ತರಾಗಿ ಪುಣ್ಯಕರವಾದ ನೀರುಳ್ಳ ನರ್ಮದಾನದಿಯನ್ನು ನೋಡದವರು ಜಾತ್ಯಂಧರು, ಮೃತರು, ಅಥವಾ ಕುಂಟರು ಇವರಿಗೆ ಸಮಾನರೆಂದು ತಿಳಿಯಬೇಕು.

೮. ಸಮರ್ಥರಾಗಿಯೂ ಯಾರುತಾನೆ ಪುಣ್ಯಕರವಾದ ನೀರುಳ್ಳ ನರ್ಮದಾನದಿಯನ್ನು ನೋಡುವುದಿಲ್ಲ?" ಎಂದು ಲೋಕಶಾಸಕನಾದ ಯಮನು ನಕ್ಕನು.

೯–೧೦. ಯಮನು ಅಲ್ಲಿ ಮಹೇಶ್ವರನನ್ನು ಸ್ಥಾಪಿಸಿ ಸ್ವರ್ಗಕ್ಕೆ ತೆರಳಿದನು. ಆ ಯಮಹಾಸೇಶ್ವರದಲ್ಲಿ ನರನು ಜಿತಕ್ರೋಧನೂ, ಜಿತೇಂದ್ರಿಯನೂ ಆಗಿ ವಿಶೇಷವಾಗಿ ಆಶ್ವಿನ ಕೃಷ್ಣಪಕ್ಷ ಚತುರ್ದಶೀದಿನ ಅತಿಶಯಭಕ್ತಿಯಿಂದ ಉಪವಾಸಮಾಡಿದರೆ ಸಕಲಪಾಪಗಳಿಂದಲೂ ಮುಕ್ತನಾಗುವನು.

೧೧. ರಾಜನೆ! ಅಲ್ಲಿ ರಾತ್ರಿ ಜಾಗರಣೆಗೈದು ತುಪ್ಪದಿಂದ ಮಹೇಶ್ವರನಿಗೆ ದೀಪವನ್ನು ಹೊತ್ತಿಸಿದರೆ ಉಂಟಾಗುವ ಫಲವನ್ನು ಕೇಳು.

೧೨. ಅವನು ಅಗಮ್ಯಾಗಮನ, ಅಭಕ್ಷ್ಯಭಕ್ಷಣ, ಅಪೇಯಪಾನ ಇವುಗಳಿಂದುಂಟಾದ ಪಾಪಫಲದಿಂದ ಮುಕ್ತನಾಗುವನು.

ಅವಾಹ್ಯವಾಹಿತೇ ಯತ್ಸ್ಯಾದದೋಹ್ಯಾದೋಹನೇ ಯಥಾ ।
ಸ್ನಾನಮಾತ್ರೇಣ ತಸ್ಯೈವಂ ಯಾಂತಿ ಪಾಪಾನ್ಯನೇಕಧಾ ॥ ೧೩ ॥
ಯಮಲೋಕಂ ನ ವೀಕ್ಷೇತ ಮನುಜಃ ಸ ಕದಾಚನ ।
ಪಿತೄಣಾಂ ಪರಮಂ ಗುಹ್ಯಮಿದಂ ಭೂಮೌ ನರೇಶ್ವರ ॥ ೧೪ ॥
ದದತಾಮಕ್ಷಯಂ ಸರ್ವಂ ಯಮಹಾಸ್ಯೇ ನ ಸಂಶಯಃ ।
ಅಮಾವಾಸ್ಯಾಂ ಜಿತಕ್ರೋಧೋ ಯಸ್ತು ಪೂಜಯತೇ ದ್ವಿಜಾನ್ ॥ ೧೫ ॥
ಹಿರಣ್ಯಭೂಮಿದಾನೇನ ತಿಲದಾನೇನ ಭೂಯಸಾ ।
ಕೃಷ್ಣಾಜಿನಪ್ರದಾನೇನ ತಿಲಧೇನುಪ್ರದಾನತಃ ॥ ೧೬ ॥
ವಿಧಾನೋಕ್ತದ್ವಿಜಾಗ್ರ್ಯಾಯ ಯೇ ಪ್ರದಾಸ್ಯಂತಿ ಭಕ್ತಿತಃ ।
ಹಯಂ ವಾ ಕುಂಜರಂ ವಾಽಥ ಧೂರ್ವಹೌ ಸೀರಸಂಯುತೌ ॥ ೧೭ ॥
ಕನ್ಯಾಂ ವಸುಮತೀಂ ಗಾಂ ಚ ಮಹಿಷೀಂ ವಾ ಪಯಸ್ವಿನೀಂ ।
ದದತೇ ಯೇ ನೃಪಶ್ರೇಷ್ಠ ನೋಪಸರ್ಪಂತಿ ತೇ ಯಮಂ ॥ ೧೮ ॥
ಯಮೋಽಪಿ ಭವತಿ ಪ್ರೀತಃ ಪ್ರತಿಜನ್ಮ ಯುಧಿಷ್ಠಿರ ।
ಯಮಸ್ಯ ವಾಹೋ ಮಹಿಷೋ ಮಹಿಷ್ಯಸ್ತಸ್ಯ ಮಾತರಃ ॥ ೧೯ ॥
ತಾಸಾಂ ದಾನಪ್ರಭಾವೇಣ ಯಮಃ ಪ್ರೀತೋ ಭವೇದ್ಧ್ರುವಂ ।
ನಾಽಸೌ ಯಮಮವಾಪ್ನೋತಿ ಯದಿ ಪಾಪೈಃ ಸಮಾವೃತಃ ॥ ೨೦ ॥

---

೧೩. ಅವಾಹ್ಯವಾಹನ, ಅದೋಹ್ಯದೋಹನ ಇವುಗಳಿಂದುಂಟಾದ ಪಾಪವು ಅಲ್ಲಿ ಸ್ನಾನಮಾಡುವುದರಿಂದಲೆ ಪರಿಹಾರವಾಗುವುದು.

೧೪. ಅವನು ಯಮಲೋಕವನ್ನು ಒಂದುಸಾರಿಯೂ ನೋಡುವುದಿಲ್ಲ. ಮಹಾರಾಜ! ಭೂಮಿಯಲ್ಲಿರುವ ಈ ತೀರ್ಥವು ಪಿತೃಗಳಿಗೆ ಅತಿರಹಸ್ಯವಾದ ತೀರ್ಥವಾಗಿರುವುದು.

೧೫–೧೬. ಈ ಯಮಹಾಸ್ಯದಲ್ಲಿ ದಾನಮಾಡುವವರಿಗೆ ಎಲ್ಲವೂ ಅಕ್ಷಯವಾಗುವುವು. ಇಲ್ಲಿ ಅಮಾವಾಸ್ಯೆಯದಿನ ಕೋಪವನ್ನು ತ್ಯಜಿಸಿ ಬ್ರಾಹ್ಮಣರಿಗೆ ಸುವರ್ಣ, ಭೂಮಿ, ಎಳ್ಳು, ಕೃಷ್ಣಾಜಿನ, ತಿಲಧೇನು ಇವುಗಳನ್ನು ದಾನಮಾಡಿ ಪೂಜಿಸಬೇಕು.

೧೭–೧೮. ಉತ್ತಮ ಬ್ರಾಹ್ಮಣನಿಗೆ ಕುದುರೆ, ಆನೆ, ನೇಗಿಲಿನಿಂದ ಸಹಿತವಾದ ಎತ್ತುಗಳು, ಕನ್ಯೆ, ಭೂಮಿ, ಗೋವು, ಅಥವಾ ಹಾಲನ್ನು ಕೊಡುವ ಎಮ್ಮೆ ಇವುಗಳನ್ನು ವಿಧಿಯಿಂದ ದಾನಮಾಡುವವನು ಯಮನಲ್ಲಿಗೆ ಹೋಗುವುದಿಲ್ಲವು.

೧೯–೨೦. ಯಮನ ವಾಹನವು ಕೋಣವು. ಎಮ್ಮೆಗಳು ಅದರ ತಾಯಂದಿರು. ಅವುಗಳನ್ನು ದಾನಮಾಡುವುದರಿಂದ ಯಮನು ನಿಶ್ಚಯ

ಏತಸ್ಮಾತ್ಕಾರಣಾದತ್ರ ಮಹಿಷೀದಾನಮುತ್ತಮಂ ।
ತಸ್ಯಾಃ ಶೃಂಗೇ ಜಲಂ ಕಾರ್ಯಂ ಧೂಮ್ರವಸ್ತ್ರಾಽನುವೇಷ್ಟಿತಾ ॥ ೨೧ ॥
ಆಯಸಸ್ಯ ಖುರಾಃ ಕಾರ್ಯಾಸ್ತಾಮ್ರಪೃಷ್ಠಾಃ ಸುಭೂಷಿತಾಃ ।
ಲವಣಾಚಲಂ ಪೂರ್ವಸ್ಯಾಮಾಗ್ನೇಯ್ಯಾಂ ಗುಡಪರ್ವತಂ ॥ ೨೨ ॥
ಕಾರ್ಪಾಸಂ ಯಾಮ್ಯಭಾಗೇತು ನವನೀತಂ ತು ನೈಋತೇ ।
ಪಶ್ಚಿಮೇ ಸಪ್ತಧಾನ್ಯಾನಿ ವಾಯವ್ಯೇ ತಂಡುಲಾಃ ಸ್ಮೃತಾಃ ॥ ೨೩ ॥
ಸೌಮ್ಯೇತು ಕಾಂಚನಂ ದದ್ಯಾದೀಶಾನೇ ಘೃತಮೇವ ಚ ।
ಪ್ರದದ್ಯಾದ್ಯಮರಾಜೋ ಮೇ ಪ್ರೀಯತಾಮಿತ್ಯುದೀರಯನ್ ॥ ೨೪ ॥
ಇತ್ಯುಚ್ಚಾರ್ಯ ದ್ವಿಜಸ್ಯಾಗ್ರೇ ಯಮಲೋಕಂ ಮಹಾಭಯಂ ।
ಅಸಿಪತ್ರವನಂ ಘೋರಂ ಯಮಚುಲ್ಲೀ ಸುದಾರುಣಾ ॥ ೨೫ ॥
ರೌದ್ರಾ ವೈತರಣೀ ಚೈವ ಕುಂಭೀಪಾಕೋ ಭಯಾವಹಃ ।
ಕಾಲಸೂತ್ರೋ ಮಹಾಭೀಮಸ್ತಥಾ ಯಮಲಪರ್ವತೌ ॥ ೨೬ ॥
ಕ್ರಕಚಂ ತೈಲಯಂತ್ರಂ ಚ ಶ್ವಾನೋ ಗೃಧ್ರಾಃ ಸುದಾರುಣಾಃ ।
ನಿರುಚ್ಛ್ವಾಸಾ ಮಹಾನಾದಾ ಭೈರವೋ ರೌರವಸ್ತಥಾ ॥ ೨೭ ॥
ಏತೇ ಘೋರಾ ಯಾಮ್ಯಲೋಕೇ ಶ್ರೂಯಂತೇ ದ್ವಿಜಸತ್ತಮ ।
ತ್ವತ್ಪ್ರಸಾದೇನ ತೇ ಸೌಮ್ಯಾಸ್ತೀರ್ಥಸ್ಯಾಽಸ್ಯ ಪ್ರಭಾವತಃ ॥ ೨೮ ॥

---

ವಾಗಿಯೂ ಸಂತುಷ್ಟನಾಗುವನು. ಈ ದಾನಮಾಡುವವನು ಪಾಪಿಯಾ ಗಿದ್ದರೂ ಯಮನನ್ನು ನೋಡುವುದಿಲ್ಲ.

೨೧–೨೪. ಈ ಕಾರಣದಿಂದ ಇಲ್ಲಿ ಎಮ್ಮೆಯ ದಾನವು ಉತ್ತಮವಾದುದು. ಆ ಎಮ್ಮೆಯ ಕೊಂಬನ್ನು ತೊಳೆದು ಬೂದುಬಣ್ಣದ ಬಟ್ಟೆಯಿಂದ ಸುತ್ತಬೇಕು. ಕಬ್ಬಿಣದ ಗೊರಸನ್ನು ಮಾಡಿಸಬೇಕು. ಬೆನ್ನಿಗೆ ತಾಮ್ರದಿಂದ ಅಲಂಕಾರ ಮಾಡಬೇಕು. ಆ ಎಮ್ಮೆಯ ಪೂರ್ವದಿಕ್ಕಿನಲ್ಲಿ ಉಪ್ಪಿನ ಬೆಟ್ಟವನ್ನೂ, ಆಗ್ನೇಯ ದಲ್ಲಿ ಬೆಲ್ಲದ ಬೆಟ್ಟವನ್ನೂ, ದಕ್ಷಿಣದಲ್ಲಿ ಹತ್ತಿಯನ್ನೂ, ನೈಋತ್ಯದಲ್ಲಿ ಬೆಣ್ಣೆ ಯನ್ನೂ, ಪಶ್ಚಿಮದಲ್ಲಿ ಸಪ್ತಧಾನ್ಯಗಳನ್ನೂ, ವಾಯವ್ಯದಲ್ಲಿ ಅಕ್ಕಿಯನ್ನೂ, ಉತ್ತರದಲ್ಲಿ ಚಿನ್ನವನ್ನೂ, ಈಶಾನ್ಯದಲ್ಲಿ ತುಪ್ಪವನ್ನೂ ಇಟ್ಟು, ಯಮರಾಜನು ಪ್ರೀತನಾಗಲಿ ಎಂದು ಹೇಳುತ್ತ ದಾನಮಾಡಬೇಕು.

೨೫–೨೮. ಇಂತೆನಲು ಧರ್ಮನಂದನನು, "ಯಮಲೋಕದಲ್ಲಿ ಅಸಿಪತ್ರವನ, ಯಮಚುಲ್ಲೀ, ವೈತರಣಿ, ಕುಂಭೀಪಾತ, ಕಾಲಸೂತ್ರ, ಯಮಲಪರ್ವತ, ಗರಗಸ, ತೈಲಯಂತ್ರ, ನಾಯಿಗಳು, ಅತಿಯಾಗಿ ಕೂಗುವ ಹದ್ದುಗಳು, ರೌರವ ಮೊದಲಾದ ನರಕಗಳು ಅತಿಭಯಂಕರವಾಗಿವೆಯೆಂದು ಕೇಳಿದ್ದೇನೆ. ನಿನ್ನ ಅನುಗ್ರಹದಿಂದ ಅವುಗಳೆಲ್ಲ ಸೌಮ್ಯವಾಗಲಿ. ಮುನಿಯೆ!

**ದಾನಸ್ಯಾಽಸ್ಯ ಪ್ರಭಾವೇಣ ಯಮರಾಜಪ್ರಸಾದತಃ ।**
**ನರಕೇಽಹಂ ನ ಯಾಸ್ಯಾಮಿ ದ್ವಿಜ ಜನ್ಮನಿ ಜನ್ಮನಿ ॥ ೨೯ ॥**
**ಯಮಹಾಸ್ಯಸ್ಯಚಾಖ್ಯಾನಮಿದಂ ಶೃಣ್ವಂತಿ ಯೇ ನರಾಃ ।**
**ತೇಽಪಿ ಪಾಪವಿನಿರ್ಮುಕ್ತಾ ನ ಪಶ್ಯಂತಿ ಯಮಾಲಯಂ ॥ ೩೦ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ**
**ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ**
**"ಯಮಹಾಸ್ಯತೀರ್ಥಮಾಹಾತ್ಮ್ಯವರ್ಣನಂ"**
**ನಾಮ ದ್ವಿನವತಿತಮೋಽಧ್ಯಾಯಃ**

---

ಈ ತೀರ್ಥ ಮತ್ತು ದಾನದ ಪ್ರಭಾವದಿಂದಲೂ, ಯಮರಾಜನ ಅನುಗ್ರಹ ದಿಂದಲೂ ನಾನು ಜನ್ಮಜನ್ಮಕ್ಕೂ ನರಕಕ್ಕೆ ಹೋಗುವುದೇ ಇಲ್ಲವು.

೩೦. ಯಮಹಾಸ್ಯದ ಈ ಆಖ್ಯಾನವನ್ನು ಕೇಳುವ ನರರೂ ಪಾಪರಹಿತ ರಾಗಿ ಯಮಾಲಯವನ್ನು ನೋಡುವುದಿಲ್ಲವು" ಎಂದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಯಮಹಾಸ್ಯತೀರ್ಥಮಾಹಾತ್ಮ್ಯವರ್ಣನ"ವೆಂಬ
ತೊಂಭತ್ತೆರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ತ್ರಿಣವತಿತಮೋಽಧ್ಯಾಯಃ

### ಕಲ್ಹೋಡೀತೀರ್ಥಮಾಹಾತ್ಮ್ಯವರ್ಣನಂ

**ಶ್ರೀ ಮಾರ್ಕಂಡೇಯ ಉವಾಚ :—**

**ತತೋ ಗಚ್ಛೇತ್ತು ರಾಜೇಂದ್ರ ಕಲ್ಹೋಡೀತೀರ್ಥಮುತ್ತಮಂ ।**
**ವಿಖ್ಯಾತಂ ಭಾರತೇ ಲೋಕೇ ಗಂಗಾಯಾಃ ಪಾಪನಾಶನಂ ॥ ೧ ॥**
**ದುರ್ಲಭಂ ಮನುಜೈಃ ಪಾರ್ಥ ರೇವಾತಟಸಮಾಶ್ರಿತಂ ।**
**ಪ್ರಾಣಿನಾಂ ಪಾಪನಾಶಾಯ ಊಷರಂ ಪುಷ್ಕರಂ ತಥಾ ॥ ೨ ॥**
**ತತ್ತು ತೀರ್ಥಮಿದಂ ಪುಣ್ಯಮಿತ್ಯೇವಂ ಶೂಲಿನೋ ವಚಃ ।**
**ಜಾಹ್ನವೀ ಪಶುರೂಪೇಣ ತತ್ರ ಸ್ನಾನಾರ್ಥಮಾಗತಾ ॥ ೩ ॥**
**ಅತಸ್ತದ್ವಿಶ್ರುತಂ ಲೋಕೇ ಕಲ್ಹೋಡೀತೀರ್ಥಮುತ್ತಮಂ ।**
**ತ್ರಿರಾತ್ರಂ ಕಾರಯೇತ್ತತ್ರ ಪೂರ್ಣಿಮಾಯಾಂ ಯುಧಿಷ್ಠಿರ ॥ ೪ ॥**
**ರಜಸ್ತಮಸ್ತಥಾ ಕ್ರೋಧಂ ದಂಭಂ ಮಾತ್ಸರ್ಯಮೇವ ಚ ।**
**ಏತಾಂಸ್ತ್ಯಜತಿ ಯಃ ಪಾರ್ಥ ತೇನಾಪ್ತಂ ಮೋಕ್ಷಜಂ ಫಲಂ ॥ ೫ ॥**
**ಪಯಸಾ ಸ್ನಾಪಯೇದ್ದೇವಂ ತ್ರಿಸಂಧ್ಯಂ ಚ ತ್ರ್ಯಹಂ ತಥಾ ।**
**ಪಯೋ ಗೋಸಂಭವಂ ಸದ್ಯಃ ಸವತ್ಸಾ ಜೀವಪುತ್ರಿಣೀ ॥ ೬ ॥**

---

### ಕನ್ನಡದ ಅನುವಾದ

#### ಕಲ್ಹೋಡೀತೀರ್ಥಮಾಹಾತ್ಮ್ಯವರ್ಣನ

೧. ಶ್ರೀ ಮಾರ್ಕಂಡೇಯನು ಹೇಳುತ್ತಾನೆ —ಮಹಾರಾಜ! ಬಳಿಕ ಭಾರತವರ್ಷದಲ್ಲಿ ಪ್ರಸಿದ್ಧವೂ, ಗಂಗೆಯ ಪಾಪವನ್ನು ಪರಿಹರಿಸಿದುದೂ ಆದ ಕಲ್ಹೋಡೀತೀರ್ಥಕ್ಕೆ ಹೋಗಬೇಕು.

೨. ಪ್ರಾಣಿಗಳ ಪಾಪವನ್ನು ಪರಿಹರಿಸುವ ಊಷರ ಮತ್ತು ಪುಷ್ಕರ ತೀರ್ಥಗಳಂತೆ ರೇವಾತಟದಲ್ಲಿರುವ ಆ ತೀರ್ಥವು ದುರ್ಲಭವಾದುದು.

೩. ಆ ತೀರ್ಥವು ಪುಣ್ಯಕರವಾದುದೆಂದು ಮಹೇಶ್ವರನೇ ಹೇಳಿರುತ್ತಾನೆ. ಗಂಗೆಯು ಪಶುರೂಪದಿಂದ ಸ್ನಾನಕ್ಕಾಗಿ ಅಲ್ಲಿಗೆ ಬಂದಿರುವಳು.

೪–೫. ಆದ್ದರಿಂದ ಆ ತೀರ್ಥವು ಕಲ್ಹೋಡೀ ತೀರ್ಥವೆಂದು ಲೋಕದಲ್ಲಿ ಪ್ರಸಿದ್ಧವಾಯಿತು. ಹುಣ್ಣಿಮೆಯ ಮೂರು ರಾತ್ರಿಗಳಲ್ಲಿ ಅಲ್ಲಿ ರಜಸ್ಸು, ತಮಸ್ಸು, ಕ್ರೋಧ, ದಂಭ, ಮಾತ್ಸರ್ಯ ಇವುಗಳನ್ನು ತ್ಯಜಿಸಿದವನು ಮೋಕ್ಷರೂಪ ಫಲವನ್ನು ಹೊಂದುವನು.

೬–೧೦. ಬದುಕಿರುವ ಕರುವಿನಿಂದ ಸಹಿತವಾದ ಗೋವಿನ ಹಾಲನ್ನು ತಾಮ್ರದ ಪಾತ್ರೆಯಲ್ಲಿ ಜೇನು ಬೆರಿಸಿ ಮೂರುದಿನ ಮೂರು ಸಂಧ್ಯಾಕಾಲದಲ್ಲಿ

ಕೃತ್ವಾ ತತ್ತಾಮ್ರಜೇ ಪಾತ್ರೇ ಕ್ಷೌದ್ರೇಣ ಚೈವ ಯೋಜಿತೇ ।
ಓಂ ನಮಃ ಶ್ರೀ ಶಿವಾಯೇತಿ ಸ್ನಾನಂ ದೇವಸ್ಯ ಕಾರಯೇತ್ ॥ ೭ ॥
ಸ ಯಾತಿ ತ್ರಿದಶಸ್ಥಾನಂ ನಾಕಸ್ತ್ರೀಭಿಃ ಸಮಾವೃತಃ ।
ಯಸ್ತತ್ರ ವಿಧಿವತ್ ಸ್ನಾತ್ವಾ ದಾನಂ ಪ್ರೇತೇಷು ಯಚ್ಛತಿ ॥ ೮ ॥
ಶುಕ್ಲಾಂ ಗಾಂ ದಾಪಯೇತ್ತತ್ರ ಪ್ರೀಯತಾಂ ಮೇ ಪಿತಾಮಹಾಃ ।
ಬ್ರಾಹ್ಮಣೇ ಶೌಚಸಂಪನ್ನೇ ಸ್ವದಾರನಿರತೇ ಸದಾ ॥ ೯ ॥
ಸವತ್ಸಾಂ ವಸ್ತ್ರಸಂಯುಕ್ತಾಂ ಹಿರಣ್ಯೋಪರಿಸಂಸ್ಥಿತಾಂ ।
ಸತ್ವಯುಕ್ತೋ ದದದ್ರಾಜನ್ ಶಾಂಭವಂ ಲೋಕಮಾಪ್ನುಯಾತ್ ॥ ೧೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ಕಲ್ಹೋಡೀತೀರ್ಥಮಾಹಾತ್ಮ್ಯವರ್ಣನಂ"
ನಾಮ ತ್ರಿನವತಿತಮೋಽಧ್ಯಾಯಃ

---

ಈಶ್ವರನಿಗೆ 'ಓಂ ನಮಃ ಶಿವಾಯ' ಎಂಬ ಮಂತ್ರದಿಂದ ಅಭಿಷೇಕಮಾಡಿದವನು ದೇವಸ್ತ್ರೀಯರೊಡನೆ ಸ್ವರ್ಗಲೋಕಕ್ಕೆ ಹೋಗುವನು. ಅಲ್ಲಿ ವಿಧಿಯಂತೆ ಮಿಂದು ಪಿತೃಗಳನ್ನುದ್ದೇಶಿಸಿ ಶುದ್ಧನೂ, ಸ್ವಪತ್ನಿಯಲ್ಲಿ ನಿರತನೂ ಆದ ಬ್ರಾಹ್ಮಣನಿಗೆ ಕರುವಿನಿಂದ ಕೂಡಿರುವುದೂ, ವಸ್ತ್ರದಿಂದ ಅಲಂಕಾರಗೊಂಡುದೂ, ಸುವರ್ಣದಮೇಲೆ ನಿಂತಿರುವುದೂ ಆದ ಶುಕ್ಲಧೇನುವನ್ನು 'ನನ್ನ ಪಿತಾಮಹರು ಸಂತುಷ್ಟರಾಗಲಿ' ಎಂದು ಸಾತ್ವಿಕಭಾವದಿಂದ ದಾನಮಾಡುವವನು ಶಿವಲೋಕವನ್ನು ಸೇರುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಕಲ್ಹೋಡೀತೀರ್ಥಮಾಹಾತ್ಮ್ಯವರ್ಣನ"ವೆಂಬ
ತೊಂಬತ್ತಮೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಚತುರ್ನವತಿತಮೋಽಧ್ಯಾಯಃ

### ನಂದಿಕೇಶ್ವರತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ:–

**ತಸ್ಯೈವಾನಂತರಂ ರಾಜನ್ನಂದಿತೀರ್ಥಂ ವ್ರಜೇಚ್ಛುಭಂ ।**
**ಸರ್ವಪಾಪಹರಂ ಪುಂಸಾಂ ನಂದಿನಾ ನಿರ್ಮಿತಂ ಪುರಾ ॥ ೧ ॥**
**ಪಾಪೌಘಹತಜಂತೂನಾಂ ಮೋಕ್ಷದಂ ನರ್ಮದಾತಟೇ ।**
**ಅಹೋರಾತ್ರೋಷಿತೋ ಭೂತ್ವಾ ನಂದಿನಾಥೇ ಯುಧಿಷ್ಠಿರ ॥ ೨ ॥**
**ಪಂಚೋಪಚಾರಪೂಜಯಾರ್ಚಯೇನ್ನಂದಿಕೇಶ್ವರಂ ।**
**ರತ್ನಾನಿ ಚೈವ ವಿಪ್ರೇಭ್ಯೋ ಯೋ ದದ್ಯಾದ್ದರ್ಮನಂದನ ॥ ೩ ॥**
**ಸ ಯಾತಿ ಪರಮಂ ಸ್ಥಾನಂ ಯತ್ರ ವಾಸಃ ಪಿನಾಕಿನಃ ।**
**ಸರ್ವಸೌಖ್ಯಸಮಾಯುಕ್ತೋಽಪ್ಸರೋಭಿಃ ಸಹ ಮೋದತೇ ॥ ೪ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ**
**ಪಂಚಮೋ ಆವಂತ್ಯಖಂಡೇ ತೃತೀಯೋ ರೇವಾಖಂಡೇ**
**"ನಂದಿಕೇಶ್ವರತೀರ್ಥಮಾಹಾತ್ಮ್ಯವರ್ಣನಂ"**
**ನಾಮ ಚತುರ್ನವತಿತಮೋಽಧ್ಯಾಯಃ**

---

## ಕನ್ನಡದ ಅನುವಾದ

### ನಂದಿಕೇಶ್ವರತೀರ್ಥಮಾಹಾತ್ಮ್ಯವರ್ಣನ

೧. ಶ್ರೀ ಮಾರ್ಕಂಡೇಯನು ಹೇಳುತ್ತಾನೆ —ದೊರೆಯೆ! ಆ ತೀರ್ಥವಾದ ತರುವಾಯ ಮಾನವರ ಸಕಲಪಾಪಗಳನ್ನು ಪರಿಹರಿಸುವುದೂ, ಹಿಂದೆ ನಂದಿಯು ನಿರ್ಮಿಸಿರುವುದೂ ಆದ ನಂದಿತೀರ್ಥಕ್ಕೆ ಹೋಗಬೇಕು.

೨–೪. ಯುಧಿಷ್ಠಿರ! ಪಾಪಸಮೂಹಗಳಿಂದ ಪೀಡಿತರಾದ ಜನರಿಗೆ ಮೋಕ್ಷವನ್ನು ಕೊಡುವುದೂ ನರ್ಮದಾತಟದಲ್ಲಿರುವುದೂ ಆದ ನಂದಿಕೇಶ್ವರನನ್ನು ಪಂಚೋಪಚಾರ ಪೂಜೆಗಳಿಂದ ಅರ್ಚಿಸಬೇಕು. ಅಲ್ಲಿ ಬ್ರಾಹ್ಮಣರಿಗೆ ರತ್ನಗಳನ್ನು ದಾನಮಾಡುವವನು ಈಶ್ವರನ ಉತ್ತಮ ಸ್ಥಾನಕ್ಕೆ ತೆರಳುವನು. ಅಲ್ಲಿ ಸಮಸ್ತ ಸೌಖ್ಯಗಳಿಂದ ಕೂಡಿದವನಾಗಿ ಅಪ್ಸರೆಯರೊಡನೆ ಆನಂದಪಡುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ನಂದಿಕೇಶ್ವರತೀರ್ಥಮಾಹಾತ್ಮ್ಯವರ್ಣನ"ವೆಂಬ
ತೊಂಬತ್ತನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಪಂಚನವತಿತಮೋಽಧ್ಯಾಯಃ

### ನರನಾರಾಯಣತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

**ತತೋ ಗಚ್ಛೇತ್ತು ರಾಜೇಂದ್ರ ಬದರ್ಯಾಶ್ರಮಮುತ್ತಮಂ ।**
**ಸರ್ವತೀರ್ಥವರಂ ಪುಣ್ಯಂ ಕಥಿತಂ ಶಂಭುನಾ ಪುರಾ ॥ ೧ ॥**
**ಯಚ್ಛೈಷ ಭಾರತಸ್ಯಾರ್ಥೇ ತತ್ರ ಸಿದ್ಧಃ ಕಿರೀಟಿಭೃತ್ ।**
**ಭ್ರಾತಾ ತೇ ಫಾಲ್ಗುನೋ ನಾಮ ವಿದ್ಧ್ಯೇನಂ ನರದೈವತಂ ॥ ೨ ॥**
**ನರನಾರಾಯಣೌ ದ್ವೌ ತಾವಾಗತೌ ನರ್ಮದಾತಟೇ ।**
**ಜ್ಞಾನಂ ತಸ್ಯೈವ ಯೋ ರಾಜನ್ ಭಕ್ತಿಮಾನ್ಸ್ವೈ ಜನಾರ್ದನೇ ॥ ೩ ॥**
**ಸಮಂ ಪಶ್ಯತಿ ಸರ್ವೇಷು ಸ್ಥಾವರೇಷು ಚರೇಷು ಚ ।**
**ಬ್ರಾಹ್ಮಣಂ ಶ್ವಪಚಂ ಚೈವ ತತ್ರ ಪ್ರೀತೋ ಜನಾರ್ದನಃ ॥ ೪ ॥**
**ಐಕಾತ್ಮ್ಯಂ ಪಶ್ಯ ಕೌಂತೇಯ ಮಯಿ ಚಾತ್ಮನಿ ನಾಂತರಂ ।**
**ನರನಾರಾಯಣಾಭ್ಯಾಂ ಹಿ ಕೃತಂ ಬದರಿಕಾಶ್ರಮಂ ॥ ೫ ॥**
**ಸ್ಥಾಪಿತಃ ಶಂಕರಸ್ತತ್ರ ಲೋಕಾನುಗ್ರಹಕಾರಣಾತ್ ।**
**ತ್ರಿಮೂರ್ತಿಸ್ಥಾಪಿತಂ ಲಿಂಗಂ ಸ್ವರ್ಗಮಾರ್ಗಾನುಮುಕ್ತಿದಂ ॥ ೬ ॥**

---

### ಕನ್ನಡದ ಅನುವಾದ

#### ನರನಾರಾಯಣತೀರ್ಥಮಾಹಾತ್ಮ್ಯವರ್ಣನ

೧. ಶ್ರೀ ಮಾರ್ಕಂಡೇಯನು ಹೇಳುತ್ತಾನೆ.—ರಾಜೇಂದ್ರ! ಬಳಿಕ ಹಿಂದೆ ಶಂಕರನು ಹೇಳಿದ ಸಮಸ್ತತೀರ್ಥಗಳಲ್ಲಿ ಶ್ರೇಷ್ಠವಾದ ಬದರ್ಯಾಶ್ರಮಕ್ಕೆ ಹೋಗಬೇಕು.

೨. ಭಾರತಯುದ್ಧಕ್ಕಾಗಿ ಸಿದ್ಧಿಯನ್ನು ಪಡೆದ ನಿನ್ನ ಸಹೋದರನಾದ ಅರ್ಜುನನು ಅಲ್ಲಿ ನರದೇವತೆಯಾಗಿರುವನೆಂದು ಅರಿಯುವವನಾಗು.

೩. ನರನಾರಾಯಣರಿಬ್ಬರೂ ಈ ನರ್ಮದಾತಟಕ್ಕೆ ಬಂದಿರುವರು. ವಿಷ್ಣುವಿನಲ್ಲಿ ಅನನ್ಯಭಕ್ತಿಯುಳ್ಳವನಿಗೆ ಮಾತ್ರ ಜ್ಞಾನವುಂಟಾಗುವುದು.

೪. ಸಕಲಸ್ಥಾವರ ಜಂಗಮ ವಸ್ತುಗಳಲ್ಲಿಯೂ, ಬ್ರಾಹ್ಮಣಾಂತ್ಯಜರಲ್ಲಿಯೂ ಸಮಾನಜ್ಞಾನವುಳ್ಳವನಲ್ಲಿ ಜನಾರ್ದನನು ಸಂತುಷ್ಟನಾಗುವನು.

೫–೬. ನಾನು ನೀನು ಅಭಿನ್ನರಾಗಿದ್ದೇವೆ ಎಂದು ತಿಳಿ. ನರನಾರಾಯಣರು ಬದರಿಕಾಶ್ರಮವನ್ನು ರಚಿಸಿ ಅಲ್ಲಿ ಲೋಕಾನುಗ್ರಹಕ್ಕಾಗಿ ಶಂಕರನನ್ನು ಪ್ರತಿಷ್ಠೆಮಾಡಿರುವರು. ತ್ರಿಮೂರ್ತಿಗಳು ಸ್ಥಾಪಿಸಿದ ಆ ಲಿಂಗವು ಸ್ವರ್ಗಮೋಕ್ಷಗಳನ್ನು ಕೊಡುವುದು.

ತತ್ರ ಗತ್ವಾ ಶುಚಿರ್ಭೂತ್ವಾ ಹ್ಯೇಕರಾತ್ರೋಪವಾಸಕೃತ್ ।
ರಜಸ್ತಮಸ್ತಥಾ ತ್ಯಕ್ತ್ವಾ ಸಾತ್ವಿಕಂ ಭಾವಮಾಶ್ರಯೇತ್ ॥ ೭ ॥
ರಾತ್ರೌ ಜಾಗರಣಂ ಕೃತ್ವಾ ಮಧುಮಾಸಾಷ್ಟಮೀದಿನೇ ।
ಅಥವಾ ಚ ಚತುರ್ದಶ್ಯಾಮುಭೌ ಪಕ್ಷೌ ಚ ಕಾರಯೇತ್ ॥ ೮ ॥
ಆಶ್ವಿನಸ್ಯ ವಿಶೇಷೇಣ ಕಥಿತಂ ತವ ಪಾಂಡವ ।
ಸ್ನಾಪಯೇತ್ಪರಯಾ ಭಕ್ತ್ಯಾ ಕ್ಷೀರೇಣ ಮಧುನಾ ಸಹ ॥ ೯ ॥
ದಧ್ನಾ ಶರ್ಕರಯಾ ಯುಕ್ತಂ ಘೃತೇನ ಸಮಲಂಕೃತಂ ।
ಪಂಚಾಮೃತಮಿದಂ ಪುಣ್ಯಂ ಸ್ನಾಪಯೇದ್ವೃಷಭಧ್ವಜಂ ॥ ೧೦ ॥
ಸ್ನಾಪ್ಯಮಾನಂ ಶಿವಂ ಭಕ್ತ್ಯಾ ವೀಕ್ಷತೇ ಯೋ ವಿಮತ್ಸರಃ ।
ತಸ್ಯ ವಾಸಃ ಶಿವೋಪಾಂತೇ ಶಕ್ರಲೋಕೇ ನ ಸಂಶಯಃ ॥ ೧೧ ॥
ಶಾಠ್ಯೇನಾಽಪಿ ನಮಸ್ಕಾರಃ ಪ್ರಯುಕ್ತಃ ಶೂಲಪಾಣಿನೇ ।
ಸಂಸಾರಮೂಲಬದ್ಧಾನಾಮುದ್ವೇಷ್ಟನಕರೋ ಹಿ ಯಃ ॥ ೧೨ ॥
ತೇನಾಽಧೀತಂ ಶ್ರುತಂ ತೇನ ತೇನ ಸರ್ವಮನುಷ್ಠಿತಂ ।
ಯೇನೋನ್ನಮಃ ಶಿವಾಯೇತಿ ಮಂತ್ರಾಭ್ಯಾಸಃ ಸ್ಥಿರೀಕೃತಃ ॥ ೧೩ ॥
ಯಃ ಪುನಃ ಸ್ನಾಪಯೇದ್ಭಕ್ತ್ಯಾ ಏಕಭಕ್ತೋ ಜಿತೇಂದ್ರಿಯಃ ।
ತಸ್ಯಾಽಪಿ ಯತ್ಫಲಂ ಪಾರ್ಥ ವಕ್ಷ್ಯೇ ತಲ್ಲೇಶತಸ್ತವ ॥ ೧೪ ॥

---

೭. ಅಲ್ಲಿಗೆ ಹೋಗಿ ಶುದ್ಧನಾಗಿ ಹಗಲು ರಾತ್ರಿ ಉಪವಾಸಮಾಡುವವನು ರಜಸ್ತಮೋಭಾವಗಳನ್ನು ತ್ಯಜಿಸಿ ಸಾತ್ವಿಕಭಾವವನ್ನು ಆಶ್ರಯಿಸುವನು.

೮–೧೦. ವೈಶಾಖಮಾಸದ ಎರಡು ಪಕ್ಷಗಳ ಅಷ್ಟಮೀ ಅಥವಾ ಚತುರ್ದಶೀ ದಿನಗಳಲ್ಲಿಯೂ, ವಿಶೇಷವಾಗಿ ಆಶ್ವಿನಮಾಸದಲ್ಲಿಯೂ ರಾತ್ರಿ ಜಾಗರಣೆ ಮಾಡಿ ಅತಿಭಕ್ತಿಯಿಂದ ಕ್ಷೀರ, ಮಧು, ದಧಿ, ಸಕ್ಕರೆ, ಘೃತ ಇವುಗಳಿಂದ ಪಂಚಾಮೃತ ಸ್ನಾನಮಾಡಿಸಬೇಕು.

೧೧. ಅಭಿಷೇಕಮಾಡಲ್ಪಡುತ್ತಿರುವ ಶಿವನನ್ನು ಭಕ್ತಿಯಿಂದ ಮಾತ್ಸರ್ಯವಿಲ್ಲದೆ ನೋಡುವವನು ಇಂದ್ರಲೋಕದಲ್ಲಿ ಶಿವನ ಬಳಿ ವಾಸಮಾಡುವನು.

೧೨. ಶಿವನಿಗೆ ಶಾಠ್ಯದಿಂದಲಾದರೂ ಒಮ್ಮೆ ನಮಸ್ಕಾರಮಾಡಿದವನು ಸಂಸಾರಬಂಧನವನ್ನು ಬಿಡಿಸಿಕೊಳ್ಳುವನು.

೧೩. "ಓಂ ನಮಃ ಶಿವಾಯ" ಎಂಬ ಮಂತ್ರವನ್ನು ಜಪಿಸುವವನು ಅಧ್ಯಯನ, ಶಾಸ್ತ್ರಶ್ರವಣ ಮೊದಲಾದ ಎಲ್ಲವನ್ನೂ ಮಾಡಿದವನಂತಾಗುವನು

೧೪–೧೫. ಪ್ರತಿದಿನವೂ ಒಂದು ಭೋಜನವನ್ನು ಮಾತ್ರ ಮಾಡುತ್ತ ಶಿವನಿಗೆ ಅಭಿಷೇಕಮಾಡುವವನಿಗೆ ಲಭಿಸುವ ಫಲವನ್ನು ವೃದ್ಧನಾದ ನಾನ

ಪೀಡಿತೋ ವೃದ್ಧಭಾವೇನ ತವ ಭಕ್ತ್ಯಾ ವದಾಮ್ಯಹಂ ।
ತೇ ಯಾಂತಿ ಪರಮಂ ಸ್ಥಾನಂ ಭಿತ್ವಾ ಭಾಸ್ಕರಮಂಡಲಂ ॥ ೧೫ ॥
ಸಂಸಾರೇ ಸರ್ವಸೌಖ್ಯಾನಾಂ ನಿಲಯಾಸ್ತೇ ಭವಂತಿ ಚ ।
ಆಶ್ರಯಂ ಜ್ಞಾತಿವರ್ಗಾಣಾಂ ಧರ್ಮಾಣಾಂ ನಿಲಯಾಸ್ತು ತೇ ॥ ೧೬ ॥
ಸಂಪನ್ನಾಃ ಸರ್ವ ಕಾಮ್ಯೈಸ್ತೇ ಪೃಥಿವ್ಯಾಂ ಪೃಥಿವೀಪತೇ ।
ಶ್ರಾದ್ಧಂ ತತ್ರೈವ ಯಃ ಕುರ್ಯಾನ್ನರ್ಮದೋದಕಮಿಶ್ರಿತಂ ॥ ೧೭ ॥
ಯೋಗ್ಯೈಶ್ಚ ಬ್ರಾಹ್ಮಣೈ ರಾಜನ್ಕುಲೀನೈರ್ವೇದಪಾರಗೈಃ ।
ಸುರೂಪೈಶ್ಚ ಸುಶೀಲೈಶ್ಚ ಸ್ವದಾರನಿರತೈಃ ಶುಭೈಃ ॥ ೧೮ ॥
ಆರ್ಯದೇಶಪ್ರಸೂತೈಶ್ಚ ಶ್ಲಕ್ಷ್ಣೈಶ್ಚೈವ ಸುರೂಪಿಭಿಃ ।
ಕಾರಯೇತ್ಪಿಂಡದಾನಂ ವೈ ಭಾಸ್ಕರೇ ಕುತಪಸ್ಥಿತೇ ॥ ೧೯ ॥
ಪಿತೄಣಾಂ ಪರಮಂ ಲೋಕಂ ಯದೀಚ್ಛೇದ್ಧರ್ಮನಂದನ ।
ವರ್ಜಯೇತ್ತಾನ್ ಪ್ರಯತ್ನೇನ ಕಾಣಾನ್ ದುಷ್ಟಾಂಶ್ಚ ದಾಂಭಿಕಾನ್ ॥
ಪುರುಷಾನ್ ಕ್ರೂರಷಂಡಾಂಶ್ಚ ಬ್ರಾಹ್ಮಣಾನಾಂ ಚ ನಿಂದಕಾನ್ ।
ಏತಾಂಶ್ಚ ವರ್ಜಯೇದ್ವಿಪ್ರಾನ್ಯದೀಚ್ಛೇಚ್ಛ್ರೇಯ ಆತ್ಮನಃ ॥ ೨೦ ॥
ತಸ್ಮಾತ್ಸರ್ವಪ್ರಯತ್ನೇನ ಯೋಗ್ಯಂ ವಿಪ್ರಂ ಸಮಾಶ್ರಯೇತ್ ।
ನರಕಾನ್ಮೋಚಯೇತ್ಪ್ರೇತಾನ್ಕುಂಭೀಪಾಕಪುರೋಗಮಾನ್ ॥ ೨೧ ॥

---

ನಿನ್ನ ಭಕ್ತಿಗೆಮೆಚ್ಚಿ ಸ್ವಲ್ಪವಾಗಿ ನಿನಗೆ ಹೇಳುವೆನು. ಅವರು ಸೂರ್ಯಮಂಡಲವನ್ನು ಭೇದಿಸಿ ಉತ್ತಮಸ್ಥಾನಕ್ಕೆ ತೆರಳುವರು.

೧೬-೨೦. ಸಂಸಾರದಲ್ಲಿ ಸಮಸ್ತ ಸೌಖ್ಯಗಳಿಗೆ ಆಶ್ರಯರೂ, ಬಂಧುಸಮೂಹಕ್ಕೂ ಧರ್ಮಕ್ಕೂ ಆಶ್ರಯರೂ, ಸಕಲೇಷ್ಟಾರ್ಥಗಳಿಂದ ಕೂಡಿದವರೂ ಆಗುವರು. ಪಿತೃಗಳಿಗೆ ಉತ್ತಮಲೋಕವನ್ನು ದೊರಕಿಸಬಯಸುವವರು ಅಲ್ಲಿ ಯೋಗ್ಯರೂ, ಕುಲೀನರೂ, ವೇದಪಾರಂಗತರೂ, ಸುಂದರರೂ, ಸುಶೀಲರೂ, ಸ್ವಪತ್ನಿಯಲ್ಲಿ ಆಸಕ್ತರೂ, ಆರ್ಯದೇಶದಲ್ಲಿ ಜನಿಸಿದವರೂ, ಸಾಧುಗಳೂ, ಆದ ಬ್ರಾಹ್ಮಣರಿಂದ ಕುತಪಕಾಲದಲ್ಲಿ ನರ್ಮದಾ ಜಲದಿಂದ ಶ್ರಾದ್ಧಮಾಡಿ ಪಿಂಡ ಪ್ರದಾನಮಾಡಬೇಕು. ಆತ್ಮಶ್ರೇಯಸ್ಸನ್ನು ಬಯಸುವವನು ಶ್ರಾದ್ಧದಲ್ಲಿ ಕುರುಡರೂ, ದುಷ್ಟರೂ, ದಾಂಭಿಕರೂ, ಕ್ರೂರರೂ, ನಪುಂಸಕರೂ, ಬ್ರಾಹ್ಮಣರನ್ನೇ ನಿಂದಿಸುವವರೂ ಆದ ಬ್ರಾಹ್ಮಣರನ್ನು ತ್ಯಜಿಸಬೇಕು.

೨೧. ಆದ್ದರಿಂದ ಪ್ರಯತ್ನಿಸಿ ಯೋಗ್ಯನಾದ ಬ್ರಾಹ್ಮಣನನ್ನು ಆಶ್ರಯಿಸಬೇಕು. ಪಿತೃಗಳನ್ನು ಕುಂಭೀಪಾಕ ಮೊದಲಾದ ನರಕಗಳಿಂದ ಬಿಡಿಸಬೇಕು.

**ಮೋಕ್ಷೋ ಭವತಿ ಸರ್ವೇಷಾಂ ಪಿತೄಣಾಂ ನೃಪನಂದನ ।**
**ವಿಪ್ರೇಭ್ಯಃ ಕಾಂಚನಂ ದದ್ಯಾತ್ಪ್ರೀಯತಾಂ ಮೇ ಪಿತಾಮಹಃ ॥ ೨೩ ॥**
**ಅನ್ನಂ ಚ ದಾಪಯೇತ್ತತ್ರ ಭಕ್ತ್ಯಾ ವಸ್ತ್ರಂ ಚ ಭಾರತ ।**
**ಗಾಂ ವೃಷಂ ಮೇದಿನೀಂ ದದ್ಯಾಚ್ಛತ್ರಂ ಶಸ್ತಂ ನೃಪೋತ್ತಮ ॥ ೨೪ ॥**
**ಸ ಪುಮಾನ್ ಸ್ವರ್ಗಮಾಪ್ನೋತಿ ಇತ್ಯೇವಂ ಶಂಕರೋಽಬ್ರವೀತ್ ।**
**ಪ್ರಾಣತ್ಯಾಗಂ ತು ಯಃ ಕುರ್ಯಾಚ್ಛಿಖಿನಾ ಸಲಿಲೇನ ವಾ ॥ ೨೫ ॥**
**ಅನಾಶಕೇನ ವಾ ಭೂಯಃ ಸ ಗಚ್ಛೇಚ್ಛಿವಮಂದಿರಂ ।**
**ನರನಾರಾಯಣೀತೀರೇ ದೇವದ್ರೋಣ್ಯಾಂ ಚ ಯೋ ನೃಪ ॥ ೨೬ ॥**
**ಸ ವಸೇದೀಶ್ವರಸ್ಯಾಗ್ರೇ ಯಾವದಿಂದ್ರಾಶ್ಚತುರ್ದಶ ।**
**ಪುನಃ ಸ್ವರ್ಗಾಚ್ಚ್ಯುತಃ ಸೋಽಪಿ ರಾಜಾ ಭವತಿ ವೀರ್ಯವಾನ್ ॥ ೨೭ ॥**
**ಸರ್ವೈಶ್ವರ್ಯಗುಣೈರ್ಯುಕ್ತಃ ಪ್ರಜಾಪಾಲನತತ್ಪರಃ ।**
**ತತಃ ಸ್ಮರತಿ ತತ್ತೀರ್ಥಂ ಪುನರೇವಾಗಮಿಷ್ಯತಿ ॥ ೨೮ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ**
**ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ**
**"ನರನಾರಾಯಣತೀರ್ಥಮಾಹಾತ್ಮ್ಯವರ್ಣನಂ"**
**ನಾಮ ಪಂಚನವತಿತಮೋಽಧ್ಯಾಯಃ**

---

೨೩. ರಾಜಪುತ್ರ! ಇದರಿಂದ ಸಮಸ್ತ ಪಿತೃಗಳಿಗೂ ಮೋಕ್ಷವು ದೊರಕುವುದು. 'ನನ್ನ ಪಿತಾಮಹನು ಪ್ರೀತನಾಗಲಿ' ಎಂದು ಬ್ರಾಹ್ಮಣರಿಗೆ ಅಲ್ಲಿ ಸುವರ್ಣವನ್ನು ದಾನಮಾಡಬೇಕು.

೨೪–೨೬. ಅಲ್ಲಿ ಅನ್ನ, ವಸ್ತ್ರ, ಗೋವು, ಎತ್ತು, ಭೂಮಿ, ಉತ್ತಮವಾದ ಕೊಡೆ ಇವುಗಳನ್ನು ದಾನಮಾಡಿದವನು ಸ್ವರ್ಗವನ್ನು ಸೇರುವನೆಂದು ಶಂಕರನು ಹೇಳಿರುವನು. ನರನಾರಾಯಣೀನದಿಯ ತೀರದಲ್ಲಿಯೂ, ದೇವದ್ರೋಣಿಯಲ್ಲಿಯೂ ಅಗ್ನಿ, ನೀರು, ಅಥವಾ ಉಪವಾಸ ಇವುಗಳಿಂದ ಪ್ರಾಣವನ್ನು ತ್ಯಜಿಸಿದವನು ಶಿವಮಂದಿರವನ್ನು ಸೇರುವನು.

೨೭–೨೮. ಅಲ್ಲಿ ಈಶ್ವರನ ಮುಂದೆ ಹದಿನಾಲ್ಕು ಇಂದ್ರರಕಾಲದವರೆಗೆ ವಾಸಿಸಿ ಮರಳಿ ಸ್ವರ್ಗದಿಂದ ಭ್ರಷ್ಟನಾಗಿ ವೀರ್ಯವಂತನೂ, ಸಮಸ್ತೈಶ್ವರ್ಯಗುಣಗಳಿಂದ ಕೂಡಿದವನೂ, ಪ್ರಜಾಪಾಲನದಲ್ಲಿ ನಿರತನೂ ಆದ ರಾಜನಾಗಿ ಜನಿಸುವನು. ಬಳಿಕ ಆ ತೀರ್ಥವನ್ನು ಸ್ಮರಿಸಿ ಮರಳಿ ಅಲ್ಲಿಗೇ ಬರುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ನರನಾರಾಯಣೀತೀರ್ಥಮಹಾತ್ಮ್ಯವರ್ಣನ"ವೆಂಬ
ತೊಂಬತ್ತೈದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಷಣ್ಣವತಿತಮೋಽಧ್ಯಾಯಃ

### ಕೋಟೀಶ್ವರ ತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

**ತತೋ ಗಚ್ಛೇತ್ತು ರಾಜೇಂದ್ರ ತೀರ್ಥಂ ಕೋಟೀಶ್ವರಂ ಪರಂ ।**
**ಋಷಿಕೋಟಿಃ ಸಮಾಯಾತಾ ಯತ್ರ ವೈ ಕುರುನಂದನ ॥ ೧ ॥**
**ಕೃಷ್ಣದ್ವೈಪಾಯನಸ್ಯೈವ ಕ್ಷೇಮಾರ್ಥಂ ಮುನಿಪುಂಗವಾಃ ।**
**ಮಂತ್ರಯಿತ್ವಾ ದ್ವಿಜೈಃ ಸರ್ವೈರ್ವೇದಮಂಗಲಪಾಠಕೈಃ ॥ ೨ ॥**
**ಸ್ಥಾಪಿತಃ ಶಂಕರಸ್ತತ್ರ ಕಾರಣಂ ಬಂಧನಾಶನಂ ।**
**ಸಂಸಾರಚ್ಛೇದಕರಣಂ ಪ್ರಾಣಿನಾಮಾರ್ತಿನಾಶನಂ ॥ ೩ ॥**
**ಕೋಟೀಶ್ವರಮಿತಿ ಪ್ರೋಕ್ತಂ ಪೃಥಿವ್ಯಾಂ ನೃಪನಂದನ ।**
**ಸ್ನಾಪಯೇತ್ತಂ ತು ಯೋ ಭಕ್ತ್ಯಾ ಪೂರ್ಣಿಮಾಯಾಂ ನೃಪೋತ್ತಮ॥ ೪ ॥**
**ಪಿತೄಣಾಂ ತರ್ಪಣಂ ಕೃತ್ವಾ ಪಿಂಡದಾನಂ ಯಥಾವಿಧಿ ।**
**ಶ್ರಾವಣಸ್ಯ ವಿಶೇಷೇಣ ಪೂರ್ಣಿಮಾಯಾಂ ಯುಧಿಷ್ಠಿರ ॥ ೫ ॥**

---

### ಕನ್ನಡದ ಅನುವಾದ

#### ಕೋಟೀಶ್ವರತೀರ್ಥಮಾಹಾತ್ಮ್ಯವರ್ಣನ

೧–೩. ಶ್ರೀ ಮಾರ್ಕಂಡೇಯನು ಹೇಳುತ್ತಾನೆ.—ದೊರೆಯೆ! ಬಳಿಕ ಕೋಟೀಶ್ವರತೀರ್ಥಕ್ಕೆ ಹೋಗಬೇಕು. ಇಲ್ಲಿ ವೇದವ್ಯಾಸನ ಕ್ಷೇಮಕ್ಕಾಗಿ ಕೋಟಿಮಂದಿ ಮುನಿಗಳು ಬಂದರು. ವೇದಮಂತ್ರಗಳನ್ನು ಪಠಿಸುವ ಆ ದ್ವಿಜರೆಲ್ಲರೂ ಆಲೋಚಿಸಿ ಬಂಧವನ್ನು ಪರಿಹರಿಸುವವನೂ, ಸಂಸಾರವನ್ನು ನಿವಾರಿಸುವವನೂ, ಪ್ರಾಣಿಗಳ ದುಃಖವನ್ನು ನಾಶಗೊಳಿಸುವವನೂ ಆದ ಶಂಕರನನ್ನು ಅಲ್ಲಿ ಪ್ರತಿಷ್ಠೆಮಾಡಿದರು.

೪–೫. ಭೂಮಿಯಲ್ಲಿ ಕೋಟೀಶ್ವರನೆಂದು ಪ್ರಖ್ಯಾತನಾದ ಆ ಶಿವನನ್ನು ಹುಣ್ಣಿಮೆಯದಿನ, ವಿಶೇಷವಾಗಿ ಶ್ರಾವಣಮಾಸದ ಹುಣ್ಣಿಮೆಯದಿನ ಅಭಿಷೇಕ ಮಾಡಿ ಪಿತೃಗಳಿಗೆ ತರ್ಪಣವನ್ನೂ, ಪಿಂಡಪ್ರದಾನವನ್ನೂ ವಿಧಿಯಂತೆ ಮಾಡಿದರೆ ಪ್ರಳಯಕಾಲದವರೆಗೆ ಅವರಿಗೆ ಶಾಶ್ವತತೃಪ್ತಿಯುಂಟಾಗುವುದು. ಮುನಿ

ಪಿತೄಣಾಮಕ್ಷಯಾ ತೃಪ್ತಿರ್ಯಾವದಾಭೂತಸಂಪ್ಲವಂ ।
ಪಿತೄಣಾಂ ಪರಮಂ ಗುಹ್ಯಂ ರೇವಾತಟಸಮಾಶ್ರಿತಂ ।
ಮೋಕ್ಷದಂ ಸರ್ವಜಂತೂನಾಂ ನಿರ್ಮಿತಂ ಮುನಿಸತ್ತಮೈಃ ॥ ೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ಕೋಟೀಶ್ವರತೀರ್ಥಮಾಹಾತ್ಮ್ಯವರ್ಣನಂ"
ನಾಮ ಷಣ್ಣವತಿತಮೋಽಧ್ಯಾಯಃ

---

ವರ್ಯರು ರೇವಾತಟದಲ್ಲಿ ಪಿತೃಗಳಿಗೆ ಅತಿಗುಹ್ಯವೂ, ಸಕಲ ಜಂತುಗಳಿಗೆ ಮೋಕ್ಷವನ್ನೀಯುವುದೂ ಆದ ಕೋಟೀಶ್ವರತೀರ್ಥವನ್ನು ನಿರ್ಮಿಸಿರುವರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಕೋಟೀಶ್ವರತೀರ್ಥಮಾಹಾತ್ಮ್ಯವರ್ಣನ"ವೆಂಬ
ತೊಂಬತ್ತಾರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಸಪ್ತನವತಿತಮೋಽಧ್ಯಾಯಃ

### ವ್ಯಾಸತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ತತೋ ಗಚ್ಛೇನ್ಮಹೀಪಾಲ ವ್ಯಾಸತೀರ್ಥಮನುತ್ತಮಂ ।
ದುರ್ಲಭಂ ಮನುಜೈಃ ಪುಣ್ಯಮಂತರಿಕ್ಷೇ ವ್ಯವಸ್ಥಿತಂ ॥ ೧ ॥

ಯುಧಿಷ್ಠಿರ ಉವಾಚ :—

ಕಸ್ಮಾದ್ವೈ ವ್ಯಾಸತೀರ್ಥಂ ತದಂತರಿಕ್ಷೇ ವ್ಯವಸ್ಥಿತಂ ।
ಏತದಾಖ್ಯಾಹಿ ಸಂಕ್ಷೇಪಾತ್ತ್ಯಜ ಗ್ರಂಥಸ್ಯ ವಿಸ್ತರಂ ॥ ೨ ॥

ಶ್ರೀ ಮಾರ್ಕಂಡೇಯ ಉವಾಚ :—

ಸಾಧು ಸಾಧು ಮಹಾಬಾಹೋ ಧರ್ಮವಾನ್ ಸಾಧುವತ್ಸಲ ।
ಸ್ವಕರ್ಮನಿರತಃ ಪಾರ್ಥ ತೀರ್ಥಯಾತ್ರಾಕೃತಾದರಃ ॥ ೩ ॥
ದುರ್ಲಭಂ ಸರ್ವಜಂತೂನಾಂ ವ್ಯಾಸತೀರ್ಥಂ ನರೇಶ್ವರ ।
ಪೀಡಿತೋ ವೃದ್ಧಭಾವೇನ ಅಕಲ್ಪೋಽಹಂ ನೃಪಾತ್ಮಜ ॥ ೪ ॥
ವಿಸಂಜ್ಞೋ ಗತವಿತ್ತಸ್ತು ಸಂಜಾತಃ ಸ್ಮೃತಿವರ್ಜಿತಃ ।
ಗುಹ್ಯಾದ್ಗುಹ್ಯತರಂ ತೀರ್ಥಂ ನಾಖ್ಯಾತಂ ಕಸ್ಯಚಿನ್ಮಯಾ ॥ ೫ ॥

---

### ಕನ್ನಡದ ಅನುವಾದ

#### ವ್ಯಾಸತೀರ್ಥಮಾಹಾತ್ಮ್ಯವರ್ಣನ

೧. ಶ್ರೀ ಮಾರ್ಕಂಡೇಯನು ಹೇಳುತ್ತಾನೆ —ಯುಧಿಷ್ಠಿರ! ಬಳಿಕ ಪುಣ್ಯಕರವೂ, ಮಾನವರಿಗೆ ದುರ್ಲಭವೂ ಆಗಿ ಆಕಾಶದಲ್ಲಿ ನೆಲಸಿರುವ ಉತ್ತಮವಾದ ವ್ಯಾಸತೀರ್ಥಕ್ಕೆ ಹೋಗಬೇಕು.

೨. ಯುಧಿಷ್ಠಿರನು ಹೇಳುತ್ತಾನೆ·—ವ್ಯಾಸತೀರ್ಥವು ಆಕಾಶದಲ್ಲಿ ಏತಕ್ಕೆ ಸ್ಥಾಪಿತವಾಯಿತು ಎಂಬುದನ್ನು ಗ್ರಂಥವಿಸ್ತರವಿಲ್ಲದೆ ಸಂಕ್ಷೇಪವಾಗಿ ತಿಳಿಯ ಹೇಳುವವನಾಗು.

೩. ಶ್ರೀ ಮಾರ್ಕಂಡೇಯನು ಹೇಳುತ್ತಾನೆ.—ಮಹಾಬಾಹುವೂ, ಧರ್ಮಿಷ್ಠನೂ, ಸಾಧುಪ್ರಿಯನೂ, ಸ್ವಕರ್ಮನಿರತನೂ, ತೀರ್ಥಯಾತ್ರೆಯನ್ನು ಮಾಡುವುದರಲ್ಲಿ ಪ್ರೀತಿಯುಳ್ಳವನೂ ಆದ ಎಲೈ ಧರ್ಮರಾಜನೆ! ಒಳ್ಳೆಯದು.

೪. ಸಕಲ ಜಂತುಗಳಿಗೆ ದುರ್ಲಭವಾದ ವ್ಯಾಸತೀರ್ಥವನ್ನು ವರ್ಣಿಸುವುದಕ್ಕೆ ವೃದ್ಧನಾದ ನಾನು ಸಮರ್ಥನಲ್ಲ.

೫. ಜ್ಞಾನವಿಲ್ಲದವನೂ, ವಿತ್ತರಹಿತನೂ, ಜ್ಞಾಪಕಶಕ್ತಿಯಿಲ್ಲದವನೂ ಆಗಿರುವ ನಾನು ಯಾರಿಗೂ ಈ ಗುಹ್ಯತಮವಾದ ತೀರ್ಥವನ್ನು ಹೇಳಲಿಲ್ಲ.

ಕಲಿಸ್ತತ್ರೈವ ರಾಜೇಂದ್ರ ನವಿಶೇದ್ವ್ಯಾಸಸಂಶ್ರಯಾತ್ ।
ಅಂತರಿಕ್ಷೇತು ಸಂಜಾತಂ ರೇವಾಯಾಶ್ಚೇಷ್ಟಿತೇನ ತು ॥ ೬ ॥
ವಿರಿಂಚಿರ್ನೈವ ಶಕ್ನೋತಿ ರೇವಾಯಾ ಗುಣಕೀರ್ತನಂ ।
ಕಥಂ ಜ್ಞಾಸ್ಯಾಮ್ಯಹಂ ತಾತ ರೇವಾಮಾಹಾತ್ಮ್ಯಮುತ್ತಮಂ ॥ ೭ ॥
ವ್ಯಾಸತೀರ್ಥಂ ವಿಶೇಷೇಣ ಲವಮಾತ್ರಂ ಬ್ರವೀಮ್ಯತಃ ।
ಪ್ರತ್ಯಕ್ಷಃ ಪ್ರತ್ಯಯೋ ಯತ್ರ ದೃಶ್ಯತೇಽದ್ಯ ಕಲೌ ಯುಗೇ ॥ ೮ ॥
ವಿಹಂಗೋ ಗಚ್ಛತೇ ನೈವ ಭಿತ್ವಾ ಶೂಲಂ ಸುದಾರುಣಂ ।
ತಸ್ಯೋತ್ಪತ್ತಿಂ ಸಮಾಸೇನ ಕಥಯಾಮಿ ನೃಪಾತ್ಮಜ ॥ ೯ ॥
ಆಸೀತ್ಪೂರ್ವಂ ಮಹೀಪಾಲ ಮುನಿರ್ಮಾನ್ಯಃ ಪರಾಶರಃ ।
ತೇನಾತ್ಯುಗ್ರಂ ತಪಶ್ಚೀರ್ಣಂ ಗಂಗಾಂಭಸಿ ಮಹಾಫಲಂ ॥ ೧೦ ॥
ಪ್ರಾಣಾಯಾಮೇನ ಸಂತಸ್ಥೌ ಪ್ರವಿಷ್ಟೋ ಜಾಹ್ನವೀತಲೇ ।
ಪೂರ್ಣೇ ದ್ವಾದಶಮೇ ವರ್ಷೇ ನಿಷ್ಕ್ರಾಂತೋ ಜಲಮಧ್ಯತಃ ॥ ೧೧ ॥
ಭಿಕ್ಷಾರ್ಥೀ ಸಂಚರೇದ್ಗ್ರಾಮಂ ನಾವೋ ಯತ್ರೈವ ತಿಷ್ಠತಿ ।
ತತ್ರ ತೇನ ಪರಾ ದೃಷ್ಟಾ ಬಾಲಾ ಚೈವ ಮನೋಹರಾ ॥ ೧೨ ॥
ತಾಂ ದೃಷ್ಟ್ವಾ ಸ ಚ ಕಾಮಾರ್ತ ಉವಾಚ ಮಧುರಂ ತದಾ ।
ಮಾಂ ನಯಸ್ವ ಪರಂ ಪಾರಂ ಕಾಽಸಿ ತ್ವಂ ಮೃಗಲೋಚನೇ ॥ ೧೩ ॥

೬. ಅಲ್ಲಿ ವ್ಯಾಸನು ನೆಲಸಿರುವುದರಿಂದ ಕಲಿಯು ಪ್ರವೇಶಮಾಡುವುದಿಲ್ಲ. ರೇವೆಯ ಮಹಿಮೆಯಿಂದ ಆ ತೀರ್ಥವು ಆಕಾಶದಲ್ಲಿ ಉಂಟಾಗಿರುವುದು.

೭. ನರ್ಮದಾನದಿಯ ಗುಣಗಳನ್ನು ಹೇಳುವುದಕ್ಕೆ ಬ್ರಹ್ಮನೇ ಸಮರ್ಥನಾಗಲಿಲ್ಲ. ನಾನು ಹೇಗೆತಾನೆ ತಿಳಿಯುವೆನು ?

೮. ವ್ಯಾಸತೀರ್ಥವನ್ನು ಅತ್ಯಲ್ಪವಾಗಿ ವರ್ಣಿಸುವೆನು. ಅಲ್ಲಿ ಈ ಕಲಿಯುಗದಲ್ಲಿಯೂ ಪ್ರತ್ಯಕ್ಷವಾದ ಒಂದು ನಂಬಿಕೆಯು ಕಾಣುವುದು

೯. ಯಾವ ಪಕ್ಷಿಯೂ ಅಲ್ಲಿರುವ ದಾರುಣವಾದ ಶೂಲವನ್ನು ಅತಿಕ್ರಮಿಸಿ ಹೋಗುವುದಿಲ್ಲ ನರೇಂದ್ರ ! ಅದರ ಉತ್ಪತ್ತಿಯನ್ನು ಸಂಕ್ಷೇಪವಾಗಿ ಹೇಳುತ್ತೇನೆ.

೧೦. ಮಹಾರಾಜ ! ಹಿಂದೆ ಪೂಜ್ಯನಾದ ಪರಾಶರನೆಂಬ ಮುನಿವರ್ಯನಿದ್ದನು. ಅವನು ಗಂಗಾಜಲದಲ್ಲಿ ಅತಿಕಠಿನವಾದ ತಪವನ್ನು ಮಾಡಿದನು.

೧೧. ಅವನು ಗಂಗೆಯ ನೀರಿನೊಳಗೆ ಪ್ರಾಣಯಾಮಗೈಯುತ್ತ ಹನ್ನೆರಡನೆಯ ವರ್ಷದಲ್ಲಿ ಮೇಲಕ್ಕೆ ಬಂದನು.

೧೨. ಅವನು ಭಿಕ್ಷೆಗಾಗಿ ಗ್ರಾಮದಲ್ಲಿ ಸಂಚರಿಸುತ್ತ ಒಂದು ದೋಣಿಯನ್ನೂ, ಅದರಲ್ಲಿ ಓರ್ವ ಸುಂದರಿಯಾದ ಬಾಲೆಯನ್ನೂ ಕಂಡನು.

೧೩–೧೫. ಕಾಮಪೀಡಿತನಾದ ಆ ಮುನಿಯು ನದೀತೀರದಲ್ಲಿ ನಾವೆಯನ್ನು

ನಾವಾರೂಢೇ ನದೀತೀರೇ ಮಮ ಚಿತ್ತಪ್ರಮಾಥಿನಿ ।
ಏವಮುಕ್ತ್ವಾ ತು ಸಾ ತೇನ ಪ್ರಣಮ್ಯ ಋಷಿಪುಂಗವಂ ॥ ೧೪ ॥
ಕಥಯಾಮಾಸ ಚಾತ್ಮಾನಂ ದೃಷ್ಟ್ವಾ ತಂ ಕಾಮಮೋಹಿತಂ ।
ಕೈವರ್ತಾನಾಂ ಗೃಹೇ ದಾಸೀ ಕನ್ಯಾಽಹಂ ದ್ವಿಜಸತ್ತಮ ॥ ೧೫ ॥
ನಾವಾಸಂರಕ್ಷಣಾರ್ಥಾಯ ಆದಿಷ್ಟಾ ಸ್ವಾಮಿನಾ ವಿಭೋ ।
ಮಯಾ ವಿಜ್ಞಾಪಿತಂ ವೃತ್ತಮಶೇಷಂ ಜ್ಞಾತುಮರ್ಹಸಿ ॥ ೧೬ ॥
ಏವಮುಕ್ತಸ್ತಯಾ ಸೋಽಥ ಕ್ಷಣಂ ಧ್ಯಾತ್ವಾಽಬ್ರವೀದಿದಂ ॥ ೧೭ ॥

ಪರಾಶರ ಉವಾಚ :—

ಅಹಂ ಜ್ಞಾನಬಲಾದ್ಭದ್ರೇ ತವ ಜಾನಾಮಿ ಸಂಭವಂ ।
ಕೈವರ್ತಪುತ್ರಿಕಾ ನತ್ವಂ ರಾಜಕನ್ಯಾಽಸಿ ಸುಂದರಿ ॥ ೧೮ ॥

ಕನ್ಯೋವಾಚ :—

ಕಃ ಪಿತಾ ಕಥ್ಯತಾಂ ಬ್ರಹ್ಮನ್ಕಸ್ಯಾವಾಹ್ಯುದರೋದ್ಭವಾ ।
ಕಸ್ಮಿನ್ವಂಶೇ ಪ್ರಸೂತಾಽಹಂ ಕೈವರ್ತತನಯಾ ಕಥಂ ॥ ೧೯ ॥

---

ಹತ್ತಲು ನನ್ನ ಮನಸ್ಸನ್ನು ಚಂಚಲಗೊಳಿಸುವ ಎಲೆ ಮೃಗಾಕ್ಷಿಯೆ ! ನೀನಾರು ? ನನ್ನನ್ನು ನದಿಯಿಂದ ದಾಟಿಸು " ಎಂದು ಇಂಪಾಗಿ ಮಾತಾಡಿದನು. ಅವನು ಹಾಗೆ ಹೇಳಲು ಆ ಕನ್ಯೆಯು ಆತನನ್ನು ವಂದಿಸಿ ಅವನು ಕಾಮಪೀಡಿತನಾಗಿರುವುದನ್ನು ನೋಡಿ ತನ್ನ ಸಮಾಚಾರವನ್ನು ಹೀಗೆ ಹೇಳಿದಳು. "ದ್ವಿಜವರ್ಯ ! ಕನ್ಯೆಯಾದ ನಾನು ಬೆಸ್ತರ ಮನೆಯ ದಾಸಿಯು.

೧೬. ನನ್ನ ಸ್ವಾಮಿಯು ನನಗೆ ಈ ನಾವೆಯನ್ನು ಕಾದುಕೊಂಡಿರು ಎಂದು ಆಜ್ಞೆಮಾಡಿದ್ದಾನೆ. ನಾನು ಬಿನ್ನೈಸಿದ ಸಮಾಚಾರವನ್ನೆಲ್ಲ ನೀನು ತಿಳಿಯಲರ್ಹನಾಗಿರುವೆ.

೧೭. ಅವಳು ಹೀಗೆನ್ನಲು ಮುನಿಯು ಸ್ವಲ್ಪ ಹೊತ್ತು ಚಿಂತಿಸಿ ಹೀಗೆಂದನು.

೧೮. ಪರಾಶರನು ಹೇಳುತ್ತಾನೆ.—ಸುಂದರಿ ! ನಾನು ಜ್ಞಾನಬಲದಿಂದ ನಿನ್ನ ಉತ್ಪತ್ತಿಯನ್ನು ಅರಿತೆನು. ನೀನು ಬೆಸ್ತನ ಮಗಳಲ್ಲ. ರಾಜಕನ್ಯೆಯಾಗಿರುವೆ.

೧೯. ಕನ್ಯೆಯು ಹೇಳುತ್ತಾಳೆ —ಮುನಿಯೆ ! ನನ್ನ ತಂದೆ ಯಾರು ? ತಾಯಿ ಯಾರು ? ಯಾವ ವಂಶದಲ್ಲಿ ಜನಿಸಿರುವೆನು ? ಬೆಸ್ತನ ಮಗಳು ಹೇಗಾದೆನು ? ಹೇಳು.

ಪರಾಶರ ಉವಾಚ :—

ಕಥಯಾಮಿ ಸಮಸ್ತಂ ಯತ್ತ್ವಯಾ ಪೃಷ್ಟಮಶೇಷತಃ ।
ವಸುರ್ನಾಮೇತಿ ಭೂಪಾಲಃ ಸೋಮವಂಶವಿಭೂಷಣಃ ॥ ೨೦ ॥
ಜಂಬೂದ್ವೀಪಾಧಿಪೋ ಭದ್ರೇ ಶತ್ರೂಣಾಂ ಭಯವರ್ಧನಃ ।
ಶತಾನಿ ಸಪ್ತ ಭಾರ್ಯಾಣಾಂ ಪುತ್ರಾಣಾಂ ಚ ದಶೈವ ತು ॥ ೨೧ ॥
ಧರ್ಮೇಣ ಪಾಲಯೇಲ್ಲೋಕಾನೀಶವತ್ಪೂಜ್ಯತೇ ಸದಾ ।
ಮ್ಲೇಚ್ಛಾಸ್ತಸ್ಯಾವಿಧೇಯಾಶ್ಚ ಕ್ಷೀರದ್ವೀಪನಿವಾಸಿನಃ ॥ ೨೨ ॥
ತೇಷಾಮುತ್ಸಾದನಾರ್ಥಾಯ ಯಯಾವುಲ್ಲಂಘ್ಯ ಸಾಗರಂ ।
ಸಂಯುಕ್ತಃ ಪುತ್ರಭೃತ್ಯೈಶ್ಚ ಪೌರುಷೇ ಮಹತಿ ಸ್ಥಿತೈಃ ॥ ೨೩ ॥
ಸಮರಂ ತೈಃ ಸಮಾರಬ್ಧಂ ಮ್ಲೇಚ್ಛೈಶ್ಚ ವಸುನಾ ಸಹ ।
ಜಿತಾ ಮ್ಲೇಚ್ಛಾಃ ಸಮಸ್ತಾಸ್ತೇ ವಸುನಾ ಮೃಗಲೋಚನೇ ॥ ೨೪ ॥
ಕರದಾಸ್ತೇ ಕೃತಾಸ್ತೇನ ಸಪುತ್ರಬಲವಾಹನಾಃ ।
ಪ್ರಧಾನಾ ತಸ್ಯ ಸಾ ರಾಜ್ಞೀ ಸತ್ಯಭಾಮಾ ಮೃಗೇಕ್ಷಣೇ ॥ ೨೫ ॥
ಪ್ರವಾಸಸ್ಥೇ ಮಹೀಪಾಲೇ ಸಂಜಾತಾ ಸಾ ರಜಸ್ವಲಾ ।
ನಾರೀಣಾಂ ತು ಸದಾಕಾಲಂ ಮನ್ಮಥೋ ಹ್ಯಧಿಕೋ ಭವೇತ್ ॥ ೨೬ ॥

---

೨೦-೨೨. ಪರಾಶರನು ಹೇಳುತ್ತಾನೆ —ಎಲೈ ಕನ್ಯೆಯೆ ! ನೀನು ಕೇಳಿದ್ದನ್ನೆಲ್ಲ ಹೇಳುವೆನು. ಚಂದ್ರವಂಶಕ್ಕೆ ಅಲಂಕಾರಭೂತನೂ, ಜಂಬೂದ್ವೀಪದರಸೂ, ಶತ್ರುಗಳಿಗೆ ಭಯಜನಕನೂ ಆದ ವಸುವೆಂಬ ರಾಜನು ಏಳನೂರು ಮಂದಿ ಪತ್ನಿಯರು, ಸಾವಿರ ಮಂದಿ ಪುತ್ರರೊಡನೆ ರಾಜ್ಯವನ್ನಾಳುತ್ತಿದ್ದನು. ಅವನನ್ನು ಎಲ್ಲರೂ ಈಶ್ವರನಂತೆ ಪೂಜಿಸುತ್ತಿದ್ದರು. ಕ್ಷೀರದ್ವೀಪವಾಸಿಗಳಾದ ಮ್ಲೇಚ್ಛರು ಮಾತ್ರ ಅವನಿಗೆ ಅವಿಧೇಯರಾಗಿದ್ದರು.

೨೩. ಆ ವಸುಭೂಪತಿಯು ಅತಿ ಪರಾಕ್ರಮಶಾಲಿಗಳಾದ ಪುತ್ರಭೃತ್ಯರೊಡನೆ ಆ ಮ್ಲೇಚ್ಛರನ್ನು ಕೊಲ್ಲುವುದಕ್ಕಾಗಿ ಸಮುದ್ರವನ್ನು ದಾಟಿ ಹೋದನು.

೨೪. ಆ ತರುವಾಯ ಯುದ್ಧದಲ್ಲಿ ವಸುರಾಜನು ಆ ಮ್ಲೇಚ್ಛರೆಲ್ಲರನ್ನೂ ಜಯಿಸಿದನು.

೨೫-೨೬. ಅವರೆಲ್ಲರೂ ಪುತ್ರ, ಸೈನ್ಯ ವಾಹನಗಳೊಡನೆ ಕಪ್ಪವನ್ನು ಕೊಡುವಂತೆ ಮಾಡಿದನು. ಅವನು ಅತ್ತ ಪ್ರವಾಸದಲ್ಲಿರಲು ಇತ್ತ ಅವನ ಪ್ರಧಾನ ರಾಣಿಯಾದ ಸತ್ಯಭಾಮೆಯು ರಜಸ್ವಲೆಯಾದಳು. ಹೆಂಗಸರಿಗೆ ಯಾವಾಗಲೂ ಕಾಮವು ಅಧಿಕವಾಗಿರುವುದಷ್ಟೆ !

**ವಿಶೇಷೇಣ ಋತೋಃ ಕಾಲೇ ಭಿದ್ಯಂತೇ ಕಾಮಸಾಯಕೈಃ ।**
**ಮನ್ಮಥೇನ ತು ಸಂತಪ್ತಾಽಚಿಂತಯತ್ಸಾ ಶುಭೇಕ್ಷಣಾ ॥ ೨೭ ॥**
**ದೂತಂ ವೈ ಪ್ರೇಷಯಾಮ್ಯದ್ಯ ವಸುರಾಜ್ಞಃ ಸಮೀಪತಃ ।**
**ಆಹೂತಃ ಸತ್ವರಂ ದೂತ ಗಚ್ಛ ತ್ವಂ ನೃಪಸನ್ನಿಧೌ ॥ ೨೮ ॥**

**ದೂತ ಉವಾಚ :—**

**ಪರತೀರಂ ಗತೋ ದೇವಿ ವಸುರಾಜಾಽರಿಶಾಸನಃ ।**
**ತತ್ರ ಗಂತುಮಶಕ್ಯೇತ ಜಲಯಾನೈರ್ವಿನಾ ಶುಭೇ ॥ ೨೯ ॥**
**ತಾನಿ ಯಾನಾನಿ ಸರ್ವಾಣಿ ಗೃಹೀತಾನಿ ಪರೇ ತಟೇ ।**
**ದೂತವಾಕ್ಯೇನ ಸಾ ರಾಜ್ಞೀ ವಿಷಣ್ಣಾ ಕಾಮಪೀಡಿತಾ ॥ ೩೦ ॥**
**ತತ್ಸಖೀ ತಾಮುವಾಚಾಽಥ ಕಸ್ಮಾತ್ತ್ವಂ ಪರಿತಪ್ಯಸೇ ।**
**ಸ್ವಲೇಖಃ ಪ್ರೇಷ್ಯತಾಂ ದೇವಿ ಶುಕಹಸ್ತೇ ಯಥಾರ್ಥತಃ ॥ ೩೧ ॥**
**ಸಮುದ್ರಂ ಲಂಘಯಿತ್ವಾ ತು ಶಕುಂತಾ ಯಾಂತಿ ಸುಂದರಿ ।**
**ಸಖೀವಾಕ್ಯೇನ ಸಾ ರಾಜ್ಞೀ ಸ್ವಸ್ಥಾ ಜಾತಾ ನರಾಧಿಪ ॥ ೩೨ ॥**
**ವ್ಯಾಹೃತೋ ಲೇಖಕಸ್ತತ್ರ ಲಿಖ ಲೇಖಂ ಮಮಾಜ್ಞಯಾ ।**
**ತ್ವದ್ದೀನಾ ಸತ್ಯಭಾಮಾಽದ್ಯ ವಸೋ ರಾಜನ್ನ ಜೀವತಿ ॥ ೩೩ ॥**

---

೨೭–೨೮. ಋತುಕಾಲದಲ್ಲಿ ಅವರು ಅತಿಶಯವಾಗಿ ಮನ್ಮಥನ ಬಾಣಗಳಿಂದ ಪೀಡಿತರಾಗುವರು. ಹೀಗೆ ಮನ್ಮಥಪೀಡಿತಳಾದ ಆ ರಾಣಿಯು, ಈಗ ವಸುರಾಜನ ಬಳಿಗೆ ದೂತನನ್ನು ಕಳುಹಿಸುವೆನು ಎಂದಾಲೋಚಿಸಿ ದೂತನನ್ನು ಕರೆದು ನೀನು ರಾಜನಲ್ಲಿಗೆ ಹೋಗೆಂದಳು.

೨೯. ದೂತನು ಹೇಳುತ್ತಾನೆ — "ಶತ್ರುನಾಶಕನಾದ ವಸುರಾಜನು ಇನ್ನೊಂದು ದಡಕ್ಕೆ ಹೋಗಿರುವನು. ಹಡಗುಗಳಿಲ್ಲದೆ ಅಲ್ಲಿಗೆ ಹೋಗಲು ಸಾಧ್ಯವಿಲ್ಲ.

೩೦. ವಾಹನಗಳನ್ನೆಲ್ಲ ದೊರೆಯು ಬೇರೆ ದಡಕ್ಕೆ ತಗೆದುಕೊಂಡು ಹೋಗಿರುವನು." ದೂತನಿಂತೆನಲು ಕಾಮಪೀಡಿತಳಾದ ಆ ರಾಣಿಯು ಬಹಳವಾಗಿ ವ್ಯಥೆಗೊಂಡಳು.

೩೧. ಆಗಲಾ ರಾಣಿಯ ಸಖಿಯು ಹೀಗೆಂದಳು. "ರಾಣಿ! ನೀನೇಕೆ ವ್ಯಥಗೊಳ್ಳುತ್ತಿರುವೆ? ನೀನು ಪ್ರೇಮಪತ್ರವನ್ನು ಬರೆದು ಗಿಣಿಯಮೂಲಕ ಕಳುಹಿಸು.

೩೨. ಪಕ್ಷಿಗಳು ಸಾಗರವನ್ನೂ ದಾಟಿ ಹೋಗುವುವು" ಆ ರಾಣಿಯು ಸಖಿಯ ಈ ಮಾತಿನಿಂದ ಸುಖಗೊಂಡಳು.

೩೩–೩೪. ಅವಳು ಲೇಖಕನನ್ನು ಕುರಿತು ನನ್ನ ಅಪ್ಪಣೆಯಂತೆ, "ವಸುರಾಜ! ಸತ್ಯಭಾಮೆಗೆ ಈಗ ಋತುಕಾಲವಾಗಿದೆ. ಅವಳು ನೀನಿಲ್ಲದೆ ಬದುಕುವುದಿಲ್ಲ"

ಋತುಕಾಲೋಽದ್ಯ ಸಂಜಾತೋ ಲಿಖ ಲೇಖಂ ತು ಲೇಖಕ ।
ಲಿಖಿತೇ ಭೂರ್ಜಪತ್ರೇ ತು ಲೇಖೇ ವೈ ಲೇಖಕೇನ ತು ॥ ೩೪ ॥
ಶುಕಃ ಪಂಜರಮಧ್ಯಸ್ಥ ಆನೀತೋದ್ಯೈವ ಸನ್ನಿಧೌ ॥ ೩೫ ॥

ಸತ್ಯಭಾಮೋವಾಚ :—

ನೀತ್ವಾ ಲೇಖಂ ಗಚ್ಛ ಶೀಘ್ರಂ ವಸುರಾಜ್ಞಃ ಸಮೀಪತಃ ।
ಶಕುನಿಃ ಪ್ರಣತೋ ಭೂತ್ವಾ ಗೃಹೀತ್ವಾ ಲೇಖಮುತ್ತಮಂ ॥ ೩೬ ॥
ಉತ್ಪತ್ಯ ಸಹಸಾ ರಾಜನ್ ಜಗಾಮಾಕಾಶಮಂಡಲಂ ।
ತತಃ ಪಕ್ಷೀ ಗತಃ ಶೀಘ್ರಂ ವಸುರಾಜಸಮೀಪತಃ ॥ ೩೭ ॥
ಕ್ಷಿಪ್ತೇ ಲೇಖೇ ಶುಕೇನೈವ ಸತ್ಯಭಾಮಾವಿಸರ್ಜಿತೇ ।
ವಸುರಾಜ್ಞಾ ತತೋ ಲೇಖೋ ಗೃಹ್ಯ ಹಸ್ತೇಽವಧಾರಿತಃ ॥ ೩೮ ॥
ಲೇಖಾರ್ಥಂ ಚಿಂತಯಿತ್ವಾ ತು ಗೃಹ್ಯ ವೀರ್ಯಂ ನರೇಶ್ವರಃ ।
ಅಮೋಘಂ ಪುಟಿಕಾಂ ಕೃತ್ವಾ ಪ್ರಲೇಖೇನ ವಿಮಿಶ್ರಿತಂ ॥ ೩೯ ॥
ಶುಕಸ್ಯ ಸೋಽರ್ಪಯಾಮಾಸ ಗಚ್ಛ ರಾಜ್ಞೀ ಸಮೀಪತಃ ।
ಪ್ರಣಮ್ಯ ವಸುರಾಜಾನಂ ಬೀಜಂ ಗೃಹ್ಯೋತ್ಪಪಾತ ಹ ॥ ೪೦ ॥
ಸಮುದ್ರೋಪರಿ ಸಂಪ್ರಾಪ್ತಃ ಶುಕಃ ಶ್ಯೇನೇನ ವೀಕ್ಷಿತಃ ।
ಸಾಮಿಷಂ ತಂ ಶುಕಂ ಜ್ಞಾತ್ವಾ ಶ್ಯೇನಸ್ತಮಭ್ಯಧಾವತ ॥ ೪೧ ॥

---

ಎಂದು ಬರೆ ಎಂದಳು. ಅದರಂತೆ ಲೇಖಕನು ಭುಜಪತ್ರೆಯಲ್ಲಿ ಪತ್ರವನ್ನು ಬರೆಯಲು ಸೇವಕರು ಪಂಜರದಲ್ಲಿರುವ ಗಿಣಿಯನ್ನು ತಂದರು.

೩೬–೩೭. ಸತ್ಯಭಾಮೆಯು ಹೇಳುತ್ತಾಳೆ —"ಗಿಳಿಯೆ! ನೀನು ಈ ಕಾಗದವನ್ನು ತೆಗೆದುಕೊಂಡು ಬೇಗನೆ ವಸುರಾಜನ ಬಳಿಗೆ ಹೋಗು." ಪಕ್ಷಿಯು ರಾಣಿಗೆ ನಮಸ್ಕಾರಮಾಡಿ ಉತ್ತಮವಾದ ಆ ಪತ್ರವನ್ನು ತೆಗೆದುಕೊಂಡು ಕೂಡಲೆ ಆಕಾಶಕ್ಕೆ ಹಾರಿ ವಸುರಾಜನ ಸಮೀಪವನ್ನು ಸೇರಿತು.

೩೮–೪೨. ಸತ್ಯಭಾಮೆಯು ಕಳುಹಿಸಿದ ಪ್ರೇಮಲೇಖವನ್ನು ಶುಕವು ರಾಜನಹತ್ತಿರ ಎಸೆಯಲು ಅವನು ಅದನ್ನು ಕೈಗೆ ತೆಗೆದುಕೊಂಡು ಬರೆದಿದ್ದ ವಿಷಯವನ್ನು ಆಲೋಚಿಸಿ ತನ್ನ ವೀರ್ಯವನ್ನು ತೆಗೆದು ಅದನ್ನು ಅಮೋಘವಾದ ಪುಟವನ್ನಾಗಿಸಿ ಪ್ರತ್ಯುತ್ತರದ ಕಾಗದದಲ್ಲಿ ಸುತ್ತಿ ರಾಣಿಯ ಹತ್ತಿರಕ್ಕೆ ತೆಗೆದುಕೊಂಡು ಹೋಗೆಂದು ಗಿಣಿಗೆ ಕೊಟ್ಟನು. ಆ ಗಿಣಿಯು ರಾಜನಿಗೆ ವಂದಿಸಿ ವೀರ್ಯಸಹಿತವಾದ ಆ ಪ್ರತಿಲೇಖವನ್ನು ತೆಗೆದುಕೊಂಡು ಸಮುದ್ರದ ಮೇಲೆ ಹಾರಿಬರುತ್ತಿರಲು ಒಂದು ಗಿಡಗವು ಅದನ್ನು ನೋಡಿತು. ಅದು ಮಾಂಸವೆಂದು ತಿಳಿದು ಗಿಳಿಯನ್ನು ಅಟ್ಟಿಸಿಕೊಂಡು ಬಂದು ಕೊಕ್ಕಿನಿಂದ ಕುಕ್ಕಲು

**ಹತಶ್ಚಂಚುಪ್ರಹಾರೇಣ ಶುಕಃ ಶ್ಯೇನೇನ ಭಾರತ ।**
**ಮೂರ್ಛಯಾ ತಸ್ಯ ತದ್ಬೀಜಂ ಪತಿತಂ ಸಾಗರಾಂಭಸಿ ॥ ೪೨ ॥**
**ಮತ್ಸ್ಯೇನ ಗಿಲಿತಂ ತಚ್ಚ ಬೀಜಂ ವಸು ಮಹೀಪತೇಃ ।**
**ಕನ್ಯಾ ಮತ್ಸ್ಯೋದರೇ ಜಾತಾ ತೇನ ಬೀಜೇನ ಸುಂದರಿ ॥ ೪೩ ॥**
**ಪ್ರಾಪ್ತೋಽಸೌ ಲುಬ್ಧಕೈರ್ಮತ್ಸ್ಯ ಆನೀತಃ ಸ್ವಗೃಹಂ ತತಃ ।**
**ಯಾವದ್ವಿದಾರಿತೋ ಮತ್ಸ್ಯಸ್ತಾವದ್ದೃಷ್ಟಾ ತ್ವಮುತ್ತಮೇ ॥ ೪೪ ॥**
**ಶಶಿಮಂಡಲಸಂಕಾಶಾ ಸೂರ್ಯತೇಜಃ ಸಮಪ್ರಭಾ ।**
**ದೃಷ್ಟ್ವಾ ತ್ವಾಂ ಹರ್ಷಿತಾಃ ಸರ್ವೇ ಕೈವರ್ತಾ ಜಾಹ್ನವೀತಟೇ ॥ ೪೫ ॥**
**ಹರ್ಷಿತಾಸ್ತೇ ಗತಾಃ ಸರ್ವೇ ಪ್ರಧಾನಸ್ಯ ಚ ಮಂದಿರಂ ।**
**ಸ್ತ್ರೀರತ್ನಂ ಕಥಯಾಮಾಸುರ್ಗೃಹಾಣ ತ್ವಂ ಮಹಾಪ್ರಭಂ ॥ ೪೬ ॥**
**ಗೃಹೀತಾ ತೇನ ತನ್ವಂಗೀ ಹ್ಯಪುತ್ರೇಣ ಮೃಗೇಕ್ಷಣಾ ।**
**ಭಾರ್ಯಾಂ ಸ್ವಾಮಾಹ ತನ್ವಂಗಿ ಪಾಲಯಸ್ವ ಮೃಗೇಕ್ಷಣೇ ॥ ೪೭ ॥**
**ತತಃ ಸಾ ಚಿಂತಯಾಮಾಸ ಪರಾಶರವಚಸ್ತದಾ ।**
**ಏವಮುಕ್ತ್ವಾ ತು ಸಾ ತೇನ ದತ್ತಾತ್ಮಾಸಂ ನರೇಶ್ವರ ॥ ೪೮ ॥**

---

ಗಿಣಿಯು ಮೂರ್ಛೆಗೊಂಡಿತು. ಆ ವೀರ್ಯವು ಸಮುದ್ರದ ನೀರಿನಲ್ಲಿ ಬಿದ್ದಿತು.

೪೩. ಸಮುದ್ರದಲ್ಲಿ ಬಿದ್ದ ವಸುರಾಜನ ಆ ವೀರ್ಯವನ್ನು ಒಂದು ಮೀನು ನುಂಗಿತು. ಸುಂದರಿ! ಆ ವೀರ್ಯದಿಂದ ಮೀನಿನ ಹೊಟ್ಟೆಯಲ್ಲಿ ಕನ್ಯೆಯೋರ್ವಳು ಬೆಳೆದಳು.

೪೪. ಬೆಸ್ತರು ಆ ಮೀನನ್ನು ಹಿಡಿದು ತಮ್ಮ ಮನೆಗೆ ತಂದು ಸೀಳಲು ಅಲ್ಲಿ ಶಿಶುವಾದ ನೀನಿರುವುದನ್ನು ಕಂಡರು.

೪೫. ಆ ಬೆಸ್ತರೆಲ್ಲರೂ ಚಂದ್ರಮಂಡಲಕ್ಕೆ ಸಮಾನಳೂ, ಸೂರ್ಯನ ತೇಜಸ್ಸಿಗೆ ಸಮಾನವಾದ ಕಾಂತಿಯುಳ್ಳವಳೂ ಆದ ನಿನ್ನನ್ನು ಕಂಡು ಸಂತೋಷಗೊಂಡರು.

೪೬. ಅವರು ಸಂತೋಷದಿಂದ ತಮ್ಮ ಮುಖ್ಯಸ್ಥನ ಮನೆಗೆ ಹೋಗಿ "ಅತಿಶಯವಾದ ಕಾಂತಿಯುಳ್ಳ ಈ ಉತ್ತಮ ಶಿಶುವನ್ನು ತೆಗೆದುಕೊ" ಎಂದರು.

೪೭. ಮಕ್ಕಳಿಲ್ಲದ ಆ ಬೆಸ್ತರ ಮುಖಂಡನು ಆ ಶಿಶುವನ್ನು ತೆಗೆದುಕೊಂಡು ತನ್ನ ಪತ್ನಿಗಿತ್ತು ಇದನ್ನು ಕಾಪಾಡು ಎಂದನು.

೪೮. ಹೀಗೆ ಪರಾಶರನು ಪೂರ್ವಕಥೆಯನ್ನು ಹೇಳಿದ ತರುವಾಯ ಆ ಮತ್ಸ್ಯಗಂಧಿಯು ಪರಾಶರನ ಮಾತನ್ನು ಕೇಳಿ ಹಾಗೆಯೇ ಆಗಲೆಂದು ಹೇಳಿ ತನ್ನನ್ನು ಒಪ್ಪಿಸಿಕೊಂಡಳು.

ಉವಾಚ ಸಾಧು ಮೇ ಬ್ರಹ್ಮನ್ಮತ್ಸ್ಯಗಂಧೋಽನುವರ್ತತೇ ।
ತತಸ್ತೇನ ತು ಸಾ ಬಾಲಾ ದಿವ್ಯಗಂಧಾಧಿವಾಸಿತಾ ॥ ೪೯ ॥
ಕೃತಾ ಯೋಗಬಲೇನೈವ ಜ್ವಾಲಯಿತ್ವಾ ವಿಭಾವಸುಂ ।
ಕೃತ್ವಾ ಪ್ರದಕ್ಷಿಣಂ ವಹ್ನಿಮೂಢಾ ತೇನ ರಸಾತ್ತದಾ ॥ ೫೦ ॥
ಜಲಯಾನಸ್ಯ ಮಧ್ಯೇ ತು ಕಾಮಸ್ಥಾನಾನ್ಯಸಂಸ್ಪೃಶತ್ ।
ಜ್ಞಾತ್ವಾ ಕಾಮೋತ್ಸುಕಂ ವಿಪ್ರಂ ಭೀತಾ ಸಾ ಧರ್ಮನಂದನ ॥ ೫೧ ॥
ಹಸಂತೀ ತಮುವಾಚಾಽಥ ದೇವ ತ್ವಂ ಲೋಕಸನ್ನಿಧೌ ।
ನ ಲಜ್ಜಸೇ ಕಥಂ ಧೀಮನ್ಕುರ್ವಾಣಃ ಪಾಮರೋಚಿತಂ ॥ ೫೨ ॥
ತತಸ್ತೇನ ಕ್ಷಣಂ ಧ್ಯಾತ್ವಾ ಸಂಸ್ಮೃತಾ ಹೃದಿ ತಾಮಸೀ ।
ಆಗತಾ ತಾಮಸೀ ಮಾಯಾ ಯಯಾ ವ್ಯಾಪ್ತಂ ಚರಾಚರಂ ॥ ೫೩ ॥
ತತಃ ಸಾ ವಿಸ್ಮಿತಾ ತೇನ ಕರ್ಮಣೈವ ತು ರಂಜಿತಾ ।
ಬ್ರಹ್ಮಚರ್ಯಾಭಿತಪ್ತೇನ ಸ್ತ್ರೀಸೌಖ್ಯಂ ಕ್ರೀಡಿತಂ ತದಾ ॥ ೫೪ ॥
ತತಃ ಸಾ ತತ್ಕ್ಷಣಾದೇವ ಗರ್ಭಭಾರೇಣ ಪೀಡಿತಾ ।
ಪ್ರಸೂತಾ ಬಾಲಕಂ ತತ್ರ ಜಟಿಲಂ ದಂಡಧಾರಿಣಂ ॥ ೫೫ ॥
ಕಮಂಡಲುಧರಂ ಶಾಂತಂ ಮೇಖಲಾಕಟಿಭೂಷಿತಂ ।
ಉತ್ತರೀಯಕೃತಸ್ಕಂಧಂ ವಿಷ್ಣುಮಾಯಾವಿವರ್ಜಿತಂ ॥ ೫೬ ॥

---

೪೯–೫೦. "ಮುನಿಯೆ! ನನ್ನ ಶರೀರವು ಮೀನಿನ ವಾಸನೆಯುಳ್ಳದ್ದಾಗಿದೆ" ಎಂದಳು. ಬಳಿಕ ಪರಾಶರನು ತನ್ನ ಯೋಗಬಲದಿಂದ ಅವಳನ್ನು ದಿವ್ಯಗಂಧವುಳ್ಳವಳನ್ನಾಗಿ ಮಾಡಿ ತರುವಾಯ ಅಗ್ನಿಯನ್ನು ಜ್ವಾಲಿಸಿ ಅದನ್ನು ಪ್ರದಕ್ಷಿಣೆಗೈದು ಪ್ರೀತಿಯಿಂದ ಅವಳನ್ನು ವರಿಸಿದನು.

೫೧–೫೨. ಅವನು ದೋಣಿಯ ನಡುವೆ ಅವಳ ಕಾಮಸ್ಥಾನಗಳನ್ನು ಮುಟ್ಟಲು ಆ ಕನ್ಯೆಯು ಮುನಿಯು ಕಾಮಪೀಡಿತನಾಗಿರುವನೆಂದು ತಿಳಿದು ಹೆದರಿ, "ನಗುತ್ತ ಅವನನ್ನು ಕುರಿತು, "ಜ್ಞಾನಿಯೆ! ನೀನು ಲೋಕಸಮಕ್ಷದಲ್ಲಿ ಪಾಮರಿಗುಚಿತವಾದ ಕಾರ್ಯವನ್ನು ಮಾಡುತ್ತ ಲಜ್ಜಿತನಾಗುವುದಿಲ್ಲವೆ?" ಎಂದು ಕೇಳಿದಳು.

೫೩. ಬಳಿಕ ಅವನು ಸ್ವಲ್ಪ ಹೊತ್ತು ಚಿಂತಿಸಿ ಮನಸ್ಸಿನಲ್ಲಿ ರಾತ್ರಿಯನ್ನು ಸ್ಮರಿಸಿದನು. ಆ ಮಾಯಾನಿಶಿಯು ಬಂದು ಜಗತ್ತನ್ನು ವ್ಯಾಪಿಸಿತು.

೫೪. ಆ ಕಾರ್ಯದಿಂದ ಆಶ್ಚರ್ಯಗೊಂಡ ಅವಳು ಅನುರಾಗಗೊಂಡು ಬ್ರಹ್ಮಚರ್ಯದಿಂದ ಸಂತಪ್ತನಾದ ಮುನಿಯೊಡನೆ ರಮಿಸಿದಳು.

೫೫–೫೬. ಅನಂತರ ಕೂಡಲೇ ಅವಳು ಗರ್ಭಭಾರದಿಂದ ಪೀಡಿತಳಾಗಿ ಜಟಾ, ದಂಡ, ಕಮಂಡಲುಗಳನ್ನು ಧರಿಸಿರುವವನೂ, ಮೌಂಜಿಯಿಂದ

**ತತೋಽಪಿ ಶಂಕಿತಾ ಪಾರ್ಥ ದೃಷ್ಟ್ವಾ ತಂ ಕಲಬಾಲಕಂ ।**
**ವೇಪಮಾನಾ ತತೋ ಬಾಲಾ ಜಗಾಮ ಶರಣಂ ಮುನೇಃ ॥ ೫೭ ॥**
**ರಕ್ಷ ರಕ್ಷ ಮುನಿಶ್ರೇಷ್ಠ ಪರಾಶರ ಮಹಾಮತೇ ।**
**ಜಾತಂ ಮೇಽತ್ಯದ್ಭುತಂ ಪುತ್ರಂ ಕೌಪೀನವರಮೇಖಲಂ ।**
**ದಂಡಹಸ್ತಂ ಜಟಾಯುಕ್ತಮುತ್ತರೀಯವಿಭೂಷಿತಂ ॥ ೫೮ ॥**

**ಪರಾಶರ ಉವಾಚ :—**

**ಮಾ ಭೈಷೀಃ ಸ್ವ ಸುತೇ ಜಾತೇ ಕುಮಾರೀ ತ್ವಂ ಭವಿಷ್ಯಸಿ ।**
**ನಾಮ್ನಾ ಯೋಜನಗಂಧೇತಿ ದ್ವಿತೀಯಂ ಸತ್ಯವತ್ಯಪಿ ॥ ೫೯ ॥**
**ಶಂತನುರ್ನಾಮ ರಾಜಾ ಯಃ ಸತೇ ಭರ್ತಾ ಭವಿಷ್ಯತಿ ।**
**ಪ್ರಥಮಾ ಮಹಿಷೀ ತಸ್ಯ ಸೋಮವಂಶವಿಭೂಷಣಾ ॥ ೬೦ ॥**
**ಗಚ್ಛ ತ್ವಂ ಸ್ವಾಶ್ರಮಂ ಶುಭ್ರೇ ಪೂರ್ವರೂಪೇಣ ಸಂಸ್ಥಿತಾ ।**
**ಮಾ ವಿಷಾದಂ ಕುರುಷ್ವಾಽತ್ರ ದೃಷ್ಟಂ ಜ್ಞಾನಸ್ಯ ಮೇ ಬಲಂ ॥ ೬೧ ॥**
**ಇತ್ಯುಕ್ತ್ವಾ ಪ್ರಯಯೌ ವಿಪ್ರಃ ಸಾ ಬಾಲಾ ಪುತ್ರಮಾಶ್ರಿತಾ ।**
**ಸತೂಚೇ ಮಾತರಂ ಭಕ್ತ್ಯಾ ಸಾಷ್ಟಾಂಗಂ ವಿನಯಾನತಃ ॥ ೬೨ ॥**

---

ಅಲಂಕಾರಗೊಂಡ ಸೊಂಟವುಳ್ಳವನೂ, ಹೆಗಲಿನಲ್ಲಿ ಉತ್ತರೀಯವನ್ನು ಧರಿಸಿದವನೂ, ವಿಷ್ಣುಮಾಯೆಯಿಲ್ಲದವನೂ ಆದ ಬಾಲಕನನ್ನು ಪ್ರಸವಿಸಿದಳು.

೫೭. ಅದರಿಂದ ಕಳವಳಗೊಂಡ ಅವಳು ಅಸ್ಪಷ್ಟವಾಗಿ ನುಡಿಯುವ ಆ ಬಾಲಕನನ್ನು ನೋಡಿ ನಡುಗುತ್ತ ಮುನಿಯನ್ನು ಮರೆಹೊಕ್ಕಳು.

೫೮. "ಪ್ರಾಜ್ಞನಾದ ಪರಾಶರನೆ! ಕೌಪೀನ, ಉತ್ತಮವಾದ ಮೌಂಜಿ, ದಂಡ, ಜಟೆ, ಉತ್ತರೀಯಗಳಿಂದ ಅಲಂಕಾರಗೊಂಡು ಈಗ ಹುಟ್ಟಿರುವ ಆಶ್ಚರ್ಯಕರನಾದ ಈ ಬಾಲಕನನ್ನು ಕಾಪಾಡು."

೫೯. ಪರಾಶರನು ಹೇಳುತ್ತಾನೆ.—ಪ್ರಿಯಳೆ! ನಿನಗೆ ಪುತ್ರನು ಹುಟ್ಟಿರುವುದರಿಂದ ನೀನು ಹೆದರಬೇಕಾಗಿಲ್ಲವು. ಯೋಜನಗಂಧಿ, ಸತ್ಯವತೀ ಎಂಬ ಹೆಸರುಗಳನ್ನು ಪಡೆದು ನೀನು ಕುಮಾರಿಯಾಗಿಯೆ ಇರುವೆ.

೬೦. ಶಂತನುವೆಂಬ ದೊರೆಯು ನಿನಗೆ ಪತಿಯಾಗುವನು. ನೀನು ಅವನ ಪಟ್ಟದರಾಣಿಯಾಗಿ ಚಂದ್ರವಂಶವನ್ನು ಅಲಂಕರಿಸುವೆ.

೬೧. ಶುದ್ಧಳೆ! ನೀನು ಹಿಂದಿನ ಕನ್ಯಾರೂಪದಿಂದಲೇ ನಿನ್ನ ಸ್ಥಾನಕ್ಕೆ ತೆರಳು. ಈ ವಿಷಯದಲ್ಲಿ ವಿಷಾದಗೊಳ್ಳಬೇಡ. ನನ್ನ ಜ್ಞಾನದ ಬಲವನ್ನು ನೀನು ಪ್ರತ್ಯಕ್ಷವಾಗಿ ನೋಡಿರುವೆ.

೬೨–೬೩. ಪರಾಶರನು ಹೀಗೆಂದುನುಡಿದು ಹೊರಟುಹೋದನು. ಆ ಬಾಲೆಯು ಮಗನನ್ನಾಶ್ರಯಿಸಿದಳು. ಆ ಬಾಲಕನಾದರೋ ತಾಯಿಯನ್ನು

ಕ್ಷಮ್ಯತಾಂ ಮಾತರುಕ್ತಂ ಮೇ ಪ್ರಸಾದಃ ಕ್ರಿಯತಾಮಪಿ ।
ಈಶ್ವರಾರಾಧನೇ ಯತ್ನಂ ಕರಿಷ್ಯಾಮ್ಯಹಮಂಬಿಕೇ ॥ ೬೩ ॥
ತತಃ ಸಾ ಪುತ್ರವಾಕ್ಯೇನ ವಿಷಣ್ಣಾ ವಾಕ್ಯಮಬ್ರವೀತ್ ॥ ೬೪ ॥

ಯೋಜನಗಂಧ್ಯುವಾಚ :—

ಮಾ ತ್ಯಕ್ತ್ವಾ ಗಚ್ಛ ವತ್ಸಾಽದ್ಯ ಮಾತರಂ ಮಾಮನಾಗಸಂ ।
ತ್ವದ್ವಿಯೋಗೇನ ಮೇ ಪುತ್ರ ಪಂಚತ್ವಂ ಭಾವ್ಯಸಂಶಯಂ ॥ ೬೫ ॥
ನಾಸ್ತಿ ಪುತ್ರಸಮಃ ಸ್ನೇಹೋ ನಾಸ್ತಿ ಭ್ರಾತೃಸಮಂ ಕುಲಂ ।
ನಾಸ್ತಿ ಸತ್ಯಪರೋ ಧರ್ಮೋ ನಾಽನೃತಾತ್ಪಾತಕಂ ಪರಂ ॥ ೬೬ ॥
ಬಾಲಭಾವೇ ಮಯಾ ಜಾತ ಆಧಾರಃ ಕಿಲ ಜಾಯಸೇ ।
ನಮೇ ಭರ್ತಾ ನಮೇ ಪುತ್ರಃ ಪಶ್ಯ ಕರ್ಮವಿಡಂಬನಂ ॥ ೬೭ ॥

ವ್ಯಾಸ ಉವಾಚ :—

ಮಾ ವಿಷಾದಂ ಕುರುಷ್ವಾಂತಃ ಸತ್ಯಮೇತನ್ಮಯೇರಿತಂ ।
ಆಪತ್ಕಾಲೇಽಸ್ಮಿ ತೇ ದೇವಿ ಸ್ಮರ್ತವ್ಯಃ ಕಾರ್ಯಸಿದ್ಧಯೇ ॥ ೬೮ ॥
ಆಪದಸ್ತಾರಯಿಷ್ಯಾಮಿ ಕ್ಷಮ್ಯತಾಂ ಮೇ ದುರುತ್ತರಂ ।
ಇತ್ಯುಕ್ತ್ವಾ ಪ್ರಯಯೌ ವ್ಯಾಸಃ ಕನ್ಯಾ ಸಾಽಪಿ ಗತಾ ಗೃಹಂ ॥ ೬೯ ॥

---

ಭಕ್ತಿಯಿಂದ ವಂದಿಸಿ "ಅಮ್ಮ! ಕ್ಷಮಿಸು. ನನ್ನಲ್ಲಿ ಅನುಗ್ರಹಮಾಡು. ನಾನು ಈಶ್ವರಾರಾಧನೆಯಲ್ಲಿ ತೊಡಗುವೆನು."

೬೪. ಆಯೋಜನಗಂಧಿಯು ಮಗನಮಾತಿನಿಂದ ವ್ಯಥೆಗೊಂಡು ಇಂತೆಂದಳು.

೬೫. ಯೋಜನಗಂಧಿಯು ಹೇಳುತ್ತಾಳೆ.—ಮಗು! ನಿರಪರಾಧಿನಿಯೂ, ತಾಯಿಯೂ ಆದ ನನ್ನನ್ನು ತ್ಯಜಿಸಿ ಹೋಗಬೇಡ. ನಿನ್ನ ವಿಯೋಗದಿಂದ ನಾನು ನಿಶ್ಚಯವಾಗಿಯೂ ಮಡಿಯುವೆನು.

೬೬. ಪುತ್ರನಿಗೆ ಸಮವಾದ ಸ್ನೇಹಿತನೂ, ಸಹೋದರನಿಗೆ ಸಮವಾದ ಕುಲವೂ, ಸತ್ಯಕ್ಕಿಂತ ಹೆಚ್ಚಾದ ಧರ್ಮವೂ, ಸುಳ್ಳಿಗಿಂತ ಹೆಚ್ಚಾದ ಪಾಪವೂ ಇಲ್ಲ.

೬೭. ಬಾಲ್ಯದಲ್ಲಿ ಜನಿಸಿದ ನೀನು ನನಗೆ ಆಧಾರವಾಗಿರಬೇಕು. ಈಗ ನೀನು ನನ್ನನ್ನು ತೊರೆದು ಹೋದರೆ ನನಗೆ ಪತಿಯೂ, ಪುತ್ರನೂ ಇಲ್ಲವಾಗುವುದು. ಕರ್ಮದ ವಿಡಂಬನೆಯನ್ನು ನೋಡಿದೆಯಾ!

೬೮–೬೯. ವ್ಯಾಸನು ಹೇಳುತ್ತಾನೆ.—ಅಮ್ಮ! ಮನಸ್ಸಿನಲ್ಲಿ ನೊಂದುಕೊಳ್ಳಬೇಡ. ನಾನು ಹೇಳಿರುವುದು ನಿಜ. ನೀನು ಆಪತ್ಕಾಲದಲ್ಲಿ ಕಾರ್ಯಸಿದ್ಧಿಗಾಗಿ ನನ್ನನ್ನು ಸ್ಮರಿಸು. ನಾನು ನಿನ್ನನ್ನು ಆಪತ್ತಿನಿಂದ ಉದ್ಧರಿಸುವೆನು. ನನ್ನ ದುರುತ್ತರವನ್ನು ಕ್ಷಮಿಸು. ಹೀಗೆ ಹೇಳಿ ವ್ಯಾಸನು ಹೊರಟುಹೋದನು. ಆ ಕನ್ಯೆಯೂ ಮನೆಗೆ ಹೊರಟುಬಂದಳು.

**ಪರಾಶರಸುತಸ್ತತ್ರ ನಿಷಣ್ಣೋ ವನಮಧ್ಯತಃ ।**
**ತ್ರೇತಾಯುಗಾಽವಸಾನೇ ತು ದ್ವಾಪರಾದೌ ನರೇಶ್ವರ ॥ ೭೦ ॥**
**ವ್ಯಾಸಾರ್ಥಂ ಚಿಂತಯಾಮಾಸುರ್ದೇವಾಃ ಶಕ್ರಪುರೋಗಮಾಃ ।**
**ಆಖ್ಯಾತೋ ನಾರದೇನೈವ ಪುತ್ರಃ ಪರಾಶರಸ್ಯ ಸಃ ॥ ೭೧ ॥**
**ಕೈವರ್ತಪುತ್ರಿಕಾ ಜಾತೋ ಜ್ಞಾನೀ ಜಹ್ನುಸುತಾತಟೇ ।**
**ತತೋ ನಾರದವಾಕ್ಯೇನ ಆಗತಾಃ ಸುರಸತ್ತಮಾಃ ॥ ೭೨ ॥**
**ರಾಮಃ ಪಿತಾಮಹಃ ಶಕ್ರೋ ಮುನಿಸಂಘೈಃ ಸಮಾವೃತಾಃ ।**
**ಬ್ರುಸ್ಯಾದಿಕಂ ಪೃಥಗ್ದತ್ವಾ ಸಾಧು ಸಾಧ್ವಿತ್ಯುದೀರಯನ್ ॥ ೭೩ ॥**
**ಪಿತಾಮಹೇನ ವೈ ಬಾಲೋ ಗರ್ಭಾಧಾನಾದಿ ಸಂಸ್ಕೃತಃ ।**
**ದ್ವೀಪಾಯನೋ ದ್ವೀಪಜನ್ಮಾ ಪಾರಾಶರ್ಯಃ ಪರಾಶರಾತ್ ॥ ೭೪ ॥**
**ಕೃಷ್ಣಾಂಶಾತ್ಕೃಷ್ಣನಾಮಾಽಯಂ ವ್ಯಾಸೋ ವೇದಾನ್ವ್ಯಸಿಷ್ಯತಿ ।**
**ವಿರಿಂಚೇನಾಽಭಿಷಿಕ್ತೋಽಸೌ ಮುನಿಸಂಘೈಃ ಪುನಃ ಪುನಃ ॥ ೭೫ ॥**
**ವ್ಯಾಸಸ್ತ್ವಂ ಸರ್ವಲೋಕೇಷು ಇತ್ಯುಕ್ತ್ವಾ ಪ್ರಯಯುಃ ಸುರಾಃ ।**
**ತೀರ್ಥಯಾತ್ರಾ ಸಮಾರಬ್ಧಾ ಕೃಷ್ಣದ್ವೈಪಾಯನೇನ ತು ॥ ೭೬ ॥**

---

೭೦. ಪರಾಶರಸುತನಾದ ಆ ವ್ಯಾಸನು ತ್ರೇತಾಯುಗವು ಮುಗಿದು ದ್ವಾಪರಯುಗವು ಮೊದಲಾದಂದು ವನಮಧ್ಯದಲ್ಲಿ ತಪವನ್ನು ಕೈಕೊಂಡು ವ್ಯಥೆಗೊಂಡನು:

೭೧–೭೩. ಆಗಲೇ ಶಕ್ರಪುರೋಗಮರಾದ ದೇವತೆಗಳು ವ್ಯಾಸನಿಗೋಸುಗವಾಗಿ ಆಲೋಚಿಸತೊಡಗಲು ನಾರದಮುನೀಂದ್ರನು, ಆ ವ್ಯಾಸನು ಬೆಸ್ತರ ಹುಡುಗಿಯಲ್ಲಿ ಗಂಗೆಯ ದಡದಲ್ಲಿ ಪರಾಶರನಿಂದ ಹುಟ್ಟಿರುವ ವೃತ್ತಾಂತವನ್ನು ತಿಳಿಸಿದನು. ತರುವಾಯ ಆ ದೇವತೆಗಳೆಲ್ಲರೂ ವನಮಧ್ಯದಲ್ಲಿದ್ದ ಆತನ ಬಳಿಗೆ ಬಂದರು. ಪರಶುರಾಮ, ಬ್ರಹ್ಮ, ಇಂದ್ರ ಇವರು ಮುನಿಗಳೊಡನೆ ಪ್ರತ್ಯೇಕವಾಗಿ ಆಸನವನ್ನು ಆತನಿಂದ ಸ್ವೀಕರಿಸಿ 'ಒಳ್ಳೆಯದು ಒಳ್ಳೆಯದು' ಎಂದರು.

೭೪–೭೫. ಪಿತಾಮಹನು ಆ ಬಾಲಕನಿಗೆ ಗರ್ಭಾಧಾನಾದಿ ಸಂಸ್ಕಾರಗಳನ್ನೆಸಗಿ ದ್ವೀಪದಲ್ಲಿ ಜನಿಸಿರುವುದರಿಂದ ದ್ವೀಪಾಯನನೆಂದೂ, ಪರಾಶರನಿಂದ ಹುಟ್ಟಿದ್ದರಿಂದ ಪಾರಾಶರ್ಯನೆಂದೂ, ಕೃಷ್ಣಾಂಶದಿಂದ ಜನಿಸಿದ್ದರಿಂದ ಕೃಷ್ಣನೆಂದೂ, ವೇದಗಳನ್ನು ವಿಭಾಗಮಾಡುವುದರಿಂದ ವ್ಯಾಸನೆಂದೂ ಹೆಸರನ್ನು ಪಡೆಯುವನೆಂದು ಹೇಳಿ ಅವನಿಗೆ ಅಭಿಷೇಕಮಾಡಿದನು. ಮುನಿಗಳು ಬಾರಿ ಬಾರಿಗೂ ಆತನಿಗೆ ಅಭಿಷೇಕಮಾಡಿದರು.

೭೬. ಸರ್ವಲೋಕದಲ್ಲಿಯೂ ವ್ಯಾಸನೆಂದು ಪ್ರಸಿದ್ಧನಾಗುವೆಯೆಂದು ನುಡಿದು ದೇವತೆಗಳು ಹೊರಟುಹೋದರು. ಅನಂತರ ಕೃಷ್ಣದ್ವೈಪಾಯನನು ತೀರ್ಥಯಾತ್ರೆಯನ್ನಾರಂಭಿಸಿದನು.

ಗಂಗಾಽವಗಾಹಿತಾ ತೇನ ಕೇದಾರಶ್ಚ ಸುಪುಷ್ಕರಃ ।
ಗಯಾ ಚ ನೈಮಿಷಂ ತೀರ್ಥಂ ಕುರುಕ್ಷೇತ್ರಂ ಸರಸ್ವತೀ ॥ ೭೭ ॥
ಉಜ್ಜಯಿನ್ಯಾಂ ಮಹಾಕಾಲಂ ಸೋಮನಾಥಂ ಪ್ರಭಾಸಕೇ ।
ಪೃಥಿವ್ಯಾಂ ಸಾಗರಾಂತಾಯಾಂ ಸ್ನಾತ್ವಾ ಯಾತೋ ಮಹಾಮುನಿಃ ॥ ೭೮ ॥
ಅಮೃತಾಂ ನರ್ಮದಾಂ ಪ್ರಾಪ್ತೋ ರುದ್ರದೇಹೋದ್ಭವಾಂ ಶುಭಾಂ ।
ಆಹ್ಲಾದೋ ನರ್ಮದಾಂ ದೃಷ್ಟ್ವಾ ಚಿತ್ತವಿಶ್ರಾಂತಿಮಾಪ ಚ ॥ ೭೯ ॥
ತಪಶ್ಚಚಾರ ವಿಪುಲಂ ನರ್ಮದಾತಟಮಾಶ್ರಿತಃ ।
ಗ್ರೀಷ್ಮೇ ಪಂಚಾಗ್ನಿಮಧ್ಯಸ್ಥೋ ವರ್ಷಾಸು ಸ್ಥಂಡಿಲೇಶಯಃ ॥ ೮೦ ॥
ಸಾರ್ದ್ರವಾಸಾಶ್ಚ ಹೇಮಂತೇ ತಿಷ್ಠನ್ ದಧ್ಯೌ ಮಹೇಶ್ವರಂ ।
ಸ್ವಾಂತಹೃತ್ಕಮಲೇ ಸ್ಥಾಪ್ಯ ಧ್ಯಾಯತೇ ಪರಮೇಶ್ವರಂ ॥ ೮೧ ॥
ಸೃಷ್ಟಿಸಂಹಾರಕರ್ತಾರಮುಚ್ಛೇದ್ಯಂ ವರದಂ ಶುಭಂ ।
ನಿತ್ಯಂ ಸಿದ್ಧೇಶ್ವರಂ ಲಿಂಗಂ ಪೂಜಯೇದ್ಧ್ಯಾನತತ್ಪರಃ ॥ ೮೨ ॥
ಅರ್ಚನಾತ್ಸಿದ್ಧಲಿಂಗಸ್ಯ ಧ್ಯಾನಯೋಗಪ್ರಭಾವತಃ ।
ಪ್ರತ್ಯಕ್ಷಃ ಶಂಕರೋ ಜಾತಃ ಕೃಷ್ಣದ್ವೈಪಾಯನಸ್ಯ ಸಃ ॥ ೮೩ ॥

---

೭೭–೭೮. ಅವನು ಸಮುದ್ರದವರೆಗಣ ಭೂಮಿಯಲ್ಲಿರುವ ಗಂಗೆ, ಕೇದಾರ, ಪುಷ್ಕರ, ಗಯಾ, ನೈಮಿಷ, ಕುರುಕ್ಷೇತ್ರ ಸರಸ್ವತೀ, ಉಜ್ಜಯಿನೀ, ಮಹಾಕಾಲ, ಪ್ರಭಾಸ, ಸೋಮನಾಥ ಇವೇ ಮೊದಲಾದ ಕ್ಷೇತ್ರಗಳಲ್ಲಿ ಮಿಂದು ಹೊರಟನು.

೭೯. ಬಳಿಕ ಆತನು ರುದ್ರದೇಹದಿಂದ ಹುಟ್ಟಿದ ನರ್ಮದಾನದಿಯನ್ನು ನೇರಿ ಸಂತೋಷಗೊಂಡು ಮನಶ್ಶಾಂತಿಯನ್ನು ಹೊಂದಿದನು.

೮೦–೮೧. ಅವನು ನರ್ಮದಾತಟವನ್ನು ಆಶ್ರಯಿಸಿ ಗ್ರೀಷ್ಮದಲ್ಲಿ ಪಂಚಾಗ್ನಿ ಮಧ್ಯದಲ್ಲಿರುವವನೂ, ಮಳೆಗಾಲದಲ್ಲಿ ಭೂಮಿಯಲ್ಲಿ ಮಲಗುವವನೂ, ಹೇಮಂತದಲ್ಲಿ ಒದ್ದೆಯಾದ ಬಟ್ಟೆಯುಳ್ಳವನೂ ಆಗಿ ತನ್ನ ಹೃದಯಕಮಲದಲ್ಲಿ ಪರಮೇಶ್ವರನನ್ನು ನೆಲೆಗೊಳಿಸಿ ಧ್ಯಾನಿಸಿದನು.

೮೨. ಅವನು ಸೃಷ್ಟಿ ಸಂಹಾರಗಳನ್ನು ಮಾಡುವವನೂ, ಅವಿನಾಶಿಯೂ, ವರವನ್ನೀಯುವವನೂ, ನಿತ್ಯನೂ, ಸಿದ್ಧರಿಗೆ ಒಡೆಯನೂ ಆದ ಮಹೇಶ್ವರ ಲಿಂಗದ ಧ್ಯಾನದಲ್ಲಿ ನಿರತನಾಗಿ ಅದನ್ನು ಪೂಜಿಸಿದನು.

೮೩. ಸಿದ್ಧಲಿಂಗದ ಅರ್ಚನೆಯಿಂದಲೂ, ಧ್ಯಾನದಿಂದಲೂ, ಶಂಕರನು ವ್ಯಾಸನಿಗೆ ಪ್ರತ್ಯಕ್ಷನಾದನು.

ಈಶ್ವರ ಉವಾಚ :—

ತೋಷಿತೋಽಹಂ ತ್ವಯಾ ವತ್ಸ ವರಂ ವರಯ ಶೋಭನಂ ॥ ೮೪ ॥

ವ್ಯಾಸ ಉವಾಚ :—

ಯದಿ ತುಷ್ಟೋಽಸಿ ಮೇ ದೇವ ಯದಿ ದೇಯೋ ವರೋ ಮಮ ।
ಪ್ರತ್ಯಕ್ಷೋ ನರ್ಮದಾತೀರೇ ತ್ವಯಮೇವ ಭವಿಷ್ಯಸಿ ।
ಅತೀತಾನಾಗತಜ್ಞೋಽಹಂ ತ್ವತ್ಪ್ರಸಾದಾದುಮಾಪತೇ ॥ ೮೫ ॥

ಈಶ್ವರ ಉವಾಚ :—

ಏವಂ ಭವತು ತೇ ಪುತ್ರ ಮತ್ಪ್ರಸಾದಾದಸಂಶಯಂ ।
ತ್ವಯಿ ಭಕ್ತಿಗೃಹೀತೋಽಹಂ ಪ್ರತ್ಯಕ್ಷೋ ನರ್ಮದಾತಟೇ ॥ ೮೬ ॥
ಸಹಸ್ರಾಂಶಾರ್ಧಭಾವೇನ ಪ್ರತ್ಯಕ್ಷೋಽಹಂ ತ್ವದಾಶ್ರಮೇ ।
ಇತ್ಯುಕ್ತ್ವಾ ಪ್ರಯಯೌ ದೇವಃ ಕೈಲಾಸಂ ನಗಮುತ್ತಮಂ ॥ ೮೭ ॥
ಪತ್ನೀಸಂಗ್ರಹಣಂ ಜಾತಂ ಕೃಷ್ಣದ್ವೈಪಾಯನಸ್ಯ ತು ।
ಶಾಸ್ತ್ರೋಕ್ತೇನ ವಿಧಾನೇನ ಪತ್ನೀಂ ಪಾಲಯತಸ್ತಥಾ ॥ ೮೮ ॥
ಪುತ್ರೋ ಜಾತೋಹ್ಯಪುತ್ರಸ್ಯ ಪರಾಶರಸುತಸ್ಯ ಚ ।
ದೇವೈರ್ವರ್ಧಾಪಿತಃ ಸರ್ವೈರ್ವಿರಿಂಚೀಂದ್ರಪುರೋಗಮೈಃ ॥ ೮೯ ॥
ಪುತ್ರಜನ್ಮನ್ಯಥಾಜಗ್ಮುರ್ವಸಿಷ್ಠಾದ್ಯಾ ಮುನೀಶ್ವರಾಃ ।
ತೀರ್ಥಯಾತ್ರಾ ಪ್ರಸಂಗೇನ ಪರಾಶರಪುರೋಗಮಾಃ ॥ ೯೦ ॥

---

೮೪. ಈಶ್ವರನು ಹೇಳುತ್ತಾನೆ—ಮಗು! ನಾನು ನಿನ್ನ ವಿಷಯದಲ್ಲಿ ಸಂತುಷ್ಟನಾಗಿರುವೆನು. ಮಂಗಳಕರವಾದ ವರವನ್ನು ಕೇಳಿಕೊ.

೮೫. ವ್ಯಾಸನು ಹೇಳುತ್ತಾನೆ—ಸ್ವಾಮಿ! ನೀನು ಸಂತುಷ್ಟನಾಗಿದ್ದರೆ, ನನಗೆ ವರವನ್ನು ಕೊಡುವುದಾದರೆ ನರ್ಮದಾತೀರದಲ್ಲಿ ಯಾವಾಗಲೂ ಪ್ರತ್ಯಕ್ಷನಾಗಿರು. ಉಮಾನಾಥ! ನಾನು ನಿನ್ನ ಅನುಗ್ರಹದಿಂದ ಅತೀತಾನಾಗತ ವಿಷಯವನ್ನರಿಯುವಂತೆ ಮಾಡು.

೮೬–೮೭. ಈಶ್ವರನು ಹೇಳುತ್ತಾನೆ—ಪುತ್ರ! ನನ್ನ ಅನುಗ್ರಹದಿಂದ ಹೀಗೆಯೇ ಆಗುವುದು. ನಿನ್ನ ಭಕ್ತಿಗೆ ವಶನಾದ ನಾನು ನರ್ಮದಾತಟದಲ್ಲಿ ನಿನ್ನ ಆಶ್ರಮದಲ್ಲಿ ಐನೂರು ಅಂಶಗಳಿಂದಿರುವೆನು. ಹೀಗೆ ಹೇಳಿ ಆ ಶಂಕರನು ಕೈಲಾಸಪರ್ವತಕ್ಕೆ ತೆರಳಿದನು.

೮೮–೮೯. ವ್ಯಾಸನು ಶಾಸ್ತ್ರೋಕ್ತವಿಧಿಯಿಂದ ಮದುವೆಮಾಡಿಕೊಂಡು ಪತ್ನಿಯನ್ನು ಪಾಲಿಸುತ್ತಿರಲು ಅವನಿಗೆ ಪುತ್ರನು ಜನಿಸಿದನು. ಆ ಪುತ್ರನನ್ನು ಇಂದ್ರನೇ ಮೊದಲಾದ ದೇವತೆಗಳು ಆಶೀರ್ವದಿಸಿದರು.

೯೦–೯೧. ಆ ವ್ಯಾಸನಿಗೆ ಪುತ್ರನು ಜನಿಸಿದ ತರುವಾಯ ವಸಿಷ್ಠ,

ಮನ್ವತ್ರಿವಿಷ್ಣುಹಾರೀತ ಯಾಜ್ಞವಲ್ಕ್ಯೋಶನೋಽಂಗಿರಾಃ ।
ಯಮಾಪಸ್ತಂಬಸಂವರ್ತಾಃ ಕಾತ್ಯಾಯನಬೃಹಸ್ಪತೀ ॥ ೯೧ ॥
ಏವಮಾದಿ ಸಹಸ್ರಾಣಿ ಲಕ್ಷಕೋಟಿಶತಾನಿ ಚ ।
ಸಶಿಷ್ಯಾಶ್ಚ ಮಹಾಭಾಗಾ ನರ್ಮದಾತಟಮಾಶ್ರಿತಾಃ ॥ ೯೨ ॥
ವ್ಯಾಸಾಶ್ರಮೇ ಶುಭೇ ರಮ್ಯೇ ಸಂತುಷ್ಟಾ ಆಯಯುರ್ನೃಪ ।
ದೃಷ್ಟ್ವಾ ತಾನ್ ಸೋಽಪಿ ವಿಪ್ರೇಂದ್ರಾನಭ್ಯುತ್ಥಾನಕೃತೋದ್ಯಮಃ ॥೯೩॥
ಪಿತುಃ ಪೂರ್ವಂ ಪ್ರಣಮ್ಯಾದೌ ಸರ್ವೇಷಾಂ ಚ ಯಥಾ ವಿಧಿ ।
ಆಸನಾನಿ ದದೌ ಭಕ್ತ್ಯಾ ಪಾದ್ಯಮರ್ಘ್ಯಂ ನ್ಯವೇದಯತ್ ॥ ೯೪ ॥
ಕೃತಾಂಜಲಿಪುಟೋ ಭೂತ್ವಾ ವಾಕ್ಯಮೇತದುವಾಚ ಹ ।
ಉದ್ಧೃತೋಽಹಂ ನ ಸಂದೇಹೋ ಯುಷ್ಮತ್ಸಂಭಾಷಣಾರ್ಚನಾತ್ ॥೯೫॥
ಆರಣ್ಯಾನಿ ಚ ಶಾಕಾನಿ ಫಲಾನ್ಯಾರಣ್ಯಜಾನಿ ಚ ।
ತಾನಿ ದಾಸ್ಯಾಮಿ ಯುಷ್ಮಾಕಂ ಸರ್ವೇಷಾಂ ಪ್ರೀತಿಪೂರ್ವಕಂ ॥ ೯೬ ॥
ನ್ಯಮಂತ್ರಯತ ತಾನ್ ಸರ್ವಾನ್ಪ್ರತ್ಯೇಕಂ ಪ್ರಣಿಪತ್ಯ ಚ ।
ತತಸ್ತೇ ಪ್ರಣತಂ ದೃಷ್ಟ್ವಾ ಕೃಷ್ಣದ್ವೈಪಾಯನಂ ಮುನಿಂ ॥ ೯೭ ॥
ವರ್ಧಯಿತ್ವಾ ಜಯಾಶೀರ್ಭಿರವಲೋಕ್ಯ ಪರಸ್ಪರಂ ।
ಪರಾಶರಃ ಸಮಸ್ತೈಶ್ಚ ವೀಕ್ಷಿತೋ ಮುನಿಪುಂಗವೈಃ ॥ ೯೮ ॥

---

ಪರಾಶರ, ಮನು ಅತ್ರಿ, ವಿಷ್ಣು, ಹಾರೀತ, ಯಾಜ್ಞವಲ್ಕ್ಯ, ಉಶನ, ಅಂಗಿರ, ಯಮ, ಆಪಸ್ತಂಬ, ಸಂವರ್ತ, ಕಾತ್ಯಾಯನ, ಬೃಹಸ್ಪತಿ ಮೊದಲಾದ ಕೋಟ್ಯಂತರ ಮುನಿಗಳು ತೀರ್ಥಯಾತ್ರೆಯ ನಿಮಿತ್ತದಿಂದ ಶಿಷ್ಯರೊಡನೆ ನರ್ಮದಾತಟಕ್ಕೆ ಬಂದರು.

೯೩–೯೪. ಅವರು ಮನೋಹರವಾದ ವ್ಯಾಸಾಶ್ರಮಕ್ಕೆ ಬರಲು ವ್ಯಾಸನು ಅವರನ್ನು ನೋಡಿ ಅಭ್ಯುತ್ಥಾನಗೈದು ತಂದೆಗೆ ಮೊದಲು ವಂದಿಸಿ ಅನಂತರ ಎಲ್ಲರಿಗೂ ವಿಧಿಯಂತೆ ನಮಸ್ಕಾರಮಾಡಿ ಆಸನಗಳನ್ನು ಭಕ್ತಿಯಿಂದಿತ್ತು ಪಾದ್ಯಾರ್ಘ್ಯಗಳನ್ನು ಕೊಟ್ಟನು.

೯೫. ಅನಂತರ ಕೈಮುಗಿದುಕೊಂಡು ಇಂತೆಂದನು. "ನಿಮ್ಮ ಸಂಭಾಷಣೆ ಮತ್ತು ಪೂಜೆಗಳಿಂದ ನಾನು ನಿಶ್ಚಯವಾಗಿಯೂ ಉದ್ಧಾರವಾದೆನು.

೯೬. ಕಾಡಿನ ಶಾಕಫಲಗಳನ್ನು ನಿಮಗೆಲ್ಲ ಪ್ರೀತಿಯಿಂದ ನಿವೇದಿಸುವೆನು."

೯೭–೯೮. ಹಾಗೆಯೇ ಅವನು ಅವರನ್ನೆಲ್ಲ ಪ್ರತ್ಯೇಕವಾಗಿ ನಮಸ್ಕರಿಸಿ ನಿಮಂತ್ರಿಸಿದನು. ಮುನಿಗಳೆಲ್ಲರೂ ಆ ವ್ಯಾಸನನ್ನು ನೋಡಿ ಜಯಾಶೀರ್ವಾದ ಮಾಡಿ ಪರಸ್ಪರವಾಗಿ ನೋಡುತ್ತ ಎಲ್ಲರೂ ಪರಾಶರನನ್ನು ಈಕ್ಷಿಸಿದರು.

ಉತ್ತರಂ ದೀಯತಾಂ ತಾತ ಕೃಷ್ಣದ್ವೈಪಾಯನಸ್ಯ ಚ ।
ಏವಮುಕ್ತಸ್ತು ತೈಃ ಸರ್ವೈರ್ಭಗವಾನ್ ಸ ಪರಾಶರಃ ।
ಪ್ರೋವಾಚ ಸ್ವಾತ್ಮಜಂ ವ್ಯಾಸಮೃಷೀಣಾಂ ಯಚ್ಚಿಕೀರ್ಷಿತಂ ॥ ೯೯ ॥

ಶ್ರೀ ಪರಾಶರ ಉವಾಚ :—

ನೇಚ್ಛಂತಿ ದಕ್ಷಿಣೇ ಕೂಲೇ ವ್ರತಭಂಗಭಯಾದಥ ।
ಭೋಜನಂ ಭೋಕ್ತುಕಾಮಾಸ್ತೇ ಶ್ರಾದ್ಧೇ ಚೈವ ವಿಶೇಷತಃ ॥ ೧೦೦ ॥

ವ್ಯಾಸ ಉವಾಚ :—

ಕರೋಮಿ ಭವತಾಮುಕ್ತಮತ್ರೈವ ಸ್ಥೀಯತಾಂ ಕ್ಷಣಂ ।
ಯಾವತ್ಪ್ರಸಾದ್ಯ ಸರಿತಂ ಕರೋಮಿ ವಿಧಿಮುತ್ತಮಂ ॥ ೧೦೧ ॥
ಏವಮುಕ್ತ್ವಾ ಶುಚಿರ್ಭೂತ್ವಾ ನರ್ಮದಾತಟಮಾಸ್ಥಿತಃ ।
ಸ್ತೋತ್ರಂ ಜಗಾದ ಸಹಸಾ ತನ್ನಿಬೋಧ ನರೇಶ್ವರ ॥ ೧೦೨ ॥

ಜಯ ಭಗವತಿ ದೇವಿ ನಮೋ ವರದೇ
ಜಯ ಪಾಪವಿನಾಶಿನಿ ಬಹುಫಲದೇ ।
ಜಯ ಶುಂಭನಿಶುಂಭ ಕಪಾಲಧರೇ
ಪ್ರಣಮಾಮಿ ತು ದೇವನರಾರ್ತಿಹರೇ ॥ ೧೦೩ ॥

---

೯೯. ತಾತ! ವ್ಯಾಸನಿಗೆ ಉತ್ತರ ಕೊಡೆಂದರು. ಅವರೆಲ್ಲರೂ ಹೀಗೆ ಹೇಳಲು ಪೂಜ್ಯನಾದ ಪರಾಶರನು ಋಷಿಗಳು ಮಾಡಬೇಕೆಂದು ಬಯಸುವುದನ್ನು ತನ್ನ ಪುತ್ರನಾದ ವ್ಯಾಸನಿಗೆ ಹೇಳಿದನು.

೧೦೦. ಶ್ರೀ ಪರಾಶರನು ಹೇಳುತ್ತಾನೆ:—ಮಗು! ಈ ಮುನಿಗಳು ದಕ್ಷಿಣ ದಡದಲ್ಲಿ ವ್ರತಭಂಗದ ಭಯದಿಂದ ಶ್ರಾದ್ಧಭೋಜನಮಾಡಲು ಇಚ್ಛಿಸುವುದಿಲ್ಲ.

೧೦೧. ವ್ಯಾಸನು ಹೇಳುತ್ತಾನೆ.—ನೀವು ಹೇಳಿದ್ದನ್ನುಮಾಡುವೆನು. ಒಂದು ಕ್ಷಣಕಾಲ ಇಲ್ಲಿಯೇ ಇರಿ. ನರ್ಮದಾನದಿಯನ್ನು ಸಂತೋಷಗೊಳಿಸಿ ಉತ್ತಮವಿಧಿಯನ್ನು ಮಾಡುವೆನು.

೧೦೨. ವ್ಯಾಸನು ಹೀಗೆ ಹೇಳಿ ಶುದ್ಧನಾಗಿ ನರ್ಮದಾತಟವನ್ನಾಶ್ರಯಿಸಿ ಕೂಡಲೆ ಸೋತ್ರಮಾಡಿದನು. ದೊರೆಯೆ! ಅದನ್ನು ಕೇಳು.

೧೦೩. "ವರವನ್ನು ಕೊಡುವವಳೂ, ಪಾಪನಾಶಕಳೂ, ಅನೇಕ ಫಲಗಳನ್ನೀಯುವವಳೂ ಶುಂಭನಿಶುಂಭರ ಕಪಾಲಗಳನ್ನು ಧರಿಸಿದವಳೂ, ದೇವಮನುಷ್ಯರ ದುಃಖವನ್ನು ನಾಶಗೊಳಿಸುವವಳೂ ಆದ ನರ್ಮದಾದೇವಿಯೆ! ಜಯಿಸು!

ಜಯ ಚಂದ್ರದಿವಾಕರನೇತ್ರಧರೇ
ಜಯಪಾವಕಭೂಷಿತವಕ್ತ್ರವರೇ ।
ಜಯ ಭೈರವದೇಹನಿಲೀನಪರೇ
ಜಯ ಅಂಧಕರಕ್ತವಿಶೋಷಕರೇ ॥ ೧೦೪ ॥
ಜಯ ಮಹಿಷವಿಮರ್ದಿನಿ ಶೂಲಕರೇ
ಜಯ ಲೋಕಸಮಸ್ತಕಪಾಪಹರೇ ।
ಜಯ ದೇವಿ ಪಿತಾಮಹರಾಮನತೇ
ಜಯ ಭಾಸ್ಕರಶಕ್ರಶಿರೋಽವನತೇ ॥ ೧೦೫ ॥
ಜಯ ಷಣ್ಮುಖ ಸಾಯುಧ ಈಶನುತೇ
ಜಯ ಸಾಗರಗಾಮಿನಿ ಶಂಭುನುತೇ ।
ಜಯ ದುಃಖದರಿದ್ರವಿನಾಶಕರೇ
ಜಯ ಪುತ್ರಕಲತ್ರವಿವೃದ್ಧಿಕರೇ ॥ ೧೦೬ ॥
ಜಯ ದೇವಿ ಸಮಸ್ತಶರೀರಧರೇ
ಜಯ ನಾಕವಿದರ್ಶನಿ ದುಃಖಹರೇ ।
ಜಯ ವ್ಯಾಧಿವಿನಾಶಿನಿ ಮೋಕ್ಷಕರೇ
ಜಯ ವಾಂಛಿತದಾಯಿನಿ ಸಿದ್ಧವರೇ ॥ ೧೦೭ ॥

---

೧೦೪. ಚಂದ್ರಸೂರ್ಯ ರೂಪವಾದ ಕಣ್ಣುಗಳನ್ನು ಧರಿಸಿದವಳೂ, ಅಗ್ನಿಯಿಂದ ಅಲಂಕಾರಗೊಂಡ ಮುಖವುಳ್ಳವಳೂ, ಭೈರವನ ದೇಹದಲ್ಲಿ ಅಡಗುವವಳೂ, ಅಂಧಕಾಸುರನ ರಕ್ತವನ್ನು ಹಿಂಡುವವಳೂ ಆದ ದೇವಿಯೆ! ಜಯಿಸು.

೧೦೫. ಮಹಿಷಾಸುರ ಸಂಹಾರಿಣಿಯೂ, ಕೈಯಲ್ಲಿ ಶೂಲವನ್ನು ಹಿಡಿದವಳೂ, ಜನರ ಸಕಲಪಾಪಗಳನ್ನು ನಿವಾರಿಸುವವಳೂ, ಬ್ರಹ್ಮ ಮತ್ತು ರಾಮರಿಂದಭಿವಂದಿತಳೂ, ಸೂರ್ಯೇಂದ್ರರಿಂದ ನಮಸ್ಕಾರಗಳನ್ನು ಕೈಕೊಳ್ಳುವವಳೂ ಆದ ದೇವಿಯೆ! ಜಯಿಸು.

೧೦೬. ಸ್ಕಂದ ಮತ್ತು ಈಶ್ವರರಿಂದ ವಂದಿತಳೂ, ಸಾಗರಕ್ಕೆ ಹೋಗುವವಳೂ, ದುಃಖದಾರಿದ್ರ್ಯಗಳನ್ನು ಪರಿಹರಿಸುವವಳೂ, ಪುತ್ರ, ಕಲತ್ರರನ್ನು ಅಭಿವೃದ್ಧಿಗೊಳಿಸುವವಳೂ ಆದ ದೇವಿಯೆ! ಜಯಿಸು.

೧೦೭. ಸಕಲಪ್ರಾಣಿಗಳ ಶರೀರವನ್ನು ಧರಿಸಿದವಳೂ, ಸ್ವರ್ಗವನ್ನು ತೋರಿಸುವವಳೂ, ದುಃಖನಿವಾರಕಳೂ, ವ್ಯಾಧಿಗಳನ್ನು ಹೋಗಲಾಡಿಸುವವಳೂ, ಮೋಕ್ಷವನ್ನುಂಟುಮಾಡುವವಳೂ, ಇಷ್ಟಾರ್ಥದಾಯಕಿಯೂ, ಸಿದ್ಧಶ್ರೇಷ್ಠಳೂ ಆದ ದೇವಿಯೆ! ಜಯಿಸು.

ಏತದ್ವ್ಯಾಸಕೃತಂ ಸ್ತೋತ್ರಂ ಯಃ ಪಠೇಚ್ಛಿವಸನ್ನಿಧೌ ।
ಗೃಹೇ ವಾ ಶುದ್ಧಭಾವೇನ ಕಾಮಕ್ರೋಧವಿವರ್ಜಿತಃ ॥ ೧೦೮ ॥
ತಸ್ಯ ವ್ಯಾಸೋ ಭವೇತ್ಪ್ರೀತಃ ಪ್ರೀತಶ್ಚ ವೃಷವಾಹನಃ ।
ಪ್ರೀತಾ ಸ್ಯಾನ್ನರ್ಮದಾ ದೇವೀ ಸರ್ವಪಾಪಕ್ಷಯಂಕರೀ ॥ ೧೦೯ ॥
ನ ತೇ ಯಾಂತಿ ಯಮಲೋಕಂ ಯೈಃ ಸ್ತುತಾ ಭುವಿ ನರ್ಮದಾ ।
ಪಿತಾಮಹೋಽಪಿ ಮುಹ್ಯೇತ ದೇವಿ ತ್ವದ್ಗುಣಕೀರ್ತನಾತ್ ॥ ೧೧೦ ॥
ವಾಕ್ಪತಿರ್ನೈವ ತೇ ವಕ್ತುಂ ಸ್ವರೂಪಂ ವೇದ ನರ್ಮದೇ ।
ಕಥಂ ಗುಣಾನಹಂ ದೇವಿ ತ್ವದೀಯಾನ್ ಜ್ಞಾತುಮುತ್ಸಹೇ ॥ ೧೧೧ ॥
ಇತಿ ಜ್ಞಾತ್ವಾ ಶುಚಿಂ ಭಾವಂ ವಾಙ್ಮನಃಕಾಯಕರ್ಮಭಿಃ ।
ಪ್ರಸನ್ನಾ ನರ್ಮದಾ ದೇವೀ ತತೋ ವಚನಮಬ್ರವೀತ್ ॥ ೧೧೨ ॥
ಸತ್ಯವಾದೇನ ತುಷ್ಟಾಽಹಂ ಭೋ ಭೋ ವ್ಯಾಸ ಮಹಾಮುನೇ ।
ಯದೀಚ್ಛಸಿ ವರಂ ಕಿಂಚಿತ್ತಂ ತೇ ಸರ್ವಂ ದದಾಮ್ಯಹಂ ॥ ೧೧೩ ॥

ವ್ಯಾಸ ಉವಾಚ :—

ಯದಿ ತುಷ್ಟಾಽಸಿ ಮೇ ದೇವಿ ಯದಿ ದೇಯೋ ವರೋ ಮಮ ।
ಆತಿಥ್ಯಮುತ್ತರೇ ಕೂಲೇ ಋಷೀಣಾಂ ದಾತುಮರ್ಹಸಿ ॥ ೧೧೪ ॥

---

೧೦೮–೧೦೯. ವ್ಯಾಸನು ಮಾಡಿದ ಈ ಸ್ತೋತ್ರವನ್ನು ಶಿವಸನ್ನಿಧಿಯಲ್ಲಾಗಲಿ, ಮನೆಯಲ್ಲಾಗಲಿ, ಶುದ್ಧಮನಸ್ಸಿನಿಂದ ಕಾಮಕ್ರೋಧಗಳನ್ನು ತ್ಯಜಿಸಿ ಪಠಿಸುವವನ ವಿಷಯದಲ್ಲಿ ವ್ಯಾಸನೂ, ಶಿವನೂ, ಸಕಲಪಾಪಗಳನ್ನು ಪರಿಹರಿಸುವ ನರ್ಮದಾದೇವಿಯೂ ಸಂತುಷ್ಟರಾಗುವರು.

೧೧೦. ಭೂಲೋಕದಲ್ಲಿ ನರ್ಮದೆಯನ್ನು ಸ್ತೋತ್ರಮಾಡಿದವರು ಯಮಲೋಕಕ್ಕೆ ತೆರಳುವುದಿಲ್ಲ. ನಿನ್ನ ಗುಣಕೀರ್ತನದಿಂದ ಬ್ರಹ್ಮನೂ ಮೋಹಗೊಳ್ಳುವನು.

೧೧೧–೧೧೨. ನರ್ಮದೆಯೆ! ಬೃಹಸ್ಪತಿಯು ನಿನ್ನ ಸ್ವರೂಪವನ್ನು ಇಂತೆಂದು ನುಡಿಯಲು ತಿಳಿಯುವುದಿಲ್ಲ. ನಾನು ನಿನ್ನ ಗುಣಗಳನ್ನು ತಿಳಿಯಲು ಹೇಗೆ ಸಮರ್ಥನಾಗುವೆನು? ನರ್ಮದಾದೇವಿಯು ಅವನು ವಾಕ್, ಮನಸ್ಸು, ಶರೀರ, ಕರ್ಮಗಳಿಂದ ಶುದ್ಧನಾಗಿರುವನೆಂದರಿತು ಪ್ರಸನ್ನಳಾಗಿ ಇಂತೆಂದಳು.

೧೧೩. "ವ್ಯಾಸಮುನಿಯೆ! ನಾನು ನಿನ್ನ ಸತ್ಯವಾದ ಮಾತಿನಿಂದ ಸಂತುಷ್ಟಳಾಗಿರುವೆನು. ಯಾವುದಾದರೂ ವರವನ್ನು ಅಪೇಕ್ಷಿಸುವುದಾದರೆ ಅದೆಲ್ಲವನ್ನೂ ಕೊಡುವೆನು.

೧೧೪. ವ್ಯಾಸನು ಹೇಳುತ್ತಾನೆ:—ದೇವಿ! ನೀನು ಸಂತುಷ್ಟಳಾಗಿದ್ದರೆ, ನನಗೆ ವರವನ್ನು ನೀಡುವುದಾದರೆ ಋಷಿಗಳಿಗೆ ಉತ್ತರದಡದಲ್ಲಿ ಆತಿಥ್ಯವನ್ನು ಕೊಡಲರ್ಹಳಾಗಿರುವೆ.

ನರ್ಮದೋವಾಚ :—

ಅಯುಕ್ತಂ ಯಾಚಿತಂ ವ್ಯಾಸ ವಿಮಾರ್ಗೇ ಯತ್ಪ್ರವರ್ತನಂ ।
ಇಂದ್ರಚಂದ್ರಯಮೈಃ ಶಕ್ಯಾ ಯುನ್ಮಾರ್ಗೇ ನ ಪ್ರವರ್ತಿತುಂ ॥ ೧೧೫ ॥
ಯಾಚಸ್ವಾನ್ಯಂ ವರಂ ಪುತ್ರ ಯತ್ಕಿಂಚಿದ್ಭುವಿ ದುರ್ಲಭಂ ।
ಏತಚ್ಛ್ರುತ್ವಾ ವಚೋ ದೇವ್ಯಾ ವ್ಯಾಸೋ ಮೂರ್ಛಾಂಗತಸ್ತದಾ ॥೧೧೬॥
ವೃಥಾ ಕ್ಲೇಶೋಽದ್ಯ ಮೇ ಜಾತ ಇತಿ ಮತ್ವಾ ಪಪಾತ ಹ ।
ಧರಣೀ ಚಲಿತಾ ಸರ್ವಾ ಸಶೈಲವನಕಾನನಾ ॥ ೧೧೭ ॥
ಮೂರ್ಛಾಪನ್ನಂ ತತೋ ವ್ಯಾಸಂ ದೃಷ್ಟ್ವಾ ದೇವಾಃ ಸವಾಸವಾಃ ।
ಹಾಹಾಕಾರಮುಖಾಃ ಸರ್ವೇ ತತ್ರಾಜಗ್ಮುಃ ಸಹಸ್ರಶಃ ॥ ೧೧೮ ॥
ವ್ಯಾಸಮುತ್ಥಾಪಯಾಮಾಸುರ್ವೇದವ್ಯಸನತತ್ಪರಂ ।
ಬ್ರಾಹ್ಮಣಾರ್ಥೇ ಚ ಸಂಕ್ಲಿಷ್ಟೋ ನಾಽಽತ್ಮಹೇತೋಃ ಸರಿದ್ವರೇ ॥ ೧೧೯ ॥
ಗವಾರ್ಥೇ ಬ್ರಾಹ್ಮಣಾರ್ಥೇ ಚ ಸದ್ಯಃ ಪ್ರಾಣಾನ್ಪರಿತ್ಯಜೇತ್ ।
ಏವಂ ಸಾ ನರ್ಮದಾ ಪ್ರೋಕ್ತಾ ಬ್ರಹ್ಮಾದ್ಯೈಃ ಸುರಸತ್ತಮೈಃ ॥ ೧೨೦ ॥
ಸುಶೀತಲೈಸ್ತಂ ಬಹುಭಿಶ್ಚ ವಾತೈ
ರೇವಾಽಭ್ಯಷಿಂಚತ್ಸ್ವಜಲೇನ ಭೀತಾ ।
ಸ ಚೇತನಃ ಸತ್ಯವತೀ ಸುತೋಽಪಿ
ಪ್ರಣಮ್ಯ ದೇವಾನ್ ಸರಿತಂ ಜಗಾದ ॥ ೧೨೧ ॥

---

೧೧೫. ನರ್ಮದೆಯು ಹೇಳುತ್ತಾಳೆ:—"ವ್ಯಾಸ! ನೀನು ನನ್ನನ್ನು ವಿಮಾರ್ಗದಲ್ಲಿ ಹರಿಯಬೇಕೆಂದು ಬಯಸಿ ಅನುಚಿತವಾದುದನ್ನು ಬೇಡಿದೆ. ನನ್ನನ್ನು ವಿಮಾರ್ಗದಲ್ಲಿ ಹರಿಯುವಂತೆ ಮಾಡಲು ಚಂದ್ರೇಂದ್ರ ಯಮರಿಗೂ ಸಾಧ್ಯವಿಲ್ಲ.

೧೧೬. ಮಗು! ಭೂಮಿಯಲ್ಲಿ ದುರ್ಲಭವಾದ ಬೇರೆ ಏನನ್ನಾದರೂ ಯಾಚಿಸು." ದೇವಿಯ ಈ ಮಾತನ್ನು ಕೇಳಿ ವ್ಯಾಸನು ಮೂರ್ಛೆಗೊಂಡನು.

೧೧೭. 'ನಾನು ವ್ಯರ್ಥವಾಗಿ ಕಷ್ಟಪಟ್ಟೆ' ಎಂದು ತಿಳಿದು ಮೂರ್ಛಿತನಾಗಿ ಬಿದ್ದನು. ಶೈಲವನಗಳಿಂದ ಕೂಡಿದ ಅವನಿಯು ಚಲಿಸಿತು.

೧೧೮–೧೧೯. ಇಂದ್ರಾದಿ ದೇವತೆಗಳೆಲ್ಲರೂ ಮೂರ್ಛೆಗೊಂಡ ವ್ಯಾಸನನ್ನು ನೋಡಿ ಹಾಹಾಕಾರ ಗೈಯುತ್ತ ಅಲ್ಲಿಗೆ ಬಂದರು. ವೇದವಿಭಾಗದಲ್ಲಿ ಆಸಕ್ತನಾದ ಆ ವ್ಯಾಸನನ್ನು ಮೇಲಕ್ಕೆಬ್ಬಿಸಿ ನರ್ಮದೆಯನ್ನು ಕುರಿತು "ಎಲೈ ನರ್ಮದೆಯೆ! ಈ ವ್ಯಾಸನು ಬ್ರಾಹ್ಮಣರಿಗಾಗಿ ಕಷ್ಟಪಟ್ಟಿರುವನು. ತನಗಾಗಿ ಅಲ್ಲ.

೧೨೦. ಇವನು ಗೋವಿಗಾಗಿಯೂ, ಬ್ರಾಹ್ಮಣರಿಗಾಗಿಯೂ ಕೂಡಲೆ ಪ್ರಾಣಗಳನ್ನು ತ್ಯಜಿಸಿಯಾನು" ಎಂದು ಹೇಳಿದರು.

೧೨೧. ನರ್ಮದಾನದಿಯು ಭಯಗೊಂಡು ಅವನ ಮೇಲೆ ತಣ್ಣಗೂ, ಜಲಮಿಶ್ರವೂ ಆದ ಗಾಳಿಯನ್ನು ಬೀಸಿದಳು. ಆಗ ಸತ್ಯವತೀಸುತನಾದ

**ವ್ಯಾಸ ಉವಾಚ:—**

**ತೀರ್ಥೈಃ ಸಮಸ್ತೈಃ ಕಿಲ ಸೇವನಾಯ**
**ಫಲಂ ಪ್ರದಿಷ್ಟಂ ಮಮ ಮಂದಭಾಗ್ಯಾತ್ ।**
**ಯದ್ದೇವಿ ಪುಣ್ಯಾ ವಿಫಲಾ ಮಮಾಶಾ**
**ಅರಣ್ಯಪುಷ್ಪಾಣಿ ಯಥಾ ಜನಾನಾಂ ॥ ೧೨೨ ॥**

**ನರ್ಮದೋವಾಚ:—**

**ಯತೋ ಯತೋ ಮಾಂ ಹಿ ಮಹಾನುಭಾವ**
**ನಿನೀಷತೇ ಚಿತ್ತಮಿಲಾತಲೇಽತ್ರ ।**
**ವಿಂಧ್ಯೇನ ಸಾರ್ಧಂ ತವ ಮಾರ್ಗಮದ್ಯ**
**ಯಾಸ್ಯಾಮ್ಯಹಂ ದಂಡಧರಸ್ಯ ಪೃಷ್ಠೇ ॥ ೧೨೩ ॥**
**ಏವಮುಕ್ತೋ ಮಹಾತೇಜಾ ವ್ಯಾಸಃ ಸತ್ಯವತೀಸುತಃ ।**
**ದಕ್ಷಿಣೇ ಚಾಲಯಾಮಾಸ ಸ್ವಾಶ್ರಮಸ್ಯ ಸರಿದ್ವರಂ ॥ ೧೨೪ ॥**
**ದಂಡಹಸ್ತೋ ಮಹಾತೇಜಾ ಹುಂಕಾರಮಕರೋನ್ಮುನಿಃ ।**
**ವ್ಯಾಸಹುಂಕಾರಭೀತಾ ಸಾ ಚಲಿತಾ ರುದ್ರನಂದಿನೀ ॥ ೧೨೫ ॥**
**ದಂಡೇನ ದರ್ಶಯನ್ಮಾರ್ಗಂ ದೇವೀ ತತ್ರ ಪ್ರವರ್ತಿತಾ ।**
**ವ್ಯಾಸಮಾರ್ಗಂ ಗತಾ ದೇವೀ ದೃಷ್ಟ್ವಾ ಶಕ್ರಪುರೋಗಮೈಃ ॥ ೧೨೬ ॥**

---

ಆ ವ್ಯಾಸನು ಜ್ಞಾನವನ್ನು ಪಡೆದು ತನ್ನ ಬಳಿಯಿದ್ದ ದೇವತೆಗಳನ್ನು ವಂದಿಸಿ ಆ ನದೀದೇವತೆಯನ್ನು ಕುರಿತು ಹೀಗೆಂದನು.

೧೨೨. ವ್ಯಾಸನು ಹೇಳುತ್ತಾನೆ:—ಸಮಸ್ತ ತೀರ್ಥಗಳನ್ನು ಸೇವಿಸುವುದರಿಂದ ಫಲವುಂಟಾಗುವುದು. ದುರದೃಷ್ಟಶಾಲಿಯಾದ ನನ್ನ ಆ ಪುಣ್ಯವು ಅರಣ್ಯದ ಹೂವುಗಳು ಜನರಿಗೆ ನಿಷ್ಫಲವಾಗುವಂತೆ ಈಗ ವಿಫಲವಾಯಿತು.

೧೨೩. ನರ್ಮದೆಯು ಹೇಳುತ್ತಾಳೆ —ಮಹಾನುಭಾವ! ನೀನು ಈ ಭೂಮಿಯಲ್ಲಿ ನನ್ನನ್ನು ಎಲ್ಲಿಗೆ ತೆಗೆದುಕೊಂಡು ಹೋಗಲು ಬಯಸುವೆಯೊ ಹೇಳು. ಅದರಂತೆ ನಾನು ವಿಂಧ್ಯಪರ್ವತದೊಡನೆ ದಂಡಧರನಾದ ನಿನ್ನನ್ನು ಅನುಸರಿಸುವೆನು.

೧೨೪. ನರ್ಮದೆಯು ಹೀಗೆನ್ನಲು ಸತ್ಯವತೀಸುತನಾದ ವ್ಯಾಸನು ಆ ನದಿಯನ್ನು ತನ್ನ ಆಶ್ರಮದ ಉತ್ತರದಿಕ್ಕಿನಲ್ಲಿ ಹರಿಯುವಂತೆ ಮಾಡಿದನು.

೧೨೫. ಮಹಾ ತೇಜಸ್ವಿಯಾದ ವ್ಯಾಸಮುನಿಯು ಕೈಯಲ್ಲಿ ದಂಡವನ್ನು ಹಿಡಿದು ಹುಂಕಾರಮಾಡಿದನು. ಶಿವನಂದಿನಿಯಾದ ಆ ನರ್ಮದೆಯು ವ್ಯಾಸನ ಹುಂಕಾರದಿಂದ ಭಯಗೊಂಡು ಚಲಿಸಿದಳು.

೧೨೬. ವ್ಯಾಸನು ದಂಡದಿಂದ ದಾರಿಯನ್ನು ತೋರಿಸುತ್ತ ನರ್ಮದೆಯು

ಪುಷ್ಪವೃಷ್ಟಿಂ ತತೋ ದೇವಾ ವ್ಯಮುಂಚನ್ ಸಹ ಕಿಂಕರೈಃ ।
ಪ್ರೋತ್ಫುಲ್ಲನಯನಾ ಜಾತಾಃ ಪರಾಶರಮುಖಾ ದ್ವಿಜಾಃ ।
ಕಿಂ ಕುರ್ಮೋ ಬ್ರೂಹಿ ನೋ ಪುತ್ರ ಕರ್ಮಣಾ ತೇ ಸ್ಮ ರಂಜಿತಾಃ ॥೧೨

ವ್ಯಾಸ ಉವಾಚ :—

ತಪಶ್ಚ ವಿಪುಲಂ ಕೃತ್ವಾ ದಾನಂ ದತ್ವಾ ಮಹಾಫಲಂ ।
ಏತದೇವ ನರೈಃ ಕಾರ್ಯಂ ಸಾಧೂನಾಂ ಯತ್ಸುಖಾವಹಂ ॥ ೧೨೮
ಯದಿ ತುಷ್ಟಾ ಮಹಾಪ್ರಾಜ್ಞಾ ಅನುಗ್ರಾಹ್ಯೋಽಹ್ಯಹಂ ಯದಿ ।
ತಸ್ಮಾನ್ಮಮಾಶ್ರಮೇ ಸರ್ವೈಃ ಸ್ಥೀಯತಾಂ ನಾಽತ್ರ ಸಂಶಯಃ ॥ ೧೨೯
ಆತಿಥ್ಯಂ ಶಾಕಪರ್ಣೇನ ರೇವಾಽಮೃತವಿಮಿಶ್ರಿತಂ ।
ಪ್ರತಿಪನ್ನಂ ಸಮಸ್ತೈರ್ವಃ ಪರಾಶರಮುಖೈರ್ಮಮ ।
ಸ್ಥಾತವ್ಯಂ ಸ್ವಾಶ್ರಮೇ ಸರ್ವೈ ರೇವಾಯಾ ಉತ್ತರೇ ತಟೇ ॥ ೧೩೦

ಮಾರ್ಕಂಡೇಯ ಉವಾಚ :—

ಸ್ನಾನತರ್ಪಣನಿತ್ಯಾನಿ ಕೃತಾನಿ ದ್ವಿಜಸತ್ತಮೈಃ ।
ವ್ಯಾಸಕುಂಡೇ ತತೋ ಗತ್ವಾ ಹೋಮಃ ಸರ್ವೈಃ ಪ್ರಕಲ್ಪಿತಃ ॥ ೧೩೧

---

ಹಾಗೆ ಉತ್ತರಕ್ಕೆ ಹರಿಯುವಂತೆ ಮಾಡಿದನು. ಇಂದ್ರಾದಿ ದೇವತೆಗ ಆ ನದಿಯು ವ್ಯಾಸನ ಮಾರ್ಗದಲ್ಲಿ ಹರಿದು ಹೋದುದನ್ನು ನೋಡಿದರು.

೧೨೭. ತರುವಾಯ ದೇವತೆಗಳು ಸೇವಕರೊಡನೆ ಹೂಮಳೆಯ ಸುರಿಸಿದರು. ಪರಾಶರನೇ ಮೊದಲಾದ ಮುನಿಗಳು ಅರಳಿದ ಕಣ್ಣುಳ್ಳವರಾದ ಮತ್ತು, "ಮಗು! ನಿನ್ನ ಈ ಕೆಲಸದಿಂದ ನಾವು ಸಂತೋಷಗೊಂಡಿದ್ದೇ ಈಗ ನಾವು ಏನು ಮಾಡಬೇಕು ಹೇಳು" ಎಂದರು.

೧೨೮. ವ್ಯಾಸನು ಹೇಳುತ್ತಾನೆ —ಮಾನವರು ಸಾಧುಗಳಿಗೆ ಸ ವನ್ನುಂಟುಮಾಡುವ ತಪಸ್ಸು, ಅತಿಶಯ ಫಲವುಳ್ಳ ದಾನ ಇವುಗಳನ್ನು ಮಾ ಬೇಕು.

೧೨೯. ಮಹಾಭಾಗರೆ! ನೀವು ಸಂತುಷ್ಟರಾಗಿದ್ದರೆ ನನ್ನಲ್ಲಿ ಅನುಗ್ರ ಮಾಡುವುದಾದರೆ ನೀವೆಲ್ಲರೂ ನನ್ನ ಆಶ್ರಮದಲ್ಲಿ ನಿಸ್ಸಂಶಯವಾಗಿಯ ವಾಸಮಾಡಿರಿ.

೧೩೦. ಪರಾಶರೇ ಮೊದಲಾದ ನೀವೆಲ್ಲರೂ ನರ್ಮದಾಜಲಮಿಶ್ರನಾ ಶಾಕಪರ್ಣಗಳನ್ನು ಆತಿಥ್ಯವನ್ನಾಗಿ ಸ್ವೀಕರಿಸಿ. ರೇವಾನದಿಯ ಉತ್ತರ ದಲ್ಲಿರುವ ನನ್ನ ಆಶ್ರಮದಲ್ಲಿ ನೆಲಸಿರಿ.

೧೩೧–೧೩೮. ಮಾರ್ಕಂಡೇಯನು ಹೇಳುತ್ತಾನೆ:—ತರುವಾಯ ಆ ದ್ವಿ ವರ್ಯರು ನಿತ್ಯವಾದ ಸ್ನಾನತರ್ಪಣಾದಿಗಳನ್ನುಮಾಡಿದರು. ಗೌತಮ, ಭೃ

ಶ್ರೀಫಲೈರ್ಬಿಲ್ವಪತ್ರೈಶ್ಚ ಜುಹುವುರ್ಜಾತವೇದಸಂ ।
ಗೌತಮೋ ಭೃಗುಮಾಂಡವ್ಯೌ ನಾರದೋ ಲೋಮಶಸ್ತಥಾ ॥ ೧೩೨ ॥
ಪರಾಶರಸ್ತಥಾ ಶಂಖಃ ಕೌಶಿಕಶ್ಚ್ಯವನೋ ಮುನಿಃ ।
ಪಿಪ್ಪಲಾದೋ ವಸಿಷ್ಠಶ್ಚ ನಾಚಿಕೇತೋ ಮಹಾತಪಾಃ ॥ ೧೩೩ ॥
ವಿಶ್ವಾಮಿತ್ರೋಽಪ್ಯಗಸ್ತ್ಯಶ್ಚ ಉದ್ದಾಲಕಯಮೌ ತಥಾ ।
ಶಾಂಡಿಲ್ಯೋ ಜೈಮಿನಿಃ ಕಣ್ವೋ ಯಾಜ್ಞ್ಯವಲ್ಕ್ಯೋಶನೋಽಂಗಿರಾಃ ॥
ಶಾತಾತಪೋ ದಧೀಚಿಶ್ಚ ಕಪಿಲೋ ಗಾಲವಸ್ತಥಾ ।
ಜೈಗೀಷವ್ಯಸ್ತಥಾ ದಕ್ಷೋ ಭರತೋ ಮುದ್ಗಲಸ್ತಥಾ ॥ ೧೩೫ ॥
ವಾತ್ಸ್ಯಾಯನೋ ಮಹಾತೇಜಾಃ ಸಂವರ್ತಃ ಶಕ್ತಿರೇವ ಚ ।
ಜಾತೂಕರ್ಣ್ಯೋ ಭರದ್ವಾಜೋ ವಾಲಖಿಲ್ಯಾರುಣಿಸ್ತಥಾ ॥ ೧೩೬ ॥
ಏವಮಾದಿಸಹಸ್ರಾಣಿ ಜುಹ್ವತೇ ಜಾತವೇದಸಂ ।
ಅಕ್ಷಮಾಲಾಕರೋತ್ಕೀರ್ಣಾ ಧ್ಯಾನಯೋಗಪರಾಯಣಾಃ ॥ ೧೩೭ ॥
ಏಕಚಿತ್ತಾ ದ್ವಿಜಾಃ ಸರ್ವೇ ಚಕ್ರುರ್ಹೋಮಕ್ರಿಯಾಂ ತದಾ ।
ತತಃ ಸಮುತ್ಥಿತಂ ಲಿಂಗಂ ಮೋಕ್ಷದಂ ವ್ಯಾಧಿನಾಶನಂ ॥ ೧೩೮ ॥
ಅಚ್ಛೇದ್ಯಂ ಪರಮಂ ದೇವಂ ದೃಷ್ಟ್ವಾ ವ್ಯಾಸಸ್ತುತೋಷ ಚ ।
ಪುಷ್ಪವೃಷ್ಟಿಂ ದದುರ್ದೇವಾ ಆಶೀರ್ವಾದಾನ್ದ್ವಿಜೋತ್ತಮಾಃ ॥ ೧೩೯ ॥

---

ಮಾಂಡವ್ಯ, ನಾರದ, ಲೋಮಶ, ಪರಾಶರ, ಶಂಖ, ಕೌಶಿಕ, ಚ್ಯವನ, ಪಿಪ್ಪಲಾದ, ವಸಿಷ್ಠ, ನಾಚಿಕೇತ, ವಿಶ್ವಾಮಿತ್ರ, ಅಗಸ್ತ್ಯ, ಉದ್ದಾಲಕ, ಯಮ, ಶಾಂಡಿಲ್ಯ, ಜೈಮಿನಿ, ಕಣ್ವ, ಯಾಜ್ಞವಲ್ಕ್ಯ, ಉಶನ, ಅಂಗಿರ, ಶಾತಾತಪ, ದಧೀಚಿ, ಕಪಿಲ, ಗಾಲವ, ಜೈಗೀಷವ್ಯ, ದಕ್ಷ, ಭರತ, ಮುದ್ಗಲ, ವಾತ್ಸ್ಯಾಯನ, ಸಂವರ್ತ, ಶಕ್ತಿ, ಜಾತೂಕರ್ಣ್ಯ, ಭರದ್ವಾಜ, ವಾಲಖಿಲ್ಯ, ಅರುಣಿ ಮೊದಲಾದ ಸಾವಿರಾರು ಮಂದಿ ಮುನಿಗಳು ವ್ಯಾಸಕುಂಡಕ್ಕೆ ಹೋಗಿ ಶ್ರೀಫಲ, ಮತ್ತು ಬಿಲ್ವಪತ್ರೆಗಳಿಂದ ಅಗ್ನಿಯಲ್ಲಿ ಹೋಮಮಾಡಿದರು. ಸಮಸ್ತ ದ್ವಿಜರೂ ಅಕ್ಷಮಾಲೆಯನ್ನು ಹಿಡಿದು ಧ್ಯಾನಯೋಗನಿರತರಾಗಿ ಒಮ್ಮನಸ್ಸಿನಿಂದ ಹೋಮಮಾಡಲು ಅಲ್ಲಿ ಮೋಕ್ಷವನ್ನು ಕೊಡುವುದೂ, ವ್ಯಾಧಿಯನ್ನು ನಿವಾರಿಸುವುದೂ ಆದ ಲಿಂಗವು ಆವಿರ್ಭವಿಸಿತು.

೧೩೯. ವ್ಯಾಸನು ನಾಶರಹಿತವಾದ ಆ ಉತ್ತಮ ಲಿಂಗವನ್ನು ನೋಡಿ ಸಂತೋಷಗೊಂಡನು. ದೇವತೆಗಳೂ ಪುಷ್ಪವೃಷ್ಟಿಯನ್ನು ಸುರಿಸಿದರು. ಬ್ರಾಹ್ಮಣೋತ್ತಮರು ಆಶೀರ್ವದಿಸಿದರು.

ಸಾಷ್ಟಾಂಗಂ ಪ್ರಣತೋ ವ್ಯಾಸೋ ದೇವಂ ದೃಷ್ಟ್ವಾ ತ್ರಿಲೋಚನಂ ।
ಬ್ರಾಹ್ಮಣಾನ್ಪೂಜಯಾಮಾಸ ಶಾಕಮೂಲಫಲೇನ ಚ ॥ ೧೪೦ ॥
ಪಿತೃಪೂರ್ವಂ ದ್ವಿಜಾಃ ಸರ್ವೇ ಭೋಜಿತಾಃ ಪಾಂಡುನಂದನ ।
ಆಶೀರ್ವಾದಾಂಸ್ತತಃ ಪುಣ್ಯಾನ್ದತ್ತ್ವಾ ವಿಪ್ರಾ ಯಯುಃ ಪುನಃ ॥ ೧೪೧ ॥
ತದಾ ಪ್ರಭೃತಿ ತತ್ತೀರ್ಥಂ ವ್ಯಾಸಾಖ್ಯಂ ಪ್ರೋಚ್ಯತೇ ಬುಧೈಃ ॥ ೧೪೨ ॥

ಯುಧಿಷ್ಠಿರ ಉವಾಚ :—

ವ್ಯಾಸತೀರ್ಥಸ್ಯ ಯತ್ಪುಣ್ಯಂ ತತ್ಸರ್ವಂ ಕಥಯಸ್ವ ಮೇ ।
ಸ್ನಾನದಾನವಿಧಾನಂ ಚ ಯಸ್ಮಿನ್ಕಾಲೇ ಮಹಾಫಲಂ ॥ ೧೪೩ ॥

ಶ್ರೀ ಮಾರ್ಕಂಡೇಯ ಉವಾಚ :—

ಕಥಯಾಮಿ ಸಮಸ್ತಂ ತೇ ಭ್ರಾತೃಭಿಃ ಸಹ ಪಾಂಡವ ।
ಕಾರ್ತಿಕಸ್ಯ ಸಿತೇ ಪಕ್ಷೇ ಚತುರ್ದಶ್ಯಾಂ ಜಿತೇಂದ್ರಿಯಃ ॥ ೧೪೪ ॥
ಉಪೋಷ್ಯ ಯೋ ನರೋ ಭಕ್ತ್ಯಾ ರಾತ್ರೌ ಕುರ್ವೀತ ಜಾಗರಂ ।
ಸ್ನಾಪಯೇದೀಶ್ವರಂ ಭಕ್ತ್ಯಾ ಕ್ಷೌದ್ರಕ್ಷೀರೇಣ ಸರ್ಪಿಷಾ ॥ ೧೪೫ ॥
ದಧ್ನಾ ಚ ಖಂಡಯುಕ್ತೇನ ಕುಶತೋಯೇನ ವೈ ಪುನಃ ।
ಶ್ರೀಖಂಡೇನ ಸುಗಂಧೇನ ಗುಂಠಯೇತ್ಪರಮೇಶ್ವರಂ ॥ ೧೪೬ ॥

---

೧೪೦–೧೪೧. ವ್ಯಾಸನು ಶಿವನನ್ನು ನೋಡಿ ನಮಸ್ಕರಿಸಿ ಬ್ರಾಹ್ಮಣರನ್ನು ಪಿತೃಪೂರ್ವಕವಾಗಿ ಶಾಕ, ಗೆಡ್ಡೆಗೆಣಸು, ಫಲಗಳಿಂದ ಪೂಜಿಸಿದನು. ಬಳಿಕ ಬ್ರಾಹ್ಮಣರು ಪುಣ್ಯಕರವಾದ ಆಶೀರ್ವಾದಗಳನ್ನಿತ್ತು ಹೊರಟು ಹೋದರು.

೧೪೨. ಅದು ಮೊದಲ್ಗೊಂಡು ಆ ತೀರ್ಥವನ್ನು ವಿದ್ವಾಂಸರು ವ್ಯಾಸತೀರ್ಥವೆನ್ನುವರು.

೧೪೩. ಯುಧಿಷ್ಠಿರನು ಹೇಳುತ್ತಾನೆ.—ವ್ಯಾಸತೀರ್ಥದಲ್ಲಾಗುವ ಪುಣ್ಯವನ್ನೆಲ್ಲ ನನಗೆ ಹೇಳು. ಅಲ್ಲಿ ಮಾಡಿದ ಸ್ನಾನದಾನಾದಿಗಳು ಯಾವ ಸಮಯದಲ್ಲಿ ಅತಿಶಯ ಫಲಗಳನ್ನು ಕೊಡುವುವು ?

೧೪೪–೧೪೬. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:—ಯುಧಿಷ್ಠಿರ! ಸಹೋದರರೊಡನಿರುವ ನಿನಗೆ ಅದೆಲ್ಲವನ್ನೂ ಹೇಳುತ್ತೇನೆ. ನರನು ಕಾರ್ತಿಕ ಮಾಸದ ಶುಕ್ಲಪಕ್ಷದ ಚತುರ್ದಶೀದಿನ ಜಿತೇಂದ್ರಿಯನಾಗಿ ಉಪವಾಸಮಾಡಿ ಭಕ್ತಿಯಿಂದ ರಾತ್ರಿ ಜಾಗರಣೆಮಾಡಬೇಕು ಈಶ್ವರನನ್ನು ಮಧು, ಕ್ಷೀರ, ತುಪ್ಪ, ಸುಗಂಧಸಹಿತವಾದ ದರ್ಭೆಯ ನೀರು, ಇವುಗಳಿಂದ ಅಭಿಷೇಕ ಮಾಡಿ ಸುವಾಸನೆಯಾದ ಶ್ರೀ ಖಂಡದಿಂದ ಲೇಪಿಸಬೇಕು.

ತತಃ ಸುಗಂಧಕುಸುಮೈರ್ಬಿಲ್ವಪತ್ರೈಶ್ಚ ಪೂಜಯೇತ್ ।
ಮುಚುಕುಂದೇನ ಕುಂದೇನ ಕುಶಜಾತೀಪ್ರಸೂನಕೈಃ ॥ ೧೪೭ ॥
ಉನ್ಮತ್ತಮುನಿಪುಷ್ಪೈಶ್ಚ ತಥಾಽನ್ಯೈಃ ಕಾಲಸಂಭವೈಃ ।
ಅರ್ಚಯೇತ್ಪರಯಾ ಭಕ್ತ್ಯಾ ದ್ವೀಪೇಶ್ವರಮನುತ್ತಮಂ ॥ ೧೪೮ ॥
ಇಕ್ಷುಗಡುಕದಾನೇನ ತುಷ್ಯತೇ ಪರಮೇಶ್ವರಃ ।
ಗಡುಕಾಷ್ಟಕದಾನೇನ ಪಾತಕಂ ಯಾತ್ಯಹೋರ್ಜಿತಂ ॥ ೧೪೯ ॥
ಮಾಸಾರ್ಜಿತಂ ಚ ನಶ್ಯೇತ ಗಡುಕಾಽಷ್ಟಶತೇನ ಚ ।
ಷಾಣ್ಮಾಸಿಕಂ ಸಹಸ್ರೇಣ ದ್ವಿಗುಣೈರಬ್ದಿಕಂ ತಥಾ ॥ ೧೫೦ ॥
ಆಜನ್ಮಜನಿತಂ ಪಾಪಮಯುತೇನ ಪ್ರಣಶ್ಯತಿ ।
ದ್ವಿಗುಣೈರ್ನಶ್ಯತೇ ವ್ಯಾಧಿಸ್ತ್ರಿಗುಣೈಃ ಸ್ಯಾದ್ಧನಾಗಮಃ ॥ ೧೫೧ ॥
ಷಡ್ಗುಣೈರ್ಜಾಯತೇ ವಾಗ್ಮೀ ಸಿದ್ಧಸ್ತದ್ದ್ವಿಗುಣೈಸ್ತಥಾ ।
ರುದ್ರತ್ವಂ ದಶಲಕ್ಷೈಶ್ಚ ಜಾಯತೇ ನಾಽತ್ರ ಸಂಶಯಃ ॥ ೧೫೨ ॥
ಪೌರ್ಣಮಾಸ್ಯಾಂ ನೃಪಶ್ರೇಷ್ಠ ಸ್ನಾನಂ ಕುರ್ವೀತ ಭಕ್ತಿತಃ ।
ಮಂತ್ರೋಕ್ತೇನ ವಿಧಾನೇನ ಸರ್ವಪಾಪಕ್ಷಯಂಕರಂ ॥ ೧೫೩ ॥
ವಾರುಣಂ ಚ ತಥಾಗ್ನೇಯಂ ಬ್ರಾಹ್ಮ್ಯಂ ಚೈವಾಕ್ಷಯಂಕರಂ ।
ದೇವಾನ್ಪಿತೄನ್ಮನುಷ್ಯಾಂಶ್ಚ ವಿಧಿವತ್ತರ್ಪಯೇದ್ಬುಧಃ ॥ ೧೫೪ ॥

---

೧೪೭–೧೪೮. ಬಳಿಕ ಸುಗಂಧಪುಷ್ಪಗಳಿಂದಲೂ, ಬಿಲ್ವಪತ್ರೆಗಳಿಂದಲೂ, ಮುಚುಕುಂದ, ಕುಂದ, ಕುಶ, ಜಾಜಿ, ಉನ್ಮತ್ತ, ಆಗಸೆ ಮೊದಲಾದ ಹೂವುಗಳಿಂದಲೂ, ಆ ಕಾಲದಲ್ಲಿ ಸಿಕ್ಕುವ ಇತರ ಪುಷ್ಪಗಳಿಂದಲೂ ಅರ್ಚಿಸಬೇಕು.

೧೪೯. ಪರಮೇಶ್ವರನು ಇಕ್ಷುಗಡುಕ (ಕಬ್ಬಿನ ಜಲ್ಲೆ) ದಾನದಿಂದ ಸಂತೋಷಗೊಳ್ಳುವನು. ಎಂಟು ಇಕ್ಷುಗಡುಕಗಳ ದಾನದಿಂದ ಒಂದು ದಿನದ ಪಾಪವು ಪರಿಹಾರವಾಗುವುದು.

೧೫೦–೧೫೨. ಎಂಟನೂರು ಗಡುಕಗಳ ದಾನದಿಂದ ಒಂದುತಿಂಗಳ ಪಾಪವೂ, ಸಹಸ್ರಗಳಿಂದ ಆರು ತಿಂಗಳ ಪಾಪವೂ, ಎರಡುಸಾವಿರಗಳಿಂದ ಒಂದುವರ್ಷದ ಪಾಪವೂ, ಹತ್ತುಸಾವಿರಗಳಿಂದ ಹುಟ್ಟಿದ ಮೊದಲ್ಗೊಂಡು ಮಾಡಿದಪಾಪವೂ ಪರಿಹಾರವಾಗುವುದು. ಇಪ್ಪತ್ತುಸಾವಿರಗಳಿಂದ ವ್ಯಾಧಿನಾಶವೂ, ಮೂವತ್ತುಸಾವಿರಗಳಿಂದ ಧನಪ್ರಾಪ್ತಿಯೂ, ಅರುವತ್ತುಸಾವಿರಗಳಿಂದ ವಾಗ್ಮಿಯೂ, ನೂರಿಪ್ಪತ್ತು ಸಾವಿರಗಳಿಂದ ಸಿದ್ಧನೂ ಆಗುವನು. ಹತ್ತುಲಕ್ಷಗಳಿಂದ ರುದ್ರತ್ವವು ಲಭಿಸುವುದು.

೧೫೩–೧೫೪. ನರೇಂದ್ರನೆ! ಅಲ್ಲಿ ಹುಣ್ಣಿಮೆಯದಿನ ಮಂತ್ರೋಕ್ತವಿಧಿಯಿಂದ ಸಕಲಪಾಪಗಳನ್ನು ಪರಿಹರಿಸುವುದೂ, ಅಕ್ಷಯಫಲವನ್ನೀಯುವುದೂ

ಋಚಾ ಋಗ್ವೇದಜಂ ಪುಣ್ಯಂ ಸಾಮ್ನಾ ಸಾಮಫಲಂ ಲಭೇತ್ ।
ಯಜುರ್ವೇದಸ್ಯ ಯಜುಷಾ ಗಾಯತ್ರ್ಯಾ ಸರ್ವಮಾಪ್ನುಯಾತ್ ॥೧೫೫॥
ಅಕ್ಷರಂ ಚ ಜಪೇನ್ಮಂತ್ರಂ ಸೌರಂ ವಾ ಶಿವದೈವತಂ ।
ಅಥವಾ ವೈಷ್ಣವಂ ಮಂತ್ರಂ ದ್ವಾದಶಾಕ್ಷರಸಂಜ್ಞಿತಂ ॥ ೧೫೬ ॥
ಪೂಜಯೇದ್ಬ್ರಾಹ್ಮಣಾನ್ಭಕ್ತ್ಯಾ ಸರ್ವಲಕ್ಷಣಲಕ್ಷಿತಾನ್ ।
ಸ್ವದಾರನಿರತಾನ್ವಿಪ್ರಾನ್ ದಂಭಲೋಭವಿವರ್ಜಿತಾನ್ ॥ ೧೫೭ ॥
ಭಿನ್ನವೃತ್ತಿಕರಾನ್ಪಾಪಾನ್ಪತಿತಾನ್ ಶೂದ್ರಸೇವನಾನ್ ।
ಶೂದ್ರೀ ಗ್ರಹಣಸಂಯುಕ್ತಾನ್ವೃಷಲೀ ಯಸ್ಯ ಮಂದಿರೇ ॥ ೧೫೮ ॥
ಪರೋಕ್ಷವಾದಿನೋ ದುಷ್ಟಾನ್ಗುರುನಿಂದಾಪರಾಯಣಾನ್ ।
ವೇದದ್ವೇಷಣಶೀಲಾಂಶ್ಚ ಹೈತುಕಾನ್ಬಕವೃತ್ತಿಕಾನ್ ॥ ೧೫೯ ॥
ಈದೃಶಾನ್ವರ್ಜಯೇಚ್ಛ್ರಾದ್ಧೇ ದಾನೇ ಸರ್ವವ್ರತೇಷು ಚ ।
ಗಾಯತ್ರೀ ಸಾರಮಾತ್ರೋಽಪಿ ವರಂ ವಿಪ್ರಃ ಸುಯಂತ್ರಿತಃ ॥ ೧೬೦ ॥
ನಾಯಂತ್ರಿತಶ್ಚತುರ್ವೇದೀ ಸರ್ವಾಶೀ ಸರ್ವವಿಕ್ರಯೀ ।
ಈದೃಶಾನ್ಪೂಜಯೇದ್ವಿಪ್ರಾನನ್ನದಾನಹಿರಣ್ಯತಃ ॥ ೧೬೧ ॥

---

ಆದ ವಾರುಣ, ಆಗ್ನೇಯ, ಬ್ರಾಹ್ಮ್ಯಸ್ನಾನಗಳನ್ನು ಮಾಡಬೇಕು, ದೇವ, ಪಿತೃ, ಮನುಷ್ಯರಿಗೆ ವಿಧಿಯಂತೆ ತರ್ಪಣವನ್ನೂ ಮಾಡಬೇಕು.

೧೫೫. ಒಂದು ಋಕ್ಕಿನಿಂದ ಋಗ್ವೇದ, ಒಂದು ಸಾಮದಿಂದ ಸಾಮವೇದ, ಯಜುರ್ವೇದದ ಒಂದು ಮಂತ್ರದಿಂದ ಯಜುರ್ವೇದ ಪಾರಾಯಣಗಳ ಫಲಗಳೂ, ಗಾಯತ್ರಿ ಜಪದಿಂದ ಎಲ್ಲಾ ಫಲಗಳೂ ದೊರೆಯುವುವು.

೧೫೬–೧೫೭. ಸೌರ, ಶೈವ ಅಥವಾ ವೈಷ್ಣವ ದ್ವಾದಶಾಕ್ಷರಮಂತ್ರಗಳನ್ನು ಜಪಿಸಬೇಕು. ಸಮಸ್ತಲಕ್ಷಣಗಳಿಂದ ಕೂಡಿದವರೂ, ಸ್ವಪತ್ನೀನಿರತರೂ, ದಂಭಲೋಭಗಳಿಲ್ಲದವರೂ ಆದ ಬ್ರಾಹ್ಮಣರನ್ನು ಭಕ್ತಿಯಿಂದ ಪೂಜಿಸಬೇಕು.

೧೫೮–೧೬೦. ಭಿನ್ನವೃತ್ತಿಯನ್ನವಲಂಬಿಸಿದವರೂ, ಪತಿತರೂ, ಶೂದ್ರಸೇವಕರೂ, ಶೂದ್ರಸ್ತ್ರೀಯನ್ನು ಕಟ್ಟಿಕೊಂಡವರೂ, ವೃಷಲಿಯನ್ನು ಮನೆಯಲ್ಲಿ ಇಟ್ಟುಕೊಂಡಿರುವವರೂ, ಪರೋಕ್ಷದಲ್ಲಿ ವಾದಿಸುವವರೂ, ದುಷ್ಟರೂ, ಗುರುನಿಂದಾನಿರತರೂ, ವೇದವನ್ನು ದ್ವೇಷಿಸುವವರೂ, ಯುಕ್ತಿವಾದಿಗಳೂ, ಬಕಪಕ್ಷಿಯ ನಡತೆಯುಳ್ಳವರೂ ಆದ ಬ್ರಾಹ್ಮಣರನ್ನು ಶ್ರಾದ್ಧ, ದಾನ, ಸಮಸ್ತ ವ್ರತಗಳು ಇವುಗಳಲ್ಲಿ ತ್ಯಜಿಸಬೇಕು. ಇಂದ್ರಿಯ ನಿಗ್ರಹವುಳ್ಳವರಾಗಿ ಗಾಯತ್ರಿಯೊಂದನ್ನೇ ಜಪಿಸುವ ವಿಪ್ರನು ಉತ್ತಮನು.

೧೬೧–೧೬೨. ಜಿತೇಂದ್ರಿಯನಲ್ಲದವನೂ, ಸರ್ವಭಕ್ಷಕನೂ, ಸಮಸ್ತವನ್ನು ಮಾರುವವನೂ ಆದವನು ನಾಲ್ಕು ವೇದಗಳನ್ನು ಅಧ್ಯಯನಮಾಡಿ

ಉಪಾನಹೌ ಚ ವಸ್ತ್ರಾಣಿ ಶಯ್ಯಾಂ ಛತ್ರಮಥಾಸನಂ ।
ಯೋ ದದ್ಯಾದ್ಬ್ರಾಹ್ಮಣೇ ಭಕ್ತ್ಯಾ ಸೋಽಪಿ ಸ್ವರ್ಗೇ ಮಹೀಯತೇ॥೧೬೨॥
ಪ್ರತ್ಯಕ್ಷಾ ಸುರಭೀ ತತ್ರ ಜಲಧೇನುಸ್ತಥಾಘೃತಾ ।
ತಿಲಧೇನುಃ ಪ್ರದಾತವ್ಯಾ ಮಹಿಷ್ಯಶ್ಚ ತಥೈವ ಚ ॥ ೧೬೩ ॥
ಕೃಷ್ಣಾಜಿನಪ್ರದಾತಾ ಯೋ ದಾತಾ ಯಸ್ತಿಲಸರ್ಪಿಷೋಃ ।
ಕನ್ಯಾಪುಸ್ತಕಯೋರ್ದಾತಾ ಸೋಽಕ್ಷಯಂ ಲೋಕಮಾಪ್ನುಯಾತ್ ॥
ಧೂರ್ವಹೌ ಸುರಸಂಯುಕ್ತೌ ಧಾನ್ಯೋಪಸ್ಕರಸಂಯುತೌ ।
ದಾಪಯೇತ್ಸ್ವರ್ಗಕಾಮಸ್ತು ಇತಿ ಮೇ ಸತ್ಯಭಾಷಿತಂ ॥ ೧೬೫ ॥
ಸೂತ್ರೇಣ ವೇಷ್ಟಯೇದ್ದ್ವೀಪಮಥವಾ ಜಗತೀಂ ಶುಭಾಂ ।
ಮಂದಿರಂ ಪರಯಾ ಭಕ್ತ್ಯಾ ಪರಮೇಶಮಥಾಽಪಿ ವಾ ॥ ೧೬೬ ॥
ಪ್ರದಕ್ಷಿಣಾಂ ವಿಧಾನೇನ ಯಃ ಕರೋತ್ಯತ್ರ ಮಾನವಃ ।
ಜಂಬೂಪ್ಲಕ್ಷಾಹ್ವಯೌ ದ್ವೀಪೌ ಶಾಲ್ಮಲಿಶ್ಚಾಽಪರೋ ನೃಪ ॥ ೧೬೭ ॥
ಕುಶಃ ಕ್ರೌಂಚಸ್ತಥಾ ಕಾಶಃ ಪುಷ್ಕರಶ್ಚೈವ ಸಪ್ತಮಃ ।
ಸಪ್ತಸಾಗರಪರ್ಯಂತಾ ವೇಷ್ಟಿತಾ ತೇನ ಭಾರತ ॥ ೧೬೮ ॥
ದ್ವೀಪೇಶ್ವರೇ ಮಹಾರಾಜ ವೃಷೋತ್ಸರ್ಗಂ ಚ ಕಾರಯೇತ್ ।
ವೃಷೇಣಾಽರುಣವರ್ಣೇನ ಮಾಹೇಶಂ ಲೋಕಮಾಪ್ನುಯಾತ್ ॥ ೧೬೯ ॥

---

ದ್ದರೂ ಉತ್ತಮನಲ್ಲ. ಹಿಂದೆ ಹೇಳಿದಂತಹ ಉತ್ತಮ ಬ್ರಾಹ್ಮಣರಿಗೆ ಅನ್ನ, ಸುವರ್ಣ, ಪಾದರಕ್ಷೆ, ವಸ್ತ್ರ, ಹಾಸಿಗೆ, ಕೊಡೆ, ಆಸನ ಇವುಗಳನ್ನು ಭಕ್ತಿಯಿಂದ ದಾನಮಾಡುವವನು ಸ್ವರ್ಗದಲ್ಲಿ ಪೂಜ್ಯನಾಗುವನು.

೧೬೩–೧೬೪. ಅಲ್ಲಿ ಪ್ರತ್ಯಕ್ಷವಾದ ಗೋವು, ಜಲಧೇನು, ಘೃತಧೇನು, ತಿಲಧೇನು, ಎಮ್ಮೆ, ಕೃಷ್ಣಾಜಿನ, ಎಳ್ಳು, ತುಪ್ಪ, ಕನ್ಯೆ, ಪುಸ್ತಕ ಇವುಗಳನ್ನು ದಾನಮಾಡುವವನು ಅಕ್ಷಯಲೋಕವನ್ನು ಹೊಂದುವನು.

೧೬೫. ಸ್ವರ್ಗವನ್ನು ಬಯಸುವವನು ಅಲ್ಲಿ ಗೊರಸು, ಧಾನ್ಯಗಳಿಂದ ಕೂಡಿದ ಎತ್ತುಗಗಳನ್ನು ದಾನಮಾಡಬೇಕು. ಇದು ನನ್ನ ನಿಜವಾದ ಮಾತು.

೧೬೬–೧೬೮. ಇಲ್ಲಿ ದ್ವೀಪವನ್ನೊ, ಭೂಮಿಯನ್ನೊ, ದೇವಾಲಯವನ್ನೊ ಅಥವಾ ಪರಮೇಶ್ವರನನ್ನೊ ನೂಲಿನಿಂದ ಸುತ್ತಿ ವಿಧಿಯಿಂದ ಪ್ರದಕ್ಷಿಣೆಗೈಯುವವನು ಜಂಬು, ಪ್ಲಕ್ಷ, ಶಾಲ್ಮಲಿ, ಕುಶ, ಕ್ರೌಂಚ, ಕಾಶ, ಪುಷ್ಕರಗಳೆಂಬ ಏಳು ದ್ವೀಪಗಳನ್ನು ಏಳು ಸಮುದ್ರಗಳವರೆಗೆ ಸುತ್ತಿದಂತಾಗುವನು.

೧೬೯. ಮಹಾರಾಜ! ಈ ದ್ವೀಪೇಶ್ವರದಲ್ಲಿ ಕೆಂಪು ವೃಷಭದಿಂದ ವೃಷೋತ್ಸರ್ಗವನ್ನು ಮಾಡುವವನು ಮಹೇಶ್ವರಲೋಕವನ್ನು ಸೇರುವನು.

ಯಸ್ತು ವೈ ಪಾಂಡರೇ ವಕ್ತ್ರೇ ಲಲಾಟೇ ಪಾದಯೋಸ್ತಥಾ ।
ಲಾಂಗೂಲೇ ಯಸ್ತು ವೈ ಶುಭ್ರಃ ಸ ವೈ ನಾಕಸ್ಯ ದರ್ಶಕಃ ॥ ೧೭೦ ॥
ನೀಲೋಽಯಮೀದೃಶಃ ಪ್ರೋಕ್ತೋ ಯಸ್ತು ದ್ವೀಪೇಶ್ವರೇ ತ್ಯಜೇತ್ ।
ಸ ಸಮಾ ರೋಮಸಂಖ್ಯಾತಾ ನಾಕೇ ವಸತಿ ಭಾರತ ॥ ೧೭೧ ॥
ಸೌರಂ ಚ ಶಾಂಕರಂ ಲೋಕಂ ವೈರಂಚಂ ವೈಷ್ಣವಂ ಕ್ರಮಾತ್ ।
ಭುನಕ್ತಿ ಸ್ವೇಚ್ಛಯಾ ರಾಜನ್ವ್ಯಾಸತೀರ್ಥಪ್ರಭಾವತಃ ॥ ೧೭೨ ॥
ಸಪತ್ನೀಕಂ ತತೋ ವಿಪ್ರಂ ಪೂಜಯೇತ್ತತ್ರ ಭಕ್ತಿತಃ ।
ಸಿತರಕ್ತಾನಿ ವಸ್ತ್ರಾಣಿ ಯೋ ದದ್ಯಾದಗ್ರಜನ್ಮನೇ ॥ ೧೭೩ ॥
ಕೃತ್ವಾ ಪ್ರದಕ್ಷಿಣಂ ಯುಗ್ಮಂ ಪ್ರೀಯತಾಂ ಮೇ ಜಗದ್ಗುರುಃ ।
ನಾಸ್ತಿ ವಿಪ್ರಸಮೋ ಬಂಧುರಿಹ ಲೋಕೇ ಪರತ್ರ ಚ ॥ ೧೭೪ ॥
ಯಮಲೋಕೇ ಮಹಾಘೋರೇ ಪತಂತಂ ಯೋಽಭಿರಕ್ಷತಿ ।
ಇತಿಹಾಸಪುರಾಣಜ್ಞಂ ವಿಷ್ಣುಭಕ್ತಂ ಜಿತೇಂದ್ರಿಯಂ ॥ ೧೭೫ ॥
ಪೂಜಯೇತ್ಪರಯಾ ಭಕ್ತ್ಯಾ ಸಾಮಗಂ ವಾ ವಿಶೇಷತಃ ।
ದ್ವೀಪೇಶ್ವರಂ ಚ ಯೇ ಭಕ್ತ್ಯಾ ಸಂಸ್ಮರಂತಿ ಗೃಹೇ ಸ್ಥಿತಾಃ ॥ ೧೭೬ ॥
ನ ತೇಷಾಂ ಜಾಯತೇ ಶೋಕೋ ನಹಾನಿರ್ನಚ ದುಷ್ಕೃತಂ ।
ಪ್ರಥಮಂ ಪೂಜಯೇತ್ತತ್ರ ಲಿಂಗಂ ಸಿದ್ಧೇಶ್ವರಂ ತತಃ ॥ ೧೭೭ ॥

---

೧೭೦–೧೭೧. ಮುಖ, ಹಣೆ, ಪಾದ, ಬಾಲ ಇವುಗಳಲ್ಲಿ ಶುಭ್ರವಾದುದು ನೀಲವೃಷಭವೆನ್ನಿಸುವುದು. ಇದನ್ನು ದ್ವೀಪೇಶ್ವರದಲ್ಲಿ ದಾನಮಾಡುವವನು ಅದರ ರೋಮಸಂಖ್ಯೆಯಷ್ಟುಕಾಲ ಸ್ವರ್ಗದಲ್ಲಿ ವಾಸಮಾಡುವನು.

೧೭೨. ಮತ್ತು ವ್ಯಾಸತೀರ್ಥದ ಪ್ರಭಾವದಿಂದ ಸೌರ, ಶಾಂಕರ, ಬ್ರಹ್ಮ ವಿಷ್ಣು ಲೋಕಗಳಲ್ಲಿ ಕ್ರಮವಾಗಿ ಸುಖವನ್ನನುಭವಿಸುವನು.

೧೭೩–೧೭೪. ಬಳಿಕ ಅಲ್ಲಿ ಪತ್ನಿಯಿಂದ ಸಹಿತನಾದ ಬ್ರಾಹ್ಮಣನನ್ನು ಭಕ್ತಿಯಿಂದ ಪೂಜಿಸಿ ಅವನಿಗೆ ಬಿಳಿಯ ಮತ್ತು ಕೆಂಪುವಸ್ತ್ರಗಳನ್ನು ದಾನಮಾಡಿ ಜಗದ್ಗುರುವು ಸಂತುಷ್ಟನಾಗಲಿ ಎಂದು ಎರಡು ಪ್ರದಕ್ಷಿಣೆಗಳನ್ನುಮಾಡಬೇಕು. ಮಹಾಘೋರವಾದ ಯಮಲೋಕದಲ್ಲಿ ಬೀಳುವವನನ್ನು ರಕ್ಷಿಸುವ ಬ್ರಾಹ್ಮಣನಿಗೆ ಸಮಾನವಾದ ಬಂಧುವು ಇಹಪರಲೋಕಗಳಲ್ಲಿಲ್ಲ. ಇತಿಹಾಸ ಪುರಾಣಗಳನ್ನರಿತವನೂ, ವಿಷ್ಣುಭಕ್ತನೂ, ಜಿತೇಂದ್ರಿಯನೂ, ವಿಶೇಷವಾಗಿ ಸಾಮವೇದಿಯೂ ಆದ ಬ್ರಾಹ್ಮಣನನ್ನು ಅತಿಶಯಭಕ್ತಿಯಿಂದ ಪೂಜಿಸಬೇಕು. ಮನೆಯಲ್ಲಿಯೇ ಇದ್ದು ಭಕ್ತಿಯಿಂದ ದ್ವೀಪೇಶ್ವರನನ್ನು ಸ್ಮರಿಸುವವರಿಗೆ ಶೋಕವೂ, ಕೇಡೂ, ಪಾಪವೂ ಉಂಟಾಗುವುದಿಲ್ಲ. ಅಲ್ಲಿ ಮೊದಲು ಸಿದ್ಧೇಶ್ವರ

ಯತ್ರ ಸಿದ್ಧೋ ಮಹಾಭಾಗೋ ವ್ಯಾಸಃ ಸತ್ಯವತೀಸುತಃ ।
ಅಸ್ಯೈವ ಪೂಜನಾತ್ಸಿದ್ಧೋ ಧಾರಾಸರ್ಪೋ ಮಹಾಮತಿಃ ॥ ೧೭೮ ॥
ತತ್ರ ತೀರ್ಥೇ ತು ಯೋ ರಾಜನ್ಪ್ರಾಣತ್ಯಾಗಂ ಕರೋತಿ ಚ ।
ಸೂರ್ಯಲೋಕಮಸೌ ಭಿತ್ವಾ ಪ್ರಯಾತಿ ಶಿವಸನ್ನಿಧೌ ॥ ೧೭೯ ॥
ಸಮಾಃ ಸಹಸ್ರಾಣಿ ಚ ಸಪ್ತ ವೈ ಜಲೇ
ದಶೈಕಮಗ್ನೌ ಪತನೇ ಚ ಷೋಡಶ ।
ಮಹಾಹವೇ ಷಷ್ಟಿರಶೀತಿಗೋಗ್ರಹೇ
ಹ್ಯನಾಶಕೇ ಭಾರತ ಚಾಕ್ಷಯಾ ಗತಿಃ ॥ ೧೮೦ ॥
ಪಿತಾ ಪಿತಾಮಹಶ್ಚೈವ ತಥೈವ ಪ್ರಪಿತಾಮಹಃ ।
ವಾಯುಭೂತಂ ನಿರೀಕ್ಷಂತೇ ಹ್ಯಾಗಚ್ಛಂತಂ ಸ್ವಗೋತ್ರಜಂ ॥ ೧೮೧ ॥
ಅಸ್ಮದ್ಗೋತ್ರೇಽಸ್ತಿ ಕಃ ಪುತ್ರೋ ಯೋ ನೋದದ್ಯಾತ್ತಿಲೋದಕಂ ।
ಕಾರ್ತಿಕ್ಯಾಂ ಚ ವಿಶೇಷೇಣ ವೈಶಾಖ್ಯಾಂ ವಾ ತಥೈವ ಚ ॥ ೧೮೨ ॥
ಸ್ವರ್ಗತಿಂ ಚ ಪ್ರಯಾಸ್ಯಾಮಸ್ತತ್ರ ತೀರ್ಥೋಪಸೇವನಾತ್ ।
ಏತತ್ತೇ ಕಥಿತಂ ಸರ್ವಂ ದ್ವಿಪೇಶ್ವರಮನುತ್ತಮಂ ॥ ೧೮೩ ॥

---

ಲಿಂಗವನ್ನು ಪೂಜಿಸಬೇಕು. ಬಳಿಕ ಅಲ್ಲಿ ಸಿದ್ಧಿಯನ್ನು ಪಡೆದಿರುವ ವ್ಯಾಸನನ್ನು ಅರ್ಚಿಸಬೇಕು. ಅವನ ಪೂಜೆಯಿಂದಲೇ ಧಾರಾಸರ್ಪರಾಜನು ಸಿದ್ಧನಾಗಿರುವನು.

೧೭೯. ಆ ತೀರ್ಥದಲ್ಲಿ ಪ್ರಾಣತ್ಯಾಗಮಾಡಿದವನು ಸೂರ್ಯಲೋಕವನ್ನು ಭೇದಿಸಿ ಶಿವನ ಸಮೀಪಕ್ಕೆ ಹೋಗುವನು.

೧೮೦. ಏಳು ಸಾವಿರ ವರ್ಷಗಳು ನೀರಿನಲ್ಲಿಯೂ, ಹನ್ನೊಂದು ಸಾವಿರ ವರ್ಷಕಾಲ ಅಗ್ನಿಯಲ್ಲಿಯೂ, ಹದಿನಾರುಸಾವಿರ ವರ್ಷಗಳು ವಾಯುವಿನಲ್ಲಿಯೂ, ಅರುವತ್ತುಸಾವಿರವರ್ಷ ಮಹಾಯುದ್ಧದಲ್ಲಿಯೂ, ಎಂಬತ್ತುಸಾವಿರ ವರ್ಷ ಗೋಗ್ರಹಣದಲ್ಲಿಯೂ, ಉಪವಾಸಮಾಡುವವರಿಗೆ ಶಾಶ್ವತವಾದ ಗತಿಯುಂಟಾಗುವುದು.

೧೮೧. ಪಿತೃ, ಪಿತಾಮಹ, ಪ್ರಪಿತಾಮಹರು ಗಾಳಿಯಾಗಿ ಬರುತ್ತಿರುವ ತಮ್ಮ ಗೋತ್ರದವನನ್ನು ನಿರೀಕ್ಷಿಸುತ್ತಾರೆ.

೧೮೨-೧೮೩. "ನಮ್ಮ ಗೋತ್ರದಲ್ಲಿ ಯಾವ ಪುತ್ರನಿದ್ದಾನೆ? ಕಾರ್ತಿಕ ಅಥವಾ ವೈಶಾಖ ಬಹುಳ ಅಮಾವಾಸ್ಯೆಯದಿನ ಅವನು ಇಲ್ಲಿ ನಮಗೆ ತಿಲತರ್ಪಣ ಮಾಡಲಾರನೆ? ಆದರಿಂದ ನಾವು ತೀರ್ಥವನ್ನು ಸೇವಿಸಿ ಸ್ವರ್ಗವನ್ನು ಸೇರುವೆವಲ್ಲ!" ಎಂದು ಚಿಂತಿಸುತ್ತಿರುತ್ತಾರೆ. ಹೀಗೆ, ನಿಮಗೆ ಈ ಉತ್ತಮವಾದ ದ್ವಿಪೇಶ್ವರಮಾಹಾತ್ಮ್ಯವನ್ನು ಹೇಳಿರುವೆನು.

ಯಃ ಪಠೇತ್ಪರಯಾ ಭಕ್ತ್ಯಾ ಶೃಣುಯಾತ್ತದ್ಗತೋ ನೃಪ ।
ಸೋಽಪಿ ಪಾಪವಿನಿರ್ಮುಕ್ತೋ ಮೋದತೇ ಶಿವಮಂದಿರೇ ॥ ೧೮೪ ॥
ಊಷರಂ ಸರ್ವತೀರ್ಥಾನಾಂ ನಿರ್ಮಿತಂ ಮುನಿಪುಂಗವೈಃ ।
ಕಾಮಪ್ರದಂ ನೃಪಶ್ರೇಷ್ಠ ವ್ಯಾಸತೀರ್ಥಂ ನ ಸಂಶಯಃ ॥ ೧೮೫ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಅವಂತ್ಯಖಂಡೇ ತೃತೀಯೇ ರೇವಾಖಂಡೇ
"ವ್ಯಾಸತೀರ್ಥಮಾಹಾತ್ಮ್ಯವರ್ಣನಂ"
ನಾಮ ಸಪ್ತನವತಿತಮೋಽಧ್ಯಾಯಃ

---

೧೮೪. ಇದನ್ನು ಆ ದ್ವೀಪೇಶ್ವರದಲ್ಲಿದ್ದು ಕೇಳುವ ಮಾನವನು ಪಾಪ ಮುಕ್ತನಾಗಿ ಶಿವಾಲಯದಲ್ಲಿ ಆನಂದಗೊಳ್ಳುವನು.

೧೮೫. ಮುನಿಶ್ರೇಷ್ಠರು ನಿರ್ಮಿಸಿರುವ ವ್ಯಾಸತೀರ್ಥವು ಊಷರದಂತೆ ನಿಶ್ಚಯವಾಗಿಯೂ ಇಷ್ಟಾರ್ಥವನ್ನು ನೀಡುವುದು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಅವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ವ್ಯಾಸತೀರ್ಥಮಾಹಾತ್ಮ್ಯವರ್ಣನ"ವೆಂಬ
ತೊಂಬತ್ತೇಳನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥಾಷ್ಟನವತಿತಮೋಽಧ್ಯಾಯಃ

## ಪ್ರಭಾಸತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ತತೋ ಗಚ್ಛೇತ್ತು ರಾಜೇಂದ್ರ ಪ್ರಭಾಸೇಶ್ವರಮುತ್ತಮಂ ।
ವಿಖ್ಯಾತಂ ತ್ರಿಷು ಲೋಕೇಷು ಸ್ವರ್ಗಸೋಪಾನಮುತ್ತಮಂ ॥ ೧ ॥

ಯುಧಿಷ್ಠಿರ ಉವಾಚ :—

ಪ್ರಭಾಸಂ ತಾತ ಮೇ ಬ್ರೂಹಿ ಕಥಂ ಜಾತಂ ಮಹಾಫಲಂ ।
ಸ್ವರ್ಗಸೋಪಾನದಂ ದೃಶ್ಯಂ ಸಂಕ್ಷೇಪಾತ್ಕಥಯಾಶು ಮೇ ॥ ೨ ॥

ಶ್ರೀ ಮಾರ್ಕಂಡೇಯ ಉವಾಚ :—

ದುರ್ಭಗಾ ರವಿಪತ್ನೀ ಚ ಪ್ರಭಾ ನಾಮೇತಿ ವಿಶ್ರುತಾ ।
ತಥಾಚಾರಾಧಿತಃ ಶಂಭುರುಗ್ರೇಣ ತಪಸಾ ಪುರಾ ॥ ೩ ॥
ವಾಯುಭಕ್ಷಾ ಸ್ಥಿತಾ ವರ್ಷಂ ವರ್ಷಂ ಧ್ಯಾನಪರಾಯಣಾ ।
ತತಸ್ತುಷ್ಟೋ ಮಹಾದೇವಃ ಪ್ರಭಾಯಾಃ ಪಾಂಡುನಂದನ ॥ ೪ ॥

---

## ಕನ್ನಡದ ಅನುವಾದ

### ಪ್ರಭಾಸತೀರ್ಥಮಾಹಾತ್ಮ್ಯವರ್ಣನ

೧. ಶ್ರೀ ಮಾರ್ಕಂಡೇಯನು ಹೇಳುತ್ತಾನೆ —ನರೇಂದ್ರ! ಬಳಿಕ ಮೂರು ಲೋಕಗಳಲ್ಲಿ ಪ್ರಸಿದ್ಧವೂ, ಸ್ವರ್ಗಕ್ಕೆ ಮೆಟ್ಟಲೂ ಆದ ಪ್ರಭಾಸೇಶ್ವರಕ್ಕೆ ಹೋಗಬೇಕು.

೨. ಯುಧಿಷ್ಠಿರನು ಹೇಳುತ್ತಾನೆ —ತಾತ! ಪ್ರಭಾಸೇಶ್ವರ ಕ್ಷೇತ್ರವು ಅತ್ಯಂತ ಫಲಪ್ರದವೂ, ಸ್ವರ್ಗಕ್ಕೆ ಮೆಟ್ಟಲನ್ನುಂಟುಮಾಡುವುದೂ, ದರ್ಶನೀಯವೂ ಹೇಗಾಯಿತು? ಇದನ್ನು ಸಂಕ್ಷೇಪವಾಗಿ ನನಗೆ ಹೇಳು.

೩. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:—ಹಿಂದೆ ದೌರ್ಭಾಗ್ಯವನ್ನು ಹೊಂದಿರುವ ಪ್ರಭೆಯೆಂಬ ಸೂರ್ಯಪತ್ನಿಯು ಕಠಿನತಪಸ್ಸಿನಿಂದ ಶಿವನನ್ನು ಆರಾಧಿಸಿದಳು.

೪. ಆವಳು ಒಂದು ವರ್ಷ ವಾಯುಭಕ್ಷಳೂ, ಒಂದುವರ್ಷ ಧ್ಯಾನ ಮಾಡುವವಳೂ ಆಗಿ ತಪಸ್ಸನ್ನುಮಾಡಲು ಆಕೆಯಲ್ಲಿ ಮಹಾದೇವನು ಪ್ರಸನ್ನನಾದನು.

ಈಶ್ವರ ಉವಾಚ :—

ಕಸ್ಮಾತ್ತ್ವಂಕ್ಲಿಶ್ಯಸೇ ಬಾಲೇ ಕಥ್ಯತಾಂ ಯದ್ವಿವಕ್ಷಿತಂ ।
ಅಹಂ ಹಿ ಭಾಸ್ಕರೋಽಪ್ಯೇಕೋ ನಾನಾತ್ವಂ ನೈವ ವಿದ್ಯತೇ ॥ ೫ ॥

ಪ್ರಭೋವಾಚ :—

ನಾನ್ಯೋ ದೇವಃ ಸ್ತ್ರಿಯಃ ಶಂಭೋ ವಿನಾ ಭರ್ತ್ರಾ ಕ್ವಚಿತ್ಪ್ರಭೋ ।
ಸಗುಣೋ ನಿರ್ಗುಣೋ ವಾಽಪಿ ಧನಾಢ್ಯೋ ವಾಽಪ್ಯಕಿಂಚನಃ ॥ ೬ ॥
ಪ್ರಿಯೋ ವಾ ಯದಿ ವಾ ದ್ವೇಷ್ಯಃ ಸ್ತ್ರೀಣಾಂ ಭರ್ತೈವ ದೈವತಂ ।
ದುರ್ಭಗತ್ವೇನ ದಗ್ಧಾಽಹಂ ಸಖೀಮಧ್ಯೇ ಸುರೇಶ್ವರ ।
ಭರ್ತರ್ಯಲ್ಲಬ್ಧಸೌಖ್ಯಾಽಸ್ಮಿ ತೇನ ಕ್ಲಿಶ್ಯಾಮ್ಯಹಂ ಭೃಶಂ ॥ ೭ ॥

ಈಶ್ವರ ಉವಾಚ :—

ವಲ್ಲಭಾ ಭಾಸ್ಕರಸ್ಯೈವ ಮತ್ಪ್ರಸಾದಾದ್ಭವಿಷ್ಯಸಿ ॥ ೮ ॥

ಪಾರ್ವತ್ಯುವಾಚ :—

ಅಪ್ರಮಾಣಂ ಭವದ್ವಾಕ್ಯಂ ಭಾಸ್ಕರೋಽಪಿ ಕರಿಷ್ಯತಿ ।
ವೃಥಾ ಕ್ಲೇಶೋ ಭವೇದಸ್ಯಾಃ ಪ್ರಭಾಯಾಃ ಪರಮೇಶ್ವರ ॥ ೯ ॥
ಉಮಾವಾಕ್ಯಾನ್ಮಹೇಶಾನ ಧ್ಯಾತಸ್ತಿಮಿರನಾಶನಃ ।
ಆಗತೋ ಗಗನಾದ್ಭಾನುರ್ನರ್ಮದೋತ್ತರರೋಧಸಿ ॥ ೧೦ ॥

---

೫. ಈಶ್ವರನು ಹೇಳುತ್ತಾನೆ:—ಬಾಲೆಯೆ! ಏಕೆ ಕಷ್ಟಪಡುವೆ? ನಿನ್ನ ಅಭಿಲಾಷೆಯನ್ನು ಹೇಳು. ನಾನೂ ಸೂರ್ಯನೂ ಅಭಿನ್ನರಾಗಿರುವೆವು.

೬-೭. ಪ್ರಭೆಯು ಹೇಳುತ್ತಾಳೆ:—ಶಂಕರ! ಪತಿಯು ಗುಣವಂತನಾಗಲಿ, ಗುಣವಿಲ್ಲದವನಾಗಲಿ, ಧನವಂತನಾಗಲಿ, ಬಡವನಾಗಲಿ, ಪ್ರಿಯನಾಗಲಿ, ದ್ವೇಷಿಯಾಗಲಿ ಹೆಂಗಸರಿಗೆ ಅವನನ್ನು ಬಿಟ್ಟು ಬೇರೆ ದೇವತೆಯಿಲ್ಲ. ನಾನು ಸಖಿಯರ ನಡುವೆ ದುರ್ಭಗಳಾಗಿ ಗಂಡನಿಂದ ಸೌಖ್ಯವನ್ನು ಪಡೆಯದೆ ಕಷ್ಟಪಡುತ್ತಿರುವೆನು.

೮. ಈಶ್ವರನು ಹೇಳುತ್ತಾನೆ:—ಪ್ರಭೇ! ನೀನು ನನ್ನ ಅನುಗ್ರಹದಿಂದ ಸೂರ್ಯನಿಗೆ ಪ್ರಿಯಳಾಗುವೆ.

೯. ಪಾರ್ವತಿಯು ಹೇಳುತ್ತಾಳೆ:—ಶಂಕರ! ನಿನ್ನ ಮಾತನ್ನು ಸೂರ್ಯನು ಅಪ್ರಮಾಣಮಾಡಿಯಾನು! ಈ ಪ್ರಭೆಗೆ ವ್ಯರ್ಥವಾಗಿ ಕ್ಲೇಶವುಂಟಾಗುವುದು.

೧೦. ಶಂಕರನು ಪಾರ್ವತಿಯ ಮಾತಿನಿಂದ ಸೂರ್ಯನನ್ನು ಧ್ಯಾನಿಸಲು ಅವನು ಆಕಾಶದಿಂದ ನರ್ಮದೆಯ ತಟಕ್ಕೆ ಬಂದನು.

ಭಾನುರುವಾಚ :—

ಆಹೂತೋಽಸ್ಮಿ ಕಥಂ ದೇವ ಹ್ಯಘಾಸುರನಿಷೂದನ ॥ ೧೧ ॥

ಈಶ್ವರ ಉವಾಚ :—

ಪ್ರಭಾಂ ಪಾಲಯ ಭೋ ಭಾನೋ ಸಂತೋಷೇಣ ಪರೇಣ ಹಿ ॥ ೧೨ ॥

ಉಮೋವಾಚ :—

ಪ್ರಭಾಯಾ ಮಂದಿರೇ ನಿತ್ಯಂ ಸ್ಥೀಯತಾಂ ಹಿಮನಾಶನ ।
ಅಗ್ರಪತ್ನೀ ಸಮಸ್ತಾನಾಂ ಭಾರ್ಯಾಣಾಂ ಕ್ರಿಯತಾಂ ರವೇ ॥ ೧೩ ॥

ಭಾನುರುವಾಚ :—

ಏವಂ ದೇವಿ ಕರಿಷ್ಯಾಮಿ ತವ ವಾಕ್ಯಂ ವರಾನನೇ ।
ಏತಚ್ಛ್ರುತ್ವಾ ಪ್ರಭಾಽಹೂತಾ ಪ್ರತ್ಯುವಾಚ ಮಹೇಶ್ವರಂ ॥ ೧೪ ॥

ಪ್ರಭೋವಾಚ :—

ಸ್ವಾಂಶೇನ ಸ್ಥೀಯತಾಂ ದೇವ ಮನ್ಮಥಾಽರೇ ಉಮಾಪತೇ ।
ಏಕಾಂಶಃ ಸ್ಥಾಪ್ಯತಾಮತ್ರ ತೀರ್ಥಸ್ಯೋನ್ಮೀಲನಾಯ ಚ ॥ ೧೫ ॥

ಶ್ರೀ ಮಾರ್ಕಂಡೇಯ ಉವಾಚ :—

ಸರ್ವದೇವಮಯಂ ಲಿಂಗಂ ಸ್ಥಾಪಿತಂ ತತ್ರ ಪಾಂಡವ ।
ಪ್ರಭಾಸೇಶ ಇತಿಖ್ಯಾತಂ ಸರ್ವಲೋಕೇಷು ದುರ್ಲಭಂ ॥ ೧೬ ॥

---

೧೧. ಸೂರ್ಯನು ಹೇಳುತ್ತಾನೆ.—ಅಘಾಸುರಸಂಹಾರಕನಾದ ಶಂಕರನೆ! ನನ್ನನ್ನು ಏಕೆ ಕರೆಯಿಸಿರುವೆ?

೧೨. ಈಶ್ವರನು ಹೇಳುತ್ತಾನೆ—ಭಾಸ್ಕರ! ನೀನು ಅತ್ಯಂತ ಸಂತೋಷದಿಂದ ಪ್ರಭೆಯನ್ನು ಕಾಪಾಡು.

೧೩. ಉಮೆಯು ಹೇಳುತ್ತಾಳೆ —ಹಿಮನಾಶಕನಾದ ಭಾಸ್ಕರ! ನೀನು ಯಾವಾಗಲೂ ಪ್ರಭೆಯ ಮನೆಯಲ್ಲಿಯೆ ಇರು. ಈ ಪ್ರಭೆಯನ್ನು ಎಲ್ಲ ಪತ್ನಿಯರಲ್ಲಿ ಪಟ್ಟದ ರಾಣಿಯನ್ನಾಗಿ ಮಾಡು.

೧೪. ಸೂರ್ಯನು ಹೇಳುತ್ತಾನೆ.—ಸುಂದರಿ! ನಿನ್ನ ವಾಕ್ಯದಂತೆ ಹೀಗೆಯೇ ಮಾಡುತ್ತೇನೆ. ಇದನ್ನು ಕೇಳಿ ಪ್ರಭೆಯನ್ನು ಕರೆಯಿಸಲು ಅವಳು ಶಂಕರನನ್ನು ಕುರಿತು ಇಂತೆಂದಳು.

೧೫. ಪ್ರಭೆಯು ಹೇಳುತ್ತಾಳೆ.—ಮನ್ಮಥನಾಶಕನಾದ ಶಂಕರನೆ! ನೀನು ಒಂದಂಶದಿಂದ ಇಲ್ಲಿ ನೆಲಸಿರಬೇಕು. ಈ ತೀರ್ಥವು ಪ್ರಕಾಶಗೊಳ್ಳುವುದಕ್ಕಾಗಿ ನಿನ್ನ ಒಂದಂಶವನ್ನು ಇಲ್ಲಿ ಸ್ಥಾಪಿಸು.

೧೬. ಶ್ರೀ ಮಾರ್ಕಂಡೇಯನು ಹೇಳುತ್ತಾನೆ.—ಯುಧಿಷ್ಠಿರ! ತರುವಾಯ ಸಕಲ ಲೋಕಗಳಲ್ಲಿ ದುರ್ಲಭವಾದ ಪ್ರಭಾಸೇಶವೆಂಬ ಲಿಂಗವನ್ನು ಅಲ್ಲಿ ಸ್ಥಾಪಿಸಲಾಯಿತು.

ಅನ್ಯಾನಿ ಯಾನಿ ತೀರ್ಥಾನಿ ಕಾಲೇ ತಾನಿ ಫಲಂತಿ ವೈ ।
ಪ್ರಭಾಸೇಶಸ್ತು ರಾಜೇಂದ್ರ ಸದ್ಯಃ ಕಾಮಫಲಪ್ರದಃ ॥ ೧೭ ॥
ಮಾಘಮಾಸೇ ಸಿತೇ ಪಕ್ಷೇ ಸಪ್ತಮ್ಯಾಂ ಚ ವಿಶೇಷತಃ ।
ಅಶ್ವಂ ಯಃ ಸ್ಪರ್ಶಯೇತ್ತತ್ರ ಯಥೋಕ್ತಬ್ರಾಹ್ಮಣೇ ನೃಪ ॥ ೧೮ ॥
ಇಂದ್ರತ್ವಂ ಪ್ರಾಪ್ಯತೇ ತೇನ ಭಾಸ್ಕರಸ್ಯಾಽಥವಾ ಪದಂ ।
ಸ್ನಾತ್ವಾ ಪರಮಯಾ ಭಕ್ತ್ಯಾ ದಾನಂ ದದ್ಯಾದ್ದ್ವಿಜಾತಯೇ ॥ ೧೯ ॥
ಗೋಪ್ರದಾತಾ ಲಭೇತ್ಸ್ವರ್ಗಂ ಸತ್ಯಲೋಕಂ ನರೇಶ್ವರ ।
ಸರ್ವಾಂಗಸುಂದರೀಂ ಶುಭ್ರಾಂ ಕ್ಷೀರಿಣೀಂ ತರುಣೀಂ ಶುಭಾಂ ॥ ೨೦ ॥
ಸವತ್ಸಾಂ ಘಂಟಾಸಂಯುಕ್ತಾಂ ಕಾಂಸ್ಯಪಾತ್ರಾವದೋಹಿನೀಂ ।
ದದತೇ ಯೋ ನೃಪಶ್ರೇಷ್ಠ ನತೇ ಯಾಂತಿ ಯಮಾಲಯಂ ॥ ೨೧ ॥
ಅಥ ಯಃ ಪರಯಾ ಭಕ್ತ್ಯಾ ಸ್ನಾನಂ ದೇವಸ್ಯ ಕಾರಯೇತ್ ।
ಸ ಪ್ರಾಪ್ನೋತಿ ಪರಂ ಲೋಕಂ ಯಾವದಾಭೂತಸಂಪ್ಲವಂ ॥ ೨೨ ॥
ದೌರ್ಭಾಗ್ಯಂ ನಾಶಮಾಯಾತಿ ಸ್ನಾನಮಾತ್ರೇಣ ಪಾಂಡವ ।
ತತ್ರ ತೀರ್ಥೇ ತು ಯೋ ಭಕ್ತ್ಯಾ ಕನ್ಯಾದಾನಂ ಪ್ರಯಚ್ಛತಿ ॥ ೨೩ ॥
ಬ್ರಾಹ್ಮಣಾಯ ವಿವಾಹೇನ ದಾಪಯೇತ್ಪಾಂಡುನಂದನ ।
ಸಮಾನವಯಸೇ ದೇಯಾ ಕುಲಶೀಲಧನೈಸ್ತಥಾ ॥ ೨೪ ॥

---

೧೭. ಇತರ ತೀರ್ಥಗಳು ಕಾಲಾಂತರದಲ್ಲಿ ಫಲಿಸುವುವು. ದೊರೆಯೆ! ಆದರೆ ಈ ತೀರ್ಥದಲ್ಲಿ ಪ್ರಭಾಸೇಶನು ಕೂಡಲೆ ಅಭೀಷ್ಟವನ್ನು ಕೊಡುವನು.

೧೮–೧೯. ಮಾಘಮಾಸದ ಶುಕ್ಲಪಕ್ಷದ ಸಪ್ತಮಿಯದಿನ ಅಲ್ಲಿ ಉತ್ತಮ ಬ್ರಾಹ್ಮಣರಿಗೆ ಅಶ್ವವನ್ನು ದಾನಮಾಡಿದವನು ಇಂದ್ರತ್ವವನ್ನಾಗಲಿ, ಭಾಸ್ಕರನ ಸ್ಥಾನವನ್ನಾಗಲಿ ಹೊಂದುವನು. ಸ್ನಾನಮಾಡಿ ಅತಿಶಯವಾದ ಭಕ್ತಿಯಿಂದ ಬ್ರಾಹ್ಮಣನಿಗೆ ದಾನಮಾಡಬೇಕು.

೨೦–೨೧. ಸರ್ವಾಂಗ ಸುಂದರವೂ, ಶುದ್ಧವೂ, ಹಾಲನ್ನು ಕೊಡುವುದೂ ಯೌವನವುಳ್ಳುದೂ, ಕರುವಿನಿಂದ ಸಹಿತವೂ, ಘಂಟೆಯಿಂದ ಕೂಡಿರುವುದೂ, ಕಂಚಿನ ದೋಹನಪಾತ್ರೆಯುಳ್ಳುದೂ, ಆದ ಗೋವನ್ನು ದಾನಮಾಡುವವನು ಸ್ವರ್ಗವನ್ನು ಸೇರುವನು. ಯಮಲೋಕಕ್ಕೆ ಹೋಗುವುದಿಲ್ಲ.

೨೨. ಭಕ್ತಿಯಿಂದ ಪ್ರಭಾಸೇಶನ ಮುಂದೆ ಸ್ನಾನಮಾಡುವವನು ಉತ್ತಮ ಲೋಕವನ್ನು ಸೇರಿ ಅಲ್ಲಿ ಪ್ರಳಯಕಾಲದವರೆಗೆ ವಾಸಿಸುವನು.

೨೩–೨೫. ಈ ತೀರ್ಥದಲ್ಲಿ ಸ್ನಾನ ಮಾತ್ರದಿಂದಲೇ ದೌರ್ಭಾಗ್ಯವು ನಾಶವಾಗುವುದು. ಈ ತೀರ್ಥದಲ್ಲಿ ಸಮಾನ ವಯಸ್ಸುಳ್ಳವನೂ, ಕುಲಶೀಲಧನಗಳಿಂದ ಕೂಡಿದವನೂ ಆದ ಬ್ರಾಹ್ಮಣನಿಗೆ ವಿವಾಹ ವಿಧಿಯಿಂದ ಕನ್ಯಾದಾನ

ಯೇ ದದಂತೇ ಮಹಾರಾಜ ಹ್ಯಪಿ ಪಾತಕಸಂಯುತಾಃ ।
ತೇಷಾಂ ಪಾಪಾನಿ ಲೀಯಂತೇ ಹ್ಯುದಕೇ ಲವಣಂ ಯಥಾ ॥ ೨೫ ॥
ಸ್ವಾಮಿದ್ರೋಹಕೃತಂ ಪಾಪಂ ನಿಕ್ಷೇಪಸ್ಯಾಪಹಾರಿಣಿ ।
ಮಿತ್ರಘ್ನೇ ಚ ಕೃತಘ್ನೇ ಚ ಕೂಟಸಾಕ್ಷ್ಯ ಸಮುದ್ಭವಂ ॥ ೨೬ ॥
ತದ್ಗ್ರಾಮೋದ್ಯಾನಭೇದೋತ್ಥಂ ಪರದಾರನಿಷೇವಣಂ ।
ವಾರ್ಧುಷಿಕಸ್ಯ ಯತ್ಪಾಪಂ ಯತ್ಪಾಪಂ ಸ್ತೇಯಸಂಭವಂ ॥ ೨೭ ॥
ಕೂಪಭೇದೋದ್ಭವಂ ಯಚ್ಚ ಬೈಡಾಲವ್ರತಧಾರಿಣಃ ।
ದಾಂಭಿಕಂ ವೃಕ್ಷಚ್ಛೇದೋತ್ಥಂ ವಿವಾಹಸ್ಯ ನಿಷೇಧಜಂ ॥ ೨೮ ॥
ಆರಾಮಸ್ಥತರುಚ್ಛೇದಮಗಮ್ಯಾಗಮನೋದ್ಭವಂ ।
ಸ್ವಭಾರ್ಯಾತ್ಯಜನೇ ಯಚ್ಚ ಪರಭಾರ್ಯಾಸಮೀಹನಾತ್ ॥ ೨೯ ॥
ಬ್ರಹ್ಮಸ್ವಹರಣೇ ಯಚ್ಚ ಗರದೇ ಗೋವಿಘಾತಿನಿ ।
ವಿದ್ಯಾವಿಕ್ರಯಣೋತ್ಥಂ ಚ ಸಂಸರ್ಗಾದ್ಯಚ್ಚ ಪಾತಕಂ ॥ ೩೦ ॥
ಶ್ವಬಿಡಾಲವಧಾದ್ಘೋರಂ ಸರ್ಪಶೂದ್ರೋದ್ಭವಂ ತಥಾ ।
ಭೂಮಿಹರ್ತುಶ್ಚ ಯತ್ಪಾಪಂ ಭೂಮಿಹಾರಿಣಿ ಚೈವ ಹಿ ॥ ೩೧ ॥
ಮಾದದಸ್ವೇತಿ ಯತ್ಪಾಪಂ ಗೋವಹ್ನಿಬ್ರಾಹ್ಮಣೇಷು ಚ ।
ತತ್ಪಾಪಂ ಯಾತಿ ವಿಲಯಂ ಕನ್ಯಾದಾನೇನ ಪಾಂಡವ ॥ ೩೨ ॥
ಸ ಗತ್ವಾ ಭಾಸ್ಕರಂ ಲೋಕಂ ರುದ್ರಲೋಕೇ ಶುಭೇ ವ್ರಜೇತ್ ।
ಕ್ರೀಡತೇ ರುದ್ರಲೋಕಸ್ಥೋ ಯಾವದಿಂದ್ರಾಶ್ಚತುರ್ದಶ ॥ ೩೩ ॥

---

ಮಾಡುವವರು ಪಾಪಿಷ್ಠರಾಗಿದ್ದರೂ ಅವರ ಪಾಪವು ನೀರಿನಲ್ಲಿ ಉಪ್ಪಿನಂತೆ ವಿಲೀನವಾಗುವುದು.

೨೬–೩೩. ಸ್ವಾಮಿದ್ರೋಹ, ನಿಧಿಯ ಅಪಹಾರ, ಮಿತ್ರಹತ್ಯೆ, ಕೃತಘ್ನತೆ, ಸುಳ್ಳು ಸಾಕ್ಷಿ ಹೇಳುವುದು, ಗ್ರಾಮ ಮತ್ತು ಉದ್ಯಾನಗಳನ್ನು ಹಾಳುಮಾಡುವುದು, ಪರಪತ್ನೀಸಂಗ, ಬಡ್ಡಿಯ ಜೀವನ, ಕಳ್ಳತನ, ಬಾವಿಯನ್ನು ಹಾಳುಮಾಡುವುದು, ಬೆಕ್ಕಿನ ವ್ರತವನ್ನು ಧರಿಸುವುದು, ದಂಭ, ಮರವನ್ನು ಕಡಿಯುವುದು, ವಿವಾಹವನ್ನು ತಡೆಯುವುದು, ಉದ್ಯಾನದ ಮರವನ್ನು ಕತ್ತರಿಸುವುದು, ಅಗಮ್ಯಾಗಮನ, ಸ್ವಭಾರ್ಯಾತ್ಯಾಗ, ಪರಪತ್ನಿಯ ಅಪೇಕ್ಷೆ, ಬ್ರಹ್ಮಸ್ವಹರಣ, ವಿಷವನ್ನು ಕೊಡುವುದು, ಗೋಹತ್ಯೆ, ವಿದ್ಯಾವಿಕ್ರಯ, ಸಂಸರ್ಗ, ನಾಯಿ, ಬೆಕ್ಕು, ಸರ್ಪ, ಶೂದ್ರರನ್ನು ಕೊಲ್ಲುವುದು, ಭೂಮಿಯ ಅಪಹಾರ, ದಾನನಿಷೇಧ, ಗೋವು, ಅಗ್ನಿ, ಬ್ರಾಹ್ಮಣರು ಇವರಿಂದುಂಟಾದ ಪಾಪಗಳು ಕನ್ಯಾದಾನದಿಂದ ಪರಿಹಾರವಾಗುವುದು. ಅವನು ಸೂರ್ಯಲೋಕಕ್ಕೆ ಹೋಗಿ ಅನಂತರ ರುದ್ರಲೋಕದಲ್ಲಿ ಹದಿನಾಲ್ಕು ಮಂದಿ ಇಂದ್ರರ ಕಾಲದವರೆಗೆ ವಿನೋದಪಡುವನು.

**ಸರ್ವಪಾಪಕ್ಷಯೇ ಜಾತೇ ಶಿವೇ ಭವತಿ ಭಾವನಾ ।**
**ಏತದ್ವ್ರಜತಿ ಯಸ್ತೀರ್ಥಂ ಪ್ರಭಾಸಂ ಪಾಂಡುನಂದನ ॥ ೩೪ ॥**
**ಸರ್ವತೀರ್ಥಫಲಂ ಪ್ರಾಪ್ಯ ಸೋಽಶ್ವಮೇಧಫಲಂ ಲಭೇತ್ ।**
**ಗೋಪ್ರದಾನಂ ಮಹಾಪುಣ್ಯಂ ಸರ್ವಪಾಪಕ್ಷಯಂ ಪರಂ ।**
**ಪ್ರಶಸ್ತಂ ಸರ್ವಕಾಲಂ ಹಿ ಚತುರ್ದಶ್ಯಾಂ ವಿಶೇಷತಃ ॥ ೩೫ ॥**

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ಪ್ರಭಾಸತೀರ್ಥಮಾಹಾತ್ಮ್ಯವರ್ಣನಂ"
ನಾಮಾಷ್ಟನವತಿತಮೋಽಧ್ಯಾಯಃ

---

೩೪–೩೫. ಸಕಲಪಾಪಗಳೂ ಕ್ಷಯಿಸಿದರೆ ಮಾತ್ರ ಶಿವನಲ್ಲಿ ಭಕ್ತಿಯುಂಟಾಗುವುದು. ಈ ಪ್ರಭಾಸತೀರ್ಥಕ್ಕೆ ಹೋಗುವವನು ಸಕಲ ತೀರ್ಥಗಳ ಫಲವನ್ನು ಹೊಂದಿ ಅಶ್ವಮೇಧಯಾಗದ ಪುಣ್ಯವನ್ನು ಪಡೆಯುವನು. ಗೋದಾನವು ಅತಿ ಪುಣ್ಯಕರವೂ, ಸಕಲ ಪಾಪಗಳನ್ನು ನಿವಾರಿಸುವುದೂ, ಯಾವಾಗಲೂ ಪ್ರಶಸ್ತವೂ ವಿಶೇಷವಾಗಿ ಚತುರ್ದಶೀದಿನ ಪ್ರಶಸ್ತವೂ ಆಗಿರುವುದು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಪ್ರಭಾಸತೀರ್ಥಮಾಹಾತ್ಮ್ಯವರ್ಣನ"ವೆಂಬ
ತೊಂಬತ್ತೆಂಟನೆಯ ಅಧ್ಯಾಯವು ಮುಗಿದುದು

|| ಶ್ರೀಃ ||

# ಅಥೈಕೋನಶತತಮೋಽಧ್ಯಾಯಃ

### ನಾಗೇಶ್ವರತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ತತೋ ಗಚ್ಛೇನ್ಮಹೀಪಾಲ ನರ್ಮದಾದಕ್ಷಿಣೇ ತಟೇ ।
ಸ್ಥಾಪಿತಂ ವಾಸುಕೀಶಂ ತು ಸಮಸ್ತಾಽಘೌಘನಾಶನಂ || ೧ ||

ಯುಧಿಷ್ಠಿರ ಉವಾಚ :—

ಕಸ್ಮಾಚ್ಚ ಕಾರಣಾತ್ತಾತ ರೇವಾಯಾ ದಕ್ಷಿಣೇ ತಟೇ ।
ವಾಸುಕೀಶಃ ಸ್ಥಾಪಿತೋ ವೈ ವಿಸ್ತರಾದ್ವದ ಮೇ ಗುರೋ || ೨ ||

ಶ್ರೀ ಮಾರ್ಕಂಡೇಯ ಉವಾಚ :—

ಏತತ್ಸರ್ವಂ ಸಮಾಸ್ಥಾಯ ನೃತ್ಯಂ ಶಂಭುಶ್ಚಕಾರ ವೈ || ೩ ||
ಶ್ರಮಾದಜಾಯತ ಸ್ವೇದೋ ಗಂಗಾತೋಯವಿಮಿಶ್ರಿತಂ ।
ಪತಂತಮುರಗೋಽಶ್ನಾತಿ ಹರಮೌಲಿವಿನಿರ್ಗತಂ || ೪ ||
ಮಂದಾಕಿನೀ ತತಃ ಕ್ರುದ್ಧಾ ವ್ಯಾಲಸ್ಯೋಪರಿ ಭಾರತ ।
ಪ್ರಾಪ್ನುಹ್ಯಜಗರತ್ವಂ ಹಿ ಭುಜಂಗ ಕ್ಷುದ್ರಜಂತುಕ || ೫ ||

---

## ಕನ್ನಡದ ಅನುವಾದ

### ನಾಗೇಶ್ವರತೀರ್ಥಮಾಹಾತ್ಮ್ಯವರ್ಣನ

೧. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:— ದೊರೆಯೆ! ಬಳಿಕ ನರ್ಮದಾನದಿಯ ದಕ್ಷಿಣ ದಡದಲ್ಲಿ ಸ್ಥಾಪಿಸಿರುವ ಸಕಲ ಪಾಪಗಳನ್ನು ಪರಿಹರಿಸುವ ವಾಸುಕೀಶನೆಡೆಗೆ ಹೋಗಬೇಕು.

೨. ಯುಧಿಷ್ಠಿರನು ಹೇಳುತ್ತಾನೆ:—ತಾತ! ರೇವಾನದಿಯ ದಕ್ಷಿಣದಡದಲ್ಲಿ ವಾಸುಕೀಶನನ್ನು ಏಕೆ ಸ್ಥಾಪಿಸಿರುತ್ತಾರೆ? ಇದನ್ನು ವಿಸ್ತಾರವಾಗಿ ನನಗೆ ಹೇಳು.

೩. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:—ಶಂಕರನು ಈ ಜಗತ್ತನ್ನು ಸ್ಥಿರಗೊಳಿಸಿ ನೃತ್ಯಮಾಡಿದನು.

೪. ಆಗ ಆಯಾಸದಿಂದ ಗಂಗಾಜಲಮಿಶ್ರಿತವಾಗಿ ಸುರಿಸುತ್ತಿರುವ ಶಂಕರನ ಶಿರಸ್ಸಿನ ಬೆವರನ್ನು ವಾಸುಕಿಯು ಕುಡಿದನು.

೫. ಬಳಿಕ ಮಂದಾಕಿನಿಯು ವಾಸುಕಿಯ ಮೇಲೆ ಕೋಪಿಸಿಕೊಂಡು "ಎಲೈ ಅಲ್ಪಜಂತುವಾದ ಸರ್ಪವೇ ನೀನು ಅಜಗರತ್ವವನ್ನು ಹೊಂದು" ಎಂದು ಶಪಿಸಿದಳು.

ವಾಸುಕಿರುವಾಚ :—

ಅನುಗ್ರಾಹ್ಯೋಽಸ್ಮಿ ತೇ ಪಾಪೋ ದುರ್ನಯೋಽಹಂ ಹರಾದೃತೇ ।
ತ್ರೈಲೋಕ್ಯಪಾವನೀ ಪುಣ್ಯಾ ಸರಿತ್ತ್ವಂ ಶುಭಲಕ್ಷಣಾ ॥ ೬ ॥
ಸಂಸಾರಚ್ಛೇದನಕರೀ ಹ್ಯಾರ್ತಾನಾಮಾರ್ತಿನಾಶಿನೀ ।
ಸ್ವರ್ಗದ್ವಾರೇ ಸ್ಥಿತಾ ತ್ವಂ ಹಿ ದಯಾಂ ಕುರು ಮಯೀಶ್ವರಿ ॥ ೭ ॥

ಗಂಗೋವಾಚ :—

ಕುರುಷ್ವ ವಿಪುಲಂ ವಿಂಧ್ಯಂ ತಪಸ್ತ್ವಂ ಶಂಕರಂ ಪ್ರತಿ ।
ತತಃ ಪ್ರಾಪ್ಸ್ಯಸಿ ಸ್ವಂ ಸ್ಥಾನಂ ಪನ್ನಗತ್ವಂ ಮಮಾಜ್ಞಯಾ ॥ ೮ ॥

ಶ್ರೀ ಮಾರ್ಕಂಡೇಯ ಉವಾಚ :—

ತತೋಽಸೌ ತ್ವರಿತೋ ವಿಂಧ್ಯಂ ನಾಗೋ ಗತ್ವಾ ನಗಂ ಶುಭಂ ।
ತಪಸ್ತಪ್ತುಂ ಸಮಾರೇಭೇ ಶಂಕರಾರಾಧನೋದ್ಯತಃ ॥ ೯ ॥
ನಿತ್ಯಂ ದಧ್ಯೌ ಮಹಾದೇವಂ ತ್ರ್ಯಕ್ಷಂ ಡಮರುಕೋದ್ಯತಂ ।
ತತೋ ವರ್ಷಶತೇ ಪೂರ್ಣ ಉಪರುದ್ಧೋ ಜಗದ್ಗುರುಃ ।
ಆಗತಸ್ತತ್ಸಮೀಪಂ ತು ಶ್ಲಕ್ಷ್ಣಾಂ ವಾಣೀಮುದಾಹರತ್ ॥ ೧೦ ॥
ವರಂ ವರಯ ಮೇ ವತ್ಸ ಪನ್ನಗತ್ವಂ ಕೃತಾದರ ॥ ೧೧ ॥

---

೬–೭. ವಾಸುಕಿಯು ಹೇಳುತ್ತಾನೆ:—ಶಿವಮಾನಿತಳಾದ ಗಂಗೆಯೆ! ಪಾಪಿಯೂ, ಅವಿನೀತನೂ ಆದ ನನ್ನ ಮೇಲೆ ಅನುಗ್ರಹ ಮಾಡು. ನೀನು ತ್ರಿಲೋಕಪಾವನಿಯೂ, ಪುಣ್ಯಕರಳೂ, ಶುಭಲಕ್ಷಣವುಳ್ಳವಳೂ, ಸಂಸಾರವನ್ನು ನಿವಾರಿಸುವವಳೂ, ದುಃಖಿತರ ದುಃಖವನ್ನು ನಾಶಗೊಳಿಸುವವಳೂ, ಸ್ವರ್ಗ ದ್ವಾರದಲ್ಲಿ ಇರುವವಳೂ ಆಗಿರುವೆ. ನನ್ನ ಮೇಲೆ ದಯೆಮಾಡು.

೮. ಗಂಗೆಯು ಹೇಳುತ್ತಾಳೆ:—ನೀನು ವಿಸ್ತಾರವಾದ ವಿಂಧ್ಯಪರ್ವತಕ್ಕೆ ಹೋಗಿ ಶಂಕರನನ್ನು ಕುರಿತು ತಪಸ್ಸನ್ನು ಮಾಡು. ಅದರಿಂದ ನನ್ನ ಅಪ್ಪಣೆ ಯಿಂದ ನೀನು ನಿನ್ನ ಸ್ಥಾನವನ್ನು ಪಡೆಯುವೆ.

೯. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:—ಬಳಿಕ ವಾಸುಕಿಯು ಪವಿತ್ರವಾದ ವಿಂಧ್ಯಶೈಲಕ್ಕೆ ಹೋಗಿ ಶಂಕರನ ಆರಾಧನೆಯಲ್ಲಿ ಉದ್ಯುಕ್ತನಾಗಿ ತಪಸ್ಸನ್ನು ಮಾಡಲು ಆರಂಭಿಸಿದನು.

೧೦–೧೧. ನಿತ್ಯವೂ ಡಮರುಕದಿಂದ ಕೂಡಿರುವ ಶಂಕರನನ್ನು ಧ್ಯಾನಮಾಡಿ ದನು. ಬಳಿಕ ನೂರು ವರ್ಷಗಳು ಕಳೆಯಲು ಆ ವಾಸುಕಿಯ ಧ್ಯಾನದಿಂದ ತಡೆಯಲ್ಪಟ್ಟ ಶಂಕರನು ಅವನ ಸಮೀಪಕ್ಕೆ ಬಂದು ಮೃದುವಚನದಿಂದ ಅವನನ್ನು ಕುರಿತು ಹೀಗೆಂದನು. "ನನ್ನಲ್ಲಿ ಆದರವುಳ್ಳ ವತ್ಸ ವಾಸುಕಿಯೆ! ವರವನ್ನು ಕೇಳಿಕೊ."

ವಾಸುಕಿರುವಾಚ :—

ಯದಿ ತುಷ್ಟೋಽಸಿ ಮೇ ದೇವ ವರಂ ದಾಸ್ಯಸಿ ಶಂಕರ ।
ಪ್ರಸಾದಾತ್ತವ ದೇವೇಶ ಭೂಯಾನ್ನಿಷ್ಪಾಪತಾ ಮಮ ।
ತೀರ್ಥಂ ಕಿಂಚಿತ್ಸಮಾಖ್ಯಾಹಿ ಸರ್ವಪಾಪಪ್ರಣಾಶನಂ ॥ ೧೨ ॥

ಈಶ್ವರ ಉವಾಚ :—

ಪನ್ನಗತ್ವಂ ಮಹಾಬಾಹೋ ರೇವಾಂ ಗಚ್ಛ ಶುಭಂಕರೀಂ ।
ಯಾಮ್ಯೇ ತಸ್ಯಾಸ್ತಟೇ ಪುಣ್ಯೇ ಸ್ನಾನಂ ಕುರು ಯಥಾವಿಧಿ ॥ ೧೩ ॥
ಇತ್ಯುಕ್ತ್ವಾಂತರ್ದಧೇ ದೇವೋ ವಾಸುಕಿಸ್ತ್ವರಯಾನ್ವಿತಃ ।
ರೂಪೇಣಾಜಗರೇಣೈವ ಪ್ರವಿಷ್ಟೋ ನರ್ಮದಾ ಜಲಂ ॥ ೧೪ ॥
ಮಾರ್ಗೇಣ ತಸ್ಯ ಸಂಜಾತಂ ಜಾಹ್ನವ್ಯಾಃ ಸ್ರೋತ ಉತ್ತಮಂ ।
ನಿರ್ಧೂತಕಲ್ಮಷಃ ಸರ್ಪಃ ಸಂಜಾತೋ ನರ್ಮದಾ ಜಲೇ ॥ ೧೫ ॥
ಸ್ಥಾಪಿತಃ ಶಂಕರಸ್ತತ್ರ ನರ್ಮದಾಯಾಂ ಯುಧಿಷ್ಠಿರ ।
ತತೋ ನಾಗೇಶ್ವರಂ ಲಿಂಗಂ ಪ್ರಸಿದ್ಧಂ ಪಾಪನಾಶನಂ ॥ ೧೬ ॥
ಅಷ್ಟಮ್ಯಾಂ ವಾ ಚತುರ್ದಶ್ಯಾಂ ಸ್ನಾಪಯೇನ್ಮಧುನಾ ಶಿವಂ ।
ವಿಮುಕ್ತಕಲ್ಮಷಃ ಸದ್ಯೋ ಜಾಯತೇ ನಾಽತ್ರ ಸಂಶಯಃ ॥ ೧೭ ॥

---

೧೨. ಶಂಕರ! ನೀನು ಸಂತುಷ್ಟನಾಗಿ ವರವನ್ನು ಕೊಡುವುದಾದರೆ ನಿನ್ನ ಅನುಗ್ರಹದಿಂದ ನಾನು ಪಾಪರಹಿತನಾಗುವಂತೆ ಮಾಡು. ಪಾಪವನ್ನು ನಾಶಗೊಳಿಸುವ ಯಾವುದಾದರೂ ಒಂದು ತೀರ್ಥವನ್ನು ಹೇಳು.

೧೩. ಈಶ್ವರನು ಹೇಳುತ್ತಾನೆ.—ಮಹಾ ಬಾಹುವಾದ ಸರ್ಪನೆ! ನೀನು ಶುಭವನ್ನುಂಟುಮಾಡುವ ನರ್ಮದಾನದಿಗೆ ಹೋಗು. ಆ ನದಿಯ ಪುಣ್ಯ ತಟದಲ್ಲಿ ವಿಧಿಯಂತೆ ಸ್ನಾನಮಾಡು.

೧೪. ಶಂಕರನು ಹೀಗೆ ಹೇಳಿ ಅದೃಶ್ಯನಾಗಲು ವಾಸುಕಿಯು ತ್ವರೆಯಿಂದ ಆ ಅಜಗರ ರೂಪದಿಂದಲೇ ನರ್ಮದಾನದಿಯ ನೀರನ್ನು ಪ್ರವೇಶಿಸಿದನು.

೧೫. ಆ ವಾಸುಕಿಯು ಯಾವ ಮಾರ್ಗವಾಗಿ ಹೇಗೆ ಹೋದನೋ ಹಾಗೆಯೇ ಆ ಮಾರ್ಗದಲ್ಲಿ ಒಂದು ಪ್ರವಾಹವುಂಟಾಯಿತು. ಅದೇ ನರ್ಮದಾ ಜಲದಲ್ಲಿಯೆ ಆ ಸರ್ಪರಾಜನು ನಿಷ್ಕಲ್ಮಷನಾದನು.

೧೬. ಯುಧಿಷ್ಠಿರ! ವಾಸುಕಿಯು ಅದೇ ನರ್ಮದಾನದಿಯಲ್ಲಿಯೆ ಶಂಕರ ಲಿಂಗವನ್ನು ಪ್ರತಿಷ್ಠೆಮಾಡಿದನು. ಅನಂತರ ಪಾಪವನ್ನು ಪರಿಹರಿಸುವ ಆ ಲಿಂಗವು ನಾಗೇಶ್ವರವೆಂದು ಪ್ರಸಿದ್ಧವಾಯಿತು.

೧೭. ಅಷ್ಟಮಿ ಅಥವಾ ಚತುರ್ದಶಿಯ ದಿನ ಜೇನಿನಿಂದ ಆ ಶಿವನಿಗೆ ಅಭಿಷೇಕಮಾಡಿದವನು ನಿಶ್ಚಯವಾಗಿಯೂ ಕೂಡಲೆ ಪಾಪರಹಿತನಾಗುವನು.

ಅಪುತ್ರಾ ಯೇ ನರಾಃ ಪಾರ್ಥ ಸ್ನಾನಂ ಕುರ್ವಂತಿ ಸಂಗಮೇ ।
ತೇ ಲಭಂತೇ ಸುತಾಂಛ್ರೇಷ್ಠಾನ್ಕಾರ್ತವೀರ್ಯೋಪಮಾನ್ ಶುಭಾನ್ ॥
ಶ್ರಾದ್ಧಂ ತತ್ರೈವ ಯಃ ಕುರ್ಯಾದುಪವಾಸಪರಾಯಣಃ ।
ಕುರ್ವನ್ಮೋಚಯೇತ್ಪ್ರೇತಾನ್ನರಕಾನ್ನೃಪನಂದನ ॥ ೧೯ ॥
ಸರ್ಪಾಣಾಂ ಚ ಭಯಂ ವಂಶೇ ಜ್ಞಾತಿವರ್ಗೇ ನ ಜಾಯತೇ ।
ನಿರ್ದೋಷಂ ನಂದತೇ ತಸ್ಯ ಕುಲಂ ನಾಗಪ್ರಸಾದತಃ ॥ ೨೦ ॥
ಏತತ್ತೇ ಸರ್ವಮಾಖ್ಯಾತಂ ತವ ಸ್ನೇಹಾನ್ನೃಪೋತ್ತಮ ॥ ೨೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ನಾಗೇಶ್ವರತೀರ್ಥಮಾಹಾತ್ಮ್ಯವರ್ಣನಂ"
ನಾಮೈಕೋನಶತತಮೋಽಧ್ಯಾಯಃ

---

೧೮. ಆ ಸಂಗಮದಲ್ಲಿ ಪುತ್ರರಿಲ್ಲದವರು ಮಿಂದರೆ ಕಾರ್ತವೀರ್ಯನಂತಿರುವ ಶ್ರೇಷ್ಠರಾದ ಪುತ್ರರನ್ನು ಪಡೆಯುವರು.

೧೯. ರಾಜಪುತ್ರ! ಅಲ್ಲಿ ಉಪವಾಸಮಾಡಿ ಶ್ರಾದ್ಧಗೈಯುವವನು ಪ್ರೇತರಿಗೆ ಮೋಕ್ಷವನ್ನುಂಟುಮಾಡುವನು.

೨೦. ಅವನ ವಂಶದಲ್ಲಿಯೂ, ಬಂಧುಗಳ ಗುಂಪಿನಲ್ಲಿಯೂ ಸರ್ಪಗಳ ಭಯವುಂಟಾಗುವುದಿಲ್ಲ. ಅವನ ವಂಶವು ನಿರ್ದುಷ್ಟವಾಗಿ ನಾಗನ ಅನುಗ್ರಹದಿಂದ ಆನಂದಗೊಳ್ಳುವುದು.

೨೧. ನೃಪವರ್ಯನೆ! ನಿನ್ನಲ್ಲಿರುವ ಸ್ನೇಹದಿಂದ ಇದನ್ನೆಲ್ಲ ಹೇಳಿರುವೆನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ನಾಗೇಶ್ವರತೀರ್ಥಮಾಹಾತ್ಮ್ಯವರ್ಣನ"ವೆಂಬ
ತೊಂಬತ್ತೊಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಶತತಮೋಽಧ್ಯಾಯಃ

## ಮಾರ್ಕಂಡೇಶ್ವರತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ತತೋ ಗಚ್ಛೇನ್ಮಹೀಪಾಲ ತೀರ್ಥಂ ಪರಮರೋಚನಂ ।
ಮಾರ್ಕಂಡೇಶಮಿತಿ ಖ್ಯಾತಂ ನರ್ಮದಾದಕ್ಷಿಣೇ ತಟೇ ॥ ೧ ॥
ಉತ್ತಮಂ ಸರ್ವತೀರ್ಥಾನಾಂ ಗೀರ್ವಾಣೈರ್ವಂದಿತಂ ಶಿವಂ ।
ಗುಹ್ಯಾದ್ಗುಹ್ಯತರಂ ಪುತ್ರ ನಾಖ್ಯಾತಂ ಕಸ್ಯಚಿನ್ಮಯಾ ॥ ೨ ॥
ಸ್ಥಾಪಿತಂ ತು ಮಯಾ ಪೂರ್ವಂ ಸ್ವರ್ಗಸೋಪಾನಸನ್ನಿಭಂ ।
ಜ್ಞಾನಂ ತತ್ರೈವ ಮೇ ಜಾತಂ ಪ್ರಸಾದಾಚ್ಛಂಕರಸ್ಯ ಚ ॥ ೩ ॥
ಅನ್ಯಸ್ತತ್ರೈವ ಯೋ ಗತ್ವಾ ದ್ರುಪದಾಮಂತರ್ಜಲೇ ತತ್ರೈಸಂ ಜಪೇತ್ ।
ಸ ಪಾತಕೈರಶೇಷೈಶ್ಚ ಮುಚ್ಯತೇ ಪಾಂಡುನಂದನ ॥ ೪ ॥
ವಾಚಿಕೈರ್ಮಾನಸೈಶ್ಚೈವ ಕರ್ಮಜೈರಪಿ ಪಾತಕೈಃ ।
ಪಿಂಡಿಕಾಂ ಚಾಪ್ಯವಷ್ಟಭ್ಯ ಯಾಮ್ಯಾಮಾಶಾಂ ಚ ಸಂಸ್ಥಿತಃ ॥ ೫ ॥

---

## ಕನ್ನಡದ ಅನುವಾದ

### ಮಾರ್ಕಂಡೇಶ್ವರತೀರ್ಥಮಾಹಾತ್ಮ್ಯವರ್ಣನ

೧. ಶ್ರೀ ಮಾರ್ಕಂಡೇಯನು ಹೇಳುತ್ತಾನೆ —ಮಹೀಪಾಲ! ಅನಂತರ ನರ್ಮದಾನದಿಯ ದಕ್ಷಿಣ ದಡದಲ್ಲಿರುವ ಅತ್ಯಂತ ಪ್ರಕಾಶಮಾನವಾದ ಮಾರ್ಕಂಡೇಶ ತೀರ್ಥಕ್ಕೆ ಹೋಗಬೇಕು.

೨. ಪುತ್ರ! ಸಮಸ್ತ ತೀರ್ಥಗಳಲ್ಲಿ ಉತ್ತಮವೂ, ದೇವವಂದ್ಯವೂ, ಮಂಗಳಕರವೂ, ಅತಿ ಗುಹ್ಯವೂ ಆದ ಈ ತೀರ್ಥವನ್ನು ನಾನು ಯಾರಿಗೂ ಹೇಳಲಿಲ್ಲ.

೩. ನಾನು ಹಿಂದೆ ಅಲ್ಲಿ ಸ್ವರ್ಗಸೋಪಾನಕ್ಕೆ ಸಮಾನವಾದ ಆ ತೀರ್ಥವನ್ನು ಸ್ಥಾಪಿಸಿರುವೆನು. ಅಲ್ಲಿಯೇ ನನಗೆ ಶಂಕರನ ಅನುಗ್ರಹದಿಂದ ಜ್ಞಾನವುಂಟಾಯಿತು.

೪–೬. ಪಾಂಡುತನಯ! ಅಲ್ಲಿ ನೀರಿನೊಳಗೆ ದ್ರುಪದಾ ಮಂತ್ರವನ್ನು ಜಪಿಸಿದವನು ವಾಚಿಕ, ಮಾನಸ, ಕರ್ಮಜವಾದ ಅಶೇಷ ಪಾತಕಗಳಿಂದ ಮುಕ್ತನಾಗುವನು. ಮಣ್ಣಿನ ಉಂಡೆಯನ್ನು ಹಿಡಿದುಕೊಂಡು ದಕ್ಷಿಣ ಮುಖವಾಗಿ ನಿಂತು ಭಕ್ತಿಯಿಂದ ಮೂವತ್ತೆರಡು ಅಥವಾ ಬಹು ರೂಪಿಯಾದ

ಯೋ ಜಯೋಽಚಣ್ಣೂಲಿನಂ ಭಕ್ತ್ಯಾ ದ್ವಾತ್ರಿಂಶದ್ಬಹುರೂಪಿಣಂ ।
ದೇಹಪಾತೇ ಶಿವಂ ಗಚ್ಛೇದಿತಿ ಮೇ ನಿಶ್ಚಯೋ ನೃಪ ॥ ೬ ॥
ಆಜ್ಯೇನ ಬೋಧಯೇದ್ದೀಪಮಷ್ಟಮ್ಯಾಂ ನಿಶಿ ಭಾರತ ।
ಸ್ವರ್ಗಲೋಕಮವಾಪ್ನೋತಿ ಇತ್ಯೇವಂ ಶಂಕರೋಽಬ್ರವೀತ್ ॥ ೭ ॥
ಶ್ರಾದ್ಧಂ ತತ್ರೈವ ಯೋ ಭಕ್ತ್ಯಾ ಕುರ್ವೀತ ನೃಪನಂದನ ।
ಪಿತರಸ್ತಸ್ಯ ತೃಪ್ಯಂತಿ ಯಾವದಾಭೂತಸಂಪ್ಲವಂ ॥ ೮ ॥
ಇಂಗುದೈರ್ಬದರೈರ್ಬಿಲ್ವೈರಕ್ಷತೇನ ಜಲೇನ ವಾ ।
ತರ್ಪಯೇತ್ತತ್ರ ಯೋ ವಂಶ್ಯಾನಾಪ್ನುಯಾಜ್ಜನ್ಮನಃ ಫಲಂ ॥ ೯ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ಮಾರ್ಕಂಡೇಶ್ವರತೀರ್ಥಮಾಹಾತ್ಮ್ಯವರ್ಣನಂ"
ನಾಮ ಶತತಮೋಽಧ್ಯಾಯಃ

---

ಶಿವನ ಪ್ರತಿಮೆಯನ್ನು ನಿರ್ಮಿಸಿದವನು ದೇಹಾವಸಾನದಲ್ಲಿ ಮಹೇಶ್ವರನೆಡೆಗೆ ಹೋಗುವನೆಂದು ನಾನು ನಿಶ್ಚಯವಾಗಿ ನಂಬಿದ್ದೇನೆ.

೭. ಅಷ್ಟಮಿದಿನದ ರಾತ್ರಿ ತುಪ್ಪದಿಂದ ದೀಪವನ್ನು ಹೊತ್ತಿಸುವವನು ಸ್ವರ್ಗಲೋಕಕ್ಕೆ ಹೋಗುವನೆಂದು ಶಂಕರನು ಹೇಳಿರುತ್ತಾನೆ.

೮. ನೃಪತನಯ! ಅಲ್ಲಿ ಭಕ್ತಿಯಿಂದ ಶ್ರಾದ್ಧಮಾಡುವವನ ಪಿತೃಗಳು ಪ್ರಳಯಕಾಲದವರೆಗೆ ತೃಪ್ತಿಗೊಳ್ಳುವರು.

೯. ಇಂಗುದ, ಬದರ, ಬಿಲ್ವಫಲ ಅಥವಾ ನೀರಿನಿಂದ ತಮ್ಮ ವಂಶದ ಜನರನ್ನು ತೃಪ್ತಿಗೊಳಿಸುವವನು ತಾನು ಹುಟ್ಟಿದ್ದಕ್ಕೆ ಫಲವನ್ನು ಪಡೆಯುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಮಾರ್ಕಂಡೇಶ್ವರತೀರ್ಥಮಾಹಾತ್ಮ್ಯವರ್ಣನ"ವೆಂಬ
ನೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಷ್ಟೈಕಾಧಿಕಶತತಮೋಽಧ್ಯಾಯಃ

## ಸಂಕರ್ಷಣತೀರ್ಥಮಾಹಾತ್ಮ್ಯವರ್ಣನಂ

**ಶ್ರೀ ಮಾರ್ಕಂಡೇಯ ಉವಾಚ:—**

**ತತೋ ಗಚ್ಛೇತ್ತು ರಾಜೇಂದ್ರ ತೀರ್ಥಂ ಪರಮಶೋಭನಂ ।**
**ಉತ್ತರೇ ನರ್ಮದಾಕೂಲೇ ಯಜ್ಞವಾಟಸ್ಯ ಮಧ್ಯತಃ ॥ ೧ ॥**
**ಸಂಕರ್ಷಣಮಿತಿ ಖ್ಯಾತಂ ಪೃಥಿವ್ಯಾಂ ಪಾಪನಾಶನಂ ।**
**ತಪಶ್ಚೀರ್ಣಂ ಪುರಾ ರಾಜನ್ಬಲಭದ್ರೇಣ ತತ್ರ ವೈ ॥ ೨ ॥**
**ಗೀರ್ವಾಣಾ ಅಪಿ ತತ್ರೈವ ಸನ್ನಿಧೌ ನೃಪನಂದನ ।**
**ಉಮಯಾ ಸಹಿತಃ ಶಂಭುಃ ಸ್ಥಿತಸ್ತತ್ರೈವ ಕೇಶವಃ ॥ ೩ ॥**
**ಬಲಭದ್ರೇಣ ರಾಜೇಂದ್ರ ಪ್ರಾಣಿನಾಮುಪಕಾರತಃ ।**
**ಸ್ಥಾಪಿತಃ ಪರಯಾ ಭಕ್ತ್ಯಾ ಶಂಕರಃ ಪಾಪನಾಶನಃ ॥ ೪ ॥**
**ಯಸ್ತತ್ರ ಸ್ನಾತಿ ವೈ ಭಕ್ತ್ಯಾ ಜಿತಕ್ರೋಧೋ ಜಿತೇಂದ್ರಿಯಃ ।**
**ಏಕಾದಶ್ಯಾಂ ಸಿತೇ ಪಕ್ಷೇ ಮಧುನಾ ಸ್ನಾಪಯೇಚ್ಛಿವಂ ॥ ೫ ॥**

---

## ಕನ್ನಡದ ಅನುವಾದ

### ಸಂಕರ್ಷಣತೀರ್ಥಮಾಹಾತ್ಮ್ಯವರ್ಣನ

೧. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:—ಎಲೈ ಧರ್ಮನಂದನನೇ! ತರುವಾಯ ನರ್ಮದಾನದಿಯ ಉತ್ತರತೀರದಲ್ಲಿ ಯಜ್ಞವಾಟದ ಮಧ್ಯದಲ್ಲಿರುವ ಪರಮಶೋಭನವಾದ ತೀರ್ಥವೊಂದಕ್ಕೆ ಹೋಗಬೇಕು.

೨. ಪಾಪನಾಶನವೆನಿಸಿದ ಆ ತೀರ್ಥವು ಸಂಕರ್ಷಣವೆಂದು ಈ ಭೂಮಂಡಲದಲ್ಲಿ ಹೆಸರುಗೊಂಡಿರುವುದು. ದೊರೆಯೆ! ಆ ತೀರ್ಥದಲ್ಲಿಯೇ ಶ್ರೀಕೃಷ್ಣಾಗ್ರಜನಾದ ಬಲಭದ್ರನು ತಪಸ್ಸನ್ನು ಮಾಡಿರುವನು.

೩. ನೃಪನಂದನ! ಆ ತೀರ್ಥದ ಸನ್ನಿಧಿಯಲ್ಲಿಯೇ ಸಕಲ ಗೀರ್ವಾಣರೂ ನೆಲಸಿರುವರು. ಅಲ್ಲದೆ ಶಂಕರನೂ ಉಮೆಯೊಡಗೂಡಿ ಅಲ್ಲಿ ನೆಲಸಿರುವನಲ್ಲದೆ ಕೇಶವನೂ ಇರುವನು.

೪. ರಾಜೇಂದ್ರ! ಬಲಭದ್ರನು ಸಮಸ್ತ ಪ್ರಾಣಿಗಳಿಗೂ ಉಪಕಾರವನ್ನೆಸಗಲೋಸುಗ ಪಾಪನಾಶನನಾದ ಶಂಕರನನ್ನು ಪರಮಭಕ್ತಿಯಿಂದ ಅಲ್ಲಿ ಸ್ಥಾಪಿಸಿರುವನು.

೫–೬. ಅಲ್ಲಿ ಶುಕ್ಲಪಕ್ಷದ ಏಕಾದಶಿಯ ದಿನ ಯಾವ ಮಾನವನು ಜಿತಕ್ರೋಧನೂ, ಜಿತೇಂದ್ರಿಯನೂ ಆಗಿ ಈಶ್ವರನಿಗೆ ಮಧುವಿನಿಂದ ಅಭಿಷೇಕ

**ಶ್ರಾದ್ಧಂ ತತ್ರೈವ ಯೋ ಭಕ್ತ್ಯಾ ಪಿತೄಣಾಮಥ ದಾಪಯೇತ್ ।**
**ಸ ಯಾತಿ ಪರಮಂ ಸ್ಥಾನಂ ಬಲಭದ್ರವಚೋ ಯಥಾ ॥ ೬ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ**
**ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ**
**"ಸಂಕರ್ಷಣತೀರ್ಥಮಾಹಾತ್ಮ್ಯವರ್ಣನಂ"**
**ನಾಮೈಕಾಽಧಿಕಶತತಮೋಽಧ್ಯಾಯಃ**

---

ವನ್ನು ಮಾಡುವನೋ, ಯಾವನು, ಪಿತೃಗಳಿಗೆ ಭಕ್ತಿಯಿಂದ ಶ್ರಾದ್ಧವನ್ನೆಸಗುವನೋ ಅವನು ಬಲಭದ್ರನ ವಚನದಂತೆ ಪರಮಪದವನ್ನೈದುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಸಂಕರ್ಷಣತೀರ್ಥಮಾಹಾತ್ಮ್ಯವರ್ಣನ"ನೆಂಬ
ನೂರೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ದ್ವ್ಯಧಿಕಶತತಮೋಽಧ್ಯಾಯಃ

## ಮನ್ಮಥೇಶ್ವರತೀರ್ಥಮಾಹಾತ್ಮ್ಯವರ್ಣನಂ

ಮಾರ್ಕಂಡೇಯ ಉವಾಚ :—

ಮನ್ಮಥೇಶಂ ತತೋ ಗಚ್ಛೇತ್ಸರ್ವದೇವನಮಸ್ಕೃತಂ ।
ಸ್ನಾನಮಾತ್ರಾನ್ನರೋ ರಾಜನ್ ಯಮಲೋಕಂ ನ ಪಶ್ಯತಿ ॥ ೧ ॥
ಅನಪತ್ಯಾ ಚಯಾ ನಾರೀ ಸ್ನಾಯಾದ್ವೈ ಪಾಂಡುನಂದನ ।
ಪುತ್ರಂ ಸಾ ಲಭತೇ ಪಾರ್ಥ ಸತ್ಯಸಂಧಂ ದೃಢವ್ರತಂ ॥ ೨ ॥
ತತ್ರ ಸ್ನಾತ್ವಾ ನರೋ ರಾಜಂಛುಚಿಃ ಪ್ರಯತಮಾನಸಃ ।
ಉಪೋಷ್ಯ ರಜನೀಮೇಕಾಂ ಗೋಸಹಸ್ರಫಲಂ ಲಭೇತ್ ॥ ೩ ॥
ಕಾಮಿಕಂ ತೀರ್ಥರಾಜಂ ತು ತಾದೃಶಂ ನ ಭವಿಷ್ಯತಿ ।
ತ್ರಿರಾತ್ರಂ ಕುರುತೇ ರಾಜನ್ ಸ ಗೋಲಕ್ಷಫಲಂ ಲಭೇತ್ ॥ ೪ ॥

---

## ಕನ್ನಡದ ಅನುವಾದ

### ಮನ್ಮಥೇಶ್ವರತೀರ್ಥಮಾಹಾತ್ಮ್ಯವರ್ಣನ

೧. ಮಾರ್ಕಂಡೇಯನು ಹೇಳುತ್ತಾನೆ —ರಾಜೇಂದ್ರನೇ! ಬಳಿಕ ಸಕಲ ದೇವತಾವಂದ್ಯನಾದ ಮನ್ಮಥೇಶ್ವರನ ಬಳಿಗೆ ಹೋಗಬೇಕು. ಆ ತೀರ್ಥದಲ್ಲಿ ಸ್ನಾನವನ್ನು ಮಾಡುವ ಮಾತ್ರದಿಂದಲೇ ಯಮಲೋಕದ ದರ್ಶನವು ತಪ್ಪಿ ಹೋಗುವುದು.

೨. ಪಾಂಡವಶ್ರೇಷ್ಠನೇ! ಬಂಜೆಯಾದ ಯಾವ ನಾರಿಯು ಆ ತೀರ್ಥದಲ್ಲಿ ಸ್ನಾನವನ್ನು ಮಾಡುವಳೋ, ಅವಳು ಸತ್ಯಸಂಧನೂ ಮಹಾವ್ರತನಿಷ್ಠನೂ ಆದ ಉತ್ತಮ ಪುತ್ರನನ್ನು ಪಡೆಯುವಳು.

೩. ಮಹಾರಾಜ! ಅಲ್ಲಿ ಸುಸ್ನಾತನಾಗಿ ಶೌಚದಿಂದಲೂ, ಸಮಾಹಿತ ಮನಸ್ಸಿನಿಂದಲೂ ಕೂಡಿ ಒಂದು ರಾತ್ರಿಯ ಉಪವಾಸವನ್ನು ಮಾಡಿದ ಮಾನವನಿಗೆ ಒಂದು ಸಾವಿರ ಗೋದಾನಗಳನ್ನು ಮಾಡಿದ ಫಲವು ಲಭಿಸುವುದು.

೪. ಸರ್ವಕಾಮಗಳನ್ನು ಕೊಡುವುದರಲ್ಲಿ ಇದನ್ನು ಹೋಲುವ ತೀರ್ಥರಾಜವು ಮತ್ತೊಂದಿಲ್ಲವು. ಯಾವನು ಅಲ್ಲಿ ಮೂರು ರಾತ್ರಿಗಳ ಉಪವಾಸವನ್ನು ಮಾಡುವನೋ, ಅವನು ಒಂದು ಲಕ್ಷ ಗೋವುಗಳ ದಾನದ ಫಲವನ್ನು ಪಡೆಯುವನು.

ತತ್ರ ನೃತ್ಯಂ ಪ್ರಕರ್ತವ್ಯಂ ತುಷ್ಯತೇ ಪರಮೇಶ್ವರಃ ।
ಗೀತವಾದಿತ್ರನಿರ್ಘೋಷೈ ರಾತ್ರೌ ಜಾಗರಣೇನ ಚ ॥ ೫ ॥
ಏರಂಡ್ಯಾಂ ಚ ಮಹಾದೇವೋ ದೃಷ್ಟೋ ಮೇ ಮನ್ಮಥೇಶ್ವರಃ ।
ಕಿಂ ಸಮರ್ಥೋ ಯಮೋ ರುಷ್ಟೋ ಭದ್ರೋ ಭದ್ರಾಣಿ ಪಶ್ಯತಿ ॥ ೬ ॥
ಕಾಮೇನ ಸ್ಥಾಪಿತಃ ಶಂಭುರೇತಸ್ಮಾತ್ಕಾಮದೋ ನೃಪ ।
ಸೋಪಾನಃ ಸ್ವರ್ಗಮಾರ್ಗಸ್ಯ ಪೃಥಿವ್ಯಾಂ ಮನ್ಮಥೇಶ್ವರಃ ॥ ೭ ॥
ವಿಶೇಷಶ್ಚಾಽತ್ರ ಸಂಧ್ಯಾಯಾಂ ಶ್ರಾದ್ಧದಾನೇ ಚ ಭಾರತ ।
ಅನ್ನದಾನೇನ ರಾಜೇಂದ್ರ ಕೀರ್ತಿತಂ ಫಲಮುತ್ತಮಂ ॥ ೮ ॥
ಏತತ್ತೇ ಸರ್ವಮಾಖ್ಯಾತಂ ತವ ಭಕ್ತ್ಯಾ ತು ಭಾರತ ।
ಪೃಥಿವ್ಯಾಂ ಸಾಗರಾಂತಾಯಾಂ ಪ್ರಖ್ಯಾತೋ ಮನ್ಮಥೇಶ್ವರಃ ॥ ೯ ॥
ಗೋದಾನಂ ಪಾಂಡವಶ್ರೇಷ್ಠ ತ್ರಯೋದಶ್ಯಾಂ ಪ್ರಕಾರಯೇತ್ ।
ಚೈತ್ರೇ ಮಾಸಿ ಸಿತೇ ಪಕ್ಷೇ ತತ್ರ ಗತ್ವಾ ಜಿತೇಂದ್ರಿಯಃ ॥ ೧೦ ॥

---

೫. ಆ ದೇವನ ಇದಿರಿನಲ್ಲಿ ನರ್ತನವನ್ನು ಮಾಡಬೇಕು. ಗೀತವಾದ್ಯಗಳ ಶಬ್ದಗಳಿಂದಲೂ ರಾತ್ರಿಯ ಜಾಗರಣೆಯಿಂದಲೂ ಪರಮೇಶ್ವರನು ಸಂತುಷ್ಟನಾಗುವನು.

೬. ಏರಂಡಕ್ಷೇತ್ರದಲ್ಲಿ ನಾನು ಮನ್ಮಥೇಶ್ವರ ಮಹಾದೇವನನ್ನು ನೋಡಿದೆನು. ಅಂತಹ ನನಗೆ ಯಮನು ಕೋಪಗೊಂಡರೂ ಏನುಮಾಡಲು ಸಮರ್ಥನಾದಾನು? ಪುಣ್ಯಕಾರಿಯು ಪುಣ್ಯವನ್ನೇ ಪಡೆಯುವನಷ್ಟೆ.

೭. ರಾಜನೆ! ಸ್ವೇಚ್ಛೆಯಿಂದ ಸ್ಥಾಪಿತನಾದ ಈ ಮಹಾದೇವನು ಇಚ್ಛಾಪ್ರದನಾಗಿರುವನು. ಈ ಮನ್ಮಥೇಶ್ವರನು ಭೂಲೋಕದಲ್ಲಿದ್ದರೂ ಸ್ವರ್ಗವನ್ನು ಸೇರುವ ಮಾರ್ಗಕ್ಕೆ ಸೋಪಾನವಾಗಿರುವನು.

೮. ರಾಜೇಂದ್ರನೆ! ಸಂಧ್ಯಾಕಾಲಗಳಲ್ಲಿ ಇಲ್ಲಿ ಶ್ರಾದ್ಧಗಳನ್ನು ಮಾಡಲು ವಿಶೇಷ ಫಲವಿರುವುದು. ಇಲ್ಲಿ ಮಾಡುವ ಅನ್ನದಾನದಿಂದಲೂ ಉತ್ತಮ ಫಲವುಂಟೆಂದು ಹೇಳುವರು.

೯. ಇಂತು ನಿನಗೆ ಭಕ್ತಿಯಿಂದೆಲ್ಲವನ್ನೂ ನಿರೂಪಿಸಿರುವೆನು. ಸಮುದ್ರಪರ್ಯಂತವಾದ ಭೂಮಂಡಲದೊಳಗೆಲ್ಲ ಈ ಮನ್ಮಥೇಶ್ವರನು ಅತ್ಯಂತ ಪ್ರಖ್ಯಾತಿಯನ್ನು ಪಡೆದಿರುವನು.

೧೦. ಅಲ್ಲಿಗೆ ಹೋಗಿ ಜಿತೇಂದ್ರಿಯನಾಗಿ ಮಾನವನು ಚೈತ್ರಮಾಸದ ಶುಕ್ಲಪಕ್ಷದ ತ್ರಯೋದಶಿಯ ದಿನದಲ್ಲಿ ಗೋದಾನವನ್ನು ಮಾಡಬೇಕು.

ರಾತ್ರೌ ಜಾಗರಣಂ ಕೃತ್ವಾ ದೇವಸ್ಯಾಗ್ರೇ ನೃಪೋತ್ತಮ ।
ದೀಪಂ ಭಕ್ತ್ಯಾ ಘೃತೇನೈವ ದೇವಸ್ಯಾಗ್ರೇ ನಿವೇದಯೇತ್ ॥ ೧೧ ॥
ಸ್ತ್ರ್ಯಥವಾ ಪುರುಷೋ ವಾಽಪಿ ಸಮವೇತತ್ಫಲಂ ಸ್ಮೃತಂ ॥ ೧೨ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ಮನ್ಮಥೇಶ್ವರತೀರ್ಥಮಾಹಾತ್ಮ್ಯವರ್ಣನಂ"
ನಾಮ ದ್ವ್ಯಧಿಕಶತತಮೋಽಧ್ಯಾಯಃ

---

೧೧. ರಾಜೇಂದ್ರನೆ! ದೇವರ ಸನ್ನಿಧಾನದಲ್ಲಿ ಭಕ್ತಿಭರಿತನಾಗಿ ರಾತ್ರಿಯ ಜಾಗರಣೆಯನ್ನು ಮಾಡಿ ತುಪ್ಪದ ದೀಪವನ್ನು ನಿವೇದಿಸಬೇಕು.

೧೨. ಸ್ತ್ರೀಯಾಗಲಿ, ಪುರುಷನಾಗಲಿ ಸರ್ವರಿಗೂ ಸಮಾನವಾದ ಫಲವನ್ನು ಮನ್ಮಥೇಶ್ವರನು ಕೊಡುವನೆಂದು ಸ್ಮೃತಿಗಳು ಹೇಳುವುವು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಮನ್ಮಥೇಶ್ವರತೀರ್ಥಮಾಹಾತ್ಮ್ಯವರ್ಣನ"ವೆಂಬ
ನೂರೆರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ತ್ರ್ಯಧಿಕಶತತಮೋಽಧ್ಯಾಯಃ

### ಏರಂಡೀಸಂಗಮತೀರ್ಥಫಲಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ತತೋ ಗಚ್ಛೇನ್ಮಹೀಪಾಲ ಏರಂಡೀಸಂಗಮಂ ಪರಂ ।
ಯಚ್ಛ್ರುತಂ ಮೈ ಮಯಾ ರಾಜನ್ ಶಿವಸ್ಯ ವದತಃ ಪುರಾ ॥ ೧ ॥
ಏತದೇವ ಪುರಾ ಪ್ರಶ್ನಂ ಗೌರ್ಯಾ ಪೃಷ್ಟಸ್ತು ಶಂಕರಃ ।
ಪ್ರೋವಾಚ ನೃಪಶಾರ್ದೂಲ ಗುಹ್ಯಾದ್ಗುಹ್ಯತರಂ ಶುಭಂ ॥ ೨ ॥

ಈಶ್ವರ ಉವಾಚ :—

ಶೃಣು ದೇವಿ ಪರಂ ಗುಹ್ಯಂ ನಾಖ್ಯಾತಂ ಕಸ್ಯಚಿನ್ಮಯಾ ।
ರೇವಾಯಾಶ್ಚೋತ್ತರೇ ಕೂಲೇ ತೀರ್ಥಂ ಪರಮಶೋಭನಂ ।
ಭ್ರೂಣಹತ್ಯಾಹರಂ ದೇವಿ ಕಾಮದಂ ಪುತ್ರವರ್ಧನಂ ॥ ೩ ॥

ಪಾರ್ವತ್ಯುವಾಚ :—

ಕಥಯಸ್ವ ಮಹಾದೇವ ತೀರ್ಥಂ ಪರಮಶೋಭನಂ ।
ಭ್ರೂಣಹತ್ಯಾಹರಂ ಕಸ್ಮಾತ್ಕಾಮದಂ ಸ್ವರ್ಗದರ್ಶನಂ ॥ ೪ ॥

---

### ಕನ್ನಡದ ಅನುವಾದ

#### ಏರಂಡೀಸಂಗಮತೀರ್ಥಫಲಮಾಹಾತ್ಮ್ಯವರ್ಣನ

೧. ಮಾರ್ಕಂಡೇಯನು ಹೇಳುತ್ತಾನೆ —ಭೂಪಾಲನೆ! ಬಳಿಕ ಸರ್ವೋತ್ತಮವೆನಿಸಿದ ಏರಂಡೀಸಂಗಮವನ್ನು ಸೇರಬೇಕು. ಮುನ್ನು ಅದರ ಮಹಿಮೆಯನ್ನು ಪರಮೇಶ್ವರನು ಪಾರ್ವತಿಗೆ ಹೇಳುತ್ತಿರಲು ನಾನು ಕೇಳಿದೆನು.

೨. ಚಕ್ರವರ್ತಿಯೆ ! ಇದನ್ನು ಕುರಿತೇ ಹಿಂದೆ ಪಾರ್ವತೀದೇವಿಯು ಪ್ರಶ್ನೆಯನ್ನು ಮಾಡಿದಳಷ್ಟೆ! ಶಂಕರನು ಅತ್ಯಂತ ಗುಹ್ಯತರವೂ ಪರಮಪವಿತ್ರವೂ ಆದ ಈ ಕಥೆಯನ್ನು ಹೇಳಿದನು.

೩. ಈಶ್ವರನು ಹೇಳುತ್ತಾನೆ.—ದೇವಿಯೆ ! ನಿನಗೆ ಪರಮರಹಸ್ಯವೊಂದನ್ನು ಹೇಳುವೆನು, ಕೇಳು. ಇದನ್ನು ಹಿಂದೆ ಯಾರಿಗೂ ಹೇಳಿರುವುದಿಲ್ಲ. ರೇವಾನದಿಯ ಉತ್ತರ ತೀರದಲ್ಲಿ ಬಹಳ ಮನೋಹರವೂ, ಭ್ರೂಣಹತ್ಯಾಪಾತಕವನ್ನು ನೀಗಿಸುವುದೂ, ಸರ್ವಾಭೀಷ್ಟದಾಯಕವೂ, ಸಂತಾನವರ್ಧಕವೂ ಆದ ಒಂದು ತೀರ್ಥವಿರುವುದು.

೪. ಪಾರ್ವತಿಯು ಹೇಳುತ್ತಾಳೆ!—ಮಹಾದೇವನೆ! ಈ ತೀರ್ಥವು ಪರಮ ಪವಿತ್ರವೂ, ಭ್ರೂಣಹತ್ಯಾನಾಶಕವೂ, ಕಾಮಪ್ರದವೂ, ಸ್ವರ್ಗಸಾಧಕವೂ ಆಗಲು ಕಾರಣವನ್ನು ನನಗೆ ತಿಳಿಸು.

ಈಶ್ವರ ಉವಾಚ :—

ಅತ್ರಿರ್ನಾಮ ಮಹಾದೇವಿ ಮಾನಸೋ ಬ್ರಹ್ಮಣಃ ಸುತಃ ।
ಅಗ್ನಿಹೋತ್ರರತೋ ನಿತ್ಯಂ ದೇವತಾಽತಿಥಿಪೂಜಕಃ ॥ ೫ ॥
ಸೋಮಸಂಸ್ಥಾಶ್ಚ ಸಪ್ತೈವ ಕೃತಾ ವಿಪ್ರೇಣ ಪಾರ್ವತಿ ।
ಅನಸೂಯೇತಿ ವಿಖ್ಯಾತಾ ಭಾರ್ಯಾ ತಸ್ಯ ಗುಣಾನ್ವಿತಾ ॥ ೬ ॥
ಪತಿವ್ರತಾ ಪತಿಪ್ರಾಣಾ ಪತ್ಯುಃ ಕಾರ್ಯಹಿತೇ ರತಾ ।
ಏವಂ ಯಾತಿ ತತಃ ಕಾಲೇ ನ ಪುತ್ರಾ ನ ಚ ಪುತ್ರಿಕಾ ॥ ೭ ॥
ಅಪರಾಹ್ನೇ ಮಹಾದೇವಿ ಸುಖಾಸೀನೌ ತು ಸುಂದರಿ ।
ವದಂತೌ ಸುಖದುಃಖಾನಿ ಪೂರ್ವವೃತ್ತಾನಿ ಯಾನಿ ಚ ॥ ೮ ॥

ಅತ್ರಿರುವಾಚ :—

ಸೌಮ್ಯೇ ಶುಭೇ ಪ್ರಿಯೇ ಕಾಂತೇ ಚಾರುಸರ್ವಾಂಗಸುಂದರಿ ।
ವಿದ್ಯಾವಿನಯಸಂಪನ್ನೇ ಪದ್ಮಪತ್ರನಿಭೇಕ್ಷಣೇ ॥ ೯ ॥
ಪೂರ್ಣಚಂದ್ರನಿಭಾಕಾರೇ ಪೃಥುಶ್ರೋಣಿಭರಾಲಸೇ ।
ನ ತ್ವಯಾ ಸದೃಶೀ ನಾರೀ ತ್ರೈಲೋಕ್ಯೇ ಸ ಚರಾಚರೇ ॥ ೧೦ ॥

---

೫. ಈಶ್ವರನು ಹೇಳುತ್ತಾನೆ —ದೇವಿಯೆ ! ಕೇಳು. ಬ್ರಹ್ಮನಿಗೆ ಮಾನಸ ಪುತ್ರನಾದ ಅತ್ರಿಯೆಂಬ ಮಹಾಮುನಿಯಿದ್ದನು. ಆತನು ನಿತ್ಯವೂ ಅಗ್ನಿಹೋತ್ರನಿರತನೂ, ದೇವತಾತಿಥಿಪೂಜಕನೂ ಆಗಿದ್ದನು.

೬. ಆ ವಿಪ್ರೋತ್ತಮನು ಏಳು ಸೋಮಯಾಗಗಳನ್ನು ಮಾಡಿದ್ದನು. ಆತನಿಗೆ ಸಕಲ ಸದ್ಗುಣಭರಿತೆಯಾದ ಅನಸೂಯೆಯೆಂಬ ಪತ್ನಿಯಿದ್ದಳು.

೭. ಆಕೆಯು ಪತಿವ್ರತೆಯೂ, ಪತಿಯಲ್ಲಿಯೇ ಪ್ರಾಣವುಳ್ಳವಳೂ, ಆತನ ಕಾರ್ಯಗಳನ್ನೇ ಸಾಧಿಸುವವಳೂ ಆಗಿದ್ದಳು. ಇಂತು ಬಹುಕಾಲವು ಕಳೆದರೂ ಅವರಿಗೆ ಗಂಡು ಮಕ್ಕಳಾಗಲಿ ಹೆಣ್ಣು ಮಕ್ಕಳಾಗಲಿ ಆಗಲಿಲ್ಲ.

೮. ಮಹೇಶ್ವರಿಯೆ ! ಒಂದು ದಿನದ ಅಪರಾಹ್ಣದಲ್ಲಿ ಇಬ್ಬರೂ ಸುಖಾಸೀನರಾಗಿ ತಮ್ಮ ಸುಖದುಃಖಗಳನ್ನೂ ಹಿಂದಿನ ವೃತ್ತಾಂತಗಳನ್ನೂ ಪರಸ್ಪರವಾಗಿ ಹೇಳಿಕೊಳ್ಳುತ್ತಿದ್ದರು.

೯. ಅತ್ರಿಯು ಹೇಳುತ್ತಾನೆ :—ಸೌಮ್ಯಳೆ ! ಮಂಗಳೆಯೆ ! ಪ್ರಿಯಳೆ ! ಸರ್ವಾವಯವ ಸುಂದರಿಯೆ ! ವಿದ್ಯಾವಿನಯಾದಿ ಸದ್ಗುಣಭರಿತಳೆ ! ಪದ್ಮದಳಾಯತನೇತ್ರೆಯೆ !

೧೦. ಪೂರ್ಣಚಂದ್ರಸಮಾನವಾದ ಮುಖದವಳೆ ! ಶ್ರೋಣೀಭರಾಲಸೆಯೆ ! ಚರಾಚರಗಳನ್ನೊಳಗೊಂಡ ಮೂರು ಲೋಕಗಳಲ್ಲಿಯೂ ನಿನ್ನನ್ನು ಹೋಲುವ ಸ್ತ್ರೀಯು ಯಾವಳೂ ಕಾಣಲಾರಳು.

ರತಿಪುತ್ರಫಲಾ ನಾರೀ ಪಠ್ಯತೇ ವೇದವಾದಿಭಿಃ ।
ಪುತ್ರಹೀನಸ್ಯ ಯತ್ಸೌಖ್ಯಂ ತತ್ಸೌಖ್ಯಂ ಮಮ ಸುಂದರಿ ॥ ೧೧ ॥
ಯಥಾಽಹಂ ನ ತಥಾ ಪುತ್ರಃ ಸಮರ್ಥಃ ಸರ್ವಕರ್ಮಸು ।
ಪುನ್ನಾಮನರಕಾದ್ಭದ್ರೇ ಜಾತಮಾತ್ರೇಣ ಸುಂದರಿ ॥ ೧೨ ॥
ಪತಂತಂ ರಕ್ಷಯೇದ್ದೇವಿ ಮಹಾಪಾತಕಿನಂ ಯದಿ ।
ಮಹಾಘೋರೇ ಗತಾ ಯಾಽಪಿ ದುಷ್ಟಕರ್ಮಪಿತಾಮಹಾಃ ॥ ೧೩ ॥
ತದ್ಧರಂತಿ ಸುಪುತ್ರಾಶ್ಚ ವೈತರಣ್ಯಾಂ ಗತಾನಪಿ ।
ಪುತ್ರೇಣ ಲೋಕಾನ್ ಜಯತಿ ಪೌತ್ರೇಣ ಪರಮಾ ಗತಿಃ ॥ ೧೪ ॥
ಅಥ ಪುತ್ರಸ್ಯ ಪೌತ್ರೇಣ ಪ್ರಗಚ್ಛೇದ್ಬ್ರಹ್ಮ ಶಾಶ್ವತಂ ।
ನಾಸ್ತಿ ಪುತ್ರಸಮೋ ಬಂಧುರಿಹಲೋಕೇ ಪರತ್ರ ಚ ॥ ೧೫ ॥
ಅಹಶ್ಚ ಮಧ್ಯರಾತ್ರೇ ಚ ಚಿಂತಯಾನಸ್ಯ ಸರ್ವದಾ ।
ಶುಷ್ಯಂತಿ ಮಮ ಗಾತ್ರಾಣಿ ಗ್ರೀಷ್ಮೇ ನದ್ಯುದಕಂ ಯಥಾ ॥ ೧೬ ॥

---

೧೧. ಪತ್ನಿಯಿಂದ ಸುರತವನ್ನೂ, ಪುತ್ರ ಸೌಖ್ಯವನ್ನೂ ಪಡೆಯುವುದೇ ಫಲವೆಂದು ವೇದಜ್ಞರು ಹೇಳುವರು. ಸುಂದರಿಯೆ! ಪುತ್ರಹೀನನಿಗೆ ಯಾವ ಸೌಖ್ಯವೊ, ಅಷ್ಟು ಮಾತ್ರ ನನ್ನದಾಗಿದೆ.

೧೨–೧೪. ನಾನು ಸರ್ವಕರ್ಮಗಳಲ್ಲಿ ಸಮರ್ಥನಾಗಿದ್ದರೂ ಪುತ್ರಲಾಭವನ್ನು ಮಾತ್ರ ಪಡೆಯಲಿಲ್ಲ. ಭದ್ರೆಯೆ! ಪುನ್ನಾಮ ನರಕದಲ್ಲಿ ಬೀಳುತ್ತಿರುವವನನ್ನು, ಹುಟ್ಟುವುದರಿಂದಲೇ ಮಗನು ಸಂರಕ್ಷಿಸುವನು. ಮಹಾಪಾತಕಿಯಾದರೂ ಪುತ್ರನಿಂದ ಉದ್ಧೃತನಾಗುವನು. ದುಷ್ಟಕರ್ಮಗಳನ್ನು ಮಾಡಿ ಮಹಾ ಘೋರನರಕಗಳಲ್ಲಿ ಬಿದ್ದು ವೈತರಣೀ ನದಿಯಲ್ಲಿ ಸಂಕಟಗೊಳ್ಳುತ್ತಿರುವ ಪಿತಾಮಹಾದಿಗಳನ್ನೂ ಸುಪುತ್ರನು ಉದ್ಧರಿಸುವನು. ಪುತ್ರ ಜನನದಿಂದ ಪಿತನು ಲೋಕಗಳನ್ನೆಲ್ಲ ಜಯಿಸುವನು. ಪೌತ್ರನನ್ನು ಪಡೆಯುವುದರಿಂದ ಉತ್ತಮ ಗತಿಯನ್ನು ಪಡೆಯುವನು.

೧೫. ಪುತ್ರನ ಪೌತ್ರನನ್ನು ಪಡೆದವನು ಸನಾತನವಾದ ಬ್ರಹ್ಮಪದವನ್ನೇ ಹೊಂದುವನು. ಈ ಲೋಕದಲ್ಲಾಗಲಿ ಪರಲೋಕದಲ್ಲಾಗಲಿ ಪುತ್ರನಿಗೆ ಸಮನಾದ ಬಂಧುವಿಲ್ಲ.

೧೬. ಹಗಲಿನಲ್ಲಿಯೂ ಮಧ್ಯರಾತ್ರಿಯಲ್ಲಿಯೂ ಇದನ್ನೇ ಕುರಿತು ಯೋಚಿಸುತ್ತಿರುವ ನನ್ನ ಶರೀರವು ಬೇಸಿಗೆಯಕಾಲದ ನದಿಯ ನೀರಿನಂತೆ ಶೋಷಿಸುತ್ತಿರುವುದು.

ಅನಸೂಯೋವಾಚ :—

ಯತ್ತ್ವಯಾ ಶೋಚಿತಂ ವಿಪ್ರ ತತ್ಸರ್ವಂ ಶೋಚಯಾಮ್ಯಹಂ ।
ತವೋದ್ವೇಗಕರಂ ಯಚ್ಚ ತನ್ಮೇ ದಹತಿ ಚೇತಸಿ ॥ ೧೭ ॥
ಯೇನ ಪುತ್ರಾ ಭವಿಷ್ಯಂತಿ ಆಯುಷ್ಮಂತೋ ಗುಣಾನ್ವಿತಾಃ ।
ತತ್ಕಾರ್ಯಂ ಚ ಸಮಾಖ್ಯಸ್ವ ಯೇನ ತುಷ್ಯೇತ್ಪ್ರಜಾಪತಿಃ ॥ ೧೮ ॥

ಅತ್ರಿರುವಾಚ :—

ತಪಸ್ತಪ್ತಂ ಮಯಾ ಭದ್ರೇ ಜಾತಮಾತ್ರೇಣ ದುಷ್ಕರಂ ।
ವ್ರತೋಪವಾಸನಿಯಮೈಃ ಶಾಕಾಹಾರೇಣ ಸುಂದರಿ ॥ ೧೯ ॥
ಕ್ಷೀಣದೇಹಸ್ತು ತಿಷ್ಠಾಮಿ ಹ್ಯಶಕ್ತೋಽಹಂ ಮಹಾವ್ರತೇ ।
ತೇನ ಶೋಚಾಮಿ ಚಾತ್ಮಾನಂ ರಹಸ್ಯಂ ಕಥಿತಂ ಮಯಾ ॥ ೨೦ ॥

ಅನಸೂಯೋವಾಚ :—

ಭರ್ತುಃ ಪತಿವ್ರತಾ ನಾರೀ ರತಿಪುತ್ರವಿವರ್ಧಿನೀ ।
ತ್ರಿವರ್ಗಸಾಧನಾ ಸಾಚ ಶ್ಲಾಘ್ಯಾ ಚ ವಿದುಷಾಂ ಜನೇ ॥ ೨೧ ॥
ಜಪಸ್ತಪಸ್ತೀರ್ಥಯಾತ್ರಾ ಮೃಡೇಜ್ಯಾ ಮಂತ್ರಸಾಧನಂ ।
ದೇವತಾರಾಧನಂ ಚೈವ ಸ್ತ್ರೀಶೂದ್ರಪತನಾನಿ ಷಟ್ ॥ ೨೨ ॥

---

೧೭–೧೮. ಅನಸೂಯೆಯು ಹೇಳುತ್ತಾಳೆ:—ವಿಪ್ರೋತ್ತಮನೆ! ನೀನು ಶೋಕಿಸುತ್ತಿರುವ ವಿಷಯದಲ್ಲಿಯೇ ನಾನೂ ಶೋಕಿಸುತ್ತಿರುವೆನು. ನಿನಗೆ ಉದ್ವೇಗವನ್ನುಂಟುಮಾಡುತ್ತಿರುವುದೇ ನನಗೂ ಮನಸ್ಸಿನಲ್ಲಿ ಕುದಿಯುತ್ತಿರುವುದು. ಯಾವ ಕಾರ್ಯದಿಂದ ಪ್ರಜಾಪತಿಯು ಸಂತುಷ್ಟನಾಗುವನೊ, ಯಾವುದರಿಂದ ನಮಗೆ ದೀರ್ಘಾಯುಷ್ಯವಂತರೂ ಸರ್ವಗುಣೋಪಪನ್ನರೂ ಆದ ಪುತ್ರರು ಜನಿಸುವರೊ ಅದನ್ನು ಕುರಿತು ಯೋಚಿಸುವವನಾಗು.

೧೯. ಅತ್ರಿಯು ಹೇಳುತ್ತಾನೆ:—ಪ್ರಿಯಳೆ! ನಾನು ಹುಟ್ಟುತ್ತಲೇ ವ್ರತಗಳಿಂದಲೂ, ಉಪವಾಸಗಳಿಂದಲೂ, ನಿಯಮಗಳಿಂದಲೂ ಕೂಡಿ ಶಾಕಾಹಾರವನ್ನೇ ಸೇವಿಸುತ್ತ ದುಸ್ಸಾಧ್ಯವಾದ ತಪಸ್ಸನ್ನು ಮಾಡಿದೆನು.

೨೦. ಆದರಿಂದ ಕೃಶವಾದ ದೇಹವುಳ್ಳವನಾಗಿ ಮಹಾ ವ್ರತಗಳನ್ನಾಚರಿಸಲಶಕ್ತನಾಗಿರುವೆನು. ಅದರಿಂದ ನನ್ನನ್ನೇ ನಾನು ನಿಂದಿಸಿಕೊಳ್ಳುತ್ತಿರುವೆನು. ಈ ನನ್ನ ರಹಸ್ಯವನ್ನು ನಿನಗೆ ತಿಳಿಸಿರುವೆನು.

೨೧. ಅನಸೂಯೆಯು ಹೇಳುತ್ತಾಳೆ:—ಪತಿವ್ರತೆಯಾದ ಹೆಂಗುಸು ಪತಿಗೆ ರತಿಯನ್ನೂ ಪುತ್ರರನ್ನೂ ಕೊಡುವವಳು. ಧರ್ಮಾರ್ಥಕಾಮಗಳ ಸಾಧನೆಗೆ ಸಹಾಯಳಾದ ಆಕೆಯೇ ವಿದ್ವಾಂಸರಲ್ಲಿ ಶ್ಲಾಘ್ಯಳಾಗುವಳು.

೨೨. ಪತಿಯ ಅನುಜ್ಞೆಯಿಲ್ಲದೆ ಜಪತಪಗಳನ್ನಾಚರಿಸುವುದು, ತೀರ್ಥ

ಈದೃಶಂ ತು ಮಹಾದೋಷಂ ಸ್ತ್ರೀಣಾಂ ತು ವ್ರತಸಾಧನೇ ।
ವದಂತಿ ಮುನಯಃ ಸರ್ವೇ ಯಥೋಕ್ತಂ ವೇದಭಾಷಿತಂ ॥ ೨೩ ॥
ಅನುಜ್ಞಾತಾ ತ್ವಯಾ ಬ್ರಹ್ಮಂಸ್ತಪಸ್ತಪ್ಸ್ಯಾಮಿ ದುಷ್ಕರಂ ।
ಪುತ್ರಾರ್ಥಿತ್ವಂ ಸಮುದ್ದಿಶ್ಯ ತೋಷಯಾಮಿ ಸುರೋತ್ತಮಾನ್ ॥ ೨೪ ॥
ಅತ್ರಿರುವಾಚ :—
ಸಾಧು ಸಾಧು ಮಹಾಪ್ರಾಜ್ಞೇ ಮಮ ಸಂತೋಷಕಾರಿಣಿ ।
ಆಜ್ಞಾತಾ ತ್ವಂ ಮಯಾ ಭದ್ರೇ ಪುತ್ರಾರ್ಥಂ ತಪ ಆಶ್ರಯ ॥ ೨೫ ॥
ದೇವತಾನಾಂ ಮನುಷ್ಯಾಣಾಂ ಪಿತೄಣಾಮನೃಣೋ ಭವೇ ।
ನ ಭಾರ್ಯಾಸದೃಶೋ ಬಂಧುಸ್ತ್ರಿಷು ಲೋಕೇಷು ವಿದ್ಯತೇ ॥ ೨೬ ॥
ತೇನ ದೇವಾಃ ಪ್ರಶಂಸಂತಿ ನ ಭಾರ್ಯಾಸದೃಶಂ ಸುಖಂ ।
ಸನ್ಮುಖೇ ಮನ್ಮುಖಾಃ ಪುತ್ರಾಃ ವಿಲೋಮೇ ತು ಪರಾಙ್ಮುಖಾಃ ॥ ೨೭ ॥

---

ಯಾತ್ರೆಗಳನ್ನು ಮಾಡುವುದು, ಈಶ್ವರಪೂಜೆ, ಮಂತ್ರಪುನಶ್ಚರಣ, ದೇವತಾರಾಧನ— ಈ ಆರೂ ಸ್ತ್ರೀಯರಿಗೂ ಶೂದ್ರರಿಗೂ ಪತನಹೇತುಗಳಾಗಿರುವುವು.

೨೩. ಸ್ತ್ರೀಯರು ವ್ರತೋಪವಾಸಗಳನ್ನು ಮಾಡಲು ಈ ಮಹಾದೋಷವನ್ನು ಸಕಲ ಮಹರ್ಷಿಗಳೂ ಹೇಳುತ್ತಿರುವರು. ಹಾಗೆಯೇ ವೇದಾನುಶಾಸನವೂ ಇರುವುದು.

೨೪. ವಿಪ್ರೋತ್ತಮನೆ! ನಿನ್ನ ಅನುಜ್ಞೆಯಾದರೆ ನಾನು ಪುತ್ರಲಾಭದ ಉದ್ದೇಶದಿಂದ ದುಷ್ಕರವಾದ ತಪಸ್ಸನ್ನಾಚರಿಸಿ ದೇವತೆಗಳನ್ನು ಸಂತೋಷಗೊಳಿಸುವೆನು.

೨೫. "ಅತ್ರಿಯು ಹೇಳುತ್ತಾಳೆ.—ಎಲೌ ಪ್ರಾಜ್ಞಳೆ! ನಿನ್ನ ಮಾತು ಸಾಧುವಾಗಿರುವುದು. ಅದರಿಂದ ನನಗೆ ಸಂತೋಷವುಂಟಾಗಿರುವುದು. ನೀನು ತಪಶ್ಚರಣೆಯನ್ನು ಮಾಡಲು ನಾನು ಅನುಜ್ಞೆಯನ್ನು ಕೊಟ್ಟಿರುವೆನು.

೨೬. ಇವರಿಂದ ನಾನೂ ದೇವತೆಗಳ, ಮನುಷ್ಯರ ಮತ್ತು ಪಿತೃಗಳ ಋಣಗಳಿಂದ ಮುಕ್ತನಾಗುವೆನು. ಮೂರು ಲೋಕಗಳಲ್ಲಿಯೂ ಹೆಂಡತಿಗೆ ಸಮಾನವಾದ ಬಂಧುವು ದೊರೆಯಲಾರನು.

೨೭. ಆದುದರಿಂದಲೇ ಭಾರ್ಯೆಯೊಡನಿರುವ ಸುಖವನ್ನು ಹೋಲುವ ಸುಖವು ಮತ್ತೊಂದಿಲ್ಲವೆಂದು ದೇವತೆಗಳು ಪ್ರಶಂಸಿಸುತ್ತಿರುವರು. ನೀನು ಸುಮುಖಳಾದರೆ ಪುತ್ರರೂ ನನ್ನಂತೆಯೇ ಆಗುವರು. ವಿಪರೀತವಾದರೆ ಅವರೂ ಪರಾಙ್ಮುಖರಾಗುವರು.

ತೇನ ಭಾರ್ಯಾಂ ಪ್ರಶಂಸಂತಿ ಸ ದೇವಾಸುರಮಾನುಷಾಃ ।
ಮಹಾವ್ರತೇ ಮಹಾಪ್ರಾಜ್ಞೇ ಸತ್ವವತೀ ಶುಭೇಕ್ಷಣೇ ॥ ೨೮ ॥
ತಪಸ್ತಪಸ್ವ ಶೀಘ್ರಂ ತ್ವಂ ಪುತ್ರಾರ್ಥಂ ತು ಮಮಾಜ್ಞಯಾ ।
ಏತದ್ವಾಕ್ಯಾವಸಾನೇ ತು ಸಾಷ್ಟಾಂಗಂ ಪ್ರಣತಾಽಬ್ರವೀತ್ ॥ ೨೯ ॥
ತ್ವತ್ಪ್ರಸಾದೇನ ವಿಪ್ರೇಂದ್ರ ಸರ್ವಾನ್ಕಾಮಾನವಾಪ್ನುಯಾಂ ।
ಹಂಸಲೀಲಾಗತಿಃ ಸಾಚ ಮೃಗಾಕ್ಷೀ ವರವರ್ಣಿನೀ ॥ ೩೦ ॥
ನಿಯಮಸ್ಥಾ ತತೋ ಭೂತ್ವಾ ಸಂಪ್ರಾಪ್ತಾ ನರ್ಮದಾಂ ನದೀಂ ।
ಶಿವಸ್ವೇದೋದ್ಭವಾಂ ದೇವೀಂ ಸರ್ವಪಾಪಪ್ರಣಾಶನೀಂ ॥ ೩೧ ॥
ಯಸ್ಯಾ ದರ್ಶನಮಾತ್ರೇಣ ನಶ್ಯತೇ ಪಾಪಸಂಚಯಃ ।
ಸ್ನಾನಮಾತ್ರೇಣ ವೈ ಯಸ್ಯಾ ಅಶ್ವಮೇಧಫಲಂ ಲಭೇತ್ ॥ ೩೨ ॥
ಯೇ ಪಿಬಂತಿ ಮಹಾದೇವಿ ಶ್ರದ್ಧಧಾನಾಃ ಪಯಃ ಶುಭಂ ।
ಸೋಮಪಾನೇನ ತತ್ತುಲ್ಯಂ ನಾಽತ್ರ ಕಾರ್ಯಾ ವಿಚಾರಣಾ ॥ ೩೩ ॥

---

೨೮. ಈ ಕಾರಣದಿಂದ ದೇವತೆಗಳೂ, ರಾಕ್ಷಸರೂ, ಮಾನವರೂ ಪತ್ನಿಯನ್ನು ಹೊಗಳುವರು. ನೀನು ಮಹಾವ್ರತಧರಳೂ, ಮಹಾಮೇಧಾವಿಯೂ, ಸತ್ತ್ವಗುಣಸಂಪನ್ನಳೂ, ಸುಮುಖಿಯೂ ಆಗಿರುವೆ.

೨೯. ನನ್ನ ಅಪ್ಪಣೆಯಂತೆ ನೀನು ಬೇಗ ಹೋಗಿ ತಪಸ್ಸನ್ನಾಚರಿಸುವವಳಾಗು.'' ಇಂತೆಂದ ಪತಿಗೆ ಆ ಅನಸೂಯಾದೇವಿಯು ನಮಸ್ಕರಿಸಿ ವಿಜ್ಞಾಪಿಸಿಕೊಂಡಳು.

೩೦–೩೧. ''ವಿಪ್ರೇಂದ್ರನೆ! ನಿನ್ನ ಅನುಗ್ರಹದಿಂದ ನಾನು ಸಕಲಾಭೀಷ್ಟಗಳನ್ನೂ ಪಡೆದೇ ಬರುವೆನು.'' ಇಂತೆಂದು ಹಂಸಗಮನೆಯೂ, ಮೃಗಲೋಚನೆಯೂ, ಸರ್ವಾಂಗಸುಂದರಿಯೂ ಆದ ಆಕೆಯು ಮಹಾನಿಯಮವನ್ನು ಸ್ವೀಕರಿಸಿ ಪರಮಶಿವನ ಬೆವರಿನಿಂದ ಹುಟ್ಟಿದುದೂ, ಸಮಸ್ತಪಾತಕಗಳನ್ನು ಪರಿಹರಿಸುವುದೂ ಆದ ನರ್ಮದಾನದಿಯ ತೀರಪ್ರದೇಶಕ್ಕೆ ಬಂದಳು.

೩೨. ಅದನ್ನು ನೋಡುವುದರಿಂದಲೇ ಮನುಷ್ಯನ ಪಾಪರಾಶಿಯೆಲ್ಲವೂ ನಾಶವಾಗುವುದು. ಅದರಲ್ಲಿ ಸ್ನಾನವನ್ನು ಮಾಡುವುದರಿಂದ ಅಶ್ವಮೇಧ ಯಜ್ಞವನ್ನು ನಡೆಸಿದ ಫಲವು ಲಭಿಸುವುದು.

೩೩. ಮಹೇಶ್ವರಿಯೆ! ಅತ್ಯಂತ ಶ್ರದ್ಧೆಯಿಂದ ಜನರು ಇದರ ಪವಿತ್ರ ಜಲವನ್ನು ಪಾನಮಾಡುವುದು ಸೋಮಪಾನಕ್ಕೆ ಸಮಾನವಾದುದೆಂಬುದರಲ್ಲಿ ಸಂಶಯವಿಲ್ಲ.

ಯೇ ಸ್ಮರಂತಿ ದಿವಾರಾತ್ರೌ ಯೋಜನಾನಾಂ ಶತೈರಪಿ ।
ಮುಚ್ಯಂತೇ ಸರ್ವಪಾಪೇಭ್ಯೋ ರುದ್ರಲೋಕಂ ಪ್ರಯಾಂತಿ ತೇ ॥ ೩೪ ॥
ನರ್ಮದಾಯಾಃ ಸಮೀಪೇ ತು ತಾವುಭೌ ಯೋಜನದ್ವಯೇ ।
ನ ಪಶ್ಯಂತಿ ಯಮಂ ತತ್ರ ಯೇ ಮೃತಾ ವರವರ್ಣಿನಿ ॥ ೩೫ ॥
ತತಸ್ತದುತ್ತರೇ ಕೂಲೇ ಏರಂಡ್ಯಾಃ ಸಂಗಮೇ ಶುಭೇ ।
ನಿಯಮಸ್ಥಾ ವಿಶಾಲಾಕ್ಷೀ ಶಾಕಾಹಾರೇಣ ಸುಂದರಿ ॥ ೩೬ ॥
ತೋಷಯಂತೀ ತ್ರೀಂಶ್ಚ ದೇವಾನ್ ಶುಭೈಸ್ತೋತ್ರೈರ್ವ್ರತೈಸ್ತಥಾ ।
ಗ್ರೀಷ್ಮೇಷು ಚ ಮಹಾದೇವಿ ಪಂಚಾಗ್ನಿಂ ಸಾಧಯೇತ್ತತಃ ॥ ೩೭ ॥
ವರ್ಷಾಕಾಲೇ ಚಾರ್ದ್ರವಾಸಾಶ್ಚರೇಚ್ಚಾಂದ್ರಾಯಣಾನಿ ಚ ।
ಹೇಮಂತೇ ತು ತತಃ ಪ್ರಾಪ್ತೇ ತೋಯಮಧ್ಯೇ ವಸೇತ್ಸದಾ ॥ ೩೮ ॥
ಪ್ರಾತಃ ಸ್ನಾನಂ ತತಃ ಸಂಧ್ಯಾಂ ಕುರ್ಯಾದ್ದೇವರ್ಷಿತರ್ಪಣಂ ।
ದೇವಾನಾಮರ್ಚನಂ ಕೃತ್ವಾ ಹೋಮಂ ಕುರ್ಯಾದ್ಯಥಾ ವಿಧಿ ॥ ೩೯ ॥

---

೩೪. ನೂರಾರು ಯೋಜನಗಳ ದೂರದಿಂದಲೂ ಯಾರು ದಿವಾರಾತ್ರಿಗಳಲ್ಲಿ ಇದನ್ನು ಸ್ಮರಿಸುವರೊ, ಅವರು ಸಮಸ್ತ ಪಾತಕಗಳಿಂದಲೂ ಮುಕ್ತರಾಗಿ ರುದ್ರಲೋಕವನ್ನು ಸೇರುವರು.

೩೫. ಎಲೌ ಸುಂದರಾಂಗಿಯೆ! ನರ್ಮದೆಯ ತೀರಪ್ರದೇಶಗಳಲ್ಲಿ ಎರಡು ಕಡೆಯೂ ಎರಡು ಯೋಜನಗಳ ಪ್ರದೇಶದಲ್ಲಿ ಯಾರು ಮೃತರಾದರೂ ಯಮನನ್ನು ನೋಡುವುದಿಲ್ಲ.

೩೬. ಪಾರ್ವತಿಯೆ! ವಿಶಾಲನೇತ್ರೆಯೂದ ಅನಸೂಯೆಯಾದರೂ ಆ ನದಿಯ ಉತ್ತರದಡದಲ್ಲಿ ಏರಂಡೀಸಂಗಮ ಪ್ರದೇಶದಲ್ಲಿ ಶಾಕಾಹಾರ ಸೇವನೆಯಿಂದ ನಿಯಮವನ್ನು ನಡೆಸುತ್ತಿದ್ದಳು.

೩೭. ಪಾವನಗಳಾದ ಸ್ತೋತ್ರಗಳಿಂದಲೂ, ವ್ರತಗಳಿಂದಲೂ ತ್ರಿಮೂರ್ತಿಗಳನ್ನು ಸಂತೋಷಗೊಳಿಸಲೆಳಸಿ ಆಕೆಯು ಗ್ರೀಷ್ಮಕಾಲದಲ್ಲಿ ಪಂಚಾಗ್ನಿಗಳ ಮಧ್ಯದಲ್ಲಿ ತಪಿಸಿದಳು.

೩೮. ವರ್ಷರ್ತುವಿನಲ್ಲಿ ಒದ್ದೆಯ ಬಟ್ಟೆಯನ್ನುಟ್ಟು ಚಾಂದ್ರಾಯಣ ವ್ರತವನ್ನಾಚರಿಸಿದಳು. ಹೇಮಂತಮಾಸಗಳಲ್ಲಿ ಆಕೆಯು ಯಾವಾಗಲೂ ನೀರಿನ ಮಧ್ಯದಲ್ಲಿಯೇ ನಿಂತು ತಪವಂಗೈಯುತ್ತಿದ್ದಳು.

೩೯. ಪ್ರಾತಃಕಾಲದಲ್ಲಿ ಸ್ನಾನವನ್ನೂ, ಸಂಧ್ಯಾಕರ್ಮವನ್ನೂ ಮುಗಿಸಿ ದೇವತೆಗಳಿಗೂ ಋಷಿಗಳಿಗೂ ತರ್ಪಣವನ್ನಿತ್ತು, ಬಳಿಕ ದೇವತಾರ್ಚನೆಯನ್ನು ಮಾಡಿ ಯಥಾವಿಧಿಯಾಗಿ ಹೋಮವನ್ನೂ ಮಾಡುತ್ತಿದ್ದಳು.

**ಯಜತೇ ವೈಷ್ಣವಾನ್ ಲೋಕಾನ್ ಸ್ನಾನಜಾಪ್ಯಹುತೇನ ಚ ।**
**ಏವಂ ವರ್ಷಶತೇ ಪ್ರಾಪ್ತೇ ರುದ್ರವಿಷ್ಣುಪಿತಾಮಹಾಃ ॥ ೪೦ ॥**
**ಸಂಪ್ರಾಪ್ತಾ ದ್ವಿಜರೂಪೈಸ್ತು ಏರಂಡ್ಯಾಃ ಸಂಗಮೇ ಪ್ರಿಯೇ ।**
**ಪುರತಃ ಸಂಸ್ಥಿತಾಸ್ತಸ್ಯಾ ವೇದಮುಚ್ಚ್ಯುದ್ಧರಂತಿ ಚ ॥ ೪೧ ॥**
**ಅನಸೂಯಾ ಜಪಂ ತ್ಯಕ್ತ್ವಾ ನಿರೀಕ್ಷ್ಯ ತಾನ್ಮುಹುರ್ಮುಹುಃ ।**
**ಉತ್ಥಿತಾ ಸಾ ವಿಶಾಲಾಕ್ಷೀ ಅರ್ಘ್ಯಂ ದತ್ವಾ ಯಥಾ ವಿಧಿ ॥ ೪೨ ॥**
**ಅದ್ಯ ಮೇ ಸಫಲಂ ಜನ್ಮ ಅದ್ಯ ಮೇ ಸಫಲಂ ತಪಃ ।**
**ದರ್ಶನೇನ ತು ವಿಪ್ರಾಣಾಂ ಸರ್ವಪಾಪೈಃ ಪ್ರಮುಚ್ಯತೇ ॥ ೪೩ ॥**
**ಪ್ರದಕ್ಷಿಣಂ ತತಃ ಕೃತ್ವಾ ಸಾಷ್ಟಾಂಗಂ ಪ್ರಣತಾಽಬ್ರವೀತ್ ।**
**ಕಂದಮೂಲಫಲಂ ಶಾಕಂ ನೀವಾರಾನಪಿ ಪಾವನಾನ್ ।**
**ಪ್ರಯಚ್ಛಾಮ್ಯಹದ್ಯೈವ ಮುನೀನಾಂ ಭಾವಿತಾತ್ಮನಾಂ ॥ ೪೪ ॥**
**ವಿಪ್ರಾ ಊಚುಃ :—**
**ತಪಸಾ ತು ವಿಚಿತ್ರೇಣ ತಪಃ ಸತ್ಯೇನ ಸುವ್ರತೇ ।**
**ತೃಪ್ತಾಃಸ್ಮ ಸರ್ವಕಾಮೈಸ್ತು ಸುವ್ರತೇ ತವ ದರ್ಶನಾತ್ ॥ ೪೫ ॥**

---

೪೦–೪೧. ಇಂತು ತನ್ನ ಸ್ನಾನ, ಜಪ, ಹೋಮಗಳಿಂದ ದೇವಲೋಕ ನಿವಾಸಿಗಳಿಗೆ ಪೂಜೆಯನ್ನು ಸಲ್ಲಿಸುತ್ತಿದ್ದಳು. ಇಂತು ಒಂದು ನೂರು ವರ್ಷಗಳು ಕಳೆಯಲು ಆ ಏರಂಡೀಸಂಗಮಕ್ಷೇತ್ರದಲ್ಲಿ ಬ್ರಹ್ಮ ವಿಷ್ಣು ಮಹೇಶ್ವರರು ಬ್ರಾಹ್ಮಣರೂಪಗಳನ್ನು ತಾಳಿ ಪ್ರಾಪ್ತರಾಗಿ ಆಕೆಯ ಮುಂದೆ ನಿಂತು ವೇದ ಘೋಷವನ್ನು ಮಾಡುತ್ತಿದ್ದರು.

೪೨–೪೩. ಜಪದಲ್ಲಿ ಆಸಕ್ತಳಾಗಿದ್ದ ಅನಸೂಯಾ ದೇವಿಯು ಅವರನ್ನು ಕಂಡು ಯಥಾವಿಧಿಯಾಗಿ ಅರ್ಘ್ಯಪಾದ್ಯಾದಿಗಳಿಂದ ಸತ್ಕರಿಸಿ ಅವರನ್ನೇ ನೋಡುತ್ತ ಇಂತೆಂದಳು. "ಇಂದಿಗೆ ನನ್ನ ಜನ್ಮವು ಸಾರ್ಥಕವಾಯಿತು. ನನ್ನ ತಪಸ್ಸಿನ ಫಲವು ಲಭಿಸಿತು. ಬ್ರಾಹ್ಮಣೋತ್ತಮರನ್ನು ನೋಡಿದ ಮಾತ್ರದಿಂದಲೇ ಮನುಜನ ಸಕಲ ಪಾತಕಗಳೂ ದೂರವಾಗುವುವು."

೪೪. ಇಂತೆಂದು ಆಕೆಯು ಅವರಿಗೆ ಪ್ರದಕ್ಷಿಣೆಯನ್ನು ಮಾಡಿ ನಮಸ್ಕರಿಸಿ ಹೇಳತೊಡಗಿದಳು. ಆತ್ಮಜ್ಞಾನಿಗಳೂ ಮಹಾಮುನಿಗಳೂ ಆದ ನಿಮಗೆ ಈಗಲೇ ಕಂದಮೂಲಗಳನ್ನೂ, ಫಲಗಳನ್ನೂ, ಶಾಕಾಹಾರವನ್ನೂ, ಶುದ್ಧವಾದ ನೀವಾರಾನ್ನವನ್ನೂ ತಂದುಕೊಡುವೆನು.

೪೫. ಬ್ರಾಹ್ಮಣರು ಹೇಳುತ್ತಾರೆ:—ಸುವ್ರತಳೆ! ವಿಚಿತ್ರವಾದ ನಿನ್ನ ಈ ತಪಸ್ಸಿನಿಂದಲೂ, ತಪಸ್ಸಿನ ಸತ್ಯವ್ರತದಿಂದಲೂ, ನಿನ್ನ ದರ್ಶನದಿಂದಲೂ ನಾವು ಸಕಲ ಕಾಮುಗಳನ್ನೂ ಪಡೆದಂತೆ ದಂತುಷ್ಟರಾಗಿರುವೆವು.

ಅಸ್ಮಾಕಂ ಕೌತುಕಂ ಜಾತಂ ತಾಪಸೇನ ವ್ರತೇನ ಯತ್ ।
ಸ್ವರ್ಗಮೋಕ್ಷಸುತಸ್ಯಾರ್ಥೇ ತಪಸ್ತಪಸಿ ದುಷ್ಕರಂ ॥ ೪೬ ॥

ಅನಸೂಯೋವಾಚ :—

ತಪಸಾ ಸಿದ್ಧ್ಯತೇ ಸ್ವರ್ಗಸ್ತಪಸಾ ಪರಮಾ ಗತಿಃ ।
ತಪಸಾ ಚಾರ್ಥಕಾಮೌ ಚ ತಪಸಾ ಗುಣವಾನ್ ಸುತಃ ।
ತಪ ಏವ ಚ ಮೇ ವಿಪ್ರಾಃ ಸರ್ವಕಾಮಫಲಪ್ರದಂ ॥ ೪೭ ॥

ವಿಪ್ರಾ ಊಚುಃ :—

ತನ್ವೀ ಶ್ಯಾಮಾ ವಿಶಾಲಾಕ್ಷೀ ಸ್ನಿಗ್ಧಾಂಗೀ ರೂಪಸಂಯುತಾ ।
ಹಂಸಲೀಲಾಗತಿಗಮಾ ತ್ವಂ ಚ ಸರ್ವಾಂಗಸುಂದರೀ ॥ ೪೮ ॥
ಕಿಂ ಚ ತೇ ತಪಸಾ ಕಾರ್ಯಮಾತ್ಮಾನಂ ಶೋಚ್ಯಸೇ ಕಥಂ ॥ ೪೯ ॥

ಅನಸೂಯೋವಾಚ :—

ಯದಿ ರುದ್ರಶ್ಚ ವಿಷ್ಣುಶ್ಚ ಸ್ವಯಂ ಸಾಕ್ಷಾತ್ಪಿತಾಮಹಃ ।
ಗೂಢರೂಪಧರಾಃ ಸರ್ವೇ ತಚ್ಚಿಹ್ನಮುಪಲಕ್ಷಯೇ ॥ ೫೦ ॥

---

೪೬. ನೀನು ಈ ತಪೋರೂಪವಾದ ವ್ರತವನ್ನಾಚರಿಸುತ್ತಿರುವುದನ್ನು ಕಂಡು ನಮಗೆ ಕುತೂಹಲವುಂಟಾಯಿತು. ಸ್ವರ್ಗಮೋಕ್ಷಗಳಿಗೂ, ಪುತ್ರ ಲಾಭಕ್ಕಾಗಿಯೂ ನೀನು ಈ ದುಸ್ಸಾಧ್ಯವಾದ ತಪಸ್ಸನ್ನು ಮಾಡುತ್ತಿರುವೆ ಯಲ್ಲವೆ.

೪೭. ಅನಸೂಯೆಯು ಹೇಳುತ್ತಾಳೆ.—ತಪಸ್ಸಿನಿಂದಲೇ ಸ್ವರ್ಗವು ಲಭಿಸುವುದು. ಆದರಿಂದಲೇ ಉತ್ತಮಗತಿಯು ಸಾಧ್ಯವಾಗುವುದು. ಆ ತಪಸ್ಸಿನಿಂದಲೇ ಅರ್ಥಕಾಮಗಳೂ, ಗುಣವಂತನಾದ ಸತ್ಪುತ್ರನೂ ಲಭಿಸುವರು. ವಿಪ್ರೋತ್ತಮರಿರಾ! ಇಂತು ತಪಸ್ಸೇ ನನಗೆ ಸರ್ವಾಭೀಷ್ಟಫಲದಾಯಕ ವಾಗಿರುವುದು.

೪೮. ಬ್ರಾಹ್ಮಣರು ಹೇಳುತ್ತಾರೆ.—ನೀನು ಬಡನಡುವಿನವಳೂ, ಶ್ಯಾಮ ಲೆಯೂ, ವಿಶಾಲನೇತ್ರೆಯೂ, ಸಂಹತಾಂಗಿಯೂ, ಸೌಂದರ್ಯವತಿಯೂ, ಹಂಸದಂತೆ ಮಂದಗಮನವುಳ್ಳವಳೂ, ಮನೋಹರಳೂ ಆಗಿರುವೆ.

೪೯. ನಿನಗೆ ತಪಸ್ಸಿನಿಂದಾಗಬೇಕಾದುದೇನು? ಹೀಗೇಕೆ ಸುಮ್ಮನೆ ಆತ್ಮನಿಗೆ ಕ್ಲೇಶವನ್ನು ಕೊಡುತ್ತಿರುವೆ?

೫೦. ಅನಸೂಯೆಯು ಹೇಳುತ್ತಾಳೆ:—ನೀವು ನಿಜವಾಗಿಯೂ ಮಹಾ ದೇವನೂ, ವಿಷ್ಣುವೂ, ಪಿತಾಮಹನೂ ಆಗಿ ಎಲ್ಲರೂ ವೇಷಗಳನ್ನು ಮರೆಸಿ ಕೊಂಡಿರುವಿರಾದರೂ ಆ ಚಿಹ್ನೆಗಳನ್ನೇ ನಿಮ್ಮಲ್ಲಿ ಕಾಣುತ್ತಿದ್ದೇನೆ.

ತಸ್ಯಾ ವಾಕ್ಯಾಽವಸಾನೇ ತು ಸ್ವರೂಪಂ ದರ್ಶಯಂತಿ ತೇ ।
ಸ್ವಸ್ವರೂಪೈಃ ಸ್ಥಿತಾ ದೇವಾಃ ಸೂರ್ಯಕೋಟಿಸಮಪ್ರಭಾಃ ॥ ೫೧ ॥
ಚತುರ್ಭುಜೋ ಮಹಾದೇವಿ ಶಂಖಚಕ್ರ ಗದಾಧರಃ ।
ಅತಸೀಪುಷ್ಪವರ್ಣಸ್ತು ಪೀತವಾಸಾ ಜನಾರ್ದನಃ ॥ ೫೨ ॥
ಗರುತ್ಮಾನ್ವಾಹನಂ ಯಸ್ಯ ಶ್ರಿಯಾ ಚ ಸಹಿತೋ ಹರಿಃ ।
ಪ್ರಸನ್ನವದನಃ ಶ್ರೀಮಾನ್ ಸ್ವಯಂ ರೂಪೋ ವ್ಯವಸ್ಥಿತಃ ॥ ೫೩ ॥
ಪೀತವಾಸಾ ಮಹಾದೇವಿ ಚತುರ್ವದನಪಂಕಜಃ ।
ಹಂಸೋಪರಿ ಸಮಾರೂಢೋ ಹ್ಯಕ್ಷಮಾಲಾಕರೋದ್ಯತಃ ॥ ೫೪ ॥
ಆಗತೋ ನರ್ಮದಾ ತೀರೇ ಬ್ರಹ್ಮಾ ಲೋಕಪಿತಾಮಹಃ ।
ಯೋಽಸೌ ಸರ್ವಜಗದ್ವ್ಯಾಪೀ ಸ್ವಯಂ ಸಾಕ್ಷಾನ್ಮಹೇಶ್ವರಃ ॥ ೫೫ ॥
ವೃಷಭಂ ತು ಸಮಾರೂಢೋ ದಶಬಾಹುಸಮನ್ವಿತಃ ।
ಭಸ್ಮಾಂಗರಾಗಶೋಭಾಢ್ಯಃ ಪಂಚವಕ್ತ್ರಸ್ತ್ರಿಲೋಚನಃ ॥ ೫೬ ॥

---

೫೧. ಆಕೆಯ ಮಾತು ಮುಗಿದೊಡನೆಯೇ ಆ ದೇವತೆಗಳೆಲ್ಲರೂ ತಮ್ಮ ನಿಜರೂಪಗಳನ್ನು ತಾಳಿ ಎದುರಿನಲ್ಲಿ ನಿಂತು ಕೋಟಿಸೂರ್ಯರನ್ನು ಹೋಲುವ ಕಾಂತಿಯಿಂದ ರಾಜಿಸುತ್ತಿದ್ದರು.

೫೨. ಪಾರ್ವತಿಯೆ! ಶ್ರೀಮನ್ನಾರಾಯಣನು ನಾಲ್ಕು ಭುಜಗಳಲ್ಲಿ ಶಂಖ ಚಕ್ರಗದಾಖಡ್ಗಗಳನ್ನುಧರಿಸಿ, ಅತಸೀಪುಷ್ಪಸಂಕಾಶನೂ, ಪೀತಾಂಬರಧಾರಿಯೂ ಆಗಿದ್ದನು.

೫೩. ಮತ್ತು ಆತನು ಗರುಡವಾಹನವನ್ನೇರಿ ಮಹಾಲಕ್ಷ್ಮೀಸಮೇತ ನಾಗಿ ಪ್ರಸನ್ನಮುಖಭಾವವುಳ್ಳವನಾಗಿ ತನ್ನ ರೂಪವನ್ನು ತಾಳಿ ನಿಂತನು.

೫೪. ಮಹಾದೇವಿಯೆ! ನಾಲ್ಕು ಮುಖಕಮಲಗಳಿಂದ ಶೋಭಿಸುವ ಬ್ರಹ್ಮದೇವನೂ ಪೀತಾಂಬರವನ್ನುಟ್ಟು ಹಂಸದ ವಾಹನವನ್ನೇರಿ ಕೈಯಲ್ಲಿ ಅಕ್ಷ ಮಾಲೆಯನ್ನು ತಳೆದಿದ್ದನು.

೫೫. ಇಂತು ಲೋಕಪಿತಾಮಹನಾದ ಚತುರ್ಮುಖನು ನರ್ಮದಾತೀರ ದಲ್ಲಿ ಬಂದು ನಿಂತನು. ಈತನೊಡನೆಯೇ ಸರ್ವಜಗತ್ತುಗಳ ಅಂತರ್ಯಾಮಿ ಯಾದ ಮಹೇಶ್ವರನೂ ಸಾಕ್ಷಾತ್ಕರಿಸಿದನು.

೫೬. ಹತ್ತು ಕೈಗಳಿಂದೊಪ್ಪುತ್ತ ವೃಷಭವನ್ನೇರಿ ಆತನು ಮೈಯಲ್ಲೆಲ್ಲ ಭಸ್ಮವನ್ನು ಪೂಸಿಕೊಂಡು ಐದು ಮುಖಗಳಿಂದಲೂ ಒಂದೊಂದರಲ್ಲಿಯೂ ಮೂರು ಕಣ್ಣುಗಳಿಂದಲೂ ಶೋಭಿಸುತ್ತಿದ್ದನು.

ಜಟಾಮುಕುಟಸಂಯುಕ್ತಃ ಕೃತಚಂದ್ರಾರ್ಧಶೇಖರಃ ।
ಏವಂ ರೂಪಧರೋ ದೇವಃ ಸರ್ವವ್ಯಾಪೀ ಮಹೇಶ್ವರಃ ॥ ೫೭ ॥
ಅನಸೂಯಾ ನಿರೀಕ್ಷ್ಯೈತದ್ದೇವಾನಾಂ ದರ್ಶನಂ ಪರಂ ।
ವೇಪಮಾನಾ ತತಃ ಸಾಧ್ವೀ ಸುರಾನ್ ದೃಷ್ಟ್ವಾ ಮುಹುರ್ಮುಹುಃ ॥೫೮॥

ಅನಸೂಯೋವಾಚ :—

ಕಿಂ ವ್ಯಾಪಾರಸ್ವರೂಪಾಸ್ತು ವಿಷ್ಣುರುದ್ರಪಿತಾಮಹಾಃ ।
ಏತದ್ವೈ ಶ್ರೋತುಮಿಚ್ಛಾಮಿ ಹ್ಯಶೇಷಂ ಕಥಯಂತು ಮೇ ॥ ೫೯ ॥

ಬ್ರಹ್ಮೋವಾಚ :—

ಪ್ರಾವೃಟ್ಕಾಲೋಹ್ಯಹಂ ಬ್ರಹ್ಮಾ ಆಪಶ್ಚೈವ ಪ್ರಕೀರ್ತಿತಾಃ ।
ಮೇಘರೂಪೋಹ್ಯಹಂ ಪ್ರೋಕ್ತೋ ವರ್ಷಯಾಮಿ ಚ ಭೂತಲೇ ॥ ೬೦ ॥
ಅಹಂ ಸರ್ವಾಣಿ ಬೀಜಾನಿ ಪ್ರಾಕ್ ಸಂಧ್ಯಾಸೂದಿತೇ ರವೌ ।
ಏತದ್ವೈ ಕಾರಣಂ ಸರ್ವಂ ರಹಸ್ಯಂ ಕಥಿತಂ ಪರಂ ॥ ೬೧ ॥

ವಿಷ್ಣುರುವಾಚ :—

ಹೇಮಂತಶ್ಚ ಭವೇದ್ವಿಷ್ಣುರ್ವಿಶ್ವರೂಪಂ ಚರಾಚರಂ ।
ಪಾಲನಾಯ ಜಗತ್ಸರ್ವಂ ವಿಷ್ಣೋರ್ಮಹಾತ್ಮ್ಯಮುತ್ತಮಂ ॥ ೬೨ ॥

---

೫೭–೫೮. ಇಂತು ಸರ್ವವ್ಯಾಪಿಯಾದ ಮಹಾದೇವನು ಜಡೆಗಳ ಕಿರೀಟಗಳಿಂದಲೂ, ಅವುಗಳಲ್ಲಿ ಬೆಳಗುವ ಅರ್ಧಚಂದ್ರ ಮಂಡಲಗಳಿಂದಲೂ ಅಲಂಕೃತನಾಗಿ ಪ್ರತ್ಯಕ್ಷನಾದನು. ಅನಸೂಯಾದೇವಿಯಾದರೊ ದೇವತೆಗಳ ಈ ಅದ್ಭುತ ರೂಪಗಳನ್ನು ಕಂಡು ಪತಿವ್ರತೆಯಾದುದರಿಂದ ಮತ್ತೆ ಮತ್ತೆ ದೇಹವು ಕಂಪಿಸುತ್ತಿರಲು ಇಂತೆಂದಳು.

೫೯. ಅನಸೂಯೆಯು ಹೇಳುತ್ತಾಳೆ.—ಎಲೈ ಬ್ರಹ್ಮವಿಷ್ಣುಮಹೇಶ್ವರರಿರಾ! ನಿಮ್ಮ ನಿಮ್ಮ ವ್ಯಾಪಾರಗಳನ್ನೂ ಸ್ವರೂಪಗಳನ್ನೂ ಕೇಳಲು ಕುತೂಹಲವುಳ್ಳವಳಾಗಿರುವೆನು. ಅದನ್ನು ನಿಶ್ಶೇಷವಾಗಿ ನನಗೆ ತಿಳಿಸಿರಿ

೬೦–೬೧. ಬ್ರಹ್ಮನು ಹೇಳುತ್ತಾನೆ —ಬ್ರಹ್ಮನಾದ ನಾನು ವರ್ಷಕಾಲವು. ಜಲವೇ ನನ್ನ ತತ್ತ್ವವು. ಮೇಘದ ರೂಪವನ್ನು ತಾಳಿ ನಾನು ಭೂಮಂಡಲದಲ್ಲಿ ಮಳೆಯನ್ನು ಕರೆಯುವೆನು. ಪ್ರಳಯಕ್ಕೆ ಪೂರ್ವದಲ್ಲಿ ದ್ವಾದಶಾದಿತ್ಯರುದಯಿಸಲು ನಾನೇ ಸರ್ವಜಗತ್ತಿನ ಬೀಜಗಳನ್ನು ಧರಿಸುವೆನು. ಇಂತು ಜಗತ್ತಿಗೆ ಕಾರಣವಾದ ರಹಸ್ಯವೆಲ್ಲವನ್ನೂ ನಿನಗೆ ಹೇಳಿರುವೆನು.

೬೨. ವಿಷ್ಣುವು ಹೇಳುತ್ತಾನೆ —ಚರಾಚರಾತ್ಮಕವಾದ ಮಹಾವಿಷ್ಣುವಿನ ವಿಶ್ವರೂಪವೇ ಹೇಮಂತಸಮಯವು. ಶ್ರೀಮನ್ನಾರಾಯಣನ ಈ ಮಹಾಮಹಿಮೆಯು ಸಮಸ್ತಬ್ರಹ್ಮಾಂಡದ ಪರಿಪಾಲನೆಗಾಗಿಯೇ ಪ್ರಕಟವಾಗಿರುವುದು.

ರುದ್ರ ಉವಾಚ :—

ಗ್ರೀಷ್ಮಕಾಲೋ ಹ್ಯಹಂ ಪ್ರೋಕ್ತಃ ಸರ್ವಭೂತಕ್ಷಯಂಕರಃ ।
ಕರ್ಷಯಾಮಿ ಜಗತ್ಸರ್ವಂ ರುದ್ರರೂಪಸ್ತಪಸ್ವಿನಿ ॥ ೬೩ ॥
ಏವಂ ಬ್ರಹ್ಮಾ ಚ ವಿಷ್ಣುಶ್ಚ ರುದ್ರಶ್ಚೈವ ಮಹಾವ್ರತೇ ।
ತ್ರಯೋ ದೇವಾಸ್ತ್ರಯಃ ಸಂಧ್ಯಾಸ್ತ್ರಯಃ ಕಾಲಾಸ್ತ್ರಯೋಽಗ್ನಯಃ॥ ೬೪ ॥
ತಥಾ ಬ್ರಹ್ಮಾ ಚ ವಿಷ್ಣುಶ್ಚ ರುದ್ರಶ್ಚೈಕಾತ್ಮತಾಂ ಗತಃ ।
ವರಂ ದದ್ಯುಶ್ಚ ತೇ ಭದ್ರೇ ಯತ್ತ್ವಯಾ ಮನಸೀಪ್ಸಿತಂ ॥ ೬೫ ॥

ಅನಸೂಯೋವಾಚ :—

ಧನ್ಯಾ ಪುಣ್ಯಾ ಹ್ಯಹಂ ಲೋಕೇ ಶ್ಲಾಘ್ಯಾ ವಂದ್ಯಾ ಚ ಸರ್ವದಾ ।
ಬ್ರಹ್ಮಾ ವಿಷ್ಣುಶ್ಚ ರುದ್ರಶ್ಚ ಪ್ರಸನ್ನವದನಾಃ ಶುಭಾಃ ॥ ೬೬ ॥
ಯದಿ ತುಷ್ಟಾಸ್ತ್ರಯೋ ದೇವಾ ದಯಾಂ ಕೃತ್ವಾ ಮಮೋಪರಿ ।
ಅಸ್ಮಿಂಸ್ತೀರ್ಥೇ ತು ಸಾನ್ನಿಧ್ಯಾದ್ವರದಾಃ ಸಂತು ಮೇ ಸದಾ ॥ ೬೭ ॥

ರುದ್ರ ಉವಾಚ :—

ಏವಂ ಭವತು ತೇ ವಾಕ್ಯಂ ಯತ್ತ್ವಯಾ ಪ್ರಾರ್ಥಿತಂ ಶುಭೇ ।
ಪ್ರತ್ಯಕ್ಷಾ ವೈಷ್ಣವೀ ಮಾಯಾ ಏರಂಡೀನಾಮ ನಾಮತಃ ॥ ೬೮ ॥

---

೬೩. ಈಶ್ವರನು ಹೇಳುತ್ತಾನೆ —ಸಮಸ್ತಭೂತಗಳನ್ನು ನಾಶಮಾಡುವ ಗ್ರೀಷ್ಮಕಾಲವೆಂದು ನನ್ನನ್ನು ಕರೆಯುವರು. ತಪಸ್ವಿನಿಯೆ ! ನಾನು ಭಯಂಕರರೂಪವನ್ನು ತಾಳಿ ಸಕಲಬ್ರಹ್ಮಾಂಡವನ್ನೂ ಸೆಳೆಯುವೆನು.

೬೪. ಮಹಾವ್ರತಳೆ! ಇಂತು ಬ್ರಹ್ಮವಿಷ್ಣುಮಹೇಶ್ವರರೆಂಬ ಮೂವರು ದೇವತೆಗಳೇ ಮೂರು ಸಂಧ್ಯೆಗಳು; ತ್ರಿಕಾಲಗಳು; ತ್ರೇತಾಗ್ನಿಗಳು.

೬೫. ಆದರೂ ಬ್ರಹ್ಮನೂ, ನಾರಾಯಣನೂ, ರುದ್ರನೂ ಐಕಾತ್ಮ್ಯವನ್ನು ಹೊಂದಿದವರು. ಸುಮಂಗಲಿಯೆ ! ಅವರು ನಿನ್ನ ಮನಸ್ಸಿನಲ್ಲಿ ಬೇಡುವ ಯಾವ ವರವನ್ನಾದರೂ ಕೊಡುವರು.

೬೬—೬೭. ಅನಸೂಯೆಯು ಹೇಳುತ್ತಾಳೆ:—ನಾನೇ ಧನ್ಯಳು, ಲೋಕದಲ್ಲಿ ಪುಣ್ಯವಂತಳು. ಶ್ಲಾಘ್ಯಳೂ ನಿತ್ಯವಂದ್ಯಳೂ ಆದೆನು. ಪ್ರಸನ್ನ ಮುಖರಾದ ತ್ರಿಮೂರ್ತಿಗಳೂ ಮಂಗಳಪ್ರದರಾಗಿರುವರು. ಮೂರುದೇವತೆಗಳೂ ನನ್ನಲ್ಲಿ ಸಂತುಷ್ಟರಾಗಿದ್ದರೆ ದಯೆಯನ್ನು ತೋರಿ ಈ ತೀರ್ಥದಲ್ಲಿಯೇ ಸನ್ನಿಹಿತರಾಗಿ ನಿಂತು ನನಗೆ ವರಗಳನ್ನು ಯಾವಾಗಲೂ ಕೊಡುತ್ತಿರಲಿ.

೬೮. ಈಶ್ವರನು ಹೇಳುತ್ತಾನೆ:—ಮಂಗಳಾಂಗಿಯೆ ! ನೀನು ಪ್ರಾರ್ಥಿಸಿದಂತೆಯೇ ನಡೆಯುವುದು. ವೈಷ್ಣವಮಾಯೆಯೇ ಪ್ರತ್ಯಕ್ಷನಾಗಿ ಏರಂಡೀ ನಾಮವನ್ನು ತಾಳಿರುವುದು.

ಯಸ್ಯಾ ದರ್ಶನಮಾತ್ರೇಣ ನಶ್ಯತೇ ಪಾಪಸಂಚಯಃ ।
ಚೈತ್ರಮಾಸೇ ತು ಸಂಪ್ರಾಪ್ತೇ ಅಹೋರಾತ್ರೋಷಿತೋ ಭವೇತ್ ॥ ೬೯ ॥
ಏರಂಡ್ಯಾಃ ಸಂಗಮೇ ಸ್ನಾತ್ವಾ ಬ್ರಹ್ಮಹತ್ಯಾಂ ವ್ಯಪೋಹತಿ ।
ರಾತ್ರೌ ಜಾಗರಣಂ ಕುರ್ಯಾತ್ಪ್ರಭಾತೇ ಭೋಜಯೇದ್ದ್ವಿಜಾನ್ ॥ ೭೦ ॥
ಯಥೋಕ್ತೇನ ವಿಧಾನೇನ ಪಿಂಡಂ ದದ್ಯಾದ್ಯಥಾವಿಧಿ ।
ಪ್ರದಕ್ಷಿಣಾಂ ತತೋ ದದ್ಯಾದ್ಧಿರಣ್ಯಂ ವಸ್ತ್ರಮೇವ ಚ ॥ ೭೧ ॥
ರಜತಂ ಚ ತಥಾ ಗಾವೋ ಭೂಮಿದಾನಮಥಾಽಪಿ ವಾ ।
ಸರ್ವಂ ಕೋಟಿಗುಣಂ ಪ್ರೋಕ್ತಮಿತಿ ಸ್ವಾಯಂಭುವೋಽಬ್ರವೀತ್॥ ೭೨ ॥
ಯೇ ಮ್ರಿಯಂತಿ ನರಾ ದೇವಿ ಏರಂಡ್ಯಾಃ ಸಂಗಮೇ ಶುಭೇ ।
ಯಾವದ್ಯುಗಸಹಸ್ರಂ ತು ರುದ್ರಲೋಕೇ ವಸಂತಿ ತೇ ॥ ೭೩ ॥
ಅಹೋರಾತ್ರೋಷಿತೋ ಭೂತ್ವಾ ಜಪೇದ್ರುದ್ರಾಂಶ್ಚ ವೈದಿಕಾನ್ ।
ಏಕಾದಶೈಕಸಂಜ್ಞಾಂಶ್ಚ ಸ ಯಾತಿ ಪರಮಾಂ ಗತಿಂ ॥ ೭೪ ॥

---

೬೯. ಇದನ್ನು ನೋಡುವುದರಿಂಲೇ ಪಾಪರಾಶಿಯೆಲ್ಲವೂ ನಾಶವಾಗುವುದು. ಚೈತ್ರಮಾಸದಲ್ಲಿ ಒಂದು ದಿನ ಹಗಲು ರಾತ್ರಿಗಳನ್ನು ಇಲ್ಲಿ ಕಳೆಯಬೇಕು.

೭೦. ಏರಂಡೀಸಂಗಮದಲ್ಲಿ ಸ್ನಾನವನ್ನುಮಾಡಲು ಮನುಷ್ಯನು ಬ್ರಹ್ಮಹತ್ಯೆಯನ್ನೂ ಕಳೆದುಕೊಳ್ಳುವನು ಒಂದು ರಾತ್ರಿಯ ಜಾಗರಣೆಯನ್ನು ಮಾಡಿ ಮಾರನೆಯ ದಿನದ ಬೆಳಗಾಗಲು ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸಬೇಕು.

೭೧ ಶಾಸ್ತ್ರೋಕ್ತವಿಧಾನದಿಂದ ಪಿತೃದೇವತೆಗಳ ತೃಪ್ತಿಗಾಗಿ ಪಿಂಡಪ್ರದಾನವನ್ನೂ ಮಾಡಬೇಕು. ಬಳಿಕ ಬ್ರಾಹ್ಮಣರಿಗೆ ಬಲವಂದು ಹಿರಣ್ಯ ಮತ್ತು ವಸ್ತ್ರಗಳನ್ನು ಕೊಡಬೇಕು.

೭೨. ಬೆಳ್ಳಿಯನ್ನಾಗಲಿ, ಗೋವುಗಳನ್ನಾಗಲಿ, ಭೂಮಿಯನ್ನಾಗಲಿ ದಾನ ಮಾಡಬಹುದು. ಇಲ್ಲಿ ಮಾಡಿದ ದಾನಗಳೆಲ್ಲವೂ ಕೋಟಿಗುಣಿತಫಲಗಳನ್ನು ಕೊಡುವುವೆಂದು ಸ್ವಾಯಂಭುವಮನುವು ಹೇಳಿರುವನು

೭೩. ದೇವಿಯೆ! ಯಾರು ಪವಿತ್ರವಾದ ಈ ಏರಂಡೀತೀರ್ಥದ ಶುಭ ಪ್ರದೇಶದಲ್ಲಿ ದೇಹತ್ಯಾಗವನ್ನು ಮಾಡುವರೊ, ಅವರು ಒಂದು ಸಾವಿರ ಯುಗಗಳವರೆಗೂ ರುದ್ರಲೋಕದಲ್ಲಿ ವಾಸಮಾಡುತ್ತಿರುವರು.

೭೪. ಇಲ್ಲಿ ಅಹೋರಾತ್ರಿಗಳವಾಸವನ್ನುಮಾಡಿ ರುದ್ರೈಕಾದಶೀನಾಮಕವಾದ ರುದ್ರಾಧ್ಯಾಯದ ವೈದಿಕಮಂತ್ರಗಳನ್ನು ಜಪಿಸುತ್ತಿರುವ ಮಾನವನು ಉತ್ತಮ ಸದ್ಗತಿಯನ್ನು ಪಡೆಯುವನು.

ವಿದ್ಯಾರ್ಥೀ ಲಭತೇ ವಿದ್ಯಾಂ ಧನಾರ್ಥೀ ಲಭತೇ ಧನಂ ।
ಪುತ್ರಾರ್ಥೀ ಲಭತೇ ಪುತ್ರಾಂಲ್ಲಭೇತ್ಕಾಮಾನ್ಯಥೇಪ್ಸಿತಾನ್ ॥ ೭೫ ॥
ಏರಂಡ್ಯಾಃ ಸಂಗಮೇ ಸ್ನಾತ್ವಾ ರೇವಾಯಾ ವಿಮಲೇ ಜಲೇ ।
ಮಹಾಪಾತಕಿನೋ ವಾಽಪಿ ತೇ ಯಾಂತಿ ಪರಮಾಂ ಗತಿಂ ॥ ೭೬ ॥

ಅನಸೂಯೋವಾಚ :—

ಯದಿ ತುಷ್ಟಾಸ್ತ್ರಯೋ ದೇವಾ ಮಮ ಭಕ್ತಿಪ್ರಚೋದಿತಾಃ ।
ಮಮ ಪುತ್ರಾ ಭವಂತ್ವೇವ ಹರಿರುದ್ರಪಿತಾಮಹಾಃ ॥ ೭೭ ॥

ವಿಷ್ಣುರುವಾಚ :—

ಪೂಜ್ಯಾ ಯತ್ಪುತ್ರತಾಂ ಯಾಂತಿ ನ ಕದಾಚಿಚ್ಛ್ರುತಂ ಮಯಾ ।
ಶುಭೇ ದದಾಮಿ ಪುತ್ರಾಂಸ್ತೇ ದೇವತುಲ್ಯಪರಾಕ್ರಮಾನ್ ।
ರೂಪವಂತೋ ಗುಣೋಪೇತಾನ್ ಯಜ್ವಿನಶ್ಚ ಬಹುಶ್ರುತಾನ್ ॥ ೭೮ ॥

ಅನಸೂಯೋವಾಚ :—

ಈಪ್ಸಿತಂ ತಚ್ಚ ದಾತವ್ಯಂ ಯನ್ಮಯಾ ಪ್ರಾರ್ಥಿತಂ ಹರೇ ।
ನಾಽನ್ಯಥಾ ಚೈವ ಕರ್ತವ್ಯಾ ಮಮ ಪುತ್ರೈಷಣಾ ತು ಯಾ ॥ ೭೯ ॥

---

೭೫. ವಿದ್ಯಾರ್ಥಿಯು ವಿದ್ಯೆಯನ್ನೂ, ಧನಕಾಮನು ಐಶ್ವರ್ಯವನ್ನೂ, ಪುತ್ರಾಭಿಲಾಷಿಯು ಸತ್ಪುತ್ರರನ್ನೇ ಅಲ್ಲದೆ ಮನಸ್ಸಿನ ಎಲ್ಲ ಅಭಿಲಾಷೆಗಳನ್ನೂ ಪಡೆಯುವರು.

೭೬. ಏರಂಡೀಸಂಗಮಪ್ರದೇಶದ ಬಳಿ ರೇವಾನದಿಯ ಪವಿತ್ರಜಲದಲ್ಲಿ ಸ್ನಾನವನ್ನುಮಾಡಲು ಮಹಾಪಾತಕಗಳನ್ನು ಮಾಡಿದವರಾದರೂ ಸದ್ಗತಿಯನ್ನು ಹೊಂದುವರು.

೭೭. ಅನಸೂಯೆಯು ಹೇಳುತ್ತಾಳೆ:–ಹರಿಹರಚತುರ್ಮುಖರೆಂಬ ನೀವು ಮೂವರೂ ಸಂತುಷ್ಟರಾಗಿರುವಿರಾದರೆ ನನ್ನ ಭಕ್ತಿಯಿಂದ ಚೋದಿತರಾಗಿ ನೀವು ಮೂವರೂ ನನಗೆ ಮಕ್ಕಳಾಗಬೇಕು.

೭೮. ವಿಷ್ಣುವು ಹೇಳುತ್ತಾನೆ:—ಮಂಗಳಾಂಗಿಯೆ! ಪೂಜ್ಯತಮರಾದ ದೇವತೆಗಳು ಮಾನವರಿಗೆ ಪುತ್ರರಾದುದನ್ನು ನಾನೆಂದೂ ಕೇಳಿದುದಿಲ್ಲ. ಆದರೂ ನಿನಗೆ ದೇವಸಮಾನಪರಾಕ್ರಮವುಳ್ಳವರೂ, ಸುಂದರರೂ, ಸದ್ಗುಣೋಪೇತರೂ, ಯಜ್ಞಯಾಗಗಳನ್ನು ಮಾಡತಕ್ಕವರೂ, ಮಹಾ ವಿದ್ಯಾವಂತರೂ ಆದ ಪುತ್ರರನ್ನು ಕೊಡುತ್ತೇನೆ.

೭೯. ಅನಸೂಯೆಯು ಹೇಳುತ್ತಾಳೆ:—ಶ್ರೀ ನಾರಾಯಣನೆ! ನಾನು ಆಶೆಗೊಂಡು ಪ್ರಾರ್ಥಿಸಿಕೊಂಡಂತೆಯೇ ನನಗೆ ವರವನ್ನು ಕೊಡಬೇಕು. ನನ್ನಲ್ಲಿರುವ ಈ ಪುತ್ರಾಭಿಲಾಷೆಯನ್ನು ವ್ಯರ್ಥಗೊಳಿಸಬೇಡ.

ವಿಷ್ಣುರುವಾಚ :—
ಪೂರ್ವಂ ತು ಭೃಗುಸಂವಾದೇ ಗರ್ಭವಾಸ ಉಪಾರ್ಜಿತಃ ।
ತಸ್ಯಾಽಹಂ ಚೈವ ಪಾರಂ ತು ನೈವ ಪಶ್ಯಾಮಿ ಶೋಭನೇ ॥ ೮೦ ॥
ಸ್ಮರಮಾಣಃ ಪುರಾವೃತ್ತಂ ಚಿಂತಯಾಮಿ ಪುನಃ ಪುನಃ ।
ಏವಂ ಸಂಚಿಂತ್ಯ ತೇ ದೇವಾಃ ಪಿತಾಮಹಮಹೇಶ್ವರಾಃ ॥ ೮೧ ॥
ಅಯೋನಿಜಾ ಭವಿಷ್ಯಾಮಸ್ತವ ಪುತ್ರಾ ವರಾನನೇ ।
ಯೋನಿವಾಸೇ ಮಹಾಪ್ರಾಜ್ಞೇ ದೇವಾ ನೈವ ವ್ರಜಂತಿ ಚ ॥ ೮೨ ॥
ಸಾನ್ನಿಧ್ಯಾತ್ಸಂಗಮೇ ದೇವಿ ಲೋಕಾನಾಂ ತು ವರಪ್ರದಾಃ ।
ಏರಂಡೀ ವೈಷ್ಣವೀ ಮಾಯಾ ಪ್ರತ್ಯಕ್ಷಾ ತ್ವಂ ಭವಿಷ್ಯಸಿ ॥ ೮೩ ॥
ತ್ರಯೋ ದೇವಾಃ ಸ್ಥಿತಾಃ ಪಾರ್ಥ ರೇವಾಯಾ ಉತ್ತರೇ ತಟೇ ।
ವರಪ್ರಾಪ್ತಾ ತು ಸಾ ದೇವೀ ಗತಾ ಮಾಹೇಂದ್ರಪರ್ವತಂ ॥ ೮೪ ॥
ಕ್ಷೀಣಾಂಗೀ ಶುಕ್ಲದೇಹಾ ಚ ರೂಕ್ಷಕೇಶೀ ಸುದಾರುಣಾ ।
ಕೃತಯಜ್ಞೋಪವೀತಾ ಸಾ ತಪೋನಿಷ್ಠಾ ಶುಭೇಕ್ಷಣಾ ॥ ೮೫ ॥

---

೮೦–೮೧ ವಿಷ್ಣುವು ಹೇಳುತ್ತಾನೆ:—"ಸುಮಂಗಲಿಯೆ! ಹಿಂದೆ ಭೃಗುಮಹರ್ಷಿಯೊಡನೆ ಸಂವಾದವನ್ನುಮಾಡುವ ಕಾಲದಲ್ಲಿ ಆತನ ಶಾಪದಿಂದ ಗರ್ಭವಾಸವನ್ನು ಸಂಪಾದಿಸಿದೆನು. ಅದನ್ನು ಹೇಗೆ ಕಳೆದುಕೊಳ್ಳಬೇಕೆಂಬುವನ್ನು ಇಂದಿನವರೆಗೂ ಕಾಣಲಾರದಾಗಿರುವೆನು. ಹಿಂದೆ ನಡೆದುದನ್ನು ಸ್ಮರಿಸಿಕೊಂಡು ಪುನಃ ಪುನಃ ಚಿಂತಾಕ್ರಾಂತನಾಗುತ್ತಿರುವೆನು." ಇಂತೆಂದು ವಿಷ್ಣುವು ಹೇಳಲು ಬ್ರಹ್ಮಮಹೇಶ್ವರರೂ ಚಿಂತೆಗೊಳಗಾಗಿ ಹೇಳಿದರು.

೮೨. "ಮಹಾಜ್ಞಾನಿಯಾದ ಸುಂದರಿಯೆ! ನಾವು ನಿನಗೆ ಅಯೋನಿಜರಾದ ಪುತ್ರರಾಗುವೆವು. ದೇವತೆಗಳೆಂದಿಗೂ ಮನುಷ್ಯಸ್ತ್ರೀಯರಲ್ಲಿ ಗರ್ಭವಾಸವನ್ನನುಭವಿಸಲಾರರು.

೮೩. ದೇವಿಯೆ! ಈ ಏರಂಡೀಸಂಗಮದಲ್ಲಿ ಸನ್ನಿಹಿತರಾಗುವುದರಿಂದ ಸಕಲಜನರಿಗೂ ವರಪ್ರದರಾಗಿರುವೆವು. ನೀನೂ ಏರಂಡಿಯೆಂಬ ವೈಷ್ಣವ ಮಾಯೆಯೇ ಆಗಿ ಪ್ರತ್ಯಕ್ಷಳಾಗಿರುವೆ."

೮೪–೮೫. ಧರ್ಮನಂದನನೆ! ಇಂತೆಂದು ನುಡಿದು ಮೂರು ದೇವತೆಗಳೂ ರೇವಾನದಿಯ ಉತ್ತರತೀರದಲ್ಲಿ ನೆಲಸಿದರು. ವರವನ್ನು ಪಡೆದ ಆ ದೇವಿಯು ಮಹೇಂದ್ರಪರ್ವತವನ್ನು ಕುರಿತು ಹೊರಟಳು. ಆಕೆಯು ಕೃಶದೇಹದವಳೂ, ಬಿಳುಪುಗೊಂಡ ಮೈ ಬಣ್ಣದವಳೂ, ಜಡೆಗೊಂಡ ತಲೆಗೂದಲಿನವಳೂ, ಕ್ಲೇಶಗೊಂಡವಳೂ, ಯಜ್ಞೋಪವೀತವನ್ನು ಧರಿಸಿ ತಪಸ್ಸಿನಲ್ಲಿ ನಿರತಳಾದವಳೂ, ತೇಜಃಪುಂಜಗಳಾದ ನೇತ್ರಗಳುಳ್ಳವಳೂ ಆಗಿದ್ದಳು.

**ಶಿಲಾತಲನಿವಿಷ್ಟೋಽಸೌ ದೃಷ್ಟಃ ಕಾಂತೋ ಮಹಾಯಶಾಃ ।**
**ಹೃಷ್ಟಚಿತ್ತೋಽಭವದ್ದೇವಿ ಉತ್ತಿಷ್ಠೋತ್ತಿಷ್ಠ ಸೋಽಬ್ರವೀತ್ ॥ ೮೬ ॥**
**ಅತ್ರಿರುವಾಚ :—**
**ಸಾಧು ಸಾಧು ಮಹಾಪ್ರಾಜ್ಞೇ ಹ್ಯನಸೂಯೇ ಮಹಾವ್ರತೇ ।**
**ಅಚಿಂತ್ಯಂ ಗಾಲವಾದೀನಾಂ ವರಂ ಪ್ರಾಪ್ತಾಽಸಿ ದುರ್ಲಭಂ ॥ ೮೭ ॥**
**ಅನಸೂಯೋವಾಚ :—**
**ತ್ವತ್ಪ್ರಸಾದೇನ ದೇವರ್ಷೇ ವರಂ ಪ್ರಾಪ್ತಾಽಸ್ಮಿ ದುರ್ಲಭಂ ।**
**ತೇನ ದೇವಾಃ ಪ್ರಶಂಸಂತಿ ಸಿದ್ಧಾಶ್ಚ ಋಷಯೋಽಮಲಾಃ ॥ ೮೮ ॥**
**ಏವಮುಕ್ತ್ವಾ ತು ಸಾ ದೇವೀ ಹರ್ಷೇಣ ಮಹತಾ ಯುತಾ ।**
**ಆಲೋಕಯೇತ್ತತಃ ಕಾಂತಂ ತೇನಾಽಪಿ ಶುಭದರ್ಶನಾ ॥ ೮೯ ॥**
**ಈಕ್ಷಣಾಚ್ಚೈವ ಸಂಜಾತಂ ಲಲಾಟೇ ಮಂಡಲಂ ಶುಭಂ ।**
**ನವಯೋಜನಸಾಹಸ್ರಂ ಮಂಡಲಂ ರಶ್ಮಿಭಿರ್ವೃತಂ ॥ ೯೦ ॥**
**ಕದಂಬಗೋಲಕಾಕಾರಂ ತ್ರಿಗುಣಂ ಪರಿಮಂಡಲಂ ।**
**ತಸ್ಯ ಮಧ್ಯೇ ತು ದೇವೇಶಿ ಪುರುಷೋ ದಿವ್ಯರೂಪಧೃಕ್ ॥ ೯೧ ॥**

---

೮೬. ವಿಶಾಲವಾದ ಒಂದು ಬಂಡೆಯ ಮೇಲೆ ಕುಳಿತಿದ್ದ ಮಹಾಪ್ರಖ್ಯಾತನಾದ ಆಕೆಯ ಪತಿಯು ಆಕೆಯನ್ನು ಕಂಡು ಆನಂದಭರಿತನಾಗಲು ಆತನು, ಆಕೆಯನ್ನು ಕುರಿತು "ಏಳು ಏಳು" ಎಂದನು.

೮೭. ಅತ್ರಿಯು ಹೇಳುತ್ತಾನೆ :—ಮಹಾಪ್ರಾಜ್ಞಳೆ! ಮಹಾವ್ರತಳೆ! ಅನಸೂಯೆಯೆ! ಸಾಧು, ಸಾಧು. ಗಾಲವಾದಿ ಮಹರ್ಷಿಗಳಿಗೂ ಚಿಂತಿಸಲಸಾಧ್ಯವಾದ ಮಹಾವರವನ್ನು ನೀನು ಪಡೆದಿರುವೆ.

೮೮. ಅನಸೂಯೆಯು ಹೇಳುತ್ತಾಳೆ —ಮಹರ್ಷಿಯೆ! ನಿನ್ನ ಅನುಗ್ರಹದಿಂದಲೇ ನಾನು ಅತಿದುರ್ಲಭವಾದ ವರವನ್ನು ಪಡೆದಿರುವೆನು. ಅದರಿಂದಲೇ ದೇವತೆಗಳೂ, ಸಿದ್ಧರೂ ಪರಿಶುದ್ಧರಾದ ಋಷಿವರ್ಯರೂ ನನ್ನನ್ನು ಪ್ರಶಂಸಿಸುತ್ತಿರುವರು.

೮೯–೯೦. ಇಂತೆಂದು ಹೇಳಿ ಮಹಾಸಂತೋಷದಿಂದ ಆಕೆಯು ಪತಿಯ ಮುಖವನ್ನು ನೋಡುತ್ತಿರಲು ಆತನೂ ಮಂಗಳಾಂಗಿಯಾದ ಆಕೆಯನ್ನು ನೋಡುತ್ತಿದ್ದನು. ಈ ದೃಷ್ಟಿಯಿಂದಲೇ ಆಕೆಯ ಹಣೆಯಿಂದ ಒಂಬತ್ತುಯೋಜನ ವಿಸ್ತಾರದ ತೇಜೋಮಂಡಲವು ಹೊರಬಿದ್ದು ಮಹಾಪ್ರಭೆಯಿಂದ ಕೂಡಿದ್ದಿತು.

೯೧. ಆ ಮಂಡಲವು ಕದಂಬಪುಷ್ಪದ ಗೋಳಕದಂತೆ ಆಕಾರವುಳ್ಳದುದಾಗಿ ತ್ರಿಗುಣಮಯವೂ ಪರಿವೇಷಯುಕ್ತವೂ ಆಗಿದ್ದಿತು. ಅದರ ಮಧ್ಯದಲ್ಲಿ ದಿವ್ಯರೂಪಧಾರಿಯಾದ ಪುರುಷನೊಬ್ಬನಿದ್ದನು.

ಹೇಮವರ್ಣೋಽಮೃತಮಯಃ ಸೂರ್ಯಕೋಟಿಸಮಪ್ರಭಃ ।
ಆದ್ಯಃ ಪುತ್ರೋಽನಸೂಯಾಯಾಃ ಸ್ವಯಂ ಸಾಕ್ಷಾತ್ಪಿತಾಮಹಃ ॥ ೯೨ ॥
ಚಂದ್ರಮಾ ಇತಿ ವಿಖ್ಯಾತಃ ಸೋಮರೂಪೋ ನೃಪಾತ್ಮಜ ।
ಇಷ್ಟಾಪೂರ್ತೇ ಚ ಸಂಪಾತಿ ಕಲಾ ಷೋಡಶಕೇನ ತು ॥ ೯೩ ॥
ಪ್ರತಿಪಚ್ಚ ದ್ವಿತೀಯಾ ಚ ತೃತೀಯಾ ಚ ಮಹೇಶ್ವರಿ ।
ಚತುರ್ಥೀ ಪಂಚಮೀ ಚೈವ ಅನ್ಯಯಾ ಷೋಡಶೀ ಕಲಾ ॥ ೯೪ ॥
ಚತುರ್ವಿಧಸ್ಯ ಲೋಕಸ್ಯ ಸೂಕ್ಷ್ಮೋ ಭೂತ್ವಾ ವರಾನನೇ ।
ಆಪ್ರೀಣಾತಿ ಜಗತ್ಸರ್ವಂ ತ್ರೈಲೋಕ್ಯಂ ಸಚರಾಚರಂ ॥ ೯೫ ॥
ಸರ್ವೇ ತೇ ಹ್ಯುಪಜೀವಂತಿ ಹುತಂ ದತ್ತಂ ಶಶಿಸ್ಥಿತಂ ।
ವನಸ್ಪತಿಗತೇ ಸೋಮೇ ಧನವಾಂಶ್ಚ ವರಾನನೇ ॥ ೯೬ ॥
ಭುಂಜನ್ಪರಗೃಹೇ ಮೂಢೋ ದದೇದಬ್ದಕೃತಂ ಶುಭಂ ।
ವನಸ್ಪತಿಗತೇ ಸೋಮೇ ಯಸ್ತು ಛಿಂದ್ಯಾದ್ವನಸ್ಪತೀನ್ ।
ತೇನ ಪಾಪೇನ ದೇವೇಶಿ ನರಾ ಯಾಂತಿ ಯಮಾಲಯಂ ॥ ೯೭ ॥

---

೯೨ ಚಿನ್ನದ ಮೈಬಣ್ಣವುಳ್ಳವನೂ, ಅಮೃತಕಿರಣನೂ, ಕೋಟಿ ಸೂರ್ಯರ ಕಾಂತಿಯುಳ್ಳವನೂ, ಆದ ಚತುರ್ಮುಖನು ತಾನೇ ಅನಸೂಯಾ ದೇವಿಗೆ ಮೊದಲನೆಯ ಮಗನಾದನು.

೯೩. ಧರ್ಮನಂದನನೆ! ಸೋಮರೂಪನಾದ ಆತನೇ ಚಂದ್ರನೆಂದು ಪ್ರಖ್ಯಾತಿಯನ್ನು ಪಡೆದು ತನ್ನ ಹದಿನಾರು ಕಲೆಗಳಿಂದ ಇಷ್ಟಾಪೂರ್ತಾದಿ ಸತ್ಕರ್ಮಗಳನ್ನು ಸಂರಕ್ಷಿಸುತ್ತಿರುವನು.

೯೪. ಪಾಡ್ಯಮಿ, ಬಿದಿಗೆ, ತದಿಗೆ, ಚೌತಿ, ಪಂಚಮಿ ಮೊದಲಾಗಿ ಶುಕ್ಲಪಕ್ಷದ ತಿಥಿಗಳಲ್ಲಿ ವೃದ್ಧಿಯಾಗುತ್ತ ಪೌರ್ಣಮಿಯಲ್ಲಿ ಹದಿನಾರನೆಯ ಕಲೆಯು ಪೂರ್ತಿಯಾಗುವುದು.

೯೫. ಪಾರ್ವತಿಯೆ! ಈ ಸೋಮನೇ ಸೂಕ್ಷ್ಮರೂಪಗಳನ್ನು ತಾಳಿ ಚರಾಚರಾತ್ಮಕಗಳಾದ ಮೂರು ಲೋಕಗಳನ್ನೂ, ಬ್ರಹ್ಮಾಂಡವನ್ನೂ, ಭೂಲೋಕದ ಜರಾಯುಜ, ಸ್ವೇದಜ, ಅಂಡಜ, ಉದ್ಭಿಜ್ಜಗಳೆಂಬ ಚತುರ್ವಿಧ ಜೀವ ರಾಶಿಗಳನ್ನೂ ಆನಂದಗೊಳಿಸುವನು. ಸಕಲ ಜೀವರೂ ಚಂದ್ರಮಂಡಲ ಗತವಾದ ಹೋಮದಾನ ಫಲಗಳಿಂದಲೇ ಜೀವಿಸುತ್ತಿರುವನು.

೯೬–೯೭. ಮಂಗಳಾಂಗಿಯೆ! ಸೋಮನು ವನಸ್ಪತಿಗಳಲ್ಲಿ ಪ್ರವೇಶಿಸುವ ಅಮಾವಾಸ್ಯೆಯ ದಿನದಲ್ಲಿ ಯಾವನು ಧನವಂತನಾದರೂ ಪರಗೃಹಾನ್ನವನ್ನು ತಿನ್ನುವನೊ, ಅವನು ತನ್ನ ಒಂದು ವರ್ಷದ ಪುಣ್ಯವನ್ನು ಅನ್ನದಾತನಿಗೆ ಕೊಡುವನು. ಆ ತಿಥಿಯಲ್ಲಿ ಯಾವನು ವನಸ್ಪತಿಗಳನ್ನು ಕತ್ತರಿಸುವನೊ, ಅವನು ತನ್ನ ಪಾಪದ ಫಲವಾಗಿ ಯಮಲೋಕವನ್ನು ಸೇರುವನು.

**ವನಸ್ಪತಿಗತೇ ಸೋಮೇ ಮೈಥುನಂ ಯೋ ನಿಷೇವತೇ ।**
**ಬ್ರಹ್ಮಹತ್ಯಾ ಸಮಂ ಪಾಪಂ ಲಭತೇ ನಾಽತ್ರ ಸಂಶಯಃ ॥ ೯೮ ॥**
**ವನಸ್ಪತಿಗತೇ ಸೋಮೇ ಮಂಥನಂ ಯೋಽಧಿವಾಹಯೇತ್ ।**
**ಗಾವಸ್ತಸ್ಯ ಪ್ರಣಶ್ಯಂತಿ ಯಾಶ್ಚ ವೈ ಪೂರ್ವಸಂಚಿತಾಃ ॥ ೯೯ ॥**
**ವನಸ್ಪತಿ ಗತೇ ಸೋಮೇ ಹ್ಯಧ್ವಾನಂ ಯೋಽಧಿಗಚ್ಛತಿ ।**
**ಭವಂತಿ ಪಿತರಸ್ತಸ್ಯ ತಂ ಮಾಸಂ ರೇಣುಭೋಜನಾಃ ॥ ೧೦೦ ॥**
**ಅಮಾವಾಸ್ಯಾಂ ಮಹಾದೇವಿ ಯಸ್ತು ಶ್ರಾದ್ಧಪ್ರದೋ ಭವೇತ್ ।**
**ಅಬ್ದಮೇಕಂ ವಿಶಾಲಾಕ್ಷಿ ತೃಪ್ತಾಸ್ತತ್ಪಿತರೋ ಧ್ರುವಂ ॥ ೧೦೧ ॥**
**ಹಿರಣ್ಯಂ ರಜತಂ ವಸ್ತ್ರಂ ಯೋ ದದಾತಿ ದ್ವಿಜಾತಿಷು ।**
**ಸರ್ವಂ ಲಕ್ಷಗುಣಂ ದೇವಿ ಲಭತೇ ನಾಽತ್ರ ಸಂಶಯಃ ॥ ೧೦೨ ॥**
**ಏವಂ ಗುಣವಿಶಿಷ್ಟೋಽಸೌ ಸೋಮರೂಪಃ ಪ್ರಜಾಪತಿಃ ।**
**ಸಂಜಾತಃ ಪ್ರಥಮಃ ಪುತ್ರೋ ಹ್ಯನಸೂಯಾಸುನಂದನಃ ॥ ೧೦೩ ॥**

---

೯೮. ಅಮಾವಾಸ್ಯೆಯ ತಿಥಿಯ ದಿನದಲ್ಲಿ ಸ್ತ್ರೀಸಂಗವನ್ನು ಸೇವಿಸುವ ಮಾನವನಿಗೆ ಬ್ರಹ್ಮಹತ್ಯೆಗೆ ಸಮಾನವಾದ ದೋಷವು ಅಂಟಿಕೊಳ್ಳುವುದರಲ್ಲಿ ಸಂದೇಹವಿಲ್ಲ.

೯೯. ಅಂದಿನ ದಿವಸದಲ್ಲಿ ಯಾವನು ಮೊಸರನ್ನು ಕಡೆಯುವ ಪ್ರಯತ್ನವನ್ನು ಮಾಡುವನೊ, ಅವನು ಪೂರ್ವದಲ್ಲಿ ಸಂಪಾದಿಸಿರುವ ಗೋವುಗಳೂ ಸಹ ನಾಶವಾಗುವುವು.

೧೦೦. ಅಂದು ಯಾವನು ಪ್ರಯಾಣಕ್ಕಾಗಿ ಮುಹೂರ್ತವನ್ನು ನೋಡಿ ಹೊರಡುವನೊ, ಅಂದಿನಿಂದ ಒಂದು ತಿಂಗಳವರೆಗೂ ಅವನ ಪಿತೃಗಳೆಲ್ಲರೂ ಧೂಳಿಯ ಕಣಗಳನ್ನೇ ಸೇವಿಸುತ್ತಿರುವರು.

೧೦೧. ವಿಶಾಲಾಕ್ಷಿಯೆ! ಯಾವನು ಅಮಾವಾಸ್ಯೆಯಲ್ಲಿ ಶ್ರಾದ್ಧಕರ್ಮವನ್ನು ಮಾಡುವನೊ, ಅವನ ಕರ್ಮದಿಂದ ಪಿತೃದೇವತೆಗಳು ಒಂದುವರ್ಷದ ವರೆಗೂ ಸಂತುಷ್ಟರಾಗಿರುವರು.

೧೦೨. ಆ ದಿನದಲ್ಲಿ ಬ್ರಾಹ್ಮಣೋತ್ತಮರಿಗೆ ಹಿರಣ್ಯ, ರಜತ, ವಸ್ತ್ರ, ಮುಂತಾದ ಯಾವುದನ್ನೇ ದಾನಮಾಡಿದರೂ, ಆ ದಾನವು ಲಕ್ಷಗುಣಿತವಾಗಿ ಫಲವನ್ನು ಕೊಡುವುದರಲ್ಲಿ ಸಂಶಯವಿಲ್ಲ.

೧೦೩. ಇಂತಹ ಅನೇಕಗುಣಗಳಿಂದ ಕೂಡಿದವನಾಗಿ ಬ್ರಹ್ಮದೇವನು ಸೋಮರೂಪದಿಂದ ಅನಸೂಯಾದೇವಿಗೆ ಮೊದಲನೆಯ ಮಗನಾಗಿ ಅವತರಿಸಿದನು.

ದ್ವಿತೀಯಸ್ತು ಮಹಾದೇವಿ ದುರ್ವಾಸಾ ನಾಮ ನಾಮತಃ ।
ಸೃಷ್ಟಿಸಂಹಾರಕರ್ತಾ ಚ ಸ್ವಯಂ ಸಾಕ್ಷಾನ್ಮಹೇಶ್ವರಃ ॥ ೧೦೪ ॥
ಋಷಿಮಧ್ಯಗತೋ ದೇವಿ ತಪಸ್ತಪತಿ ದುಷ್ಕರಂ ।
ಸೋಽಪಿ ರುದ್ರತ್ವಮಾಯಾತಿ ಸಂಪ್ರಾಪ್ತೇ ಭೂತವಿಪ್ಲವೇ ॥ ೧೦೫ ॥
ಇಂದ್ರೋಽಪಿ ಶಪ್ತಸ್ತೇನೈವ ದುರ್ವಾಸಸಾ ವರಾನನೇ ।
ದ್ವಿತೀಯಸ್ಯ ತು ಪುತ್ರಸ್ಯ ಸಂಭವಃ ಕಥಿತೋ ಮಯಾ ॥ ೧೦೬ ॥
ದತ್ತಾತ್ರೇಯಸ್ವರೂಪೇಣ ಭಗವಾನ್ಮಧುಸೂದನಃ ।
ಜಗದ್ವ್ಯಾಪೀ ಜಗನ್ನಾಥಃ ಸ್ವಯಂ ಸಾಕ್ಷಾಜ್ಜನಾರ್ದನಃ ॥ ೧೦೭ ॥
ಏತೇ ದೇವಾಸ್ತ್ರಯಃ ಪುತ್ರಾ ಅನಸೂಯಾಯಾ ಮಹೇಶ್ವರಿ ।
ವರದಾನೇನ ತೇ ದೇವಾ ಹ್ಯವತೀರ್ಣಾ ಮಹೀತಲೇ ॥ ೧೦೮ ॥
ಪುತ್ರಪ್ರಾಪ್ತಿಕರಂ ತೀರ್ಥಂ ರೇವಾಯಾಶ್ಚೋತ್ತರೇ ತಟೇ ।
ಅನಸೂಯಾ ಕೃತಂ ಪಾರ್ಥ ಸರ್ವಪಾಪಕ್ಷಯಂ ಪರಂ ॥ ೧೦೯ ॥

---

೧೦೪. ಮಹಾದೇವಿಯೆ! ಮಹೇಶ್ವರನೇ ಸಾಕ್ಷಾತ್ತಾಗಿ ಜಗತ್ಸೃಷ್ಟಿ ಲಯಕಾರಕನಾಗಿ ದೂರ್ವಾಸನೆಂಬ ಹೆಸರಿನ ಮಹರ್ಷಿಯಾಗಿ ಎರಡನೆಯ ಮಗನಾದನು.

೧೦೫. ಮಹರ್ಷಿಗಳ ಸಮೂಹವಲ್ಲಿದ್ದು ಆತನು ದುಸ್ಸಾಧ್ಯವಾದ ತಪಸ್ಸನ್ನು ಮಾಡುತ್ತಿರುವನು. ಆತನೂ ಪ್ರಳಯಕಾಲದಲ್ಲಿ ಪರಮೇಶ್ವರನಲ್ಲಿ ಐಕ್ಯವನ್ನು ಪಡೆಯುವನು.

೧೦೬. ಆದೂರ್ವಾಸಮುನಿಯು ಮಹೇಂದ್ರನಿಗೂ ಶಾಪವನ್ನಿತ್ತ ಮಹಾಮಹಿಮನು. ಆತನೇ ಎರಡನೆಯ ಮಗನಾಗಿ ಹುಟ್ಟಿದನೆಂದು ನಾನು ಹೇಳಿದೆನಷ್ಟೆ.

೧೦೭. ಮಧುಕೈಟಭಮರ್ದನನೂ, ಸರ್ವವ್ಯಾಪಿಯೂ, ಸರ್ವೇಶ್ವರನೂ ಆದ ಮಹಾವಿಷ್ಣುವೇ ಸಾಕ್ಷಾತ್ತಾಗಿ ದತ್ತಾತ್ರೇಯನ ರೂಪದಿಂದ ಮೂರನೆಯ ಮಗನಾಗಿ ಅವತರಿಸಿದನು.

೧೦೮. ಮಹೇಶ್ವರಿಯೆ! ಇಂತು ಮೂರು ದೇವತೆಗಳೂ ವರದಾನದಿಂದ ಅನಸೂಯಾದೇವಿಯ ಮಕ್ಕಳಾಗಿ ಭೂಲೋಕದಲ್ಲಿ ಅವತಾರಗಳನ್ನು ತಾಳಿದರು.

೧೦೯. ಯುಧಿಷ್ಠಿರನೆ! ರೇವಾನದಿಯ ಉತ್ತರತೀರದಲ್ಲಿ ಪುತ್ರಪ್ರಾಪ್ತಿಕರವಾದ ತೀರ್ಥವೊಂದನ್ನು ಅನಸೂಯೆಯು ನಿರ್ಮಿಸಿದಳು. ಅದು ಸರ್ವಪಾತಕನಾಶಕವೂ, ಪರಮಪವಿತ್ರವೂ ಆಗಿರುವುದು.

ಶ್ರೀ ಮಾರ್ಕಂಡೇಯ ಉವಾಚ :—

ಆಶ್ಚರ್ಯಭೂತಂ ಲೋಕೇಽಸ್ಮಿನ್ನರ್ಮದಾಯಾಂ ಪುರಾತನಂ ।
ಭ್ರೂಣಹತ್ಯಾ ಗತಾ ತತ್ರ ಬ್ರಾಹ್ಮಣಸ್ಯ ನರಾಧಿಪ ॥ ೧೧೦ ॥

ಯುಧಿಷ್ಠಿರ ಉವಾಚ :—

ಇತಿಹಾಸಂ ದ್ವಿಜಶ್ರೇಷ್ಠ ಕಥಯಸ್ವ ಮಮಾನಘ ।
ಸರ್ವಪಾಪಹರಂ ಲೋಕೇ ದುಃಖಾರ್ತಸ್ಯ ಚ ಕಥ್ಯತಾಂ ॥ ೧೧೧ ॥

ಶ್ರೀ ಮಾರ್ಕಂಡೇಯ ಉವಾಚ :—

ಸುವರ್ಣಶಿಲಕೇ ಗ್ರಾಮೇ ಗೌತಮಾನ್ವಯಸಂಭವಃ ।
ಕೃಷೀವಲೋ ಮಹಾದೇವಿ ಭಾರ್ಯಾಪುತ್ರಸಮನ್ವಿತಃ ॥ ೧೧೨ ॥
ವಸತೇ ತತ್ರ ಗೋವಿಂದಃ ಸಂಜಾತೋ ವಿಪುಲೇ ಕುಲೇ ।
ಪುತ್ರದಾರಸಮೋಪೇತೋ ಗೃಹಕ್ಷೇತ್ರರತಃ ಸದಾ ॥ ೧೧೩ ॥
ಶಕಟಂ ಪೂರಯಿತ್ವಾ ತು ಕಾಷ್ಠಾನಾಮಗಮದ್ಗೃಹಂ ।
ಪ್ರಕ್ಷಿಪ್ತಾನಿ ಚ ಕಾಷ್ಠಾನಿ ಹ್ಯೇಕಾಕೀ ಕ್ಷುಧಯಾನ್ವಿತಃ ॥ ೧೧೪ ॥

---

೧೧೦. ಮಾರ್ಕಂಡೇಯನು ಹೇಳುತ್ತಾನೆ —ರಾಜೇಂದ್ರನೆ! ಹಿಂದೆ ಈ ಲೋಕದಲ್ಲಿಯೇ ಮಹಾಶ್ಚರ್ಯವೆನಿಸಿದ ಒಂದು ಚರಿತ್ರೆಯು ನರ್ಮದಾ ತೀರದಲ್ಲಿ ನಡೆಯಿತು. ಇಲ್ಲಿ ಒಬ್ಬ ಬ್ರಾಹ್ಮಣನಿಗೆ ಸಂಭವಿಸಿದ್ದ ಭ್ರೂಣಹತ್ಯಾ ದೋಷವು ನಾಶವಾಯಿತು.

೧೧೧. ಯುಧಿಷ್ಠಿರನು ಹೇಳುತ್ತಾನೆ —ಬ್ರಾಹ್ಮಣೋತ್ತಮನೆ! ದುಃಖ ಪೀಡಿತನಾಗಿರುವ ನನಗೆ ಸರ್ವಪಾಪಪರಿಹಾರಕವೆನಿಸಿದ ಆ ಇತಿಹಾಸವನ್ನು ವಿಸ್ತರಿಸಿ ಹೇಳು.

೧೧೨. ಮಾರ್ಕಂಡೇಯನು ಹೇಳುತ್ತಾನೆ - ಈಶ್ವರನೆಂದನು. "ಪಾರ್ವತಿಯೆ! ಹಿಂದೆ ಸುವರ್ಣಶಾಲಿಕವೆಂಬ ಗ್ರಾಮದಲ್ಲಿ ಗೌತಮವಂಶೀಯನಾದ ಒಬ್ಬ ಬ್ರಾಹ್ಮಣನಿದ್ದನು. ಪತ್ನೀಪುತ್ರಸಮೇತನಾದ ಆತನು ಬೇಸಾಯದಿಂದ ಜೀವನ ವನ್ನು ನಡೆಸುತ್ತಿದ್ದನು.

೧೧೩. ಪ್ರಖ್ಯಾತವಂಶದಲ್ಲಿ ಜನಿಸಿದ ಗೋವಿಂದನೆಂಬ ಆತನು ಹೆಂಡತಿ ಮಕ್ಕಳೊಡನೆ ತನ್ನ ಮನೆಯನ್ನೂ ಕ್ಷೇತ್ರಗಳನ್ನೂ ನೋಡಿಕೊಳ್ಳುವುದರಲ್ಲಿಯೇ ಯಾವಾಗಲೂ ನಿರತನಾಗಿದ್ದನು.

೧೧೪. ಒಮ್ಮೆ ಆತನು ಬಂಡಿಯನ್ನು ಸೌದೆಯಿಂದ ತುಂಬಿ ಮನೆಗೆ ಬಂದು ಹಸಿವಿನಿಂದ ಪೀಡಿತನಾಗಿ ಒಬ್ಬನೇ ಕಟ್ಟಿಗೆಗಳನ್ನು ಕೆಳಕ್ಕೆಸೆಯು ತ್ತಿದ್ದನು.

ರಿಂಗಮಾಣಸ್ತದಾ ಪುತ್ರಃ ಪಿತುಃ ಶಬ್ದಾತ್ಸಮಾಗತಃ ।
ನದೃಷ್ಟಸ್ತೇನ ವೈ ಪುತ್ರಃ ಕಾಷ್ಠೈಃ ಸಂಛಾದಿತೋಽವಶಃ ॥ ೧೧೫ ॥
ಆಗತಸ್ತ್ವರಿತೋ ಗೇಹೇ ಪಿಪಾಸಾರ್ತೋ ನರಾಧಿಪ ।
ಶಕಟಂ ಮೋಚ್ಯ ತದ್ದ್ವಾರಿ ಸವೃಷಂ ರಜ್ಜುಸಂಯುತಂ ॥ ೧೧೬ ॥
ಭಾರ್ಯಾ ತಸ್ಯೈವ ಯಾ ದೃಷ್ಟ್ವಾ ಚಿತ್ತಜ್ಞಾ ವಶವರ್ತಿನೀ ।
ದೃಷ್ಟ್ವಾ ನಿಪಾತಿತಂ ಪುತ್ರಂ ಕಾಷ್ಠೈರ್ನಿರ್ಭಿನ್ನಮಸ್ತಕಂ ॥ ೧೧೭ ॥
ಅಜಲ್ಪಮಾನಾ ಕರುಣಂ ನಿಕ್ಷಿಪ್ತಂ ಝೋಲಿಕಾಂ ಶಿಶುಂ ।
ಶುಶ್ರೂಷಣೇ ರತಾ ಸಾಧ್ವೀ ಪ್ರಿಯಸ್ಯ ಚ ನರಾಧಿಪ ॥ ೧೧೮ ॥
ತತಃ ಸ್ನಾನಾದಿಕಂ ಕೃತ್ವಾ ಭೋಜನಾಚ್ಛಯನಂ ಶುಭಂ ।
ಪುತ್ರಂ ಪುತ್ರವತಾಂ ಶ್ರೇಷ್ಠಾ ಹ್ಯುತ್ಥಾಪಯತಿ ಶಾಸನೈಃ ॥ ೧೧೯ ॥
ಯದಾ ಚ ನೋತ್ಥಿತಃ ಸುಪ್ತಃ ಪುತ್ರಃ ಪಂಚತ್ವಮಾಗತಃ ।
ತದಾ ಸಾ ದೀನವದನಾ ರುರೋದ ಚ ಮುಮೋಹ ಚ ॥ ೧೨೦ ॥

---

೧೧೫. ತಂದೆಯ ಧ್ವನಿಯನ್ನು ಕೇಳಿದ ಗಂಡುಮಗುವು ಅಂಬೆಗಾಲಿಡುತ್ತ ಅಲ್ಲಿಗೆ ಬರಲು ಆತನು ಕಾಣದೆ ಅದರ ಮೇಲೂ ಕಟ್ಟಿಗೆಗಳನ್ನೆಸೆಯುತ್ತಿದ್ದನು.

೧೧೬. ಮಹಾರಾಜನೆ! ಬಳಿಕ ಬಂಡಿಯ ಎತ್ತನ್ನೂ ಹಗ್ಗಗಳನ್ನೂ ಕಳಚಿ ಬಾಗಿಲಲ್ಲಿಯೇ ಬಿಟ್ಟು ಬಹಳ ಬಾಯಾರಿಕೆಯಿಂದ ಬೇಗ ಮನೆಯೊಳಕ್ಕೆ ಬಂದನು.

೧೧೭. ಆತನ ಮನಸ್ಸನ್ನರಿತವಳೂ ವಶವರ್ತಿನಿಯೂ ಆದ ಪತ್ನಿಯಾದರೊ ಮಗುವು ಕೆಳಕ್ಕೆ ಬಿದ್ದುದನ್ನೂ ಕಟ್ಟಿಗೆಗಳಿಂದ ಅದರ ತಲೆಯು ಒಡೆದುಹೋದುದನ್ನೂ ಕಂಡಳು.

೧೧೮. ಸಂಕಟಗೊಂಡರೂ ಒಂದು ಮಾತನ್ನೂ ಆಡದೆ ಮಗುವನ್ನೊಂದು ಜೋಳಿಗೆಯಲ್ಲಿ ಮಲಗಿಸಿ ಸಾಧ್ವಿಯಾದುದರಿಂದ ಆಯಾಸಗೊಂಡ ತನ್ನ ಪತಿಯ ಶುಶ್ರೂಷೆಯಲ್ಲಿ ತೊಡಗಿದಳು.

೧೧೯. ಬಳಿಕ ಸ್ನಾನವನ್ನೂ ಭೋಜನವನ್ನೂ ಮಾಡಿಕೊಂಡು ಸೌಭಾಗ್ಯವತಿಯಾದ ಆಕೆಯು ಉತ್ತಮವಾದ ಹಾಸಿಗೆಯನ್ನು ಹಾಸಿ, ಮೃದುವಚನಗಳಿಂದ ಮಗುವನ್ನೆಬ್ಬಿಸಲು ಬಂದಳು.

೧೨೦ ಪುತ್ರನು ಮಲಗಿದ್ದು ಏಳದೆಯೇ ಪ್ರಾಣಗಳನ್ನು ಬಿಟ್ಟಿರುವುದನ್ನು ಕಂಡು ಆಗ ಆಕೆಯು ಬಾಡಿದ ಮುಖವುಳ್ಳವಳಾಗಿ ರೋದಿಸುತ್ತ ಮೂರ್ಛಾಕ್ರಾಂತಳಾದಳು.

ತಚ್ಛ್ರುತ್ವಾ ರುದಿತಂ ಶಬ್ದಂ ಗೋವಿಂದಸ್ತ್ರಸ್ತಮಾನಸಃ ।
ಕಿಮೇತದಿತಿ ಚೋಕ್ತ್ವಾ ತು ಪತಿತೋ ಧರಣೀ ತಲೇ ॥ ೧೨೧ ॥
ದ್ವಾವೇತೌ ಮುಕ್ತಕೇಶೌ ತು ಭೂಮೌ ನಿಪತಿತೌ ನೃಪ ।
ವಿಲಪಾತೇ ಚ ರಾಜೇಂದ್ರ ನಿಃಶ್ವಾಸೋಚ್ಛ್ವಸಿತೇನ ಚ ॥ ೧೨೨ ॥
ಕಂ ಪಶ್ಯೇ ಪ್ರಾಂಗಣೇ ಪುತ್ರಂ ದೃಷ್ಟ್ವಾ ಕ್ರೀಡಂತಮಾತುರಂ ।
ಸಂಧಾರಯಿಷ್ಯೇ ಹೃದಯಂ ಸ್ಫುಟಿತಂ ತವ ಕಾರಣೇ ॥ ೧೨೩ ॥
ತ್ವಜ್ಜನ್ಮಾಂತಂ ಯಶೋ ನಿತ್ಯಮಕ್ಷಯಾಂ ಕುಲಸಂತತಿಂ ।
ದೃಷ್ಟ್ವಾ ಕಿಮನೃಣೀ ಭೂತೋ ಯಾಸ್ಯಾಮಿ ಪರಮಾಂ ಗತಿಂ ॥ ೧೨೪ ॥
ಮಮ ವೃದ್ಧಸ್ಯ ದೀನಸ್ಯ ಗತಿಸ್ತ್ವಂ ಕಿಲ ಪುತ್ರಕ ।
ಏತೇ ಮನೋರಥಾಃ ಸರ್ವೇ ಚಿಂತಿತಾ ವಿಫಲಾ ಗತಾಃ ॥ ೧೨೫ ॥
ಇಮಾಂ ತು ವಿಕಲಾಂ ದೀನಾಂ ವಿಹೀನಾಂ ಸುತಬಾಂಧವೈಃ ।
ರುದಂತೀಂ ಪತಿತಾಂ ಪಾಹಿ ಮಾತರಂ ಧರಣೀ ತಲೇ ॥ ೧೨೬ ॥

---

೧೨೧. ಆಕೆಯ ಅಳುವಿನ ಶಬ್ದವನ್ನು ಕೇಳಿ ಗೋವಿಂದನೂ ಭಯಗೊಂಡ ಮನಸ್ಸಿನಿಂದ ಇದೇನೆಂದು ಕೂಗುತ್ತಲೇ ತಾನೂ ಭೂಮಿಯ ಮೇಲೆ ಬಿದ್ದು ಬಿಟ್ಟನು.

೧೨೨. ರಾಜೇಂದ್ರನೆ! ಇಂತು ಆ ದಂಪತಿಗಳಿಬ್ಬರೂ ಕೂದಲನ್ನು ಬಿರಿದು ಭೂಮಿಯಲ್ಲಿ ಹೊರಳಾಡುತ್ತ ನಿಟ್ಟುಸಿರುಗಳಿಂದ ಬಹುವಾಗಿ ಪ್ರಲಾಪಗಳನ್ನು ಮಾಡುತ್ತಿದ್ದರು.

೧೨೩. "ಅಂಗಳದಲ್ಲಿ ಯಾವ ಮಗುವನ್ನು ನೋಡಲಿ? ಸಂಭ್ರಮದಿಂದ ಆಡುತ್ತಿರುವ ಯಾವ ಮಗುವನ್ನು ಕಂಡು ನಿನಗಾಗಿ ಒಡೆದು ಹೋಗುತ್ತಿರುವ ಈ ಹೃದಯವನ್ನು ಧರಿಸಲಿ?

೧೨೪. ನಿನ್ನ ಜನನದಿಂದ ಯಶಸ್ಸನ್ನೂ ಶಾಶ್ವತವಾದ ವಂಶಪರಂಪರೆಯನ್ನೂ ಪಡೆದು ಪಿತೃ ಋಣದಿಂದ ಮುಕ್ತನಾಗಿ ಎಂದಿಗೆ ಸದ್ಗತಿಯನ್ನು ಪಡೆಯುವೆನೆಂದು ಚಿಂತಿಸುತ್ತಿದ್ದೆನಲ್ಲ.

೧೨೫. ಮಗನೆ! ವೃದ್ಧನೂ, ದೀನನೂ ಆದ ನನಗೆ ನೀನೊಬ್ಬನೇ ಗತಿಯಾಗಿದ್ದೆ. ನನ್ನ ಮನೋರಥಗಳೆಲ್ಲವೂ ಇಂದಿಗೆ ನಿಷ್ಫಲಗಳಾಗಿ ಹೋದುವು.

೧೨೬. ವಿಕಲಳೂ, ದೀನಳೂ, ಪುತ್ರಬಾಂಧವರಿಲ್ಲದವಳೂ, ಭೂಮಿಯಲ್ಲಿ ಹೊರಳುತ್ತ ಅಳುತ್ತಿರುವವಳೂ ಆದ ಈ ನಿನ್ನ ತಾಯಿಯನ್ನು ಕಾಪಾಡು!

ಪುನ್ನಾಮ್ನೋ ನರಕಾದ್ಯಸ್ಮಾತ್ಪಿತರಂ ತ್ರಾಯತೇ ಸುತಃ ।
ತೇನ ಪುತ್ರ ಇತಿ ಪ್ರೋಕ್ತಃ ಸ್ವಯಮೇವ ಸ್ವಯಂಭುವಾ ॥ ೧೨೭ ॥
ಅಪುತ್ರಸ್ಯ ಗೃಹಂ ಶೂನ್ಯಂ ದಿಶಃ ಶೂನ್ಯಾ ಹ್ಯಬಾಂಧವಾಃ ।
ಮೂರ್ಖಸ್ಯ ಹೃದಯಂ ಶೂನ್ಯಂ ಸರ್ವಶೂನ್ಯಂ ದರಿದ್ರತಾ ॥ ೧೨೮ ॥
ಮೃಷಾಽಯಂ ವದತೇ ಲೋಕಶ್ಚಂದನಂ ಕಿಲ ಶೀತಲಂ ।
ಪುತ್ರಗಾತ್ರಪರಿಷ್ವಂಗಶ್ಚಂದನಾದಪಿ ಶೀತಲಃ ॥ ೧೨೯ ॥
ಶ್ಮಶ್ರುಗ್ರಹಣಕ್ರೀಡಂತಂ ಧೂಲಿಧೂಸರಿತಾನನಂ ।
ಪುಣ್ಯಹೀನಾ ನ ಪಶ್ಯಂತಿ ನಿಜೋತ್ಸಂಗಸಮಾಸ್ಥಿತಂ ॥ ೧೩೦ ॥
ದಿಗಂಬರಂ ಗತವ್ರೀಡಂ ಜಟಿಲಂ ಧೂಲಿಧೂಸರಂ ।
ಪುಣ್ಯಹೀನಾ ನ ಪಶ್ಯಂತಿ ಗಂಗಾಧರಮಿವಾತ್ಮಜಂ ॥ ೧೩೧ ॥
ವೀಣಾವಾದ್ಯಸ್ವರೋ ಲೋಕೇ ಸುಸ್ವರಃ ಶ್ರೂಯತೇ ಕಿಲ ।
ರುದಿತಂ ಬಾಲಕಸ್ಯೈವ ತಸ್ಮಾದಾಹ್ಲಾದಕಾರಕಂ ॥ ೧೩೨ ॥

---

೧೨೭. ಪುನ್ನಾಮನರಕದಿಂದ ಪಿತೃಗಳನ್ನುದ್ಧರಿಸುವವನಾದುದರಿಂದ ಆತ್ಮನಿಗೆ ಪುತ್ರನೆಂಬ ಹೆಸರು ಬಂದಿರುವುದೆಂದು ಬ್ರಹ್ಮದೇವನೇ ಹೇಳಿರುವನು.

೧೨೮. ಮಕ್ಕಳಿಲ್ಲದವನ ಮನೆಯು ಹಾಳು. ಬಾಂಧವರಿಲ್ಲದ ದಿಕ್ಕುಗಳು ಹಾಳು ಹಾಳು. ಮೂರ್ಖನ ಹೃದಯವು ಶೂನ್ಯ ಶೂನ್ಯವು. ದರಿದ್ರನಿಗೆ ಸರ್ವವೂ ಶೂನ್ಯವಾಗಿರುವುದು.

೧೨೯. ಚಂದನವು ಶೀತಲವೆಂದು ಜನರು ಹೇಳಿಕೊಳ್ಳುವುದು ಸುಳ್ಳೇ ಎಂದು ಹೇಳಬೇಕು. ಪುತ್ರನ ದೇಹದ ಆಲಿಂಗನವು ಚಂದನಕ್ಕಿಂತಲೂ ಶೀತಲವಾಗಿರುವುದು.

೧೩೦. ತಂದೆಯ ತೊಡೆಯ ಮೇಲೆ ಕುಳಿತು ಆತನ ಗಡ್ಡಮೀಸೆಗಳನ್ನು ಕೀಳುತ್ತ ದೂಳು ತುಂಬಿದ ಮುಖದಿಂದ ಆಟವಾಡುವ ಬಾಲನನ್ನು ಭಾಗ್ಯಹೀನರು ನೋಡಲಾರರು.

೧೩೧. ಪರಮಶಿವನಂತೆ ದಿಗಂಬರನೂ, ನಿರ್ಮರ್ಯಾದನೂ, ಜಡೆಗಟ್ಟಿದ ಕೂದಲಿನವನೂ, ದೂಳಿನ ಮೈಯವನೂ ಆದ ಪುತ್ರನನ್ನು ಪುಣ್ಯಹೀನರೆಂದಿಗೂ ಕಾಣಲಾರರು.

೧೩೨. ಲೋಕದಲ್ಲಿ ವೀಣಾವಾದ್ಯದ ಧ್ವನಿಯು ಇಂಪಾದುದೆಂದು ಕೇಳಿರುವೆವು. ಬಾಲಕನ ರೋದನವಾದರೂ ಅದಕ್ಕಿಂತಲೂ ಸಂತೋಷಜನಕವಾಗಿರುವುದು.

**ಮೃಗಪಕ್ಷಿಷು ಕಾಕೇಷು ಪಶೂನಾಂ ಸ್ವರಯೋನಿಷು ।**
**ಪುತ್ರಂ ತೇಷು ಸಮಸ್ತೇಷು ವಲ್ಲಭಂ ಬ್ರುವತೇ ಬುಧಾಃ ॥ ೧೩೩ ॥**
**ಮತ್ಸ್ಯಾಶ್ವಪ್ರಕರಾಶ್ಚೈವ ಕೂರ್ಮಗ್ರಾಹಾದಯೋಽಪಿ ವಾ ।**
**ಪುತ್ರೋತ್ಪತ್ತೌ ಚ ಹೃಷ್ಯಂತಿ ವಿಪತ್ತೌ ಯಾಂತಿ ದುಃಖಿತಾಂ ॥ ೧೩೪ ॥**
**ದೇವಗಂಧರ್ವಯಕ್ಷಾಶ್ಚ ಹೃಷ್ಯಂತೇ ಪುತ್ರಜನ್ಮನಿ ।**
**ಪಂಚತ್ವೇ ತೇಽಪಿ ಶೋಚಂತಿ ಮಂದಭಾಗ್ಯೋಽಸ್ಮಿ ಪುತ್ರಕ ॥ ೧೩೫ ॥**
**ಋಷಿಮೇಲಾಪಕಂ ಚಕ್ರೇ ಪುತ್ರಾರ್ಥೇ ರಾಘವೋ ನೃಪ ।**
**ಇಂದ್ರಸ್ಥಾನೇ ಸ್ಥಿತಸ್ತಸ್ಯ ಪ್ರೋಕ್ಷತೇ ಹ್ಯಾಸನಂ ಯತಃ ॥ ೧೩೬ ॥**
**ಸ್ವರ್ಗವಾಸಂ ಸುತಾದ್ಬಾಹ್ಯಂ ವಿದ್ಯತೇ ನ ತು ಪಾಂಡವ ।**
**ಚಕ್ರೇ ದಶರಥಸ್ತಸ್ಮಾತ್ಪುತ್ರಾರ್ಥಂ ಯಜ್ಞಮುತ್ತಮಂ ॥ ೧೩೭ ॥**
**ರಾಮೋಲಕ್ಷ್ಮಣಶತ್ರುಘ್ನೌ ಭರತಸ್ತತ್ರಸಂಭವಾತ್ ।**
**ಕಾರ್ತವೀರ್ಯೋ ಜಿತೋ ಯೇನ ರಾಮೇಣಾಽಮಿತತೇಜಸಾ ।**
**ಸ ರಾಮೋ ರಾಮಚಂದ್ರೇಣ ಅಷ್ಟವರ್ಷೇಣ ನಿರ್ಜಿತಃ ॥ ೧೩೮ ॥**

---

೧೩೩. ಮೃಗಗಳಲ್ಲಿಯೂ, ಪಕ್ಷಿಗಳಲ್ಲಿಯೂ, ಕಾಗೆಗಳಲ್ಲಿಯೂ, ಹಂಭಾರವನ್ನುಮಾಡುವ ಪಶುಗಳಲ್ಲಿಯೂ ಸಹ ಪುತ್ರನೇ ಪ್ರಿಯತಮನೆಂದು ಅಭಿಜ್ಞರು ಹೇಳುತ್ತಿರುವರು.

೧೩೪. ಮೀನುಗಳೂ ಕುದುರೆಗಳ ಸಮೂಹಗಳೂ, ಆಮೆಗಳೂ, ಮೊಸಳೆಗಳೂ ಸಹ ಮರಿಗಳಾಗಲು ಸಂತೋಷಗೊಂಡು ಅವುಗಳ ವಿಪತ್ತಿನಲ್ಲಿ ಕೊರಗುವುವು.

೧೩೫. ದೇವತೆಗಳೂ, ಗಂಧರ್ವರೂ, ಯಕ್ಷರೂ ಪುತ್ರರುಂಟಾಗಲು ಹರ್ಷಿತರಾಗಿ ಅವರು ಮೃತರಾಗಲು ದುಃಖಗೊಳ್ಳುವರು. ಮಗನಾದ ನಿನ್ನನ್ನು ಕಳೆದುಕೊಂಡು ನಾನು ಹತಭಾಗ್ಯನಾದೆನು.

೧೩೬. ರಘುವಂಶದ ರಾಜನೊಬ್ಬನು ಏಳಾಪಕನೆಂಬೊಬ್ಬ ಮಹರ್ಷಿಯನ್ನು ಪುತ್ರನನ್ನಾಗಿ ಸ್ವೀಕರಿಸಿ ಮಹೇಂದ್ರನ ಪದವಿಯನ್ನಲಂಕರಿಸಿ ತ್ರೈಲೋಕ್ಯ ಸಿಂಹಾಸನದಲ್ಲಿ ಅಭಿಷಿಕ್ತನಾದನು.

೧೩೭. ಪಾಂಡವನೆ! ಮಗನಿಂದಲ್ಲದೆ ಮನುಷ್ಯನಿಗೆ ಸ್ವರ್ಗವಾಸವು ಲಭಿಸದು. ಆದುದರಿಂದಲೇ ದಶರಥನು ಪುತ್ರಪ್ರಾಪ್ತಿಗಾಗಿ ಉತ್ತಮ ಯಜ್ಞವನ್ನು ಮಾಡಿದನು,

೧೩೮. ರಾಮ, ಲಕ್ಷ್ಮಣ, ಶತ್ರುಘ್ನ ಮತ್ತು ಭರತರೆಂಬ ಮಕ್ಕಳನ್ನು ಪಡೆದನು. ಅಪ್ರತಿಮತೇಜಸ್ವಿಯಾದ ಯಾವ ಪರಶುರಾಮನಿಂದ ಕಾರ್ತ

ಏಕಾಕಿನಾ ಹತೋ ವಾಲೀ ಪ್ಲವಗಃ ಶತ್ರುದುರ್ಜಯಃ ।
ರಾವಣೋ ಬ್ರಹ್ಮಪುತ್ರೋ ಯಸ್ತ್ರೈಲೋಕ್ಯಂ ಯಸ್ಯ ಶಂಕತೇ ॥ ೧೩೯ ॥
ಹತಃ ಸ ರಾಮಚಂದ್ರೇಣ ಸ ಪುತ್ರಃ ಸಹ ಬಾಂಧವಃ ।
ಏವಂ ಪುತ್ರಂ ವಿನಾ ಸೌಖ್ಯಂ ಮರ್ತ್ಯಲೋಕೇ ನ ವಿದ್ಯತೇ ॥ ೧೪೦ ॥
ವಂಶಾರ್ಥೇ ಮೈಥುನಂ ಯಸ್ಯ ಸ್ವರ್ಗಾರ್ಥೇ ಯಸ್ಯ ಭಾರತೀ ।
ಮೃಷ್ಟಾನ್ನಂ ಬ್ರಾಹ್ಮಣಸ್ಯಾರ್ಥೇ ಸ್ವರ್ಗೇ ವಾಸಂ ತು ಯಾಂತಿ ತೇ॥೧೪೧॥
ಬ್ರಹ್ಮಹತ್ಯಾಽಶ್ವಮೇಧಾಭ್ಯಾಂ ನ ಪರಂ ಪಾಪಪುಣ್ಯಯೋಃ ।
ಪುತ್ರೋತ್ಪತ್ತಿವಿಪತ್ತಿಭ್ಯಾಂ ನ ಪರಂ ಸುಖದುಃಖಯೋಃ ॥ ೧೪೨ ॥
ಕಿಂ ಬ್ರವೀಮೀತಿ ಭೋ ವತ್ಸ ನ ತು ಸೌಖ್ಯಂ ಸುತಂ ವಿನಾ ॥ ೧೪೩ ॥
ಏವಂ ಬಹುವಿಧಂ ದುಃಖಂ ಪ್ರಲಪಿತ್ವಾ ಪುನಃ ಪುನಃ ।
ಜನೈಶ್ಚಾಶ್ವಾಸಿತೋ ವಿಪ್ರೋ ಬಾಲಂ ಗೃಹ್ಯ ಬಹಿರ್ಗತಃ ॥ ೧೪೪ ॥

---

ವೀರ್ಯಾರ್ಜುನನೂ ಪರಾಜಿತನಾದನೊ, ಅಂತಹ ಪರಶುರಾಮನೂ ಕೇವಲ ಎಂಟು ವರ್ಷದ ಬಾಲಕನಾದ ರಾಮಚಂದ್ರನಿಂದ ಜಿತನಾದನು.

೧೩೯. ಶತ್ರುಗಳಿಗೆ ಅಜೇಯನೆನಿಸಿದ್ದ ವಾಲಿಯೆಂಬ ಮಹಾಕಪಿಯೂ ಏಕಾಕಿಯಾದ ರಾಮನಿಂದ ಮೃತನಾದನು. ಬ್ರಹ್ಮಕುಲಪ್ರಸೂತನಾದ ರಾವಣನಿಗೆ ಮೂರು ಲೋಕಗಳೂ ಭಯಗೊಳ್ಳುತ್ತಿದ್ದುವು.

೧೪೦ ಅವನೂ ಪುತ್ರ ಬಂಧುಗಳೊಡನೆ ಶ್ರೀ ರಾಮಚಂದ್ರನಿಂದ ಹತನಾದನು. ಹೀಗೆ ಮನುಷ್ಯಲೋಕದಲ್ಲಿ ಪುತ್ರನಿಲ್ಲದೆ ಸೌಖ್ಯವು ಲಭಿಸಲಾರದು.

೧೪೧. ಯಾವನ ಸ್ತ್ರೀ ಸಹವಾಸವು ಕೇವಲ ಸಂತಾನಕ್ಕಾಗಿರುವುದೊ, ಯಾವನ ವಿದ್ಯೆಯು ಸ್ವರ್ಗಕ್ಕೆ ಸಾಧನವಾಗಿರುವುದೊ, ಯಾವನ ಮೃಷ್ಟಾನ್ನ ಸಂಚಯವು ಬ್ರಾಹ್ಮಣರ ತೃಪ್ತಿಗಾಗಿ ವಿನಿಯೋಗವಾಗುವುದೊ, ಅವರೆಲ್ಲರೂ ಸ್ವರ್ಗದಲ್ಲಿ ವಾಸಮಾಡುವರು.

೧೪೨. ಬ್ರಹ್ಮಹತ್ಯೆಗಿಂತ ಪಾತಕವಿಲ್ಲ. ಅಶ್ವಮೇಧವನ್ನು ಮೀರಿದ ಪುಣ್ಯವಿಲ್ಲ. ಪುತ್ರಜನನಮರಣಗಳಿಗಿಂತ ಮಿಗಿಲಾದ ಸುಖದುಃಖಗಳೂ ಲೋಕದಲ್ಲಿಲ್ಲ.

೧೪೩. ವತ್ಸನೆ! ಮತ್ತೇನನ್ನು ಹೇಳಲಿ? ಪುತ್ರನಿಂದಲ್ಲದೆ ಯಾವ ಸೌಖ್ಯವೂ ಮನುಜನಿಗಿಲ್ಲ.

೧೪೪. ಇಂತು ದುಃಖಾಕುಲನಾಗಿ ಬಹುವಿಧವಾಗಿ ಪ್ರಲಾಪಗಳನ್ನು ಮಾಡುತ್ತ, ಮತ್ತೆ ಮತ್ತೆ ಜನರು ಸಮಾಧಾನವನ್ನು ಹೇಳುತ್ತಿರಲು ಆ ಬ್ರಾಹ್ಮಣನು ಬಾಲಕನ ದೇಹವನ್ನು ತೆಗೆದುಕೊಂಡು ಹೊರಗೆ ಹೊರಟನು.

**ತತಃ ಸಂಸ್ಕೃತ್ಯ ತಂ ಬಾಲಂ ವಿಧಿದೃಷ್ಟೇನ ಕರ್ಮಣಾ ।**
**ಸಮುಪೇತೌ ಸುದುಃಖಾರ್ತಾವಾಗತೌ ಸ್ವಗೃಹಂ ಪುನಃ ॥ ೧೪೫ ॥**
**ಏವಂ ಗೃಹಾಗತೇ ವಿಪ್ರೇ ರಾತ್ರಿರ್ಜಾತಾ ಯುಧಿಷ್ಠಿರ ।**
**ಭೂಮೌ ಪ್ರಸುಪ್ತೋ ಗೋವಿಂದಃ ಪುತ್ರಶೋಕೇನ ಪೀಡಿತಃ ॥ ೧೪೬ ॥**
**ಯಾವನ್ನಿರೀಕ್ಷತೇ ಭಾರ್ಯಾ ಭರ್ತಾರಂ ದುಃಖಪೀಡಿತಂ ।**
**ಕೃಮಿರಾಶಿಗತಂ ಸರ್ವಂ ಗೋವಿಂದಂ ಸಮಪಶ್ಯತ ॥ ೧೪೭ ॥**
**ದುಃಖಾದ್ದುಃಖತರೇ ಮಗ್ನಾ ದೃಷ್ಟ್ವಾ ತಂ ಪಾತಕಾನ್ವಿತಂ ।**
**ಏವಂ ದುಃಖನಿಮಗ್ನಾಯಾಃ ಶರ್ವರೀ ವಿಗತಾ ತದಾ ॥ ೧೪೮ ॥**
**ಪಶುಪಾಲಾಸ್ತು ಮಹಿಷೀರ್ಮುಕ್ತ್ವಾಽರಣ್ಯೇಽಗಮದ್ಗೃಹಾತ್ ।**
**ಅರಣ್ಯೇ ಮಹಿಷೀಃ ಸರ್ವಾ ರಕ್ಷಯಿತ್ವಾ ಗೃಹಾಗತಃ ॥ ೧೪೯ ॥**
**ವಿಜ್ಞಪ್ತಃ ಪಶುಪಾಲೇನ ಗೋವಿಂದೋ ಬ್ರಾಹ್ಮಣೋತ್ತಮಃ ।**
**ಯಾವದ್ಭೋಕ್ಷ್ಯಾಮ್ಯಹಂ ಸ್ವಾಮಿನ್ಮಹಿಷೀಸ್ತ್ವಂ ಚ ರಕ್ಷಸೇ ॥ ೧೫೦ ॥**
**ತತಃ ಸ ತ್ವರಿತೋ ವಿಪ್ರೋ ಜಗಾಮ ಮಹಿಷೀಃ ಪ್ರತಿ ।**
**ನ ತತ್ರ ಮಹಿಷೀಃ ಪಶ್ಯೇತ್ಪಶ್ಚಾತ್ಕ್ಷೇತ್ರಾಭಿಸನ್ಮುಖಂ ॥ ೧೫೧ ॥**

---

೧೪೫. ಬಳಿಕ ಆ ದಂಪತಿಗಳು ಶಾಸ್ತ್ರವಿಹಿತವಾದ ರೀತಿಯಿಂದ ಆ ದೇಹದ ಸಂಸ್ಕಾರವನ್ನುಮಾಡಿ ದುಃಖತಪ್ತರಾಗಿ ತಮ್ಮ ಮನೆಗೆ ಹಿಂದಿರುಗಿದರು.

೧೪೬. ಯುಧಿಷ್ಠಿರನೆ! ಇಂತು ಆ ಗೋವಿಂದನೆಂಬ ಬ್ರಾಹ್ಮಣನು ಮನೆಯನ್ನು ಸೇರಲು ರಾತ್ರಿಯಾಯಿತು. ಆತನು ಪುತ್ರಶೋಕಾತುರನಾಗಿ ಭೂಮಿಯಲ್ಲಿ ಮಲಗಿದ್ದನು.

೧೪೭. ಹೆಂಡತಿಯು ದುಃಖಪೀಡಿತನಾದ ಪತಿಯನ್ನು ನೋಡುತ್ತಿದ್ದಂತೆಯೇ ಆತನು ಕ್ರಿಮಿಗಳ ರಾಶಿಯಿಂದಾವೃತನಾಗಿದ್ದುದನ್ನು ಕಂಡಳು.

೧೪೮. ಆಕೆಯು ಪಾಪಲೇಪಿತನಾದ ತನ್ನ ಪ್ರಿಯನನ್ನು ಕಂಡು ಮೊದಲಿಗಿಂತಲೂ ಹೆಚ್ಚಿನ ದುಃಖವನ್ನನುಭವಿಸಿದಳು. ಇಂತು ದುಃಖದಲ್ಲಿ ಮುಳುಗಿರಲು ಆ ರಾತ್ರಿಯೂ ಕಳೆಯಿತು.

೧೪೯. ಪಶುಪಾಲಕನು ಯಜಮಾನಿಯ ಅಪ್ಪಣೆಯಿಂದ ಮನೆಯನ್ನು ಬಿಟ್ಟು ಕಾಡಿಗೆಹೋಗಿ ಅಲ್ಲಿ ಎಲ್ಲ ಎಮ್ಮೆಗಳನ್ನೂ ಒಂದೆಡೆಯಲ್ಲಿ ಕೂಡಿಸಿ ಮನೆಗೆ ಬಂದನು.

೧೫೦. ಮತ್ತು ಬ್ರಾಹ್ಮಣೋತ್ತಮನಾದ ಗೋವಿಂದನನ್ನು ಕುರಿತು "ನಾನು ಊಟವನ್ನುಮಾಡಿ ಬರುವವರೆಗೂ ಈ ಎಮ್ಮೆಗಳನ್ನು ನೋಡಿಕೊಂಡಿರು" ಎಂದು ವಿಜ್ಞಾಪಿಸಿಕೊಂಡನು.

೧೫೧-೧೫೨. ವಿಪ್ರನು ವೇಗವಾಗಿ ಎಮ್ಮೆಗಳಿದ್ದಲ್ಲಿಗೆ ಹೋಗಿ ಅಲ್ಲಿ ಅವು

**ಧಾವಮಾನಶ್ಚ ವಿಪ್ರಸ್ತು ಏರಂಡೀಸಂಗಮೇ ಗತಃ ।**
**ತತಃ ಪ್ರವಿಷ್ಟಸ್ತು ಜಲೇ ರೇವ್ಯೈರಂಡ್ಯೋಸ್ತು ಸಂಗಮೇ ॥ ೧೫೨ ॥**
**ತಜ್ಜಲಂ ಪೀತಮಾತ್ರಂ ತು ತ್ವರಯಾ ಚಾಽತಿತರ್ಷಿತಃ ।**
**ಅಕಾಮಾತ್ಸಲಿಲಂ ಪೀತ್ವಾ ಪ್ರಕ್ಷಾಲ್ಯ ನಯನೇ ಶುಭೇ ॥ ೧೫೩ ॥**
**ಆಜಗಾಮ ತತಃ ಪಶ್ಚಾದ್ಭವನಂ ದಿವಸಕ್ಷಯೇ ।**
**ಭುಕ್ತ್ವಾ ದುಃಖಾನ್ವಿತೋ ರಾತ್ರೌ ಗೋವಿಂದಃ ಶಯನಂ ಯಯೌ ॥**
**ನಿದ್ರಾಭಿಭೂತಃ ಶೋಕೇನ ಶ್ರಮೇಣೈವ ತು ಖೇದಿತಃ ।**
**ಪುನಸ್ತಚ್ಚಾರ್ಧರಾತ್ರೇ ತು ತಸ್ಯ ಭಾರ್ಯಾ ಯುಧಿಷ್ಠಿರ ॥ ೧೫೫ ॥**
**ಕೃಮಿಭಿರ್ವೇಷ್ಟಿತಂ ಗಾತ್ರಂ ಕ್ವಚಿತ್ಪಶ್ಯತ್ಯವೇಷ್ಟಿತಂ ।**
**ಪುನಃ ಸಾ ವಿಸ್ಮಯಾವಿಷ್ಟಾ ತಸ್ಯ ಭಾರ್ಯಾ ಗುಣಾನ್ವಿತಾ ।**
**ಉವಾಚ ದುಷ್ಕೃತಂ ತಸ್ಯ ಸಾಧ್ವಸಾವಿಷ್ಟತೇಜಸಾ ॥ ೧೫೬ ॥**

**ಭಾರ್ಯೋವಾಚ :—**

**ಅತೀತೇ ಪಂಚಮೇ ಚಾಽಹ್ನಿ ತ್ವಿಂಧನಂ ಕ್ಷಿಪತಸ್ತು ತೇ ।**
**ಗೃಹಪಶ್ಚಾದ್ಗತೋ ಬಾಲೋ ಹ್ಯಜ್ಞಾನಾದ್ಧಾತಿತಸ್ತ್ವಯಾ ॥ ೧೫೭ ॥**

---

ಗಳನ್ನು ಕಾಣದೆ ಅಲ್ಲಿಂದ ಕ್ಷೇತ್ರದ ಕಡೆಗೆ ಓಡಿಬರುತ್ತ ಗೋವಿಂದನು ಏರಂಡೀ ಸಂಗಮವನ್ನು ಸೇರಿದನು. ಅತ್ಯಂತ ಬಾಯಾರಿಕೆಯಿಂದ ಪೀಡಿತನಾಗಿ ಅತನು ಆ ಸಂಗಮದಲ್ಲಿ ಧುಮುಕಿ ಜಲಪಾನವನ್ನು ಮಾಡಿದನು.

೧೫೩. ಇಂತು ಅನಿಚ್ಛೆಯಿಂದಲೇ ಆ ತೀರ್ಥೋದಕವನ್ನು ಕುಡಿದು ತನ್ನ ವಿಶಾಲನೇತ್ರಗಳನ್ನೂ ಒರಸಿಕೊಂಡು ಸಾಯಂಕಾಲವಾಗಲು ತನ್ನ ಮನೆಗೆ ಬಂದು ಸೇರಿದನು.

೧೫೪. ಎಮ್ಮೆಗಳನ್ನು ಕಳೆದುಕೊಂಡ ದುಃಖದಿಂದಲೂ, ಪುತ್ರಶೋಕದಿಂದಲೂ, ದೇಹಾಯಾಸದಿಂದಲೂ ಖೇದಗೊಂಡು ಗೋವಿಂದನು ಹಾಸಿಗೆಯಲ್ಲಿ ಮಲಗಿ ನಿದ್ರೆಮಾಡತೊಡಗಿದನು.

೧೫೫ ಯುಧಿಷ್ಠಿರನೆ! ಆ ರಾತ್ರಿಯಲ್ಲಿಯೂ ಆತನ ಪತ್ನಿಯು ಗಂಡನನ್ನು ನೋಡುತ್ತಿರಲು ಕೃಮಿವೇಷ್ಟಿತವಾದ ಆತನ ದೇಹದಲ್ಲಿ ಸ್ವಲ್ಪ ಭಾಗವು ಪರಿಶುದ್ಧವಾಗಿದ್ದುದನ್ನು ಕಂಡಳು.

೧೫೬. ಗುಣಶಾಲಿನಿಯಾದ ಆಕೆಯು ಇದನ್ನು ಕಂಡು ವಿಸ್ಮಯಾವಿಷ್ಟಳಾಗಿ ಸಂಭ್ರಮಗೊಂಡು ಗಂಡನನ್ನೆಬ್ಬಿಸಿ ಆತನ ಪಾತಕದ ಚರಿತ್ರೆಯನ್ನು ಹೇಳಿದಳು.

೧೫೭. ಪತ್ನಿಯು ಹೇಳುತ್ತಾಳೆ —''ಹಿಂದೆ ಐದನೆಯ ದಿವಸದ ಹಗಲಿನಲ್ಲಿ ಕಟ್ಟಿಗೆಗಳನ್ನು ಎತ್ತಿಹಾಕುತ್ತಿದ್ದ ನಿನ್ನಿಂದ ಹಿತ್ತಿಲಿಗೆ ಬಂದಿದ್ದ ಬಾಲಕನು ಅಜ್ಞಾನಪೂರ್ವಕವಾಗಿ ಹತನಾದನು.

ಮಯಾ ತತ್ಪಾತಕಂ ಘೋರಂ ರಹಸ್ಯಂ ನ ಪ್ರಕಾಶಿತಂ ।
ತೇನ ಪ್ರಚ್ಛನ್ನಪಾಪೇನ ದಹ್ಯಮಾನಾ ದಿವಾನಿಶಂ ॥ ೧೫೮ ॥
ನ ಸುಖಂ ತವ ಗಾತ್ರಸ್ಯ ಪಶ್ಯಾಮಿ ನಹಿ ಚಾತ್ಮನಃ ।
ನಿದ್ರಾ ಮಮ ಶಮಂ ಯಾತಾ ರತಿಶ್ಚೈವ ತ್ವಯಾ ಸಹ ॥ ೧೫೯ ॥
ಶ್ರೂಯತೇ ಮಾನವೇ ಶಾಸ್ತ್ರೇ ಶ್ಲೋಕೋ ಗೀತೋ ಮಹರ್ಷಿಭಿಃ ।
ಸ್ಮೃತ್ವಾ ಸ್ಮೃತ್ವಾ ತು ತಂ ಚಿತ್ತೇ ಪರಿತಾಪೋ ನ ಶಾಮ್ಯತಿ ॥ ೧೬೦ ॥
ಕೀರ್ತನಾನ್ನಶ್ಯತೇ ಧರ್ಮೋ ವರ್ಧತೇಽಸೌ ನಿಗೂಹನಾತ್ ।
ಇಹಲೋಕೇ ಪರೇ ಚೈವ ಪಾಪಸ್ಯಾಪ್ಯೇವಮೇವ ಚ ॥ ೧೬೧ ॥
ಏವಂ ಸಂಚಿಂತ್ಯಮಾನಾಽಹಂ ಸ್ಥಿತಾ ರಾತ್ರೌ ಭಯಾತುರಾ ।
ಕೃಮಿರಾಶಿಗತಂ ತ್ವಾಂ ಹಿ ಕಸ್ಯಾಽಹಂ ಕಥಯಾಮಿ ಕಿಂ ॥ ೧೬೨ ॥
ಪುನಸ್ತ್ವಂ ಚಾಽದ್ಯ ಮೇ ದೃಷ್ಟೋ ಭ್ರೂಣಹತ್ಯಾ ಕೃಮಿಶ್ರಿತಃ ।
ಕ್ವಚಿದ್ಭಿಂದಂತಿ ತೇ ಗಾತ್ರಂ ಕ್ವಚಿನ್ನಷ್ಟಾಃ ಸಮಂತತಃ ॥ ೧೬೩ ॥

---

೧೫೮. ಮನೆಯಲ್ಲಿ ನಡೆದ ಈ ಮಹಾ ಪಾತಕವನ್ನು ನಾನು ಎಲ್ಲಿಯೂ ಪ್ರಕಾಶಗೊಳಿಸಲಿಲ್ಲ. ಈ ಗುಟ್ಟಾದ ಪಾಪದಿಂದ ಹಗಲು ರಾತ್ರಿಗಳಲ್ಲಿಯೂ ಬೇಯುತ್ತಿರುವೆನು.

೧೫೯. ಇದರಿಂದ ನಿನ್ನ ದೇಹಕ್ಕಾಗಲಿ ನನಗಾಗಲಿ ಯಾವ ಸೌಖ್ಯವೂ ಇಲ್ಲದಂತಾಗಿರುವುದು. ನನಗೆ ನಿದ್ರೆಯೂ ನಿನ್ನೊಡನೆ ಸಹವಾಸವೂ ಕಳೆದು ಹೋದುವು.

೧೬೦. ಮನುಧರ್ಮಶಾಸ್ತ್ರದಲ್ಲಿ ಮಹರ್ಷಿಗಳು ಹೇಳಿರುವ ವಾಕ್ಯಗಳನ್ನು ಕೇಳಿರುವೆವು. ಅವುಗಳನ್ನು ಸ್ಮರಿಸಿದಂತೆಲ್ಲ ನನ್ನ ಪರಿತಾಪವು ಹೆಚ್ಚುತ್ತಿರುವುದು.

೧೬೧. ಧರ್ಮದ ಫಲವು ಪ್ರಚಾರದಿಂದ ನಷ್ಟವಾಗುವುದು. ಮುಚ್ಚಿಡುವುದರಿಂದ ಬೆಳೆಯುವುದು. ಇಲ್ಲಿಯೂ ಲೋಕಾಂತರಗಳಲ್ಲಿಯೂ ಪಾಪದ ಫಲವೂ ಹೀಗೆಯೇ.

೧೬೨. ಇಂತೆಂದು ಯೋಚಿಸಿ ನಾನು ಪ್ರತಿ ರಾತ್ರಿಯಲ್ಲಿಯೂ ಭಯಗೊಂಡಿರುತ್ತಿದ್ದೆನು. ನೀನು ಕೃಮಿರಾಶಿಯಿಂದಾವೃತನಾಗಿರುವುದನ್ನು ಯಾರಿಗೆ ಹೇಗೆ ಹೇಳಿಕೊಳ್ಳಲಿ ?

೧೬೩. ಮತ್ತೆ ಇಂದೂ ಸಹ ಶಿಶು ಹತ್ಯೆಯ ಪಾತಕದಿಂದ ನೀನು ಕೃಮಿರಾಶಿ ಪೀಡಿತನಾಗಿರುವುದನ್ನು ಕಂಡೆನು. ಕೆಲವು ಕೃಮಿಗಳು ನಿನ್ನ ದೇಹವನ್ನು ತಿನ್ನುತ್ತಿದ್ದುವು. ಕೆಲವು ರಾಶಿಗಳಾಗಿ ಸತ್ತು ಬೀಳುತ್ತಿದ್ದುವು.

ಏತತ್ಸಂಸ್ಮೃತ್ಯ ಸಂಸ್ಮೃತ್ಯ ವಿಸ್ಮಯಾಮಿ ಪುನಃ ಪುನಃ ।
ನ ಜಾನೇ ಕಾರಣಂ ಕಿಂಚಿತ್ಪೃಚ್ಛಂತ್ಯಾಃ ಕಥಯಸ್ವ ಮೇ ॥ ೧೬೪ ॥
ತಡಾಗಂ ವಾ ಸರಿದ್ವಾಽಪಿ ತೀರ್ಥಂ ವಾ ದೇವತಾರ್ಚನಂ ।
ಯಂ ಗತೋಽಸಿ ಪ್ರಭಾವೋಽಯಂ ತಸ್ಯ ನಾಽನ್ಯಸ್ಯ ಮೇ ಸ್ಥಿತಂ॥ ೧೬೫ ॥
ಏವಮುಕ್ತಸ್ತು ವಿಪ್ರೋಽಸೌ ಕಥಯಾಮಾಸ ಭಾರತ ।
ಭಾರ್ಯಾಯಾ ಯದ್ದಿವಾ ವೃತ್ತಂ ಶಂಕಮಾನೋ ನೃಪೋತ್ತಮ॥ ೧೬೬ ॥
ಅದ್ಯಾಽಹಂ ಮಹಿಷೀಸಾರ್ಧಂ ಏರಂಡೀಸಂಗಮಂ ಗತಃ ।
ನಾಭಿಮಾತ್ರೇ ಜಲೇ ಗತ್ವಾ ಪೀತವಾನ್ ಸಲಿಲಂ ಬಹು ॥ ೧೬೭ ॥
ನಾನ್ಯತ್ತೀರ್ಥಂ ವಿಜಾನಾಮಿ ಸರಿತಂ ಸರ ಏವ ವಾ ।
ಸತ್ಯಂ ಸತ್ಯಂ ಪುನಃ ಸತ್ಯಂ ಕಥಿತಂ ತವ ಭಾಮಿನಿ ॥ ೧೬೮ ॥
ಏವಂ ಜ್ಞಾತ್ವಾ ತು ಸಾ ಸರ್ವಮುಪವಾಸಕೃತಕ್ಷಣಾ ।
ಸಪತ್ನೀಕೋ ಗತಸ್ತತ್ರ ಸಂಗಮೇ ವರವರ್ಣಿನಿ ॥ ೧೬೯ ॥

---

೧೬೪. ಇದನ್ನು ನೆನಸಿಕೊಂಡು ಪುನಃ ಪುನಃ ನಾನೇ ಜಿಜ್ಞಾಸೆಯನ್ನು ಮಾಡುತ್ತಿರುವೆನು. ಇದಕ್ಕೆ ಕಾರಣವನ್ನು ತಿಳಿಯೆನು. ಕುತೂಹಲೆಯಾಗಿರುವ ನನಗೆ ಇದನ್ನು ಹೇಳು.

೧೬೫. ಯಾವ ತಟಾಕವನ್ನೋ, ನದಿಯನ್ನೋ, ತೀರ್ಥವನ್ನೋ ನೀನು ಸೇವಿಸಿರಬೇಕು. ಯಾವ ದೇವತೆಯನ್ನೋ ಪೂಜಿಸಿರಬೇಕು ಅಂತಲ್ಲದೆ ಇದು ಬೇರೊಂದರ ಪ್ರಭಾವವೆಂದು ನಾನೆಣಿಸಲಾರೆನು.''

೧೬೬. ಧರ್ಮಜನೆ! ಇಂತೆಂದ ತನ್ನ ಮಡದಿಗೆ ಬ್ರಾಹ್ಮಣನೆಂದನು. ತಾನೂ ಅನುಮಾನಗೊಳ್ಳುತ್ತ ಹೆಂಡತಿಗೆ ಹಗಲಿನಲ್ಲಿ ನಡೆದ ವೃತ್ತಾಂತವನ್ನು ವಿಸ್ತರಿಸಿದನು

೧೬೭. "ಇಂದು ನಾನು ಎಮ್ಮೆಗಳನ್ನು ಹಿಂಬಾಲಿಸಿ ಏರಂಡೀಸಂಗಮವನ್ನು ಸೇರಿದೆನು ನಾಭಿಯ ಆಳದ ನೀರಿನಲ್ಲಿಳಿದು ಬಹಳ ಜಲವನ್ನು ಪಾನ ಮಾಡಿದೆನು

೧೬೮. ಪ್ರಿಯಳೆ! ಇದಲ್ಲದೆ ಬೇರೊಂದು ತೀರ್ಥವನ್ನಾಗಲಿ, ನದಿಯನ್ನಾಗಲಿ, ಸರೋವರವನ್ನಾಗಲಿ ನಾನು ಸೇವಿಸಲಿಲ್ಲ. ಇದು ಸರ್ವಥಾ ಸತ್ಯವೆಂದು ತಿಳಿ.''

೧೬೯. ಇದನ್ನು ತಿಳಿದು ಆಕೆಯು ಅಂದು ಉಪವಾಸವ್ರತವನ್ನಾಚರಿಸಿದಳು. ಪಾರ್ವತಿಯೆ! ತರುವಾಯ ಆ ಬ್ರಾಹ್ಮಣನು ಪತ್ನೀಸಹಿತನಾಗಿ ಸಂಗಮ ತೀರ್ಥವನ್ನು ಸೇರಿದನು.

ಸ್ನಾತ್ವಾ ತತ್ರ ಜಲೇ ರಮ್ಯೇ ನತ್ವಾ ದೇವಂ ತು ಭಾಸ್ಕರಂ ।
ಸ್ನಾಪಯಾಮಾಸ ದೇವೇಶಂ ಶಂಕರಂ ಚೋಮಯಾ ಸಹ ॥ ೧೭೦ ॥
ಪಂಚಗವ್ಯಘೃತಕ್ಷೀರೈರ್ದಧಿ ಕ್ಷೌದ್ರಘೃತೈರ್ಜಲೈಃ ।
ಗಂಧಮಾಲ್ಯಾದಿ ಧೂಪೈಶ್ಚ ನೈವೇದ್ಯೈಶ್ಚ ಸುಶೋಭನೈಃ ॥ ೧೭೧ ॥
ಪೂಜ್ಯ ತ್ರಯೀಮಯಂ ಲಿಂಗಂ ದೇವೀಂ ಕಾತ್ಯಾಯನೀಂ ಶುಭಾಂ ।
ರಾತ್ರೌ ಜಾಗರಣಂ ಕೃತ್ವಾ ಪತ್ಯಾ ಸಹ ಪತಿವ್ರತಾ ॥ ೧೭೨ ॥
ತತಃ ಪ್ರಭಾತೇ ವಿಮಲೇ ದ್ವಿಜಾನ್ ಸಂಪೂಜ್ಯ ಯತ್ನತಃ ।
ಗೋದಾನೇನ ಹಿರಣ್ಯೇನ ವಸ್ತ್ರೇಣಾನ್ನೇನ ಭಾರತ ॥ ೧೭೩ ॥
ಗೋವಿಂದಃ ಪೂಜಯಾಮಾಸ ಸ್ವಶಕ್ತ್ಯಾ ಬ್ರಾಹ್ಮಣಾಂಛುಭಾನ್ ।
ಮುಕ್ತಪಾಪೋ ಗೃಹಾಯಾತಃ ಸ್ವಭಾರ್ಯಾಸಹಿತೋ ನೃಪ ॥ ೧೭೪ ॥
ಏವಂ ಯಃ ಶೃಣುತೇ ಭಕ್ತ್ಯಾ ಗೋವಿಂದಾಖ್ಯಾನಮುತ್ತಮಂ ।
ಪಠತೇ ಪರಯಾ ಭಕ್ತ್ಯಾ ಭ್ರೂಣಹತ್ಯಾ ಪ್ರಣಶ್ಯತಿ ॥ ೧೭೫ ॥
ಕ್ರೀಡತೇ ಶಾಂಕರೇ ಲೋಕೇ ಯಾವದಾಭೂತಸಂಪ್ಲವಂ ।
ಯಶ್ಚೈವಾಶ್ವಯುಜೇ ಮಾಸಿ ಚೈತ್ರೇ ವಾ ನೃಪಸತ್ತಮ ॥ ೧೭೬ ॥

---

೧೭೦. ಆ ಪರಿಶುದ್ಧವಾದ ಜಲದಲ್ಲಿ ಸ್ನಾನವನ್ನುಮಾಡಿ ಸೂರ್ಯದೇವನಿಗೆ ನಮಸ್ಕರಿಸಿ ಆತನು ಅಲ್ಲಿ ಉಮಾಸಮೇತನಾದ ಪರಮೇಶ್ವರನ ಪ್ರತಿಷ್ಠೆಯನ್ನು ಮಾಡಿಸಿದನು.

೧೭೧–೧೭೨. ಬಳಿಕ ಪಂಚಗವ್ಯಗಳಿಂದಲೂ, ತುಪ್ಪ, ಹಾಲು, ಮೊಸರು, ಜೇನುತುಪ್ಪ, ಶುದ್ಧೋದಕಗಳಿಂದ ಅಭಿಷೇಕಗಳನ್ನು ಮಾಡಿ ಗಂಧಮಾಲ್ಯಗಳಿಂದಲೂ, ಧೂಪಗಳಿಂದಲೂ, ಉತ್ತಮ ನೈವೇದ್ಯಗಳಿಂದಲೂ ವೇದಮಯನಾದ ಮಹೇಶ್ವರನನ್ನೂ ಕಾತ್ಯಾಯನೀದೇವಿಯನ್ನೂ ಭಕ್ತಿಯಿಂದ ಸೇವಿಸಿದ ಮೇಲೆ ಆ ಸ್ತ್ರೀಯು ಪತಿಯೊಡನೆ ರಾತ್ರಿಯಲ್ಲಿ ಜಾಗರಣೆಯನ್ನು ಮಾಡಿದಳು.

೧೭೩–೧೭೪. ಯುಧಿಷ್ಠಿರನೆ! ಬಳಿಕ ಸುಪ್ರಭಾತವಾಗಲು ಶಕ್ತ್ಯನುಸಾರವಾಗಿ ಬ್ರಾಹ್ಮಣರ ಪೂಜೆಯನ್ನು ಮಾಡಿ, ಗೋವು, ಹಿರಣ್ಯ, ವಸ್ತ್ರ, ಅನ್ನಾದಿ ದಾನಗಳಿಂದ ಅವರನ್ನು ಸಂತೋಷಗೊಳಿಸಿ, ಗೋವಿಂದನು ಅವರ ಆಶೀರ್ವಾದವನ್ನು ಪಡೆದು ತನ್ನ ಪಾಪವನ್ನು ಕಳೆದುಕೊಂಡು ಹೆಂಡತಿಯೊಡನೆ ತನ್ನ ಮನೆಗೆ ಹಿಂದಿರುಗಿದನು.

೧೭೫. ಇಂತು ನಡೆದ ಗೋವಿಂದಬ್ರಾಹ್ಮಣನ ಉತ್ತಮವಾದ ಚರಿತ್ರೆಯನ್ನು ಯಾವನು ಭಕ್ತಿಯಿಂದ ಓದುವನೊ, ಅವರ ಬ್ರಹ್ಮಹತ್ಯೆಯ ಪಾತಕವೂ ನಾಶವಾಗುವುದು.

೧೭೬–೧೭೭. ಆತನು ಪಂಚಭೂತಗಳ ನಾಶವಾಗುವವರೆಗೂ ಕೈಲಾಸಲೋಕದಲ್ಲಿ ಕ್ರೀಡಿಸುತ್ತಿರುವನು. ರಾಜೇಂದ್ರನೆ! ಆಶ್ವಯುಜಮಾಸದಲ್ಲಾಗಲಿ,

ಸಪ್ತಮ್ಯಾಂ ಚ ಸಿತೇ ಪಕ್ಷೇ ಸೋಪವಾಸೋ ಜಿತೇಂದ್ರಿಯಃ ।
ಸಾತ್ತ್ವಿಕೀಂ ವಾಸನಾಂ ಕೃತ್ವಾ ಯೋ ವಸೇಚ್ಛಿವಮಂದಿರೇ ॥ ೧೭೭ ॥
ಧ್ಯಾಯಮಾನೋ ವಿರೂಪಾಕ್ಷಂ ತ್ರಿಶೂಲಕರಸಂಸ್ಥಿತಂ ।
ಕಂಸಾಽಸುರನಿಹಂತಾರಂ ಶಂಖಚಕ್ರಗದಾಧರಂ ॥ ೧೭೮ ॥
ಪಕ್ಷಿರಾಜಸಮಾರೂಢಂ ತ್ರೈಲೋಕ್ಯವರದಾಯಕಂ ।
ಪಿತಾಮಹಂ ತತೋ ಧ್ಯಾಯೇದ್ಧಂಸಸ್ಥಂ ಚತುರಾನನಂ ॥ ೧೭೯ ॥
ಸರ್ಗಪ್ರದಂ ಸಮಸ್ತಸ್ಯ ಕಮಲಾಕರಶೋಭಿತಂ ।
ಯೋ ಹ್ಯೇವಂ ವಸತೇ ತತ್ರ ತ್ರಿಯಾಮೋ ಸ್ಥಾನ ಉತ್ತಮೇ ॥ ೧೮೦ ॥
ತತಃ ಪ್ರಭಾತೇ ವಿಮಲೇ ಹ್ಯಷ್ಟಮ್ಯಾಂ ಚ ನರಾಧಿಪ ।
ಬ್ರಾಹ್ಮಣಾನ್ಪೂಜಯೇದ್ಭಕ್ತ್ಯಾ ಸರ್ವದೋಷವಿವರ್ಜಿತಾನ್ ॥ ೧೮೧ ॥
ಸರ್ವಾಽವಯವಸಂಪೂರ್ಣಾನ್ ಸರ್ವಶಾಸ್ತ್ರವಿಶಾರದಾನ್ ।
ವೇದಾಭ್ಯಾಸ ರತಾನ್ನಿತ್ಯಂ ಸ್ವದಾರನಿರತಾನ್ ಸದಾ ॥ ೧೮೨ ॥
ಶ್ರಾದ್ಧೇ ದಾನೇ ವ್ರತೇ ಯೋಗ್ಯಾನ್ಬ್ರಾಹ್ಮಣಾನ್ಪಾಂಡುನಂದನ ।
ಪ್ರೇತಾನಾಂ ಪೂಜನಂ ತತ್ರ ದೇವಪೂರ್ವಂ ಸಮಾರಭೇತ್ ॥ ೧೮೩ ॥

---

ಚೈತ್ರಮಾಸದಲ್ಲಾಗಲಿ ಶುಕ್ಲಪಕ್ಷದ ಸಪ್ತಮಿಯ ದಿನದಲ್ಲಿ ಉಪವಾಸವನ್ನು ಮಾಡಿ ಜಿತೇಂದ್ರಿಯನಾಗಿ, ಸಾತ್ವಿಕ ಬುದ್ಧಿವೃತ್ತಿಯುಳ್ಳವನಾಗಿ ಮಹೇಶ್ವರ ದೇವಾಲಯದಲ್ಲಿ ವಾಸಮಾಡಬೇಕು.

೧೭೮–೧೮೦. ವಿರೂಪಾಕ್ಷನೂ, ಕೈಯಲ್ಲಿ ತ್ರಿಶೂಲವನ್ನು ಹಿಡಿದಿರುವವನೂ ಆದ ಪರಮೇಶ್ವರನನ್ನಾಗಲಿ, ಕಂಸರಾಕ್ಷಸನಿಹಂತೃವೂ, ಶಂಖಚಕ್ರ ಗದಾಧಾರಿಯೂ, ಗರುಡವಾಹನವನ್ನೇರಿರುವನೂ, ಮೂರು ಲೋಕಗಳಿಗೆ ವರಗಳನ್ನು ಕೊಡುವವನೂ ಆದ ಶ್ರೀಮನ್ನಾರಾಯಣನನ್ನಾಗಲಿ, ಹಂಸವಾಹನನೂ, ಚತುರ್ಮುಖ ಸಹಿತನೂ, ಲೋಕಸೃಷ್ಟಿಗೆ ಕಾರಣನೂ, ಪದ್ಮಗಳನ್ನು ಕೈಯಲ್ಲಿ ಹಿಡಿದವನೂ ಆದ ಬ್ರಹ್ಮದೇವನನ್ನಾಗಲಿ ಧ್ಯಾನಿಸುತ್ತ ಆ ಉತ್ತಮ ಸ್ಥಾನದಲ್ಲಿ ಮೂರು ಯಾಮಗಳನ್ನು ಕಳೆಯಬೇಕು.

೧೮೧. ಧರ್ಮನಂದನನೆ! ಬಳಿಕ ಸುಪ್ರಭಾತವಾಗಲು ಅಷ್ಟಮಿಯ ದಿನದಲ್ಲಿ ಸಮಸ್ತ ದೋಷರಹಿತರಾದ ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸಬೇಕು.

೧೮೨. ಅಂಗವಿಕಲರಾಗದಿರುವವರೂ, ಸಕಲ ಶಾಸ್ತ್ರಗಳಲ್ಲಿ ನಿಷ್ಣಾತರೂ, ನಿತ್ಯವೂ ವೇದಶಾಸ್ತ್ರಗಳ ಅಧ್ಯಯನಾಧ್ಯಾಪನಗಳಲ್ಲಿ ನಿರತರಾದವರೂ, ಏಕಪತ್ನೀ ವ್ರತನಿಷ್ಠರೂ ಆದ ಬ್ರಾಹ್ಮಣರನ್ನು ಕರೆಯಬೇಕು.

೧೮೩. ಪಾಂಡುತನಯನೆ! ಇಂತಹ ದ್ವಿಜರೇ ಶ್ರಾದ್ಧಗಳಲ್ಲಿಯೂ, ದಾನ ಸ್ವೀಕಾರಕ್ಕೂ, ವ್ರತೋಪವಾಸಗಳಲ್ಲಿಯೂ ಯೋಗ್ಯರೆಂದೆನಿಸಿಕೊಳ್ಳುವರು. ಅಲ್ಲಿ ದೇವತಾಪೂಜೆಗಳನ್ನು ಮಾಡಿಯೇ ಪ್ರೇತಗಳ ಪೂಜೆಯನ್ನು ಮಾಡಬೇಕು.

ಪ್ರೇತತ್ವಾನ್ಮುಚ್ಯತೇ ಶೀಘ್ರಮೇರಂಡ್ಯಾಂ ಪಿಂಡತರ್ಪಣೈಃ ।
ದಾನಾನಿ ತತ್ರ ದೇಯಾನಿ ಹ್ಯನ್ನಮುಖ್ಯಾನಿ ಸರ್ವದಾ ॥ ೧೮೪ ॥
ಹಿರಣ್ಯಭೂಮಿಕನ್ಯಾಶ್ಚ ಧೂರ್ವಾಹೌ ಶುಭಲಕ್ಷಣೌ ।
ಸೀರೇಣ ಸಹಿತೌ ಪಾರ್ಥ ಧಾನ್ಯಂ ದ್ರೋಣಕಸಂಖ್ಯಯಾ ॥ ೧೮೫ ॥
ಅಲಂಕೃತಾಂ ಸವತ್ಸಾಂ ಚ ಕ್ಷೀರಿಣೀಂ ತರುಣೀಂ ಸಿತಾಂ ।
ರಕ್ತಾಂ ವಾ ಕೃಷ್ಣವರ್ಣಾಂ ವಾ ಪಾಟಲಾಂ ಕಪಿಲಾಂ ತಥಾ ॥ ೧೮೬ ॥
ಕಾಂಸ್ಯದೋಹನಸಂಯುಕ್ತಾಂ ರುಕ್ಮಖುರವಿಭೂಷಣಾಂ ।
ಸ್ವರ್ಣಶೃಂಗೀಂ ಸವತ್ಸಾಂ ಚ ಬ್ರಾಹ್ಮಣಾಯೋಪಪಾದಯೇತ್ ॥ ೧೮೭ ॥
ಪ್ರೀಯತಾಂ ಮೇ ಜಗನ್ನಾಥೋ ಹರಕೃಷ್ಣಪಿತಾಮಹಾಃ ।
ಸಂಸಾರರಕ್ಷಣೀ ದೇವೀ ಸುರಭೀ ಮಾಂ ಸಮುದ್ಧರೇತ್ ॥ ೧೮೮ ॥
ಪುತ್ರಾರ್ಥಂ ಯಾಃ ಸ್ತ್ರಿಯಃ ಪಾರ್ಥ ಹ್ಯೇರಂಡೀಸಂಗಮೇ ನೃಪ ।
ಸ್ನಾಸ್ಯಂತೇ ರುದ್ರಸೂಕ್ತೈಶ್ಚ ಚತುರ್ವೇದೋದ್ಭವೈಸ್ತಥಾ ॥ ೧೮೯ ॥

---

೧೮೪. ಎರಂಡೀತೀರ್ಥದಲ್ಲಿ ಪಿಂಡಪ್ರದಾನ ತರ್ಪಣಗಳನ್ನು ಮಾಡುವುದರಿಂದ ಸತ್ತವರು ಪ್ರೇತತ್ವವನ್ನು ಕಳೆದುಕೊಳ್ಳುವರು. ನಿತ್ಯವೂ ಅನ್ನವೇ ಮೊದಲಾದುವುಗಳನ್ನು ಅಲ್ಲಿ ದಾನಮಾಡಬೇಕು.

೧೮೫. ಧರ್ಮರಾಜನೆ! ಚಿನ್ನವನ್ನೂ, ಭೂಮಿಯನ್ನೂ, ಕನ್ಯೆಯನ್ನೂ, ನೇಗಿಲಿನೊಡಗೂಡಿದುವೂ, ಭಾರವನ್ನು ಹೊರುವಂತಹವೂ, ಸುಲಕ್ಷಣಗಳೂ ಆದ ಎತ್ತುಗಳ ಜೊತೆಯನ್ನೂ, ದ್ರೋಣಪರಿಮಾಣದಷ್ಟು ಧಾನ್ಯವನ್ನೂ ಕೊಡಬೇಕು.

೧೮೬. ಗೋದಾನವನ್ನು ಕೊಡುವವನು ಅಲಂಕೃತವೂ, ಕರುವುಳ್ಳದೂ, ಹಾಲುಕರೆಯುತ್ತಿರುವುದೂ, ಎಳೆಯದೂ, ಬಿಳುಪು, ಕೆಂಪು, ಕಪ್ಪು, ಹಳದಿ ಅಥವ ಕಂದು ಬಣ್ಣವುಳ್ಳದ್ದೂ ಆದ ಗೋವನ್ನು ಕೊಡಬೇಕು.

೧೮೭. ಬೆಳ್ಳಿಯ ತಗಡಿನಿಂದಲಂಕರಿಸಲ್ಪಟ್ಟ ಕಾಲ್ಗೊರಸುಗಳೂ, ಚಿನ್ನದ ಕಳಶಗಳುಳ್ಳ ಕೋಡುಗಳೂ, ಉಳ್ಳ ಆಕಳನ್ನು ಕರು ಮತ್ತು ಕಂಚಿನ ಪಾತ್ರೆಗಳೊಡನೆ ಬ್ರಾಹ್ಮಣನಿಗೆ ದಾನಮಾಡಬೇಕು.

೧೮೮. ದಾನಮಂತ್ರವು :—ಲೋಕನಾಯಕರಾದ ಈಶ್ವರ, ನಾರಾಯಣ, ಚತುರ್ಮುಖರು ನನ್ನಲ್ಲಿ ಪ್ರಸನ್ನರಾಗಲಿ. ಸಂಸಾರಪಾಲಕಳಾದ ಕಾಮಧೇನು ದೇವಿಯು ನನ್ನನ್ನುದ್ಧರಿಸಲಿ.

೧೮೯. ಪಾರ್ಥನೆ! ಪುತ್ರಾಭಿಲಾಷೆಯುಳ್ಳ ಸ್ತ್ರೀಯರು ಏರಂಡೀಸಂಗಮದಲ್ಲಿ ರುದ್ರಸೂಕ್ತಗಳಿಂದಾಗಲಿ, ನಾಲ್ಕು ವೇದಗಳ ಇತರ ಸೂಕ್ತಗಳಿಂದಾಗಲಿ ಸ್ನಾನವನ್ನು ಮಾಡಬೇಕು.

ಚತುರ್ಭಿರ್ಬ್ರಾಹ್ಮಣೈಃ ಶಸ್ತಂ ದ್ವಾಭ್ಯಾಂ ಯೋಗ್ಯೈಶ್ಚ ಕಾರಯೇತ್ ।
ಏಕೇನ ಸಾರ್ದ್ರಕುಂಭೇನ ದಾಂಪತ್ಯಮಭಿಷೇಚಯೇತ್ ॥ ೧೯೦ ॥
ದೈವಜ್ಞೇನೈವ ಚೈಕೇನ ಅಥವಾ ಸಾಮಗೇನ ವಾ ।
ಪಂಚರತ್ನಸಮಾಯುಕ್ತಂ ಕುಂಭೇ ತತ್ರೈವ ಕಾರಯೇತ್ ॥ ೧೯೧ ॥
ಗಂಧತೋಯಸಮಾಯುಕ್ತಂ ಸರ್ವೌಷಧಿವಿಮಿಶ್ರಿತಂ ॥ ೧೯೨ ॥
ಆಮ್ರಪಲ್ಲವಸಂಯುಕ್ತಮಶ್ವತ್ಥಮಧುಕಂ ತಥಾ ।
ಗುಂಠಿತಂ ಸಿತವಸ್ತ್ರೇಣ ಸಿತಚಂದನಚರ್ಚಿತಂ ॥ ೧೯೩ ॥
ಸಿತಪುಷ್ಪೈಸ್ತು ಸಂಛನ್ನಂ ಸಿದ್ಧಾರ್ಥಕೃತಮಧ್ಯಮಂ ।
ಕಾಂಸ್ಯಪಾತ್ರೇ ತು ಸಂಸ್ಥಾಪ್ಯ ಪುತ್ರಾರ್ಥೀ ದೇಶಿಕೋತ್ತಮಃ ॥ ೧೯೪ ॥
ಅಂಗಲಗ್ನಂ ತು ಯದ್ವಸ್ತ್ರಂ ಕಟಿಕಾಭರಣಂ ತಥಾ ।
ತತ್ಸರ್ವಂ ಮಂಡಲೇ ತ್ಯಾಜ್ಯಂ ಸಿದ್ಧ್ಯರ್ಥಂ ಚಾತ್ಮನಸ್ತದಾ ॥ ೧೯೫ ॥
ಪ್ರಣಮ್ಯ ಭಾಸ್ಕರಂ ಪಶ್ಚಾದಾಚಾರ್ಯಂ ರುದ್ರರೂಪಿಣಂ ।
ಮಧುರಂ ಚ ತತೋಽಶ್ನೀಯಾದ್ದೇವ್ಯಾ ಭುವನ ಉತ್ತಮೇ ॥ ೧೯೬ ॥

---

೧೯೦. ನಾಲ್ವರು ಬ್ರಾಹ್ಮಣರಿಂದಾಗಲಿ, ಯೋಗ್ಯರಾದ ಇಬ್ಬರಿಂದಾಗಲಿ ಸ್ವಸ್ತಿಕರ್ಮವನ್ನು ಮಾಡಬೇಕು. ನೀರು ತುಂಬಿದ ಒಂದೇ ಕುಂಭದಿಂದ ದಂಪತಿಗಳು ಸ್ನಾನವನ್ನು ಮಾಡಬೇಕು.

೧೯೧–೧೯೨. ಜ್ಯೋತಿಷ್ಕನೋ, ಸಾಮವೇದಿಯೊ ಆದರೂ ಅವರಿಗೆ ಸ್ನಾನ ಮಾಡಿಸಬಹುದು. ಕಳಶದಲ್ಲಿ ಪಂಚರತ್ನಗಳನ್ನು ಹಾಕಿರಬೇಕು. ಅದರಲ್ಲಿ ಜಲವು ಗಂಧದ್ರವ್ಯಗಳಿಂದಲೂ, ಸರ್ವೌಷಧಿಗಳ ರಸಗಳಿಂದಲೂ ಮಿಶ್ರಿತವಾಗಿರಬೇಕು.

೧೯೩. ಮಾವು, ಅಶ್ವತ್ಥ, ಅಶೋಕಗಳ ಚಿಗುರುಗಳಿಂದ ಕೂಡಿದ ಆ ಕಳಶವು ಬಿಳಿಯ ಚಂದನದಿಂದ ಲೇಪಿತವಾಗಿ ಬಿಳಿಯ ವಸ್ತ್ರದಿಂದ ಆಚ್ಛಾದಿತ ವಾಗಿರಬೇಕು.

೧೯೪. ಬಿಳಿಯ ಹೂಗಳಿಂದಲಂಕೃತವಾದ ಈ ಕಳಶವು ಬಿಳಿಯ ಸಾಸುವೆ ಯಿಂದ ತುಂಬಿರಬೇಕು. ಪುತ್ರಕಾಮನಾದ ಬ್ರಾಹ್ಮಣೋತ್ತಮನು ಇಂತಹ ಎರಡು ಕಂಚಿನ ಕಳಶಗಳನ್ನು ಸ್ಥಾಪಿಸಿ ಪೂಜಿಸಬೇಕು.

೧೯೫. ಬಳಿಕ ತನ್ನ ಕಾರ್ಯಸಿದ್ಧಿಗಾಗಿ ತಾನು ಧರಿಸಿರುವ ವಸ್ತ್ರವನ್ನೂ, ಕಡಗವೇ ಮೊದಲಾದ ಆಭರಣಗಳನ್ನೂ ಮಂಡಲದಲ್ಲಿ ಅರ್ಪಿಸಬೇಕು.

೧೯೬. ಮೊದಲು ಸೂರ್ಯದೇವನನ್ನೂ, ಆಮೇಲೆ ಪರಮೇಶ್ವರ ಸ್ವರೂಪ ನಾದ ಆಚಾರ್ಯನನ್ನೂ ನಮಸ್ಕರಿಸಿ ತನ್ನ ಉತ್ತಮ ಮಂದಿರದ ಪತ್ನಿಯೊಡನೆ ಸಿಹಿಪದಾರ್ಥಗಳನ್ನು ತಿನ್ನಬೇಕು.

ಫಲದಾನಂ ಚ ವಿಪ್ರಾಯ ಛತ್ರಂ ತಾಂಬೂಲಮೇವ ಚ ।
ಉಪಾನಹೌ ಚ ಯಾನಂ ಚ ಸ ಭವೇದ್ದುಃಖವರ್ಜಿತಃ ॥ ೧೯೭ ॥
ಭಾಸ್ಕರೇ ಕ್ರೀಡತೇ ಲೋಕೇ ಯಾವದಾಭೂತಸಂಪ್ಲವಂ ।
ದಾನಂ ಕೋಟಿಗುಣಂ ಸರ್ವಂ ಶುಭಂ ವಾ ಯದಿವಾಽಶುಭಂ ॥ ೧೯೮ ॥
ಯಥಾ ನದೀನದಾಃ ಸರ್ವೇ ಸಾಗರೇ ಯಾಂತಿ ಸಂಕ್ಷಯಂ ।
ಏವಂ ಪಾಪಾನಿ ನಶ್ಯಂತಿ ಹ್ಯೇರಂಡೀಸಂಗಮೇ ನೃಣಾಂ ॥ ೧೯೯ ॥
ಸಮಂತಾಚ್ಛಾಸ್ತ್ರಪಾತೇನ ಹ್ಯೇರಂಡೀಸಂಗಮೇ ನೃಪ ।
ಭ್ರೂಣಹತ್ಯಾಸಮಂ ಪಾಪಂ ನಶ್ಯತೇ ಶಂಕರೋಽಬ್ರವೀತ್ ॥ ೨೦೦ ॥
ಪ್ರಾಣತ್ಯಾಗಂ ಚ ಯೋ ಭಕ್ತ್ಯಾ ಜಾತವೇದಸಿ ಕಾರಯೇತ್ ।
ಅನಾಶಕಂ ನೃಪಶ್ರೇಷ್ಠ ಜಲೇ ವಾ ತದನಂತರಂ ॥ ೨೦೧ ॥
ಪಂಚಸಾಹಸ್ರಿಕಂ ಮಾನಂ ವರ್ಷಾಣಾಂ ಜಾತವೇದಸಿ ।
ಜಲೇ ತ್ರೀಣಿ ಸಹಸ್ರಾಣ್ಯನಾಶಕೇ ಷಷ್ಟಿ ಭುಂಜತೇ ॥ ೨೦೨ ॥

---

೧೯೭. ಆಚಾರ್ಯನಾದ ಬ್ರಾಹ್ಮಣನಿಗೆ ಫಲವನ್ನೂ, ಛತ್ರವನ್ನೂ, ತಾಂಬೂಲವನ್ನೂ, ಪಾದರಕ್ಷೆಗಳನ್ನೂ, ಯಾನಯಂತ್ರವನ್ನೂ ದಾನಮಾಡಿದವನು ದುಃಖರಹಿತನಾಗುವನು.

೧೯೮. ಆತನು ಭೂತಪ್ರಳಯವಾಗುವವರೆಗೂ ಸೂರ್ಯಲೋಕದಲ್ಲಿ ಕ್ರೀಡಿಸುತ್ತಿರುವನು. ಈ ತೀರ್ಥದಲ್ಲಿ ಮಾಡಿದ ದಾನವೂ ಪುಣ್ಯಪಾಪಗಳೂ ಕೋಟಿಗುಣಿತ ಫಲವನ್ನು ಕೊಡುವುವು.

೧೯೯. ಸಕಲ ನದೀನದಗಳೂ ಸಮುದ್ರವನ್ನು ಸೇರಿ ಹೇಗೆ ಅಡಗಿಹೋಗುವುವೊ ಹಾಗೆಯೇ ನರರು ಇತರ ಕಡೆಗಳಲ್ಲಿ ಮಾಡಿದ ಪಾತಕಗಳೆಲ್ಲವೂ ಏರಂಡೀಸಂಗಮದಲ್ಲಿ ಅಡಗಿಹೋಗುವುವು.

೨೦೦. ರಾಜೇಂದ್ರನೆ! ಏರಂಡೀಸಂಗಮದಲ್ಲಿ ನಿಂತು ಬಾಣವನ್ನು ಬಿಡಲು ಅದು ಹೋಗುವಷ್ಟು ದೂರ ಸುತ್ತಲೂ ಕ್ಷೇತ್ರವಾಗಿರುವುದು. ಈ ಕ್ಷೇತ್ರದಲ್ಲಿ ಭ್ರೂಣಹತ್ಯೆಗೆ ಸಮಾನವಾದ ಪಾಪವೂ ನಾಶವಾಗುವುದೆಂದು ಪರಮೇಶ್ವರನು ಹೇಳಿರುವನು.

೨೦೧. ಈ ಕ್ಷೇತ್ರದಲ್ಲಿ ಭಕ್ತಿಯಿಂದ ಬೆಂಕಿಯಲ್ಲಾಗಲಿ, ಉಪವಾಸದಿಂದಾಗಲಿ, ಜಲದಲ್ಲಿಯಾಗಲಿ ಪ್ರಾಣತ್ಯಾಗವನ್ನು ಮಾಡಬೇಕು.

೨೦೨. ಅಗ್ನಿಯಲ್ಲಿ ದೇಹತ್ಯಾಗವನ್ನು ಮಾಡಿದವನು ಐದು ಸಾವಿರ ವರ್ಷಗಳೂ, ಜಲದಲ್ಲಿ ಪ್ರಾಣವನ್ನು ಬಿಟ್ಟವನು ಮೂರು ಸಾವಿರ ವರ್ಷಗಳೂ, ಉಪವಾಸನಿರತನು ಅರುವತ್ತು ಸಾವಿರ ವರ್ಷಗಳೂ ಸ್ವರ್ಗಲೋಕದ ಭೋಗಗಳನ್ನನುಭವಿಸುವರು.

ಕಾಕಾ ಬಕಾಃ ಕಪೋತಾಶ್ಚ ಹ್ಯುಲೂಕಾಃ ಪಶವಸ್ತಥಾ ।
ಸಂಗಮೋದಕಸಂಸ್ಪೃಷ್ಟಾಸ್ತೇ ಯಾಂತಿ ಪರಮಾಂ ಗತಿಂ ।
ವೃಕ್ಷಾಶ್ಚ ತತ್ಪದಂ ಜ್ಞಾತ್ವಾ ಯಾಂ ಗತಿಂ ಯಾಂತಿ ಯೋಗಿನಃ ॥ ೨೦೩ ॥
ಏರಂಡಿಕಾ ಮಯಾ ದೇವೀ ದೃಷ್ಟೋ ಮೇ ಮನ್ಮಥೇಶ್ವರಃ ।
ಕಿಂ ಸಮರ್ಥೋ ಯಮೋ ರುಷ್ಟೋ ಭದ್ರೋ ಭದ್ರಾಣಿ ಪಶ್ಯತಿ ॥ ೨೦೪ ॥
ಮೃತ್ತಿಕಾಂ ಸಂಗಮೋದ್ಭೂತಾಂ ಯೇ ಚ ಗುಂಠಂತಿ ನಿತ್ಯಶಃ ।
ಭ್ರೂಣಹತ್ಯಾದಿ ಪಾಪಾನಿ ನಶ್ಯಂತೇ ನಾಽತ್ರ ಸಂಶಯಃ ॥ ೨೦೫ ॥
ಏರಂಡೀಸಂಗಮೇ ಮರ್ತ್ಯೋ ಲುಂಠ್ಯಮಾನೋ ನರಾಧಿಪ ।
ಸರ್ವಪಾಪೈರ್ವಿನಿರ್ಮುಕ್ತಃ ಪದಂ ಗಚ್ಛತ್ಯನಾಮಯಂ ॥ ೨೦೬ ॥
ಏರಂಡ್ಯಾಃ ಸಂಗಮಂ ಮರ್ತ್ಯಾಃ ಕೀರ್ತಯಂತ್ಯಾಶ್ರಮಸ್ಥಿತಾಃ ।
ವಿಮುಕ್ತಪಾಪಾ ಜಾಯಂತೇ ಸತ್ಯಂ ಶಂಕರಭಾಷಿತಂ ॥ ೨೦೭ ॥
ಏರಂಡೀಪಾದಪಾಽಗ್ರೈಸ್ತು ದೃಷ್ಟೈಃ ಪಾಪಂ ವ್ಯಪೋಹತಿ ॥ ೨೦೮ ॥

---

೨೦೩. ತತ್ತ್ವಜ್ಞಾನಿಗಳಾದ ಯೋಗಿಗಳು ಯಾವ ಸದ್ಗತಿಯನ್ನು ಹೊಂದುವರೊ, ಅದನ್ನೇ ಏರಂಡೀಸಂಗಮದ ನೀರಿನ ಸ್ಪರ್ಶವುಳ್ಳ ಕಾಗೆಗಳೂ, ಬಕಗಳೂ, ಪಾರಿವಾಳಗಳೂ, ಗೂಗೆಗಳೂ, ಪಶುಗಳೂ, ವೃಕ್ಷಗಳೂ ಖಂಡಿತವಾಗಿಯೂ ಪಡೆಯುವುವು.

೨೦೪. ಏರಂಡಿದೇವಿಯನ್ನೂ, ಮನ್ಮಥೇಶ್ವರನನ್ನೂ ನಾನು ನೋಡಿರುವೆನು. ಯಮನು ಕುಪಿತನಾದರೂ ನನ್ನನ್ನು ಏನು ಮಾಡಿಯಾನು? ಸತ್ಕರ್ಮನಿರತನಾದವನು ಮಂಗಳಗಳನ್ನೇ ಪಡೆಯುವನಷ್ಟೆ.

೨೦೫. ಯಾರು ಏರಂಡೀಸಂಗಮದ ಮೃತ್ತಿಕೆಯನ್ನು ನಿತ್ಯದಲ್ಲಿಯೂ ಧರಿಸುತ್ತಿರುವರೊ, ಅವರಿಗೆ ಭ್ರೂಣಹತ್ಯಾದಿ ಮಹಾ ಪಾತಕಗಳೂ ನಾಶವಾಗುವುವು.

೨೦೬. ಚಕ್ರವರ್ತಿಯೆ! ಏರಂಡೀಸಂಗಮದಲ್ಲಿಯೇ ಓಡಾಡುತ್ತಲಿರುವ ಮಾನವನು ಸಮಸ್ತ ಪಾಪಗಳಿಂದ ಮುಕ್ತನಾಗಿ ಶಾಶ್ವತವಾದ ಪುಣ್ಯಲೋಕವನ್ನು ಹೊಂದುವನು.

೨೦೭. ತಮ್ಮ ತಮ್ಮ ಆಶ್ರಮಗಳಲ್ಲಿಯೇ ಇದ್ದರೂ ಯಾರು ಏರಂಡೀ ತೀರ್ಥದ ಪ್ರಶಂಸೆಯನ್ನು ಮಾಡುತ್ತಿರುವರೊ, ಅವರೆಲ್ಲರೂ ಪಾತಕರಹಿತರಾಗುವರೆಂದು ಶಂಕರನು ಪ್ರತಿಜ್ಞೆಮಾಡಿರುವನು.

೨೦೮. ಏರಂಡೀಪ್ರದೇಶದ ಮರಗಳ ತುದಿಗಳನ್ನು ನೋಡಿದ ಮಾತ್ರದಿಂದಲೇ ಪಾಪಗಳು ಕಳೆಯುವುವು.

ತೀರ್ಥಾಖ್ಯಾನಮಿದಂ ಪುಣ್ಯಂ ಯೇ ಪಠಿಷ್ಯಂತಿ ಮಾನವಾಃ ।
ಶೃಣ್ವಂತಿ ಚಾಪರೇ ಭಕ್ತ್ಯಾ ಮುಕ್ತಪಾಪಾ ಭವಂತಿ ತೇ ॥ ೨೦೯ ॥
ಏತತ್ತೇ ಸರ್ವಮಾಖ್ಯಾತಮೇರಂಡೀಸಂಗಮಂ ನೃಪ ।
ಭೂಯಶ್ಚಾಽನ್ಯತ್ಪ್ರವಕ್ಷ್ಯಾಮಿ ಸರ್ವಪಾಪಕ್ಷಯಂಕರಂ ॥ ೨೧೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ಏರಂಡೀಸಂಗಮತೀರ್ಥಮಾಹಾತ್ಮ್ಯವರ್ಣನಂ"
ನಾಮ ತ್ರ್ಯಧಿಕಶತತಮೋಽಧ್ಯಾಯಃ

---

೨೦೯. ಏರಂಡೀತೀರ್ಥದ ಈ ಮಹದಾಖ್ಯಾನವನ್ನು ಯಾವ ಮನುಜರು ಕೀರ್ತನಮಾಡುವರೊ, ಯಾರು ಭಕ್ತಿಯಿಂದ ಕೇಳುವರೊ, ಅವರೂ ಮುಕ್ತಪಾಪರಾಗಿರುವರು.

೨೧೦. ಧರ್ಮರಾಜನೆ! ಇಂತು ನಿನಗೆ ಏರಂಡೀಸಂಗಮಕ್ಷೇತ್ರದ ಚರಿತ್ರೆಯನ್ನು ಆಮೂಲಾಗ್ರವಾಗಿ ತಿಳಿಸಿದೆನು. ಈಗ ಸರ್ವಪಾಪನಾಶಕವಾದ ಮತ್ತೊಂದು ಕ್ಷೇತ್ರದ ಕಥೆಯನ್ನು ಹೇಳುವೆನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಏರಂಡೀಸಂಗಮತೀರ್ಥಮಾಹಾತ್ಮ್ಯವರ್ಣನ"ವೆಂಬ
ನೂರಮೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಚತುರಧಿಕಶತತಮೋಽಧ್ಯಾಯಃ

### ಸುವರ್ಣಶಿಲಾತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ತತೋ ಗಚ್ಛೇನ್ಮಹೀಪಾಲ ಸೌವರ್ಣಶಿಲಮುತ್ತಮಂ ।
ಪ್ರಖ್ಯಾತಮುತ್ತರೇ ಕೂಲೇ ಸರ್ವಪಾಪಕ್ಷಯಂಕರಂ ॥ ೧ ॥
ಸಮಂತಾಚ್ಛತಪಾತೇನ ಮುನಿಸಂಘೈಃ ಪುರಾ ಕೃತಂ ।
ರೇವಾಯಾಂ ದುರ್ಲಭಂ ಸ್ಥಾನಂ ಸಂಗಮಸ್ಯ ಸಮೀಪತಃ ॥ ೨ ॥
ವಿಭಕ್ತಂ ಹಸ್ತಮಾತ್ರಂ ಚ ಪುಣ್ಯಕ್ಷೇತ್ರಂ ನರಾಧಿಪ ।
ಸುವರ್ಣಶಿಲಕೇ ಸ್ನಾತ್ವಾ ಪೂಜಯಿತ್ವಾ ಮಹೇಶ್ವರಂ ॥ ೩ ॥
ನತ್ವಾ ತು ಭಾಸ್ಕರಂ ದೇವಂ ಹೋತವ್ಯಂ ಚ ಹುತಾಶನೇ ।
ಬಿಲ್ವೇನಾಜ್ಯವಿಮಿಶ್ರೇಣ ಬಿಲ್ವಪತ್ರೈರಥಾಽಪಿ ವಾ ॥ ೪ ॥
ಪ್ರೀಯತಾಂ ಮೇ ಜಗನ್ನಾಥೋ ವ್ಯಾಧಿರ್ನಶ್ಯತು ಮೇ ಧ್ರುವಂ ।
ದ್ವಿಜಾಯ ಕಾಂಚನೇ ದತ್ತೇ ಯತ್ಫಲಂ ತಚ್ಛೃಣುಷ್ವ ಮೇ ॥ ೫ ॥

---

### ಕನ್ನಡದ ಅನುವಾದ

#### ಸುವರ್ಣಶಿಲಾತೀರ್ಥಮಾಹಾತ್ಮ್ಯವರ್ಣನ

೧. ಮಾರ್ಕಂಡೇಯನು ಹೇಳುತ್ತಾನೆ:—ರಾಜೇಂದ್ರನೆ! ಬಳಿಕ ರೇವಾನದಿಯ ಉತ್ತರ ತೀರದಲ್ಲಿರುವ ಉತ್ತಮವೂ, ಪ್ರಸಿದ್ಧವೂ, ಸಕಲ ಪಾಪಪರಿಹಾರಕವೂ ಆದ ಸುವರ್ಣಶಿಲೆಯನ್ನು ಸೇರಬೇಕು.

೨. ರೇವಾನದಿಯ ತೀರದಲ್ಲಿ ಒಂದುನೂರು ಹೆಜ್ಜೆಗಳ ವಿಸ್ತಾರವುಳ್ಳ ಸಂಗಮದ ಸಮೀಪದಲ್ಲಿರುವ ಈ ತೀರ್ಥವು ಹಿಂದೆ ಮಹಾಮುನಿಗಳಿಂದ ನಿರ್ಮಿತವಾಗಿ ಅತ್ಯಂತದುರ್ಲಭವೆನಿಸಿರುವುದು.

೩. ಚಕ್ರವರ್ತಿಯೆ! ಇದರಲ್ಲಿಯೂ ಒಂದುಬಾರು ಪ್ರದೇಶವು ಪ್ರತ್ಯೇಕವಾಗಿ ಪುಣ್ಯಕ್ಷೇತ್ರವೆನಿಸಿರುವುದು. ಈ ಸುವರ್ಣಶಿಲೆಯಲ್ಲಿ ಸ್ನಾನವನ್ನು ಮಾಡಿ ಮಹೇಶ್ವರನನ್ನು ಪೂಜಿಸಬೇಕು.

೪. ಬಳಿಕ ಸೂರ್ಯದೇವನಿಗೆ ನಮಸ್ಕರಿಸಿ ಅಗ್ನಿಯಲ್ಲಿ ತುಪ್ಪವನ್ನು ಬೆರಸಿದ ಬಿಲ್ವಫಲದಿಂದಾಗಲಿ, ಬಿಲ್ವದಳಗಳಿಂದಾಗಲಿ ಹೋಮವನ್ನು ಮಾಡಬೇಕು.

೫. "ಲೋಕನಾಥನಾದ ಮಹೇಶ್ವರನು ನನ್ನಲ್ಲಿ ಪ್ರೀತನಾಗಲಿ; ನನ್ನ ವ್ಯಾಧಿಯು ಕೊನೆಗಾಣಲಿ" ಎಂದು ಪ್ರಾರ್ಥಿಸಿಕೊಳ್ಳಬೇಕು. ಇಲ್ಲಿ ಬ್ರಾಹ್ಮಣನಿಗೆ ಸುವರ್ಣದಾನವನ್ನು ಮಾಡಿದ್ದಕ್ಕೆ ಫಲವನ್ನು ಹೇಳುವೆನು, ಕೇಳು.

ಬಹುಸ್ವರ್ಣಸ್ಯ ಯತ್ಪ್ರೋಕ್ತಂ ಯಾಗಸ್ಯ ಫಲಮುತ್ತಮಂ ।
ತಥಾಽಸೌ ಲಭತೇ ಸರ್ವಂ ಕಾಂಚನಂ ಯಃ ಪ್ರಯಚ್ಛತಿ ॥ ೬ ॥
ತೇನ ದಾನೇನ ಪೂತಾತ್ಮಾ ಮೃತಃ ಸ್ವರ್ಗಮವಾಪ್ನುಯಾತ್ ।
ರುದ್ರಸ್ಯಾನುಚರಸ್ತಾವದ್ಯಾವದಿಂದ್ರಾಶ್ಚತುರ್ದಶ ॥ ೭ ॥
ತತಃ ಸ್ವರ್ಗಾದವತೀರ್ಣಸ್ತು ಜಾಯತೇ ವಿಶದೇ ಕುಲೇ ।
ಧನಧಾನ್ಯಸಮೋಪೇತಃ ಪುನಃ ಸ್ಮರತಿ ತಜ್ಜಲಂ ॥ ೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಅವಂತ್ಯಖಂಡೇ ತೃತೀಯೇ ರೇವಾಖಂಡೇ
"ಸುವರ್ಣಶಿಲಾತೀರ್ಥಮಾಹಾತ್ಮ್ಯವರ್ಣನಂ"
ನಾಮ ಚತುರಧಿಕಶತತಮೋಽಧ್ಯಾಯಃ

---

೬. ಅಲ್ಪಕಾಂಚನವನ್ನು ದಾನಮಾಡಿದವನೂ ಶಾಸ್ತ್ರೋಕ್ತ ಪ್ರಕಾರವಾಗಿಯೇ ಬಹುಸ್ವರ್ಣದ ಸರ್ವವೇದಸ ದಾನದ ಮತ್ತು ಯಾಗದ ಉತ್ತಮ ಫಲವನ್ನು ಆತನೂ ಪಡೆಯುವನು.

೭. ಆ ದಾನದಿಂದ ಪರಿಶುದ್ಧನಾದವನು ಮೃತನಾಗಲು ಸ್ವರ್ಗಲೋಕಕ್ಕೆ ಹೋಗುವನು. ಮತ್ತು ಹದಿನಾಲ್ಕು ಇಂದ್ರರು ಆಳುತ್ತಿರುವರೆಗೂ ಇಂದ್ರನಿಗೆ ಏಕಾಂತ ಸೇವಕನಾಗಿರುವನು.

೮. ಬಳಿಕ ಸ್ವರ್ಗದಿಂದ ಭೂಮಿಯಲ್ಲಿ ಅವತರಿಸಿದರೂ ಉತ್ತಮವಾದ ಕುಲದಲ್ಲಿ ಹುಟ್ಟಿ ಧನಧಾನ್ಯಾದಿ ಸಕಲ ಭೋಗಗಳಿಂದ ಕೂಡಿ ಪುನಃ ಆ ತೀರ್ಥವನ್ನೇ ಸ್ಮರಿಸುತ್ತಿರುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಅವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಸುವರ್ಣಶಿಲಾತೀರ್ಥಮಾಹಾತ್ಮ್ಯವರ್ಣನ"ವೆಂಬ
ನೂರನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಪಂಚಾಽಧಿಕಶತತಮೋಽಧ್ಯಾಯಃ

### ಕರಂಜತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ಕರಂಜಾಖ್ಯಂ ತತೋ ಗಚ್ಛೇತ್ತೋಽಪವಾಸೋ ಜಿತೇಂದ್ರಿಯಃ ।
ತತ್ರ ಸ್ನಾತ್ವಾ ತು ರಾಜೇಂದ್ರ ಸರ್ವಪಾಪೈಃ ಪ್ರಮುಚ್ಯತೇ ॥ ೧ ॥
ಅರ್ಚಯಿತ್ವಾ ಮಹಾದೇವಂ ದತ್ವಾ ದಾನಂ ತು ಭಕ್ತಿತಃ ।
ಸುವರ್ಣಂ ರಜತಂ ವಾಽಪಿ ಮಣಿಮೌಕ್ತಿಕವಿದ್ರುಮಾನ್ ॥ ೨ ॥
ಪಾದುಕೋಪಾನಹೌ ಛತ್ರಂ ಶಯ್ಯಾಂ ಪ್ರಾವರಣಾನಿ ಚ ।
ಕೋಟಿಕೋಟಿಗುಣಂ ಸರ್ವಂ ಜಾಯತೇ ನಾಽತ್ರ ಸಂಶಯಃ ॥ ೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ಕರಂಜತೀರ್ಥಮಾಹಾತ್ಮ್ಯವರ್ಣನಂ"
ನಾಮ ಪಂಚಾಽಧಿಕಶತತಮೋಽಧ್ಯಾಯಃ

---

### ಕನ್ನಡದ ಅನುವಾದ

#### ಕರಂಜತೀರ್ಥಮಾಹಾತ್ಮ್ಯವರ್ಣನ

೧. ಮಾರ್ಕಂಡೇಯನು ಹೇಳುತ್ತಾನೆ :—ಧರ್ಮರಾಜನೆ! ಬಳಿಕ ಉಪವಾಸದಿಂದ ಜಿತೇಂದ್ರಿಯನಾಗಿ ಕರಂಜವೆಂಬ ತೀರ್ಥಕ್ಕೆ ಹೋಗಿ ಅಲ್ಲಿ ಸ್ನಾನವನ್ನು ಮಾಡಲು ಸಮಸ್ತ ಪಾಪಗಳನ್ನೂ ಕಳೆದುಕೊಳ್ಳುವನು.

೨. ಅಲ್ಲಿರುವ ಮಹಾದೇವನನ್ನು ಪೂಜಿಸಿ ಭಕ್ತಿಯಿಂದ ಚಿನ್ನ, ಬೆಳ್ಳಿ, ರತ್ನ, ಮುತ್ತು, ಹವಳ ಮುಂತಾದುವುಗಳನ್ನು ದಾನಮಾಡಬೇಕು.

೩. ಪಾದುಕೆಗಳು, ಪಾದರಕ್ಷೆಗಳು, ಛತ್ರಿ, ಹಾಸಿಗೆ, ವಸ್ತ್ರಗಳು ಮುಂತಾದ ಎಲ್ಲ ದಾನಗಳೂ ಕೋಟಿ ಕೋಟಿ ಗುಣಿತವಾದ ಫಲಗಳನ್ನು ಕೊಡುವುವು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಕರಂಜತೀರ್ಥಮಾಹಾತ್ಮ್ಯವರ್ಣನ"ವೆಂಬ
ನೂರೈದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಷಡುತ್ತರಶತತಮೋಽಧ್ಯಾಯಃ

## ಕಾಮದತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ತತೋ ಗಚ್ಛೇನ್ಮಹೀಪಾಲ ತೀರ್ಥಂ ಪರಮಶೋಭನಂ ।
ಸೌಭಾಗ್ಯಕರಣಂ ದಿವ್ಯಂ ನರನಾರೀಮನೋರಮಂ ॥ ೧ ॥
ತತ್ರ ಯಾ ದುರ್ಭಗಾ ನಾರೀ ನರೋ ವಾ ನೃಪಸತ್ತಮ ।
ಸ್ನಾತ್ವಾಽರ್ಚಯೇದುಮಾರುದ್ರೌ ಸೌಭಾಗ್ಯಂ ತಸ್ಯ ಜಾಯತೇ ॥ ೨ ॥
ತೃತೀಯಾಯಾಮಹೋರಾತ್ರಂ ಸೋಪವಾಸೋ ಜಿತೇಂದ್ರಿಯಃ ।
ನಿಮಂತ್ರಯೇದ್ದ್ವಿಜಂ ಭಕ್ತ್ಯಾ ಸಪತ್ನೀಕಂ ಸುರೂಪಿಣಂ ॥ ೩ ॥
ಗಂಧಮಾಲ್ಯೈರಲಂಕೃತ್ಯ ವಸ್ತ್ರಧೂಪಾದಿವಾಸಿತಂ ।
ಭೋಜಯೇತ್ಪಾಯಸಾನ್ನೇನ ಕೃಸರೇಣಾಽಥ ಭಕ್ತಿತಃ ॥ ೪ ॥
ಭೋಜಯಿತ್ವಾ ಯಥಾನ್ಯಾಯಂ ಪ್ರದಕ್ಷಿಣಮುದಾಹರೇತ್ ।
ಪ್ರೀಯತಾಂ ಮೇ ಮಹಾದೇವಃ ಸಪತ್ನೀಕೋ ವೃಷಧ್ವಜಃ ॥ ೫ ॥

---

## ಕನ್ನಡದ ಅನುವಾದ

### ಕಾಮದತೀರ್ಥಮಾಹಾತ್ಮ್ಯವರ್ಣನ

೧. ಮಾರ್ಕಂಡೇಯನು ಹೇಳುತ್ತಾನೆ :—ಮಹೀಪಾಲಕನೆ! ಬಳಿಕ ಪರಮಪವಿತ್ರವೂ, ಸೌಭಾಗ್ಯಕಾರಕವೂ, ದೇವನಿವಾಸವೂ, ಸ್ತ್ರೀಪುರುಷರಿಗೆ ಮನೋಹರವೂ ಆದ ಒಂದು ತೀರ್ಥವಿರುವುದು.

೨. ರಾಜಶೇಖರನೆ! ಸ್ತ್ರೀಯಾಗಲಿ, ಪುರುಷನಾಗಲಿ ದಾರಿದ್ರ್ಯವಂತರಾಗಲಿ, ಆ ತೀರ್ಥದಲ್ಲಿ ಸ್ನಾನವನ್ನು ಮಾಡಿ ಉಮಾಮಹೇಶ್ವರರನ್ನು ಪೂಜಿಸಲು ಸಕಲ ಸೌಭಾಗ್ಯಗಳನ್ನು ಪಡೆಯುವರು.

೩. ತದಿಗೆಯ ದಿವಸ ಭಕ್ತಿಯುಕ್ತನಾದ ಮಾನವನು ಅಹೋರಾತ್ರಿಗಳಲ್ಲಿ ಜಿತೇಂದ್ರಿಯನಾಗಿ ಉಪವಾಸವನ್ನಾಚರಿಸಿ ಸಪತ್ನೀಕನೂ ಸುಂದರನೂ ಆದ ಬ್ರಾಹ್ಮಣನಿಗೆ ನಿಮಂತ್ರಣವನ್ನು ಕೊಡಬೇಕು.

೪. ಗಂಧಮಾಲ್ಯಾದಿಗಳಿಂದಲಂಕರಿಸಿ, ವಸ್ತ್ರಧೂಪಾದಿಗಳನ್ನರ್ಪಿಸಿ, ಉಚಿತಾಸನದಲ್ಲಿ ಕುಳ್ಳಿರಿಸಿ ಭಕ್ತಿಯಿಂದ ಪಾಯಸಾನ್ನಗಳಿಂದಲೂ, ಬೇಳೆಯನ್ನಗಳಿಂದಲೂ ಭೋಜನ ಮಾಡಿಸಬೇಕು.

೫. ಶಕ್ತ್ಯನುಸಾರವಾಗಿ ಭೋಜನವನ್ನು ಮಾಡಿಸಿ ಬಳಿಕ ಆ ದಂಪತಿಗಳಿಗೆ ಪ್ರದಕ್ಷಿಣೆಯನ್ನುಮಾಡಿ "ಪತ್ನೀಸಮೇತನೂ, ವೃಷಭವಾಹನನೂ ಆದ ಮಹಾದೇವನು ನನ್ನಲ್ಲಿ ಪ್ರೀತಿಗೊಳ್ಳಲಿ" ಎಂದು ಪ್ರಾರ್ಥಿಸಬೇಕು.

ಯಥಾ ತೇ ದೇವದೇವೇಶ ನ ವಿಯೋಗಃ ಕದಾಚನ ।
ಮಮಾಽಪಿ ಕರುಣಾಂ ಕೃತ್ವಾ ತಥಾಽಸ್ತ್ವಿತಿ ವಿಚಿಂತಯೇತ್ ॥ ೬ ॥
ಏವಂ ಕೃತೇ ತತಸ್ತಸ್ಯ ಯತ್ಪುಣ್ಯಂ ಸಮುದಾಹೃತಂ ।
ತತ್ತೇ ಸರ್ವಂ ಪ್ರವಕ್ಷ್ಯಾಮಿ ಯಥಾ ದೇವೇನ ಭಾಷಿತಂ ॥ ೭ ॥
ದೌರ್ಭಾಗ್ಯಂ ದುರ್ಗತಿಶ್ಚೈವ ದಾರಿದ್ರ್ಯಂ ಶೋಕಬಂಧನಂ ।
ವಂಧ್ಯತ್ವಂ ಸಪ್ತಜನ್ಮಾನಿ ಜಾಯತೇ ನ ಯುಧಿಷ್ಠಿರ ॥ ೮ ॥
ಜ್ಯೇಷ್ಠಮಾಸೇ ಸಿತೇ ಪಕ್ಷೇ ತೃತೀಯಾಯಾಂ ವಿಶೇಷತಃ ।
ತತ್ರ ಗತ್ವಾ ತು ಯೋ ಭಕ್ತ್ಯಾ ಪಂಚಾಽಗ್ನಿಂ ಸಾಧಯೇತ್ತತಃ ॥ ೯ ॥
ಸೋಽಪಿ ಪಾಪೈರಶೇಷೈಸ್ತು ಮುಚ್ಯತೇ ನಾಽತ್ರ ಸಂಶಯಃ ।
ಗುಗ್ಗುಲಂ ದಹತೇ ಯಸ್ತು ದ್ವಿಧಾಚಿತ್ತವಿವರ್ಜಿತಃ ॥ ೧೦ ॥
ಶರೀರಂ ಭೇದಯೇದ್ಯಸ್ತು ಗೌರ್ಯಾಶ್ಚೈವ ಸಮೀಪತಃ ।
ತಸ್ಮಿನ್ಕರ್ಮಪ್ರವಿಷ್ಟಸ್ಯ ಉತ್ಕ್ರಾಂತಿರ್ಜಾಯತೇ ಯದಿ ।
ದೇಹಪಾತೇ ವ್ರಜೇತ್ಸ್ವರ್ಗಮಿತ್ಯೇವಂ ಶಂಕರೋಽಬ್ರವೀತ್ ॥ ೧೧ ॥
ಸಿತರಕ್ತೈಸ್ತಥಾ ಪೀತೈರ್ವಸ್ತ್ರೈಶ್ಚ ವಿವಿಧೈಃ ಶುಭೈಃ ।
ಬ್ರಾಹ್ಮಣೀಂ ಬ್ರಾಹ್ಮಣಂ ಚೈವ ಪೂಜಯಿತ್ವಾ ಯಥಾವಿಧಿ ॥ ೧೨ ॥

---

೬. "ಎಲೈ ಮಹಾದೇವನೆ! ಹೇಗೆ ನಿನಗೆಂದಿಗೂ ಬೇರೊಬ್ಬರ ಅನುಸರಣೆಯೆಂಬುದಿಲ್ಲವೊ, ಹಾಗೆಯೇ ನನಗೂ ಬೇರೊಬ್ಬರ ಅಡ್ಡಿ ಆತಂಕಗಳಿಲ್ಲದಂತೆ ಕರುಣಿಸು" ಎಂದು ಮನಸ್ಸಿನಲ್ಲಿ ಚಿಂತಿಸಬೇಕು.

೭. ಹೀಗೆ ಮಾಡಿದ ಮನುಜನಿಗೆ ಯಾವ ಪುಣ್ಯಫಲವು ಶಾಸ್ತ್ರೋಕ್ತವಾಗಿದೆಯೊ, ಅದನ್ನೆಲ್ಲ ಹೇಳುವೆನು. ಕೇಳು ಇದನ್ನು ಮಹೇಶ್ವರನೇ ನಿರೂಪಿಸಿರುವನು.

೮. ಅವನಿಗೆ ದೌರ್ಭಾಗ್ಯ, ದುರ್ಗತಿ, ದಾರಿದ್ರ್ಯ, ದುಃಖ, ನಿಗ್ರಹ, ಸಂತಾನಹೀನತೆ ಇವು ಏಳು ಜನ್ಮಗಳಲ್ಲಿಯೂ ಸಂಭವಿಸುವುದಿಲ್ಲ.

೯. ವಿಶೇಷವಾಗಿ ಜ್ಯೇಷ್ಠಮಾಸದ ಶುಕ್ಲಪಕ್ಷದ ತದಿಗೆಯ ದಿವಸದಲ್ಲಿ ಅಲ್ಲಿ ಹೋಗಿ ಭಕ್ತಿಯಿಂದ ಪಂಚಾಗ್ನಿತಪಸ್ಸನ್ನು ಸಾಧಿಸಬೇಕು. ಅವನು ಸಮಸ್ತ ಪಾತಕಗಳಿಂದಲೂ ಮುಕ್ತನಾಗುವುದರಲ್ಲಿ ಸಂದೇಹವಿಲ್ಲ.

೧೦–೧೧. ಚಿತ್ತಚಾಂಚಲ್ಯವರ್ಜಿತನಾಗಿ ಯಾವನು ಗುಗ್ಗುಲದ ಧೂಪವನ್ನು ಹಾಕುವನೊ, ಗೌರಿದೇವಿಯ ಸಮೀಪದಲ್ಲಿ ಯಾವನು ದೇಹವನ್ನು ಛೇದಿಸಿಕೊಳ್ಳುವನೊ, ಈ ಕರ್ಮಗಳಲ್ಲಿ ಉದ್ಯುಕ್ತನಾಗುವಾಗ ಮರಣವೇ ಸಂಭವಿಸಿದರೂ ಆತನು ಸ್ವರ್ಗಲೋಕಕ್ಕೆ ಹೋಗುವನೆಂದು ಶಂಕರನೇ ಹೇಳಿರುವನು.

೧೨–೧೩. ಅಲ್ಲಿ ಬಿಳುಪು, ಕೆಂಪು, ಹಳದಿ ಮುಂತಾದ ಅನೇಕ ವರ್ಣಗಳ

ಪುಷ್ಪೈರ್ನಾನಾವಿಧೈಶ್ಚೈವ ಗಂಧಧೂಪೈಃ ಸುಶೋಭನೈಃ ।
ಕಂಠಸೂತ್ರಕಸಿಂದೂರೈಃ ಕುಂಕುಮೇನ ವಿಲೇಪಯೇತ್ ॥ ೧೩ ॥
ಕಲ್ಪಯೇತ ಸ್ತ್ರಿಯಂ ಗೌರೀಂ ಬ್ರಾಹ್ಮಣಂ ಶಿವರೂಪಿಣಂ ।
ತೇಷಾಂ ತದ್ರೂಪಕಂ ಕೃತ್ವಾ ದಾನಮುತ್ಸೃಜ್ಯತೇ ತತಃ ॥ ೧೪ ॥
ಕಂಕಣಂ ಕರ್ಣವೇಷ್ಟಂ ಚ ಕಂಠಿಕಾಂ ಮುದ್ರಿಕಾಂ ತಥಾ ।
ಸಪ್ತಧಾನ್ಯಂ ತಥಾ ಚೈವ ಭೋಜನಂ ನೃಪಸತ್ತಮ ॥ ೧೫ ॥
ಅನ್ಯಾನ್ಯಪಿ ಚ ದಾನಾನಿ ತಸ್ಮಿಂಸ್ತೀರ್ಥೇ ದದಾತಿ ಯಃ ।
ಸರ್ವದಾನೈಶ್ಚ ಯತ್ಪುಣ್ಯಂ ಪ್ರಾಪ್ನುಯಾನ್ನಾಽತ್ರ ಸಂಶಯಃ ॥ ೧೬ ॥
ಸಹಸ್ರಗುಣಿತಂ ಸರ್ವಂ ನಾಽತ್ರ ಕಾರ್ಯಾ ವಿಚಾರಣಾ ॥ ೧೭ ॥
ಶಂಕರೇಣ ಸಮಂ ತಸ್ಮಾದ್ಭೋಗಂ ಭುಂಕ್ತೇ ಹ್ಯನುತ್ತಮಂ ।
ಸೌಭಾಗ್ಯಂ ತಸ್ಯ ವಿಪುಲಂ ಜಾಯತೇ ನಾಽತ್ರ ಸಂಶಯಃ ॥ ೧೮ ॥

---

ಪವಿತ್ರವಸ್ತ್ರಗಳಿಂದ ಬ್ರಾಹ್ಮಣನನ್ನೂ ಬ್ರಾಹ್ಮಣ ಪತ್ನಿಯನ್ನೂ ಯಥಾವಿಧಿಯಾಗಿ ಪೂಜಿಸಬೇಕು ನಾನಾವಿಧಗಳಾದ ಪುಷ್ಪಗಳಿಂದಲೂ, ಮಂಗಳಕರಗಳಾದ ಗಂಧಗಳಿಂದಲೂ, ಧೂಪಗಳಿಂದಲೂ, ಕಂಠಾಭರಣಗಳಿಂದಲೂ, ಸಿಂಧೂರ ದ್ರವ್ಯಗಳಿಂದಲೂ ಪೂಜಿಸಿ ಕುಂಕುಮವನ್ನು ಲೇಪಿಸಬೇಕು.

೧೪. ವಿಪ್ರಪತ್ನಿಯನ್ನೇ ಪಾರ್ವತಿಯೆಂದೂ, ಬ್ರಾಹ್ಮಣನನ್ನು ಪರಮೇಶ್ವರನೆಂದೂ ಭಾವಿಸಬೇಕು. ಉಮಾಮಹೇಶ್ವರ ರೂಪರಾದ ಆ ದಂಪತಿಗಳಿಗೇ ದಾನಗಳನ್ನು ಕೊಡಬೇಕು.

೧೫. ಮಹಾರಾಜನೆ! ಕೈ ಕಡಗಗಳು, ಕಿವಿಯೋಲೆಗಳು, ಕಂಠಾಭರಣಗಳು, ಉಂಗುರಗಳು, ಸಪ್ತಧಾನ್ಯಗಳು ಭೋಜನ ಮುಂತಾದುವುಗಳಿಂದ ಅವರನ್ನು ತೃಪ್ತಿಗೊಳಿಸಬೇಕು.

೧೬. ಈ ತೀರ್ಥದಲ್ಲಿ ಯಾವನು ಇತರ ದಾನಗಳನ್ನು ಮಾಡುವನೊ, ಅವನು ಸಮಸ್ತ ದಾನಗಳನ್ನೂ ಮಾಡಿದ ಪುಣ್ಯಕ್ಕೆ ಭಾಗಿಯಾಗುವುದರಲ್ಲಿ ಸಂಶಯವಿಲ್ಲ.

೧೭. ಇಲ್ಲಿ ಮಾಡಿದ ಸಮಸ್ತ ಕರ್ಮವೂ ಸಹಸ್ರಗುಣಿತವಾಗಿ ಫಲವನ್ನು ಕೊಡುವುದರಲ್ಲಿ ವಿಚಾರವನ್ನು ಮಾಡಬಾರದು.

೧೮. ಈ ಸತ್ಕರ್ಮವನ್ನು ಮಾಡಿದಾತನು ಪರಮೇಶ್ವರನೊಡನೆ ಕೈಲಾಸದಲ್ಲಿ ಸಮಾನ ಭೋಗವನ್ನನುಭವಿಸುವನು. ಆತನಿಗೆ ಅನಂತ ಸೌಭಾಗ್ಯ ಲಾಭವಾಗುವುದರಲ್ಲಿ ಸಂದೇಹವಿಲ್ಲ.

**ಅಪುತ್ರೋ ಲಭತೇ ಪುತ್ರಮಧನೋ ಧನಮಾಪ್ನುಯಾತ್ ।**
**ರಾಜೇಂದ್ರ ಕಾಮದಂ ತೀರ್ಥಂ ನರ್ಮದಾಯಾಂ ವ್ಯವಸ್ಥಿತಂ ॥ ೧೯ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ**
**ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ**
**"ಕಾಮದತೀರ್ಥಮಾಹಾತ್ಮ್ಯವರ್ಣನಂ"**
**ನಾಮ ಷಡುತ್ತರಶತತಮೋಽಧ್ಯಾಯಃ**

---

೧೯. ಪುತ್ರಹೀನನು ಸತ್ಪುತ್ರರನ್ನೂ, ದರಿದ್ರನು ಧನವನ್ನೂ ಪಡೆಯುವರು. ರಾಜೇಂದ್ರನೆ! ನರ್ಮದಾನದಿಯ ತೀರದಲ್ಲಿ ಇಂತಹ ಕಾಮದ ತೀರ್ಥವೆಂಬುದೊಂದು ನೆಲಸಿರುವುದು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಕಾಮದತೀರ್ಥಮಾಹಾತ್ಮ್ಯವರ್ಣನ"ವೆಂಬ
ನೂರಾರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಸಪ್ತೋತ್ತರಶತತಮೋಽಧ್ಯಾಯಃ

### ಭಂಡಾರೀತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

**ತತೋ ಗಚ್ಛೇತ ರಾಜೇಂದ್ರ ಭಂಡಾರೀತೀರ್ಥಮುತ್ತಮಂ ।**
**ದರಿದ್ರಚ್ಛೇದಕರಣಂ ಯುಗಾನ್ಯೇಕೋನವಿಂಶತಿಃ ॥ ೧ ॥**
**ಧನದೇನ ತಪಸ್ತಪ್ತ್ವಾ ಪ್ರಸನ್ನೇ ಪದ್ಮಸಂಭವೇ ।**
**ತತ್ರೈವ ಸ್ವಲ್ಪದಾನೇನ ಪ್ರಾಪ್ತಂ ವಿತ್ತಸ್ಯ ರಕ್ಷಣಂ ॥ ೨ ॥**
**ತತ್ರ ಗತ್ವಾ ತು ಯೋ ಭಕ್ತ್ಯಾ ಸ್ನಾತ್ವಾ ವಿತ್ತಂ ಪ್ರಯಚ್ಛತಿ ।**
**ತಸ್ಯ ವಿತ್ತಪರಿಚ್ಛೇದೋ ನ ಕದಾಚಿದ್ಭವಿಷ್ಯತಿ ॥ ೩ ॥**

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ಭಂಡಾರೀತೀರ್ಥಮಾಹಾತ್ಮ್ಯವರ್ಣನಂ"
ನಾಮ ಸಪ್ತೋತ್ತರಶತತಮೋಽಧ್ಯಾಯಃ

---

### ಕನ್ನಡದ ಅನುವಾದ

#### ಭಂಡಾರೀತೀರ್ಥಮಾಹಾತ್ಮ್ಯವರ್ಣನ

೧. ಮಾರ್ಕಂಡೇಯನು ಹೇಳುತ್ತಾನೆ —ರಾಜೇಂದ್ರನೇ! ಬಳಿಕ ಸರ್ವೋತ್ತಮವೂ, ಹತ್ತೊಂಬತ್ತು ಯುಗಗಳವರೆಗೂ ದಾರಿದ್ರ್ಯವನ್ನು ದೂರಗೊಳಿಸುವುದೂ ಆದ ಭಂಡಾರೀತೀರ್ಥವನ್ನು ಸೇವಿಸಬೇಕು.

೨. ಕುಬೇರನೊಮ್ಮೆ ಅಲ್ಲಿ ತಪಸ್ಸನ್ನು ಮಾಡಿ, ಬ್ರಹ್ಮದೇವನನ್ನು ಪ್ರಸನ್ನೀಕರಿಸಿಕೊಂಡು, ಅಲ್ಪವಾದ ದಾನವನ್ನು ಕೊಟ್ಟುದರಿಂದಲೇ ಧನಾಧಿಪತ್ಯವನ್ನು ಪಡೆದನು.

೩. ಅಲ್ಲಿ ಹೋಗಿ ಭಕ್ತಿಯಿಂದ ಸ್ನಾನವನ್ನು ಮಾಡಿ ಯಾವನು ಅಲ್ಪ ವಿತ್ತವನ್ನಾದರೂ ದಾನಮಾಡುವನೊ, ಅವನಿಗೆಂದಿಗೂ ಧನಾಭಾವವುಂಟಾಗುವುದಿಲ್ಲ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಭಂಡಾರೀತೀರ್ಥಮಹಾತ್ಮ್ಯವರ್ಣನ"ವೆಂಬ
ನೂರೇಳನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥಾಷ್ಟೋತ್ತರಶತತಮೋಽಧ್ಯಾಯಃ

## ರೋಹಿಣೀಸೋಮನಾಥತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ತತೋ ಗಚ್ಛೇನ್ಮಹೀಪಾಲ ರೋಹಿಣೀತೀರ್ಥಮುತ್ತಮಂ ।
ವಿಖ್ಯಾತಂ ತ್ರಿಷು ಲೋಕೇಷು ಸರ್ವಪಾಪಹರಂ ಪರಂ ॥ ೧ ॥

ಯುಧಿಷ್ಠಿರ ಉವಾಚ :—

ರೋಹಿಣೀತೀರ್ಥಮಾಹಾತ್ಮ್ಯಂ ಸರ್ವಪಾಪಪ್ರಣಾಶನಂ ।
ಶ್ರೋತುಮಿಚ್ಛಾಮಿ ತತ್ತ್ವೇನ ತನ್ಮೇ ತ್ವಂ ವಕ್ತುಮರ್ಹಸಿ ॥ ೨ ॥

ಶ್ರೀ ಮಾರ್ಕಂಡೇಯ ಉವಾಚ :—

ತಸ್ಮಿನ್ನೇಕಾರ್ಣವೇ ಘೋರೇ ನಷ್ಟೇ ಸ್ಥಾವರಜಂಗಮೇ ।
ಉದಧೌ ಚ ಶಯಾನಸ್ಯ ದೇವದೇವಸ್ಯ ಚಕ್ರಿಣಃ ॥ ೩ ॥
ನಾಭೌ ಸಮುತ್ಥಿತಂ ಪದ್ಮಂ ರವಿಮಂಡಲಸನ್ನಿಭಂ ।
ಕರ್ಣಿಕಾ ಕೇಸರೋಪೇತಂ ಪತ್ರೈಶ್ಚ ಸಮಲಂಕೃತಂ ॥ ೪ ॥

---

## ಕನ್ನಡದ ಅನುವಾದ

### ರೋಹಿಣೀಸೋಮನಾಥತೀರ್ಥಮಾಹಾತ್ಮ್ಯವರ್ಣನ

೧ ಮಾರ್ಕಂಡೇಯನು ಹೇಳುತ್ತಾನೆ —ಮಹೀನಾಥನೆ! ಬಳಿಕ ಮೂರು ಲೋಕಗಳಲ್ಲಿಯೂ ಪ್ರಖ್ಯಾತವಾಗಿ, ಸಮಸ್ತ ಪಾಪಗಳನ್ನು ಕಳೆಯುವುದೂ, ಪರಮೋತ್ಕೃಷ್ಟವೂ ಆದ ರೋಹಿಣೀತೀರ್ಥವನ್ನು ಸೇರಬೇಕು.

೨. ಯುಧಿಷ್ಠಿರನು ಹೇಳುತ್ತಾನೆ —ರೋಹಿಣೀತೀರ್ಥಕ್ಕೆ ಸಂಬಂಧಿಸಿದ ಸರ್ವಪಾಪಪ್ರಣಾಶಕವಾದ ಮಾಹಾತ್ಮ್ಯವನ್ನು ಯಥಾರ್ಥವಾಗಿ ಕೇಳಲಿಚ್ಛಿಸುವೆನು. ಅದನ್ನು ಹೇಳಲು ನೀನೇ ತಕ್ಕವನಾಗಿರುವೆ.

೩. ಮಾರ್ಕಂಡೇಯನು ಹೇಳುತ್ತಾನೆ.—ಕಲ್ಪದ ಆದಿಕಾಲದಲ್ಲಿ ಬ್ರಹ್ಮಾಂಡವು ನೀರಿನಿಂದಾವೃತವಾಗಿರಲು, ಸ್ಥಾವರಜಂಗಮಗಳೆಂಬ ಜೀವರಾಶಿಗಳೆಲ್ಲವೂ ನಾಶವಾಗಿರಲು ದೇವದೇವನಾದ ಮಹಾವಿಷ್ಣುವು ನೀರಿನ ಮಧ್ಯದಲ್ಲಿ ಮಲಗಿದ್ದನು.

೪. ಅತನ ನಾಭಿಯಿಂದ ಸೂರ್ಯಮಂಡಲಸದೃಶವೂ, ಕರ್ಣಿಕಾಕೇಸರ ಪತ್ರಗಳಿಂದ ಕಂಗೊಳಿಸುವುದೂ ಆದ ಕಮಲವೊಂದು ಹೊರಟಿತು.

ತತ್ರ ಬ್ರಹ್ಮಾ ಸಮುತ್ಪನ್ನಶ್ಚತುರ್ವದನಪಂಕಜಃ ।
ಕಿಂ ಕರೋಮೀತಿ ದೇವೇಶ ಆಜ್ಞಾ ಮೇ ದೀಯತಾಂ ಪ್ರಭೋ ॥ ೫ ॥
ಏವಮುಕ್ತಸ್ತು ದೇವೇಶಃ ಶಂಖಚಕ್ರಗದಾಧರಃ ।
ಉವಾಚ ಮಧುರಾಂ ವಾಣೀಂ ತದಾ ದೇವಂ ಪಿತಾಮಹಂ ॥ ೬ ॥
ಸರಸ್ವತ್ಯಾಂ ಮಹಾಬಾಹೋ ಲೋಕಂ ಕುರು ಮಮಾಜ್ಞಯಾ ।
ಭೂತಗ್ರಾಮಮಶೇಷಸ್ಯ ಉತ್ಪಾದನವಿಧಿಕ್ಷಯಂ ॥ ೭ ॥
ಏತಚ್ಛ್ರುತಂ ತು ವಚನಂ ಪದ್ಮನಾಭಸ್ಯ ಭಾರತ ।
ಚಿಂತಯಾಮಾಸ ಭಗವಾನ್ ಸಪ್ತರ್ಷೀನ್ ಹಿತಕಾಮ್ಯಯಾ ॥ ೮ ॥
ಕಾಮಾತ್ತೇ ಚಿಂತಿತಾಃ ಪ್ರಾಜ್ಞಾಃ ಪುಲಸ್ತ್ಯಃ ಪುಲಹಃ ಕ್ರತುಃ ।
ಪ್ರಾಚೇತಸೋ ವಸಿಷ್ಠಶ್ಚ ಭೃಗುರ್ನಾರದ ಏವ ಚ ॥ ೯ ॥
ಯಜ್ಞೇ ಪ್ರಾಚೇತಸೋ ದಕ್ಷೋ ಮಹಾತೇಜಾಃ ಪ್ರಜಾಪತಿಃ ।
ದಕ್ಷಸ್ಯಾಽಪಿ ತಥಾ ಜಾತಾಃ ಪಂಚಾಶದ್ದುಹಿತರೋಽನಘ ॥ ೧೦ ॥
ದದೌ ಸ ದಶ ಧರ್ಮಾಯ ಕಶ್ಯಪಾಯ ತ್ರಯೋದಶ ।
ತಥೈವ ಸ ಮಹಾಭಾಗಃ ಸಪ್ತವಿಂಶತಿಮಿಂದವೇ ॥ ೧೧ ॥

---

೫ ಅದರಲ್ಲಿ ನಾಲ್ಕುಮುಖ ಕಮಲಗಳಿಂದೊಪ್ಪುವ ಬ್ರಹ್ಮದೇವನು ಹುಟ್ಟಿ "ದೇವೇಶ್ವರನೆ! ನಾಥನೆ! ನಾನೇನು ಮಾಡಲಿ? ನನಗೆ ಅಪ್ಪಣೆಯನ್ನು ಕೊಡು" ಎಂದು ಬೇಡಿದನು.

೬ ಇಂತೆಂದ ಬ್ರಹ್ಮನಿಗೆ ಶಂಖ ಚಕ್ರ ಗದಾಧಾರಿಯಾದ ನಾರಾಯಣನು ಪಿತಾಮಹ ಪದವಿಯನ್ನು ಕೊಡಲೆಳಸಿ ಮಧುರವಾದ ಧ್ವನಿಯಿಂದ ಇಂತೆಂದನು.

೭. "ಮಹಾಪರಾಕ್ರಮಿಯೆ! ನನ್ನ ಅನುಜ್ಞೆಯಂತೆ ನೀನು ಸರಸ್ವತಿಯೊಡಗೂಡಿ ಲೋಕವನ್ನು ಸೃಷ್ಟಿಮಾಡು. ಸೃಷ್ಟಿ ಸ್ಥಿತಿ ಲಯಗಳಿಗೆ ಒಳಗಾದ ಸಮಸ್ತ ಭೂತಸಮೂಹವೂ ನಿನ್ನಿಂದ ಸೃಜಿಸಲ್ಪಡಲಿ."

೮. ಧರ್ಮನಂದನನೆ! ಪದ್ಮನಾಭನ ಈ ಮಾತುಗಳನ್ನು ಕೇಳಿ ಚತುರ್ಮುಖನು ತನ್ನ ಕಾರ್ಯದಲ್ಲಿ ಸಹಾಯಕರಾಗಲು ಸಪ್ತರ್ಷಿಗಳನ್ನು ಕುರಿತು ಚಿಂತಿಸಿದನು.

೯. ಪ್ರಾಜ್ಞರಾದ ಪುಲಹ, ಪುಲಸ್ತ್ಯ, ಕ್ರತು, ದಕ್ಷ, ವಸಿಷ್ಠ, ಭೃಗು, ನಾರದರೆಂಬ ಏಳು ಜನರೂ ಆತನ ಮಾನಸಪುತ್ರರಾದರು.

೧೦–೧೧. ಯಜ್ಞಗಳನ್ನು ಮಾಡಿದುದರಿಂದ ಪ್ರಾಚೇತಸನಾದ ದಕ್ಷನು ಮಹಾತೇಜಸ್ವಿಯೂ ಪ್ರಜಾಪತಿಯೂ ಆದನು. ಪಾಪರಹಿತನೆ! ಆ ದಕ್ಷನಿಗೆ ಐವತ್ತು ಜನ ಹೆಣ್ಣು ಮಕ್ಕಳಾದರು. ಧರ್ಮರಾಜನಿಗೆ ಹತ್ತು ಜನರನ್ನೂ, ಕಶ್ಯಪನಿಗೆ ಹದಿಮೂರು ಮಂದಿಯನ್ನೂ, ಚಂದ್ರನಿಗೆ ಉಳಿದ ಇಪ್ಪತ್ತೇಳು ಕನ್ಯೆಯರನ್ನೂ ಆ ಮಹಾಭಾಗನು ಮದುವೆಮಾಡಿಕೊಟ್ಟನು.

ರೋಹಿಣೀನಾಮ ಯಾ ತಾಸಾಂ ಮಧ್ಯೇ ತಸ್ಯ ನರಾಧಿಪ ।
ಅನಿಷ್ಟಾ ಸರ್ವನಾರೀಣಾಂ ಭರ್ತುಶ್ಚೈವ ವಿಶೇಷತಃ ॥ ೧೨ ॥
ತತಃ ಸಾ ಪರಮಂ ಕೃತ್ವಾ ವೈರಾಗ್ಯಂ ನೃಪಸತ್ತಮ ।
ಆಗತ್ಯ ನರ್ಮದಾತೀರೇ ಚಚಾರ ವಿಪುಲಂ ತಪಃ ॥ ೧೩ ॥
ಏಕರಾತ್ರೈಸ್ತ್ರಿರಾತ್ರೈಶ್ಚ ಷಡ್ದ್ವಾದಶಭಿರೇವ ಚ ।
ಪಕ್ಷಮಾಸೋಪವಾಸೈಶ್ಚ ಕರ್ಶಯಂತೀ ಕಲೇವರಂ ॥ ೧೪ ॥
ಆರಾಧಯಂತೀ ಸತತಂ ಮಹಿಷಾಸುರನಾಶಿನೀಂ ।
ದೇವೀಂ ಭಗವತೀಂ ತಾತ ಸರ್ವಾರ್ತಿವಿನಿವಾರಣೀಂ ॥ ೧೫ ॥
ಸ್ನಾತ್ವಾ ಸ್ನಾತ್ವಾ ಜಲೇ ನಿತ್ಯಂ ನರ್ಮದಾಯಾಃ ಶುಚಿಸ್ಮಿತಾ ।
ತತಸ್ತುಷ್ಟಾ ಮಹಾಭಾಗಾ ದೇವೀ ನಾರಾಯಣೀ ನೃಪ ॥ ೧೬ ॥
ಪ್ರಸನ್ನಾ ತೇ ಮಹಾಭಾಗೇ ವ್ರತೇನ ನಿಯಮೇನ ಚ ।
ಏತಚ್ಛ್ರುತ್ವಾ ತು ವಚನಂ ರೋಹಿಣೀ ಶಶಿನಃ ಪ್ರಿಯಾ ॥ ೧೭ ॥
ಯಥಾ ಭವಾಮಿ ನಚಿರಾತ್ತಥಾ ಭವತು ಮಾನದೇ ।
ಏವಮಸ್ತ್ವಿತಿ ಸಾ ಚೋಕ್ತ್ವಾ ಭವಾನೀ ಭಕ್ತವತ್ಸಲಾ ॥ ೧೮ ॥

---

೧೨. ರಾಜೇಂದ್ರನೆ! ಚಂದ್ರನ ಪತ್ನಿಯರಲ್ಲೆಲ್ಲ ಮಧ್ಯದವಳಾದ ರೋಹಿಣಿ ಎಂಬಾಕೆಯು ಇತರ ಎಲ್ಲ ಸ್ತ್ರೀಯರಿಗೇ ಅಲ್ಲದ ವಿಶೇಷವಾಗಿ ಪತಿಗೂ ಬೇಡದವಳಾಗಿದ್ದಳು.

೧೩. ಮಹಾರಾಜನೆ! ಇದಕ್ಕಾಗಿ ಆಕೆಯು ಪರಮವೈರಾಗ್ಯವನ್ನು ಪಡೆದು, ನರ್ಮದಾನದಿಯ ತೀರವನ್ನು ಸೇರಿ ಅತ್ಯಂತವಾದ ತಪಸ್ಸನ್ನಾಚರಿಸಿದಳು.

೧೪. ಒಂದು ರಾತ್ರಿ, ಮೂರು ರಾತ್ರಿ, ಆರು ರಾತ್ರಿ, ಹನ್ನೆರಡು ರಾತ್ರಿ, ಪಕ್ಷ, ತಿಂಗಳುಗಳ ಲೆಕ್ಕದಿಂದ ಉಪವಾಸವನ್ನಾಚರಿಸಿ ತನ್ನ ದೇಹವನ್ನು ಸವೆಸಿಕೊಂಡಳು.

೧೫. ಮಹಿಷಾಸುರಮರ್ದಿನಿಯೂ, ಸಕಲಾಪತ್ತುಗಳನ್ನು ಪರಿಹರಿಸುವವಳೂ ಆದ ಭಗವತೀದೇವಿಯನ್ನು ನಿತ್ಯವೂ ಪೂಜಿಸುತ್ತಿದ್ದಳು.

೧೬. ನಗೆಮೊಗದವಳಾದ ಆಕೆಯು ಪ್ರತಿದಿನವೂ ನರ್ಮದಾತೀರ್ಥದ ಜಲದಲ್ಲಿ ಸ್ನಾನವನ್ನು ಮಾಡುತ್ತಿದ್ದಳು.

೧೭. ಯುಧಿಷ್ಠಿರನೆ! ಮಹಾಮಹಿಮಳಾದ ಪಾರ್ವತೀದೇವಿಯು ಆಕೆಯ ತಪಸ್ಸಿನಿಂದ ಸಂತುಷ್ಟಳಾಗಿ "ಮಹಾಭಾಗ್ಯಶಾಲಿಯೆ! ನಿನ್ನ ವ್ರತನಿಯಮಗಳಿಂದ ನಾನು ಪ್ರಸನ್ನಳಾಗಿರುವೆನು" ಎಂದಳು.

೧೮. ಆಕೆಯ ಅಭಯವಚನವನ್ನು ಕೇಳಿ ಚಂದ್ರನ ಪತ್ನಿಯಾದ ರೋಹಿಣಿಯೆಂದಳು. "ನಾನು ಅಲ್ಪಕಾಲದಲ್ಲಿಯೇ ಪತಿಗೆ ಪ್ರಿಯಳಾಗುವಂತೆ ಅನುಗ್ರಹಿಸು.

**ಸ್ತೂಯಮಾನಾ ಮುನಿಗಣೈಸ್ತತ್ರೈವಾಂತರಧೀಯತ ।**
**ತದಾ ಪ್ರಭೃತಿ ತತ್ತೀರ್ಥಂ ರೋಹಿಣೀ ಶಶಿನಃ ಪ್ರಿಯಾ ॥ ೧೯ ॥**
**ಸಂಜಾತಾ ಸಾರ್ವಕಾಲಂ ತು ವಲ್ಲಭಾ ನೃಪಸತ್ತಮ ।**
**ತತ್ರ ತೀರ್ಥೇ ತು ಯಾ ನಾರೀ ನರೋ ವಾ ಸ್ನಾತಿ ಭಕ್ತಿತಃ ॥ ೨೦ ॥**
**ವಲ್ಲಭಾ ಜಾಯತೇ ಸಾ ತು ಭರ್ತುರ್ನೈರೋಹಿಣೀ ಯಥಾ ।**
**ತತ್ರ ತೀರ್ಥೇ ತು ಯಃ ಕಶ್ಚಿತ್ಪ್ರಾಣತ್ಯಾಗಂ ಕರೋತಿ ವೈ ॥ ೨೧ ॥**
**ಸಪ್ತಜನ್ಮಾನಿ ದಾಂಪತ್ಯವಿಯೋಗೋ ನ ಭವೇತ್ಕ್ವಚಿತ್ ॥ ೨೨ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ**
**ಪಂಚಮೇಽವಂತ್ಯಖಂಡೇ ತೃತೀಯೇ ರೇವಾಖಂಡೇ**
**"ರೋಹಿಣೀ ಸೋಮನಾಥತೀರ್ಥಮಾಹಾತ್ಮ್ಯವರ್ಣನಂ"**
**ನಾಮಾಷ್ಟೋತ್ತರಶತತಮೋಽಧ್ಯಾಯಃ**

---

೧೯. ಭಕ್ತಾನುಗ್ರಹತತ್ಪರಳಾದ ಭವಾನಿಯು ಹಾಗೆಯೇ ಆಗಲೆಂದು ಹೇಳಿ ಮುನಿಸಮೂಹಗಳೆಲ್ಲರೂ ತನ್ನನ್ನು ಸ್ತೋತ್ರಮಾಡುತ್ತಿರಲು ಅಲ್ಲಿಯೇ ಅದೃಶ್ಯಳಾದಳು.

೨೦. ನೃಪಸತ್ತಮನೆ! ಅಂದಿನಿಂದ ಆ ತೀರ್ಥವು ಪ್ರಖ್ಯಾತವಾಯಿತು. ರೋಹಿಣಿಯು ಸಹ ಸರ್ವಕಾಲದಲ್ಲಿಯೂ ಚಂದ್ರನಿಗೆ ಪರಮಪ್ರಿಯಳಾದ ಪತ್ನಿಯಾದಳು.

೨೧. ಈ ತೀರ್ಥದಲ್ಲಿ ಯಾವ ನಾರಿಯೂ ನರನೂ ಸ್ನಾನಗಳನ್ನು ಮಾಡುವರೊ, ಆಕೆಯೂ ಆತನ ಪತ್ನಿಯೂ ರೋಹಿಣಿಯಂತೆಯೇ ಗಂಡಂದಿರಿಗೆ ಪ್ರಿಯರಾಗುವರು.

೨೨. ಈ ತೀರ್ಥದಲ್ಲಿ ಯಾವನು ಪ್ರಾಣತ್ಯಾಗವನ್ನು ಮಾಡುವನೊ, ಅವನಿಗೆ ಏಳು ಜನ್ಮಗಳಲ್ಲಿ ಎಂದೂ ಪತ್ನೀವಿಯೋಗವಾಗುವುದಿಲ್ಲ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಅವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ರೋಹಿಣೀಸೋಮನಾಥತೀರ್ಥಮಾಹಾತ್ಮ್ಯವರ್ಣನ"ವೆಂಬ
ನೂರೆಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥೈಕೋನವೋತ್ತರಶತತಮೋಽಧ್ಯಾಯಃ

## ಸೇನಾಪುರೇ ಚಕ್ರತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ತತೋ ಗಚ್ಛೇನ್ಮಹೀಪಾಲ ಚಕ್ರತೀರ್ಥಮನುತ್ತಮಂ ।
ಸೇನಾಪುರಮಿತಿಖ್ಯಾತಂ ಸರ್ವಪಾಪಕ್ಷಯಂಕರಂ ॥ ೧ ॥
ಸೇನಾಪತ್ಯಭಿಷೇಕಾಯ ದೇವದೇವೇನ ಚಕ್ರಿಣಾ ।
ಆನೀತಶ್ಚ ಮಹಾಸೇನೋ ದೇವೈಃ ಸೇಂದ್ರಪುರೋಗಮೈಃ ॥ ೨ ॥
ದಾನವಾನಾಂ ವಧಾರ್ಥಾಯ ಜಯಾಯ ಚ ದಿವೌಕಸಾಂ ।
ಭೂಮಿದಾನೇನ ವಿಪ್ರೇಂದ್ರಾಂಸ್ತರ್ಪಯಿತ್ವಾ ಯಥಾವಿಧಿ ॥ ೩ ॥
ಶಂಖಭೇರೀನಿನಾದೈಶ್ಚ ಪಟಹಾನಾಂ ಚ ನಿಃಸ್ವನೈಃ ।
ವೀಣಾವೇಣುಮೃದಂಗೈಶ್ಚ ಝಲ್ಲರೀಸ್ವನಮಂಗಲೈಃ ॥ ೪ ॥
ತತಃ ಕೃತ್ವಾ ಸ್ವನಂ ಘೋರಂ ದಾನವೋ ಬಲದರ್ಪಿತಃ ।
ರುರುರ್ನಾಮ ವಿಘಾತಾರ್ಥಮಭಿಷೇಕಸ್ಯ ಚಾಗತಃ ॥ ೫ ॥

---

### ಕನ್ನಡದ ಅನುವಾದ

#### ಚಕ್ರತೀರ್ಥಮಾಹಾತ್ಮ್ಯವರ್ಣನ

೧. ಮಾರ್ಕಂಡೇಯನು ಹೇಳುತ್ತಾನೆ —ಮಹೀಪಾಲಕನೆ! ಅಲ್ಲಿಂದ ಸೇನಾಪುರವೆಂದು ಪ್ರಖ್ಯಾತಿಯನ್ನು ಪಡೆದಿರುವುದೂ, ಸಮಸ್ತ ಪಾಪಗಳನ್ನು ನಾಶಗೊಳಿಸುವುದೂ, ಉತ್ತಮೋತ್ತಮವೂ ಆದ ಚಕ್ರತೀರ್ಥಕ್ಕೆ ಹೋಗಬೇಕು.

೨. ದೇವತಾಸಾರ್ವಭೌಮನಾದ ಶ್ರೀಮನ್ನಾರಾಯಣನು ಇಂದ್ರಾದಿ ಸಕಲ ದೇವತೆಗಳೊಡಗೂಡಿ ಷಣ್ಮುಖಸ್ವಾಮಿಗೆ ಸೇನಾಧಿಪತ್ಯದ ಅಭಿಷೇಕವನ್ನು ಮಾಡಲು ಇಲ್ಲಿಗೆ ಕರೆತಂದನು.

೩. ದಾನವರ ನಿಗ್ರಹಕ್ಕಾಗಿಯೂ, ದೇವತೆಗಳಿಗೆ ಜಯವು ಲಭಿಸುವುದಕ್ಕೂ ಬ್ರಾಹ್ಮಣರಿಗೆ ಯಥಾವಿಧಿಯಾಗಿ ಭೂಮಿದಾನಗಳನ್ನು ಮಾಡಿ ಅವರನ್ನು ಸಂತೋಷಗೊಳಿಸಿದನು.

೪. ಆಗ ಶಂಖಗಳು, ಭೇರಿಗಳು, ಪಟಹಗಳು, ವೀಣೆಗಳು, ಕೊಳಲುಗಳು, ಮೃದಂಗಗಳು, ಝಲ್ಲರಿಗಳು ಮುಂತಾದ ಅಸಂಖ್ಯಾತ ಮಂಗಳವಾದ್ಯಗಳು ಧ್ವನಿಗೈದುವು.

೫. ಅದನ್ನು ಕೇಳಿ ಪರಾಕ್ರಮದಿಂದ ದರ್ಪಿತನಾದ ರುರುವೆಂಬ ಮಹಾದೈತ್ಯನು ಭಯಂಕರವಾಗಿ ಕಿರುಚುತ್ತ ಅಭಿಷೇಕವನ್ನು ತಡೆಗಟ್ಟಲು ಅಲ್ಲಿಗೆ ಬಂದನು.

ಹಸ್ತ್ಯಶ್ವರಥಪತ್ಯೋಘೈಃ ಪೂರಯನ್ಸೈ ದಿಶೋ ದಶ ।
ತತ್ರ ತೇನ ಮಹದ್ಯುದ್ಧಂ ಪ್ರವೃತ್ತಂ ಕಿಲ ಭಾರತ ॥ ೬ ॥
ಶಕ್ತ್ಯೃಷ್ಟಿಪಾಶಮುಸಲೈಃ ಖಡ್ಗೈಸ್ತೋಮರಟಂಕಕೈಃ ।
ಭಲ್ಲೈಃ ಕರ್ಣಿಕನಾರಾಚೈಃ ಕಬಂಧಪಟಸಂಕುಲೈಃ ॥ ೭ ॥
ತತಶ್ಚ ತಾಂ ಶತ್ರುಬಲಸ್ಯ ಸೇನಾಂ
ಕ್ಷಣೇನ ಚಾಪಚ್ಯುತಬಾಣಘಾತೈಃ ।
ವಿಧ್ವಸ್ತಹಸ್ತ್ಯಶ್ವರಥಾನ್ಮಹಾತ್ಮಾ
ಜಗ್ರಾಹ ಚಕ್ರಂ ರಿಪುಸಂಘನಾಶನಃ ॥ ೮ ॥
ಜ್ವಲಚ್ಚ ಚಕ್ರಂ ನಿಶಿತಂ ಭಯಂಕರಂ
ಸುರಾಽಸುರಾಣಾಂ ಚ ಸುದರ್ಶನಂ ರಣೇ ।
ಚಕರ್ತ ದೈತ್ಯಸ್ಯ ಶಿರಸ್ತದಾನೀಂ
ಕರಾತ್ಪ್ರಮುಕ್ತಂ ಮಧುಘಾತಿನಶ್ಚ ತತ್ ॥ ೯ ॥
ತಂ ದೃಷ್ಟ್ವಾ ಸಹಸಾ ವಿಘ್ನಮಭಿಷೇಕೇ ಷಡಾನನಃ ।
ತ್ಯಕ್ತ್ವಾ ತು ತತ್ರ ಸಂಸ್ಥಾನಂ ಚಚಾರ ವಿಪುಲಂ ತಪಃ ॥ ೧೦ ॥

---

೬. ಆತನ ಆನೆ, ಕುದುರೆ, ರಥ, ಪದಾತಿಗಳ ಸಮೂಹಗಳಿಂದ ಹತ್ತು ದಿಕ್ಕುಗಳೂ ತುಂಬಿಹೋದುವು. ಆತನೊಡನೆ ದೇವತೆಗಳಿಗೆ ಮಹಾಯುದ್ಧವು ಪ್ರಸಕ್ತವಾಯಿತು.

೭. ಶಕ್ತಿ, ಋಷ್ಟಿ, ಪಾಶ, ಮುಸಲ, ಖಡ್ಗ, ತೋಮರ, ಟಂಕ, ಭಲ್ಲ, ಕರ್ಣಿಕ, ಬಾಣಗಳೇ ಮುಂತಾದ ಅಸ್ತ್ರಶಸ್ತ್ರಗಳಿಂದಲೂ, ತಲೆಗಳಿಲ್ಲದ ದೇಹಗಳಿಂದಲೂ, ವಸ್ತ್ರಾದಿಗಳಿಂದಲೂ ರಣರಂಗವು ಮೆರೆಯುತಿತ್ತು.

೮. ಆಗ ನಿಮಿಷಮಾತ್ರದಲ್ಲಿ ತನ್ನ ಬಿಲ್ಲಿನಿಂದ ಬಾಣಗಳನ್ನು ಸುರಿಸುತ್ತ, ಶತ್ರುಗಳ ಮಹಾಸೈನ್ಯದಲ್ಲಿ ಆನೆ, ಕುದುರೆ, ರಥಗಳನ್ನು ಧ್ವಂಸಗೊಳಿಸಿ, ಪರಬಲಮರ್ದನನಾದ ಶ್ರೀಮನ್ನಾರಾಯಣನು ತನ್ನ ಚಕ್ರವನ್ನು ಹಿಡಿದನು.

೯. ಮಧುಮರ್ದನನಾದ ಆತನ ಕೈಯಿಂದ ಹೊರಟ ಚಕ್ರವು ತೀಕ್ಷ್ಣವೂ ಉರಿಯನ್ನುಗುಳುವುದೂ ಆಗಿ ದೇವದಾನವರಿಗೆ ಭಯವನ್ನುಂಟುಮಾಡುತ್ತ ಯುದ್ಧರಂಗದಲ್ಲಿ ಆ ರಾಕ್ಷಸನ ತಲೆಯನ್ನು ಕತ್ತರಿಸಿತು.

೧೦. ಇಂತು ತನ್ನ ಅಭಿಷೇಕಕ್ಕೆ ಅನಿರೀಕ್ಷಿತವಾಗಿ ಒದಗಿದ ವಿಘ್ನವನ್ನು ಕಂಡು ಷಣ್ಮುಖನು ಅಲ್ಲಿಂದ ಹೊರಟು ಬಹಳಕಾಲ ತಪಸ್ಸನ್ನಾಚರಿಸಿದನು.

ಮುಕ್ತಂ ಚಕ್ರಂ ವಿನಾಶಾಯ ಹರಿಣಾ ಲೋಕಧಾರಿಣಾ ।
ದ್ವಿದಲಂ ದಾನವಂ ಕೃತ್ವಾ ಪಪಾತ ವಿಮಲೇ ಜಲೇ ॥ ೧೧ ॥
ತದಾ ಪ್ರಭೃತಿ ತತ್ತೀರ್ಥಂ ಚಕ್ರತೀರ್ಥಮಿತಿ ಶ್ರುತಂ ।
ಸರ್ವಪಾಪವಿನಾಶಾಯ ನಿರ್ಮಿತಂ ವಿಶ್ವಮೂರ್ತಿನಾ ॥ ೧೨ ॥
ಚಕ್ರತೀರ್ಥೇ ತು ಯಃ ಸ್ನಾತ್ವಾ ಪೂಜಯೇದ್ದೇವಮಚ್ಯುತಂ ।
ಪುಂಡರೀಕಸ್ಯ ಯಜ್ಞಸ್ಯ ಫಲಮಾಪ್ನೋತಿ ಮಾನವಃ ॥ ೧೩ ॥
ತತ್ರ ತೀರ್ಥೇ ತು ಯಃ ಸ್ನಾತ್ವಾ ಪೂಜಯೇದ್ಬ್ರಾಹ್ಮಣಾಂಛುಭಾನ್ ।
ಶಾಂತದಾಂತಜಿತಕ್ರೋಧಾನ್ ಸ ಲಭೇತ್ಕೋಟಿಜಂ ಫಲಂ ॥ ೧೪ ॥
ತತ್ರ ತೀರ್ಥೇ ತು ಯೋ ಭಕ್ತ್ಯಾ ತ್ಯಜತೇ ದೇಹಮಾತ್ಮನಃ ।
ವಿಷ್ಣುಲೋಕಂ ವ್ರಜೇತ್ಸೋಽಪಿ ಯಾತಿ ಜಯಶಬ್ದಾದಿಮಂಗಲೈಃ ॥ ೧೫ ॥
ಕ್ರೀಡಯಿತ್ವಾ ಯಥಾಕಾಮಂ ದೇವಗಂಧರ್ವಪೂಜಿತಃ ।
ಇಹಾಗತ್ಯ ಚ ಭೂಯೋಽಪಿ ಜಾಯತೇ ವಿಪುಲೇ ಕುಲೇ ॥ ೧೬ ॥

---

೧೧. ಲೋಕಪಾಲಕನಾದ ನಾರಾಯಣನಿಂದ ರಾಕ್ಷಸನ ನಾಶಕ್ಕಾಗಿ ಬಿಡಲ್ಪಟ್ಟ ಸುದರ್ಶನಚಕ್ರವು ಅವನನ್ನು ಎರಡಾಗಿ ಕತ್ತರಿಸಿ ಪರಿಶುದ್ಧವಾದ ಜಲದಲ್ಲಿ ಬಿದ್ದಿತು.

೧೨. ಅಂದಿನಿಂದ ಈ ತೀರ್ಥವು ಚಕ್ರತೀರ್ಥವೆಂದು ಪ್ರಖ್ಯಾತವಾಯಿತು. ವಿಶ್ವಮೂರ್ತಿಯಾದ ಮಹಾವಿಷ್ಣುವು ಸರ್ವಪಾಪಗಳನ್ನು ನಾಶಗೊಳಿಸಲು ಇದನ್ನು ನಿರ್ಮಿಸಿದನು.

೧೩. ಯಾವ ಮಾನವನು ಚಕ್ರತೀರ್ಥದಲ್ಲಿ ಸ್ನಾನವನ್ನು ಮಾಡಿ ಮಹಾವಿಷ್ಣುವನ್ನು ಪೂಜಿಸುವನೊ, ಅವನು ಪೌಂಡರೀಕಯಜ್ಞವನ್ನು ಮಾಡಿದ ಫಲಕ್ಕೆ ಭಾಗಿಯಾಗುವನು.

೧೪. ಆ ತೀರ್ಥದಲ್ಲಿ ಸ್ನಾತನಾಗಿ ಶಮದಮಸಹಿತರೂ, ಜಿತಕ್ರೋಧರೂ ಆದ ಬ್ರಾಹ್ಮಣರನ್ನು ಯಾವನು ಪೂಜಿಸುವನೊ, ಅವನ ಕರ್ಮವು ಕೋಟಿ ಗುಣಿತವಾಗುವುದು.

೧೫. ಆ ತೀರ್ಥದಲ್ಲಿ ಯಾವನು ಭಕ್ತಿಯಿಂದ ದೇಹತ್ಯಾಗವನ್ನು ಮಾಡುವನೊ, ಅವನು ಜಯಶಬ್ದಗಳೇ ಮೊದಲಾದ ಮಂಗಳಗಳೊಂದಿಗೆ ವಿಷ್ಣುಲೋಕವನ್ನು ಸೇರುವನು

೧೬. ಅಲ್ಲಿ ದೇವತೆಗಳಿಂದಲೂ, ಗಂಧರ್ವರಿಂದಲೂ ಪೂಜೆಗಳನ್ನು ಕೈಕೊಂಡು ಸ್ವೇಚ್ಛೆಯಿಂದ ವಿಹರಿಸುತ್ತ ಪುನಃ ಭೂಲೋಕಕ್ಕೆ ಬಂದರೆ ಉತ್ತಮ ಕುಲದಲ್ಲಿ ಜನಿಸುವನು.

ಏತತ್ಪುಣ್ಯಂ ಪಾಪಹರಂ ಧನ್ಯಂ ದುಃಖಪ್ರಣಾಶನಂ ।
ಕಥಿತಂ ತೇ ಮಹಾಭಾಗ ಭೂಯಶ್ಚಾನ್ಯಚ್ಛೃಣುಷ್ವ ಮೇ ॥ ೧೭ ॥

ಇತೀ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ಸೇನಾಪುರೇ ಚಕ್ರತೀರ್ಥಮಾಹಾತ್ಮ್ಯವರ್ಣನಂ"
ನಾಮ್ನೈಕೋನವೋತ್ತರಶತತಮೋಽಧ್ಯಾಯಃ

---

೧೭. ಮಹಾಭಾಗನೆ! ಪುಣ್ಯಪ್ರದವೂ, ಪಾಪನಾಶಕವೂ, ಧನ್ಯವೂ, ದುಃಖನಿವಾರಕವೂ ಆದ ಚಕ್ರತೀರ್ಥವ ಚರಿತ್ರೆಯನ್ನು ಹೇಳಿದೆನು. ಇನ್ನು ಮತ್ತೊಂದು ತೀರ್ಥವನ್ನು ಕುರಿತು ಹೇಳುವೆನು, ಕೇಳು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಚಕ್ರತೀರ್ಥಮಹಾತ್ಮ್ಯವರ್ಣನ"ವೆಂಬ
ನೂರೊಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ದಶೋತ್ತರಶತತಮೋಽಧ್ಯಾಯಃ

## ಧೌತಪಾಪತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ:—

ಧೌತಪಾಪಂ ತತೋ ಗಚ್ಛೇನ್ಮಹಾಪಾತಕನಾಶನಂ ।
ಸಮೀಪೇ ಚಕ್ರತೀರ್ಥಸ್ಯ ವಿಷ್ಣುನಾ ನಿರ್ಮಿತಂ ಪುರಾ ॥ ೧ ॥
ನಿಹತ್ಯೈರ್ದಾನವೈರ್ಘೋರೈರ್ದೇವದೇವೋ ಜನಾರ್ದನಃ ।
ತತ್ಪಾಪಸ್ಯ ವಿನಾಶಾರ್ಥಂ ದಾನವಾನ್ತೋದ್ಭವಸ್ಯ ಚ ॥ ೨ ॥
ತತ್ರ ತೀರ್ಥೇ ಜಿತಕ್ರೋಧಶ್ಚಕಾರ ವಿಪುಲಂ ತಪಃ ।
ದುಶ್ಚರಂ ಮೌನಮಾಸ್ಥಾಯ ಹ್ಯಶಕ್ಯಂ ದೇವದಾನವೈಃ ॥ ೩ ॥
ಸ್ನಾತ್ವಾ ದತ್ವಾ ದ್ವಿಜಾತಿಭ್ಯೋ ದಾನಾನಿ ವಿವಿಧಾನಿ ಚ ।
ತತ್ಕ್ಷಣಾನ್ಮುಕ್ತಪಾಪಸ್ತು ಗತಸ್ತದ್ವೈಷ್ಣವಂ ಪದಂ ॥ ೪ ॥

---

## ಕನ್ನಡದ ಅನುವಾದ

### ಧೌತಪಾಪತೀರ್ಥಮಾಹಾತ್ಮ್ಯವರ್ಣನ

೧. ಮಾರ್ಕಂಡೇಯನು ಹೇಳುತ್ತಾನೆ —ಬಳಿಕ ಚಕ್ರತೀರ್ಥದ ಸಮೀಪದಲ್ಲಿಯೇ ಇರುವ ಮಹಾಪಾತಕಗಳನ್ನೂ ನಾಶಮಾಡುವ ಮಹಿಮೆಯುಳ್ಳ ಧೌತಪಾಪವೆಂಬ ತೀರ್ಥಕ್ಕೆ ಹೋಗಬೇಕು.

೨. ಭಯಂಕರವಾದ ರಾಕ್ಷಸರು ನಿಹತರಾಗಲು ಅವರನ್ನು ಕೊಂದುದರಿಂದ ಉಂಟಾದ ಪಾತಕವನ್ನು ಕಳೆದುಕೊಳ್ಳಲು ಜನಾರ್ದನನು ಈ ತೀರ್ಥವನ್ನು ನಿರ್ಮಿಸಿದನು

೩. ಆ ತೀರ್ಥದ ಬಳಿಯಲ್ಲಿ ಮಹಾವಿಷ್ಣುವು ಕೋಪವನ್ನು ಜಯಿಸಿ, ಮೌನವನ್ನವಲಂಬಿಸಿ ದೇವದಾನವರಿಗೂ ಅಸಾಧ್ಯವೆನಿಸಿದ ಮಹಾತಪಸ್ಸನ್ನು ಬಹುಕಾಲದವರೆಗೂ ಆಚರಿಸಿದನು.

೪. ಅಲ್ಲಿ ಸ್ನಾನವನ್ನು ಮಾಡಿ ಬ್ರಾಹ್ಮಣರಿಗೆ ಬಹುವಿಧಗಳಾದ ದಾನಗಳನ್ನಿತ್ತು ನಿಮಿಷಮಾತ್ರದಲ್ಲಿ ತನ್ನ ಪಾಪವನ್ನು ಕಳೆದುಕೊಂಡು ವೈಕುಂಠಲೋಕವನ್ನು ಸೇರಿದನು.

**ಏವಂ ಯುಕ್ತಸ್ತು ಯಸ್ತತ್ರ ಪಾಪಂ ಕೃತ್ವಾ ಸುದಾರುಣಂ ।**
**ಸ್ನಾತ್ವಾ ಜಪ್ತ್ವಾ ವಿಧಾನೇನ ಮುಚ್ಯತೇ ಸರ್ವಪಾತಕೈಃ ॥ ೫ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ "ಧೌತಪಾಪತೀರ್ಥಮಾಹಾತ್ಮ್ಯವರ್ಣನಂ" ನಾಮ ದಶೋತ್ತರಶತತಮೋಽಧ್ಯಾಯಃ**

---

೫. ಹೀಗೆ ಅತಿದಾರುಣವಾದ ಪಾತಕವನ್ನು ಮಾಡಿದವನು ಸಹ ಭಕ್ತಿ ಭರಿತನಾಗಿ ಅಲ್ಲಿ ಸ್ನಾನವನ್ನು ಮಾಡಿ ವಿಧ್ಯುಕ್ತರೀತಿಯಲ್ಲಿ ಜಪತಪಾದಿಗಳನ್ನಾಚರಿಸಲು ಸಕಲ ಪಾಪಗಳಿಂದಲೂ ಮುಕ್ತನಾಗುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ "ಧೌತಪಾಪತೀರ್ಥಮಾಹಾತ್ಮ್ಯವರ್ಣನ"ವೆಂಬ ನೂರಹತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥೈಕಾದಶೋತ್ತರಶತತಮೋಽಧ್ಯಾಯಃ

## ಸ್ಕಂದತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ನರ್ಮದಾದಕ್ಷಿಣೇ ಕೂಲೇ ತೀರ್ಥಂ ಪರಮಶೋಭನಂ ।
ಸ್ಕಂದೇನ ನಿರ್ಮಿತಂ ಪೂರ್ವಂ ತಪಃ ಕೃತ್ವಾ ಸುದಾರುಣಂ ॥ ೧ ॥

ಯುಧಿಷ್ಠಿರ ಉವಾಚ :—

ಸ್ಕಂದಸ್ಯ ಚರಿತಂ ಸರ್ವಮಾಜನ್ಮ ದ್ವಿಜಸತ್ತಮ ।
ತೀರ್ಥಸ್ಯ ಚ ವಿಧಿಂ ಪುಣ್ಯಂ ಕಥಯಸ್ವ ಯಥಾರ್ಥತಃ ॥ ೨ ॥

ಶ್ರೀ ಮಾರ್ಕಂಡೇಯ ಉವಾಚ :—

ದೇವದೇವೇನ ವೈ ತಪ್ತಂ ತಪಃ ಪೂರ್ವಂ ಯುಧಿಷ್ಠಿರ ।
ವಿಜ್ಞಪ್ತೇನ ಸುರೈಃ ಸರ್ವೈರುಮಾದೇವೀ ವಿವಾಹಿತಾ ॥ ೩ ॥
ನಾಸ್ತಿ ಸೇನಾಪತಿಃ ಕಶ್ಚಿದ್ದೇವಾನಾಂ ಸುರಸತ್ತಮ ।
ನೀಯಂತೇ ದಾನವೈರ್ಘೋರೈಃ ಸರ್ವೇ ದೇವಾಃ ಸವಾಸವಾಃ ॥ ೪ ॥

---

## ಕನ್ನಡದ ಅನುವಾದ

### ಸ್ಕಂದತೀರ್ಥಮಾಹಾತ್ಮ್ಯವರ್ಣನ

೧. ಮಾರ್ಕಂಡೇಯನು ಹೇಳುತ್ತಾನೆ:—ನರ್ಮದಾನದಿಯ ದಕ್ಷಿಣ ತೀರದಲ್ಲಿ ಪರಮಶೋಭನವಾದ ತೀರ್ಥವೊಂದಿರುವುದು. ಅದನ್ನು ಹಿಂದೆ ಷಣ್ಮುಖನು ದುಸ್ಸಹದಾದ ತಪಸ್ಸನ್ನು ಮಾಡಿ ನಿರ್ಮಿಸಿದನು.

೨. ಯುಧಿಷ್ಠಿರನು ಹೇಳುತ್ತಾನೆ:—ಬ್ರಾಹ್ಮಣೋತ್ತಮನೆ! ಸ್ಕಂದ ಸ್ವಾಮಿಯು ಹುಟ್ಟಿದ ಮೊದಲ ಚರಿತ್ರೆಯನ್ನೂ ಆ ತೀರ್ಥಕ್ಕೆ ಸಂಬಂಧಿಸಿದ ಪುಣ್ಯವಿಧಿಯ ಕ್ರಮವನ್ನೂ ಯಥಾರ್ಥವಾಗಿ ನನಗೆ ತಿಳಿಸು.

೩. ಮಾರ್ಕಂಡೇಯನು ಹೇಳುತ್ತಾನೆ:—ಯುಧಿಷ್ಠಿರನೆ! ಪೂರ್ವದಲ್ಲಿ ಮಹಾದೇವನು ಉಗ್ರವಾದ ತಪಸ್ಸಿನಲ್ಲಿ ನಿರತನಾಗಿದ್ದನು. ಸಕಲ ದೇವತೆಗಳೂ ವಿಜ್ಞಾಪಿಸಿಕೊಳ್ಳಲು ಆತನು ಪಾರ್ವತೀದೇವಿಯನ್ನು ಮದುವೆಯಾದನು.

೪. ದೇವತೆಗಳಿಂತು ವಿಜ್ಞಾಪಿಸಿಕೊಂಡರು. "ದೇವದೇವನೆ! ದೇವತೆಗಳಿಗೆ ಒಬ್ಬ ಸೇನಾಪತಿಯಿಲ್ಲ. ಆದುದರಿಂದ ಮಹೇಂದ್ರನೇ ಮೊದಲಾದ ದೇವತೆಗಳೆಲ್ಲರೂ ಘೋರರಾಕ್ಷಸರಿಂದ ಸೆಳೆದೊಯ್ಯಲ್ಪಡುತ್ತಿರುವರು.

ಯಥಾ ನಿಶಾ ವಿನಾ ಚಂದ್ರಂ ದಿವಸೋ ಭಾಸ್ಕರಂ ವಿನಾ ।
ನ ಶೋಭತೇ ಮುಹೂರ್ತಂ ವೈ ತಥಾ ಸೇನಾನಿನಾಯಕಾ ॥ ೫ ॥
ಏವಂ ಜ್ಞಾತ್ವಾ ಮಹಾದೇವ ಪರಯಾ ದಯಯಾ ವಿಭೋ ।
ಸೇನಾನೀರ್ದೀಯತಾಂ ಕಶ್ಚಿತ್ತ್ರಿಷು ಲೋಕೇಷು ವಿಶ್ರುತಃ ॥ ೬ ॥
ಏತಚ್ಛ್ರುತ್ವಾ ಶುಭಂ ವಾಕ್ಯಂ ದೇವಾನಾಂ ಪರಮೇಶ್ವರಃ ।
ಕಾಮಯಾನ ಉಮಾಂ ದೇವೀಂ ಸಸ್ಮಾರ ಮನಸಾ ಸ್ಮರಂ ॥ ೭ ॥
ತೇನ ಮೂರ್ಛಿತಸರ್ವಾಂಗಃ ಕಾಮರೂಪೋ ಜಗದ್ಗುರುಃ ।
ಕಾಮಯಾಮಾಸ ರುದ್ರಾಣೀಂ ದಿವ್ಯಂ ವರ್ಷಶತಂ ಕಿಲ ॥ ೮ ॥
ದೇವರಾಜಸ್ತತೋ ಜ್ಞಾತ್ವಾ ಮಹಾಮೈಥುನಗಂ ಹರಂ ।
ಸಂಮಂತ್ರ್ಯ ದೇವತೈಃ ಸಾರ್ಧಂ ಪ್ರೈಷಯಜ್ಜಾತವೇದಸಂ ॥ ೯ ॥
ತೇನ ಗತ್ವಾ ಮಹಾದೇವಃ ಪರಮಾನಂದಸಂಸ್ಥಿತಃ ।
ಸಹಸಾ ತೇನ ದೃಷ್ಟೋಽಸೌ ಹಾಹೇತ್ಯುಕ್ತ್ವಾ ಸಮುತ್ಥಿತಃ ॥ ೧೦ ॥
ತತಃ ಕ್ರುದ್ಧಾ ಮಹಾದೇವೀ ಶಾಪವಾಚಮುವಾಚ ಹ ।
ನೇಹಮಾನಾ ಮಹಾರಾಜ ಶೃಣು ಯತ್ತೇ ವದಾಮ್ಯಹಂ ॥ ೧೧ ॥

---

೫. ಚಂದ್ರನಿಲ್ಲದ ರಾತ್ರಿಯಂತೆಯೂ, ಸೂರ್ಯನಿಲ್ಲದ ದಿವಸದಂತೆಯೂ, ನಾಯಕನಿಲ್ಲದೆ ಸೈನ್ಯವು ನಿಮಿಷಮಾತ್ರವಾದರೂ ಶೋಭಿಸಲಾರದು.

೬. ಸರ್ವೇಶ್ವರನಾದ ದೇವನೆ! ಇದನ್ನು ತಿಳಿದು ಪರಮಕೃಪೆಯನ್ನು ಮಾಡಿ ನಮಗೆ ಮೂರು ಲೋಕಗಳಲ್ಲಿಯೂ ಪ್ರಖ್ಯಾತಿಯನ್ನು ಪಡೆಯುವ ಸೇನಾಪತಿಯೊಬ್ಬನನ್ನು ಕೊಡುವವನಾಗು.

೭. ದೇವತೆಗಳ ಈ ಪ್ರಾರ್ಥನೆಯನ್ನು ಕೇಳಿ ಪರಮೇಶ್ವರನು ಪಾರ್ವತಿಯಲ್ಲಿ ಅಭಿಲಾಷೆಯುಳ್ಳವನಾಗಿ ಮನಸ್ಸಿನಲ್ಲಿಯೇ ಮನ್ಮಥನನ್ನು ಸ್ಮರಿಸಿದನು.

೮. ಲೋಕಗುರುವಾದ ಆತನು ಮನ್ಮಥಾಕಾರನಾಗಿ ಕಾಮಪಾರವಶ್ಯತೆಯನ್ನು ಹೊಂದಿ ಪಾರ್ವತಿಯೊಡನೆ ಒಂದು ನೂರು ದಿವ್ಯವರ್ಷಗಳವರೆಗೂ ರಮಿಸುತ್ತಿದ್ದನು

೯. ಇಂತು ಆತನು ದುಸ್ಸಾಧ್ಯವಾದ ಮೈಥುನದಲ್ಲಿ ತೊಡಗಿರುವುದನ್ನು ತಿಳಿದು ದೇವತೆಗಳೊಡನೆ ಸಮಾಲೋಚನೆಯನ್ನು ನಡೆಸಿ ಇಂದ್ರನು ಅಗ್ನಿಯನ್ನು ಮಹಾದೇವನ ಬಳಿಗೆ ಕಳುಹಿದನು.

೧೦. ಆತನು ಹೋಗಿ ಮುನ್ನರಿವಿಲ್ಲದೆಯೇ ಹರನ ಅರಮನೆಯನ್ನು ಹೊಕ್ಕು ಪಾರ್ವತಿಯೊಡನಿದ್ದ ಅತನನ್ನು ಕಂಡನು. ಹಾಹಾಕಾರವನ್ನು ಮಾಡುತ್ತ ಹರನು ಬೇರೆಯಾದನು.

೧೧. ಯುಧಿಷ್ಠಿರ ಮಹಾರಾಜನೆ! ಹೀಗೆ ರತಿಭಂಗವನ್ನು ಮಾಡಿದ ಅಗ್ನಿಯಲ್ಲಿ

ಅಹಂ ಯಸ್ಮಾತ್ಸುರೈಃ ಸರ್ವೈರ್ಯಾಚಿತಾ ಪುತ್ರಜನ್ಮನಿ ।
ಕೃತಾ ರತಿಶ್ಚ ವಿಫಲಾ ಸಂಪ್ರೇಷ್ಯ ಜಾತವೇದಸಂ ॥ ೧೨ ॥
ತಸ್ಮಾತ್ಸರ್ವೇ ಪುತ್ರಹೀನಾ ಭವಿಷ್ಯಂತಿ ನ ಸಂಶಯಃ ।
ಹರೇಣೋಕ್ತಸ್ತತೋ ವಹ್ನಿರಸ್ಮಾಕಂ ಬೀಜವಾವಹ ॥ ೧೩ ॥
ಯಥಾ ಭವತಿ ಲೋಕೇಷು ತಥಾ ತ್ವಂ ಕರ್ತುಮರ್ಹಸಿ ।
ಮಮ ತೇಜಸ್ತ್ವಯಾ ಶಕ್ಯಂ ಗೃಹೀತುಂ ಸುರಸತ್ತಮ ।
ದೇವಕಾರ್ಯಾರ್ಥಸಿಧ್ಯರ್ಥಂ ನಾಽನ್ಯಃ ಶಕ್ತೋ ಜಗತ್ತ್ರಯೇ ॥ ೧೪ ॥

ಅಗ್ನಿರುವಾಚ :—

ತೇಜಸಸ್ತವ ಮೇ ದೇವ ಕಾ ಶಕ್ತಿರ್ಧಾರಣೇ ವಿಭೋ ।
ಕರೋತಿ ಭಸ್ಮಸಾತ್ಸರ್ವಂ ತ್ರೈಲೋಕ್ಯಂ ಸಚರಾಚರಂ ॥ ೧೫ ॥

ಈಶ್ವರ ಉವಾಚ :—

ಉದರಸ್ಥೇನ ಬೀಜೇನ ಯದಿ ತೇ ಜಾಯತೇ ರುಜಾ ।
ತದಾ ಕ್ಷಿಪಸ್ವ ತತ್ತೇಜೋ ಗಂಗಾತೋಯೇ ಹುತಾಶನ ॥ ೧೬ ॥

---

ಕೋಪಗೊಂಡು ಕಂಪಿಸುತ್ತ ಪಾರ್ವತೀದೇವಿಯು ಆತನಿಗಿತ್ತ ಶಾಪವನ್ನು ಹೇಳುವೆನು, ಕೇಳು.

೧೨. "ಸಮಸ್ತ ದೇವತೆಗಳೂ ಬಂದು ಪುತ್ರನನ್ನು ಪಡೆಯಬೇಕೆಂದು ನನ್ನಲ್ಲಿ ಯಾಚಿಸಿದರು. ಆದರೂ ಅಗ್ನಿಯನ್ನು ಕಳುಹಿಸಿ ನನ್ನ ರತಿಯನ್ನೂ ನಿಷ್ಫಲವಾಗಿ ಮಾಡಿದರು.

೧೩. ಆದದುರಿಂದ ಅವರೆಲ್ಲರೂ ಪುತ್ರಹೀನರಾಗುವರೆಂಬುದರಲ್ಲಿ ಸಂದೇಹ ವಿಲ್ಲ." ಅಗ ಮಹೇಶ್ವರನೂ ಅಗ್ನಿಗೆ, "ನಮ್ಮ ಬೀಜವನ್ನು ಧರಿಸುವವನಾಗು ಎಂದನು.

೧೪. ಲೋಕರೂಢಿಯೆಂತೊ, ಅಂತೆಯೇ ನೀನೂ ನಡೆಯಲೇಬೇಕು. ದೇವಮುಖನೆ! ದೇವತೆಗಳ ಕಾರ್ಯದಸಿದ್ಧಿಗಾಗಿ ನನ್ನ ತೇಜಸ್ಸನ್ನು ಧರಿಸಲು ನೀನೊಬ್ಬನು ಶಕ್ಯನೇ ಹೊರತು ಮೂರು ಲೋಕಗಳಲ್ಲಿ ಮತ್ತೊಬ್ಬನಾವನೂ ಇರುವುದಿಲ್ಲ."

೧೫. ಅಗ್ನಿಯು ಹೇಳುತ್ತಾನೆ:—ಸರ್ವವ್ಯಾಪಿಯಾದ ದೇವನೆ! ನಿನ್ನ ತೇಜಸ್ಸನ್ನು ಧರಿಸಲು ನನಗೆ ಶಕ್ತಿಯಲ್ಲಿಯದು? ಚರಾಚರರಾಶಿಗಳಿಂದೊಡಗೂಡಿದ ಮೂರುಲೋಕಗಳನ್ನೂ ಅದು ಭಸ್ಮಮಾಡುವ ಮಹಿಮೆಯುಳ್ಳದ್ದಾಗಿರುವುದು."

೧೬. ಈಶ್ವರನು ಹೇಳುತ್ತಾನೆ —ಹುತಾಶನನೆ! ಹೊಟ್ಟೆಯಲ್ಲಿರುವ ರೇತಸ್ಸಿನಿಂದ ನಿನಗೆ ಯಾವಾಗ ಸಂಕಟವಾಗುವುದೊ, ಆಗ ಅದನ್ನು ಗಂಗಾ ನದಿಯ ಜಲದಲ್ಲಿ ಬಿಟ್ಟುಬಿಡು.

**ಏವಮುಕ್ತ್ವಾ ಮಹಾದೇವೋ ಅಮೋಘಂ ಬೀಜಮುತ್ತಮಂ ।**
**ಹವ್ಯವಾಹಮುಖೇ ಸರ್ವಂ ಪ್ರಕ್ಷಿಪ್ಯಾಂತರಧೀಯತ ॥ ೧೭ ॥**
**ಗತೇಽಚಾಽದರ್ಶನಂ ದೇವೇ ವಹ್ಯಮಾನೋ ಹುತಾಶನಃ ।**
**ಗಂಗಾತೋಯೇ ವಿನಿಕ್ಷಿಪ್ಯ ಜಗಾಮ ಸ್ವಂ ನಿವೇಶನಂ ॥ ೧೮ ॥**
**ಅಸಹಂತೀ ತು ತತ್ತೇಜೋ ಗಂಗಾಽಪಿ ಸರಿತಾಂ ವರಾ ।**
**ಶರಸ್ತಂಭೇ ವಿನಿಕ್ಷಿಪ್ಯ ಜಗಾಮಾಽಽಶು ಯಥಾಽಽಗತಂ ॥ ೧೯ ॥**
**ತತ್ರ ಜಾತಂ ತು ತದ್ದೃಷ್ಟ್ವಾ ಸರ್ವೇ ದೇವಾಃ ಸವಾಸವಾಃ ।**
**ಕೃತ್ತಿಕಾಂ ಪ್ರೇಷಯಾಮಾಸುಃ ಸ್ತನ್ಯಂ ಪಾಯಯಿತುಂ ತದಾ ॥ ೨೦ ॥**
**ದೃಷ್ಟ್ವಾ ತಾ ಆಗತಾಃ ಸರ್ವಾ ಗಂಗಾಗರ್ಭೇ ಮಹಾಮತೇಃ ।**
**ಷಣ್ಮುಖೈಃ ಷಣ್ಮುಖೋ ಭೂತ್ವಾ ಪಿಪಾಸುರಪಿಬತ್‌ಸ್ತನಂ ॥ ೨೧ ॥**
**ಜಾತಕರ್ಮಾದಿಸಂಸ್ಕಾರಾನ್ವೇದೋಕ್ತಾನ್ ಪದ್ಮಸಂಭವಃ ।**
**ಚಕಾರ ಸರ್ವಾನ್ ರಾಜೇಂದ್ರ ವಿಧಿದೃಷ್ಟೇನ ಕರ್ಮಣಾ ॥ ೨೨ ॥**

---

೧೭. ಅಮೋಘವೀರ್ಯನಾದ ಪರಮೇಶ್ವರನು ಇಂತೆಂದು ತನ್ನ ವೀರ್ಯವನ್ನು ಅಗ್ನಿಯ ಮುಖದಲ್ಲಿ ವಿಸರ್ಜಿಸಿ ಅಂತರ್ಹಿತನಾದನು.

೧೮. ಆ ದೇವದೇವನು ಅದೃಶ್ಯನಾಗಲು ಆತನ ವೀರ್ಯದಿಂದ ಸಂತಪ್ತನಾದ ಅಗ್ನಿದೇವನು ಅದನ್ನು ಗಂಗಾನದಿಯಲ್ಲಿ ತ್ಯಜಿಸಿ ತನ್ನ ಮನೆಗೆ ಹೊರಟು ಹೋದನು.

೧೯. ಗಂಗಾದೇವಿಯೂ ಆ ತೇಜಸ್ಸನ್ನು ತಡೆಯಲಾರದೆ ಅದನ್ನು ಜೊಂಡುಹುಲ್ಲಿನ ಒಂದು ಮೆಳೆಯಲ್ಲಿ ವಿಸರ್ಜಿಸಿ ತಾನು ಬಂದಂತೆ ಹೊರಟು ಹೋದಳು.

೨೦. ಅಲ್ಲಿ ಬೆಳೆಯುತ್ತಿದ್ದ ಆ ಮಗುವನ್ನು ಕಂಡು ಇಂದ್ರಾದಿ ದೇವತೆಗಳೆಲ್ಲರೂ ಅದಕ್ಕೆ ಸ್ತನ್ಯಪಾನವನ್ನು ಮಾಡಿಸುವಂತೆ ಕೃತ್ತಿಕೆಯರನ್ನು ಪ್ರೇರಿಸಿದರು.

೨೧. ಅವರು ಗಂಗಾಮಧ್ಯದಲ್ಲಿದ್ದ ಮಹಾಬುದ್ಧಿಯಾದ ಆ ಮಗುವನ್ನು ಕಂಡು ಅಲ್ಲಿಗೆ ಬಂದರು. ಸ್ಕಂದನು ಆರು ಮುಖಗಳುಳ್ಳವನಾಗಿ ಬಾಯಾರಿಕೆಯಿಂದ ಏಕಕಾಲದಲ್ಲಿಯೇ ಎಲ್ಲರಿಂದಲೂ ಸ್ತನ್ಯವನ್ನು ಪಾನಮಾಡಿದನು.

೨೨. ರಾಜೇಂದ್ರನೆ! ಬ್ರಹ್ಮದೇವನೇ ಆ ಮಗುವಿಗೆ ಶಾಸ್ತ್ರವಿಹಿತವಾದ ರೀತಿಯಿಂದ ವೇದೋಕ್ತಗಳಾದ ಜಾತಕರ್ಮವೇ ಮೊದಲಾದ ಸಮಸ್ತ ಸಂಸ್ಕಾರಗಳನ್ನೂ ಮಾಡಿದನು.

ಷಣ್ಮುಖಾತ್ ಷಣ್ಮುಖೋ ನಾಮ ಕಾರ್ತಿಕೇಯಸ್ತು ಕೃತ್ತಿಕಾತ್ ।
ಕುಮಾರಶ್ಚ ಕುಮಾರತ್ವಾದ್ಗಂಗಾ ಗರ್ಭೋಽಗ್ನಿಜೋಽಪರಃ ॥ ೨೩ ॥
ಏವಂ ಕುಮಾರಃ ಸಂಭೂತೋ ಹ್ಯನಧೀತ್ಯ ಸ ವೇದವಿತ್ ।
ಶಾಸ್ತ್ರಾಣ್ಯನೇಕಾನಿ ವೇದ ಚಚಾರ ವಿಪುಲಂ ತಪಃ ॥ ೨೪ ॥
ದೇವಾರಣ್ಯೇಷು ಸರ್ವೇಷು ನದೀಷು ಚ ನದೇಷು ಚ ।
ಪೃಥಿವ್ಯಾಂ ಯಾನಿ ತೀರ್ಥಾನಿ ಸಮುದ್ರಾದ್ಯಾನಿ ಭಾರತ ॥ ೨೫ ॥
ತತಃ ಪರ್ಯಾಯಯೋಗೇನ ನರ್ಮದಾತಟಮಾಶ್ರಿತಃ ।
ನರ್ಮದಾದಕ್ಷಿಣೇ ಕೂಲೇ ಚಚಾರ ವಿಪುಲಂ ತಪಃ ॥ ೨೬ ॥
ಋಗ್ಯಜುಃಸಾಮವಿಹಿತಂ ಜಪಂ ಜಾಪ್ಯಮಹರ್ನಿಶಂ ।
ಧ್ಯಾಯಮಾನೋ ಮಹಾದೇವಂ ಶುಚಿರ್ಧಮನಿಸಂತತಃ ॥ ೨೭ ॥
ತತೋ ವರ್ಷಸಹಸ್ರಾಂತೇ ಪೂರ್ಣೇ ದೇವೋ ಮಹೇಶ್ವರಃ ।
ಉಮಯಾ ಸಹಿತಃ ಕಾಲೇ ತದಾ ವಚನಮಬ್ರವೀತ್ ॥ ೨೮ ॥

---

೨೩. ಆರು ಮುಖಗಳುಳ್ಳವನಾದುದರಿಂದ ಷಣ್ಮುಖನೆಂದೂ, ಕೃತ್ತಿಕೆಯರಿಂದ ಪೋಷಿತನಾಗಿ ಕಾರ್ತಿಕೇಯನೆಂದೂ, ಶಿವನ ಕುಮಾರನಾದುದರಿಂದ ಕುಮಾರಸ್ವಾಮಿಯೆಂದೂ, ಹಾಗೆಯೇ ಗಂಗಾಗರ್ಭನೆಂದೂ, ಅಗ್ನಿಜನ್ಮನೆಂದೂ ಆತನು ಪ್ರಖ್ಯಾತನಾದನು.

೨೪. ಇಂತು ಕುಮಾರನು ಪ್ರಾದುರ್ಭವಿಸಿ ಅಧ್ಯಯನವಿಲ್ಲದೆಯೇ ಸಕಲ ವೇದಗಳನ್ನೂ ತಿಳಿದವನಾಗಿ, ಅನೇಕ ಶಾಸ್ತ್ರಗಳಲ್ಲಿಯೂ ನಿಷ್ಣಾತನಾಗಿ, ಅಪಾರವಾದ ತಪಸ್ಸನ್ನಾಚರಿಸಿದನು.

೨೫. ಸಮಸ್ತದೇವಾರಣ್ಯಗಳಲ್ಲಿಯೂ, ನದಿಗಳಲ್ಲಿಯೂ, ನದಗಳಲ್ಲಿಯೂ, ಭೂಮಿಯಲ್ಲಿರುವ ಸಮುದ್ರವೇ ಮೊದಲಾದ ಸಕಲ ತೀರ್ಥಗಳಲ್ಲಿಯೂ ಸಂಚರಿಸಿದನು.

೨೬. ಹೀಗೆ ಕಾಲಾನುಕ್ರಮದಲ್ಲಿ ನರ್ಮದಾನದಿಯ ಪ್ರದೇಶವನ್ನು ಸೇರಿ ಅದರ ದಕ್ಷಿಣತೀರದಲ್ಲಿ ಬಹಳಕಾಲದವರೆಗೂ ತಪಸ್ಸನ್ನಾಚರಿಸುತ್ತಿದ್ದನು.

೨೭. ಶುಚಿಯೂ ಧಮನಿಮಾತ್ರಾವಶೇಷವಾದ ಕೃಶಶರೀರನೂ ಆಗಿ ಋಗ್ಯಜುಸ್ಸಾಮವೇದಗಳಲ್ಲಿರುವ ಮಂತ್ರಗಳನ್ನು ಹಗಲುರಾತ್ರಿಗಳಲ್ಲಿಯೂ ಜಪಿಸುತ್ತ ಮಹಾದೇವನನ್ನೇ ಧ್ಯಾನಿಸುತ್ತಿದ್ದನು.

೨೮. ಬಳಿಕ ಒಂದು ಸಾವಿರ ವರ್ಷಗಳ ಕಾಲವು ಪೂರ್ಣವಾಗಲು ಪಾರ್ವತೀಸಮೇತನಾದ ಪರಮೇಶ್ವರನು ಆತನಲ್ಲಿ ಪ್ರಸನ್ನನಾಗಿ ಇಂತೆಂದನು.

ಈಶ್ವರ ಉವಾಚ :—

ಅಹಂ ತೇ ವರದಸ್ತಾತ ಗೌರೀ ಮಾತಾ ಪಿತಾಹ್ಯಹಂ ।
ವರಂ ವೃಣೀಷ್ವ ಯಚ್ಚೇಷ್ಟಂ ತ್ರಿಷು ಲೋಕೇಷು ದುರ್ಲಭಂ ॥ ೨೯ ॥

ಷಣ್ಮುಖ ಉವಾಚ :—

ಯದಿ ತುಷ್ಟೋ ಮಹಾದೇವ ಉಮಯಾ ಸಹ ಶಂಕರ ।
ವೃಣೋಮಿ ಮಾತಾಪಿತರೌ ನಾಽನ್ಯಾ ಗತಿರ್ಮತಿರ್ಮಮ ॥ ೩೦ ॥
ಏತಚ್ಛ್ರುತ್ವಾ ಶುಭಂ ವಾಕ್ಯಂ ಪುತ್ರಸ್ಯ ವದನಾಚ್ಚ್ಯುತಂ ।
ತಥೇತ್ಯುಕ್ತ್ವಾ ತು ಸ್ನೇಹೇನ ಪ್ರೇಮ್ಣಾ ತಂ ಪರಿಷಸ್ವಜೇ ॥ ೩೧ ॥
ತತಸ್ತಂ ಮೂರ್ಧ್ನ್ಯುಪಾಘ್ರಾಯ ಹ್ಯುಮಯೋವಾಚ ಶಂಕರಃ ॥ ೩೨ ॥

ಈಶ್ವರ ಉವಾಚ :—

ಅಕ್ಷಯಶ್ಚಾಽವ್ಯಯಶ್ಚೈವ ಸೇನಾನೀಸ್ತ್ವಂ ಭವಿಷ್ಯಸಿ ॥ ೩೩ ॥
ಶಿಖೀ ಚ ತೇ ವಾಹನಂ ದಿವ್ಯರೂಪೋ
ದತ್ತೋ ಮಯಾ ಶಕ್ತಿಧರಸ್ಯ ಸಂಖ್ಯೇ ।
ಸುರಾಽಸುರಾದೀಂಶ್ಚ ಜಯೇತಿ ಚೋಕ್ತ್ವಾ
ಜಗಾಮ ಕೈಲಾಸವರಂ ಮಹಾತ್ಮಾ ॥ ೩೪ ॥

---

೨೯. ಈಶ್ವರನು ಹೇಳುತ್ತಾನೆ.—ಮಗನೆ! ನಿನಗೆ ವರಗಳನ್ನೀಯಲು ಬಂದಿರುವೆನು. ಗೌರಿಯೇ ನಿನ್ನ ತಾಯಿಯು, ನಾನೇ ತಂದೆಯು. ಮೂರು ಲೋಕಗಳಲ್ಲಿ ದುರ್ಲಭವಾದುದಾದರೂ ನಿನಗೆ ಬೇಕಾದ ವರವನ್ನು ಕೇಳು.

೩೦. ಷಣ್ಮುಖನು ಹೇಳುತ್ತಾನೆ.—ಶಂಕರನೆ! ಉಮಾಸಮೇತನಾದ ನೀನು ಸಂತುಷ್ಟನಾಗಿರುವೆಯಾದರೆ ನೀವೇ ನನಗೆ ತಾಯಿತಂದೆಗಳಾಗಿರಬೇಕೆಂದು ಬೇಡಿಕೊಳ್ಳುವೆನು. ನನಗೆ ಬೇರೆ ಗತಿಮತಿಯೆಲ್ಲಿ?

೩೧–೩೨. ಮಗನ ಮುಖದಿಂದ ಹೊರಟ ಈ ಮಂಗಳವಾಕ್ಯಗಳನ್ನು ಕೇಳಿ, ಸ್ನೇಹದಿಂದ ಹಾಗೆಯೇ ಆಗಲೆಂದು, ಪುತ್ರಪ್ರೇಮದಿಂದ ಆತನನ್ನಾಲಿಂಗಿಸಿಕೊಂಡನು. ಪಾರ್ವತಿಯೊಡನೆ ಷಣ್ಮುಖನ ತಲೆಯನ್ನು ಮೂಸಿನೋಡುತ್ತ ಮಹಾದೇವನಿಂತೆಂದನು.

೩೩. ಈಶ್ವರನು ಹೇಳುತ್ತಾನೆ:—"ನೀನು ಮುಪ್ಪುಸಾವುಗಳಿಲ್ಲದವನಾಗಿ ದೇವತೆಗಳಿಗೆ ಸೇನಾಧಿಪತಿಯಾಗುವೆ.

೩೪. ನಿನಗೆ ನವಿಲೇ ವಾಹನವಾಗಿರಲಿ. ನಿನಗೆ ದಿವ್ಯರೂಪವನ್ನು ಕೊಟ್ಟಿರುವೆನು. ಯುದ್ಧದಲ್ಲಿ ಶಕ್ತ್ಯಾಯುಧವನ್ನು ಹಿಡಿದು ದೇವದಾನವಾದಿಗಳೆಲ್ಲರನ್ನೂ ಜಯಿಸು" ಎಂದು ಆಶೀರ್ವದಿಸಿ ಮಹಾಮಹಿಮನಾದ ಮಹಾದೇವನು ಕೈಲಾಸಕ್ಕೆ ಪ್ರಯಾಣವನ್ನುಮಾಡಿದನು.

**ಗತೇ ಚಾಽದರ್ಶನಂ ದೇವೇ ತದಾ ಸ ಶಿಖಿವಾಹನಃ ।**
**ಸ್ಥಾಪಯಿತ್ವಾ ಮಹಾದೇವಂ ಜಗಾಮ ಸುರಸನ್ನಿಧೌ ॥ ೩೫ ॥**
**ತದಾ ಪ್ರಭೃತಿ ತತ್ತೀರ್ಥಂ ಸ್ಕಂದತೀರ್ಥಮಿತಿ ಶ್ರುತಂ ।**
**ಸರ್ವಪಾಪಹರಂ ಪುಣ್ಯಂ ಮರ್ತ್ಯಾನಾಂ ಭುವಿ ದುರ್ಲಭಂ ॥ ೩೬ ॥**
**ತತ್ರ ತೀರ್ಥೇ ತು ಯೋ ರಾಜನ್ ಭಕ್ತ್ಯಾ ಸ್ನಾತ್ವಾಽರ್ಚಯೇಚ್ಛಿವಂ ।**
**ಗಂಧಮಾಲ್ಯಾಽಭಿಷೇಕೈಶ್ಚ ಯಜ್ಞಕಂ ಸ ಲಭೇತ್ಫಲಂ ॥ ೩೭ ॥**
**ಸ್ಕಂದತೀರ್ಥೇ ತು ಯಃ ಸ್ನಾತ್ವಾ ಪೂಜಯೇತ್ಪಿತೃದೇವತಾಃ ।**
**ತಿಲಮಿಶ್ರೇಣ ತೋಯೇನ ತಸ್ಯ ಪುಣ್ಯಫಲಂ ಶೃಣು ॥ ೩೮ ॥**
**ಪಿಂಡದಾನೇನ ಚೈಕೇನ ವಿಧಿಯುಕ್ತೇನ ಭಾರತ ।**
**ದ್ವಾದಶಾಬ್ದಾನಿ ತುಷ್ಯಂತಿ ಪಿತರೋ ನಾಽತ್ರ ಸಂಶಯಃ ॥ ೩೯ ॥**
**ತತ್ರ ತೀರ್ಥೇ ತು ರಾಜೇಂದ್ರ ಶುಭಂ ವಾ ಯದಿ ವಾಽಶುಭಂ ।**
**ಇಹಲೋಕೇ ಪರೇಚೈವ ತತ್ಸರ್ವಂ ಚಾಽಕ್ಷಯಂ ಭವೇತ್ ॥ ೪೦ ॥**

---

೩೫. ಇಂತು ಮಹೇಶ್ವರನು ಅದೃಶ್ಯನಾಗಲು ಶಿಖಿವಾಹನನಾದ ಸ್ಕಂದನು ಅಲ್ಲಿಯೇ ಬಂದು ಮಾಹೇಶ್ವರಲಿಂಗವನ್ನು ಸ್ಥಾಪಿಸಿ ದೇವತೆಗಳ ಸನ್ನಿಧಿಗೆ ಹೊರಟುಹೋದನು.

೩೬. ಅಂದಿನಿಂದ ಆ ತೀರ್ಥವು ಸ್ಕಂದತೀರ್ಥವೆಂದು ಪ್ರಖ್ಯಾತವಾಗಿರುವುದು. ಸಮಸ್ತಪಾತಕಗಳನ್ನೂ ಕಳೆದು ಪುಣ್ಯವನ್ನು ಕೊಡುವ ಈ ತೀರ್ಥವು ಭೂಲೋಕದ ಮಾನವರಿಗೆ ಅತ್ಯಂತ ದುರ್ಲಭವಾಗಿರುವುದು.

೩೭. ಚಕ್ರವರ್ತಿಯೆ! ಈ ತೀರ್ಥದಲ್ಲಿ ಭಕ್ತಿಯಿಂದ ಸ್ನಾನವನ್ನುಮಾಡಿ ಗಂಧಮಾಲ್ಯಾದಿಗಳಿಂದಲೂ, ಅಭಿಷೇಕಗಳಿಂದಲೂ ಅಲ್ಲಿರುವ ಶಿವಲಿಂಗವನ್ನರ್ಚಿಸುವ ಮನುಜನು ಯಜ್ಞವನ್ನುಮಾಡಿದ ಫಲವನ್ನು ಪಡೆಯುವನು.

೩೮. ಸ್ಕಂದತೀರ್ಥದಲ್ಲಿ ಸ್ನಾತನಾಗಿ ತಿಲಮಿಶ್ರವಾದ ಜಲದಿಂದ ಪಿತೃದೇವತೆಗಳಿಗೆ ಯಾವನು ತರ್ಪಣಗಳನ್ನು ಕೊಡುವನೊ, ಅವನಿಗೆ ಲಭಿಸುವ ಪುಣ್ಯದ ಫಲವನ್ನು ಕೇಳು.

೩೯. ಧರ್ಮರಾಜನೆ! ಇಲ್ಲಿ ವಿಧಿಯುಕ್ತವಾದ ರೀತಿಯಿಂದ ಒಮ್ಮೆ ಪಿಂಡದಾನವನ್ನುಮಾಡಲು ಪಿತೃಗಳಿಗೆ ಹನ್ನೆರಡು ವರ್ಷಗಳವರೆಗೂ ಸಂತುಷ್ಟಿಯಾಗುವುದರಲ್ಲಿ ಸಂದೇಹವಿಲ್ಲ.

೪೦. ರಾಜೇಂದ್ರನೆ! ಆ ತೀರ್ಥದಲ್ಲಿ ಮಾಡಿದ ಒಳ್ಳೆಯ ಕೆಲಸವಾಗಲಿ ದುಷ್ಕಾರ್ಯವಾಗಲಿ, ಅದರ ಫಲವು ಇಹಲೋಕದಲ್ಲಿಯೂ ಪರಲೋಕದಲ್ಲಿಯೂ ಅಕ್ಷಯವಾಗಿರುವುದು.

ತತ್ರ ತೀರ್ಥೇ ತು ಯಃ ಕಶ್ಚಿತ್ಪ್ರಾಣತ್ಯಾಗಂ ಕರಿಷ್ಯತಿ ।
ಶಾಸ್ತ್ರಯುಕ್ತೇನ ವಿಧಿನಾ ಸ ಗಚ್ಛೇಚ್ಛಿವಮಂದಿರಂ ॥ ೪೧ ॥
ಕಲ್ಪಮೇಕಂ ವಸಿತ್ವಾ ತು ದೇವಗಂಧರ್ವಪೂಜಿತಃ ।
ಅತ್ರ ಭಾರತವರ್ಷೇ ತು ಜಾಯತೇ ವಿಮಲೇ ಕುಲೇ ॥ ೪೨ ॥
ವೇದವೇದಾಂಗತತ್ತ್ವಜ್ಞಃ ಸರ್ವವ್ಯಾಧಿವಿವರ್ಜಿತಃ ।
ಜೀವೇದ್ವರ್ಷಶತಂ ಸಾಗ್ರಂ ಪುತ್ರಪೌತ್ರಸಮನ್ವಿತಃ ॥ ೪೩ ॥
ಇದಂ ತೇ ಕಥಿತಂ ರಾಜನ್ಸ್ಕಂದತೀರ್ಥಸ್ಯ ಸಂಭವಂ ।
ಧನ್ಯಂ ಯಶಸ್ಯಮಾಯುಷ್ಯಂ ಸರ್ವದುಃಖಘ್ನಮುತ್ತಮಂ ।
ಸರ್ವಪಾಪಹರಂ ಪುಣ್ಯಂ ದೇವದೇವೇನ ಭಾಷಿತಂ ॥ ೪೪ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ಸ್ಕಂದತೀರ್ಥಮಾಹಾತ್ಮ್ಯವರ್ಣನಂ"
ನಾಮೈಕಾದಶೋತ್ತರಶತತಮೋಽಧ್ಯಾಯಃ

---

೪೧. ಶಾಸ್ತ್ರಗಳಲ್ಲಿ ಹೇಳಿರುವ ವಿಧಿಯಂತೆ ಆ ತೀರ್ಥದಲ್ಲಿ ಯಾವನು ಪ್ರಾಣತ್ಯಾಗವನ್ನು ಮಾಡುವನೊ, ಅವನು ಶಿವನ ನಿವಾಸವನ್ನು ಸೇರುವನು.

೪೨. ಅಲ್ಲಿ ದೇವಗಂಧರ್ವಾದಿಗಳಿಂದ ಪೂಜೆಯನ್ನು ಕೈಕೊಳ್ಳುತ್ತ ಒಂದು ಕಲ್ಪದವರೆಗೂ ಇದ್ದು ಬಳಿಕ ಈ ಭಾರತವರ್ಷದಲ್ಲಿಯೇ ಉತ್ತಮವಾದ ಕುಲದಲ್ಲಿ ಜನಿಸುವನು.

೪೩. ವೇದವೇದಾಂಗಗಳ ರಹಸ್ಯಗಳನ್ನರಿತವನಾಗಿ, ಸಕಲವ್ಯಾಧಿಗಳಿಂದ ದೂರವಾಗಿ, ಪುತ್ರಪೌತ್ರಾದಿಗಳಿಂದೊಡಗೂಡಿ ಪೂರ್ಣವಾಗಿ ನೂರುವರ್ಷಗಳ ಆಯುಷ್ಯವನ್ನನುಭವಿಸುವನು.

೪೪. ರಾಜೇಂದ್ರನೆ! ಇಂತು ಸ್ಕಂದತೀರ್ಥವು ಉದ್ಭವಿಸಿದ ಚರಿತ್ರೆಯನ್ನು ನಿನಗೆ ವರ್ಣಿಸಿದೆನು. ಈ ಕಥೆಯು ಧನಪ್ರದವೂ, ಯಶಸ್ಕಾರಕವೂ, ಆಯುಷ್ಯವರ್ಧಕವೂ, ಸಕಲದುಃಖನಿವಾರಕವೂ, ಪರಮಪವಿತ್ರವೂ, ಸಮಸ್ತಪಾಪಪರಿಹಾರಕವೂ, ಪುಣ್ಯಪ್ರದವೂ ಆದುದೆಂದು ಮಹಾದೇವನ ವಚನವೇ ಇರುವುದು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಸ್ಕಂದತೀರ್ಥಮಾಹಾತ್ಮ್ಯವರ್ಣನ"ವೆಂಬ
ನೂರಹನ್ನೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ದ್ವಾದಶಾಽಧಿಕಶತತಮೋಽಧ್ಯಾಯಃ

## ಆಂಗಿರಸತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ತತೋ ಗಚ್ಛೇತ್ತು ರಾಜೇಂದ್ರ ತೀರ್ಥಮಾಂಗಿರಸಸ್ಯ ತು ।
ಉತ್ತರೇ ನರ್ಮದಾಕೂಲೇ ಸರ್ವಪಾಪವಿನಾಶನಂ ॥ ೧ ॥
ಪುರಾಽಽಸೀದಂಗಿರಾನಾಮ ಬ್ರಾಹ್ಮಣೋ ವೇದಪಾರಗಃ ।
ಪುತ್ರಹೇತೋರ್ಯುಗಸ್ಯಾಽಽದೌ ಚಚಾರ ವಿಪುಲಂ ತಪಃ ॥ ೨ ॥
ನಿತ್ಯಂ ತ್ರಿಷವಣಸ್ನಾಯೀ ಜಪನ್ದೇವಂ ಸನಾತನಂ ।
ಪೂಜಯಂಶ್ಚ ಮಹಾದೇವಂ ಕೃಚ್ಛ್ರಚಾಂದ್ರಾಯಣಾದಿಭಿಃ ॥ ೩ ॥
ದ್ವಾದಶಾಬ್ದೇ ತತಃ ಪೂರ್ಣೇ ತುತೋಷ ಪರಮೇಶ್ವರಃ ।
ವರೇಣ ಛಂದಯಾಮಾಸ ದ್ವಿಜಮಾಂಗಿರಸಂ ವರಂ ॥ ೪ ॥

---

## ಕನ್ನಡದ ಅನುವಾದ

### ಆಂಗಿರಸತೀರ್ಥಮಹಾತ್ಮ್ಯವರ್ಣನ

೧. ಮಾರ್ಕಂಡೇಯನು ಹೇಳುತ್ತಾನೆ —ಚಕ್ರವರ್ತಿಯೆ! ಅಲ್ಲಿಂದ ಆಂಗೀರಸತೀರ್ಥವನ್ನು ಸೇವಿಸಬೇಕು. ನರ್ಮದೆಯ ಉತ್ತರತೀರದಲ್ಲಿರುವ ಈ ತೀರ್ಥವು ಸಮಸ್ತಪಾಪಗಳನ್ನೂ ಕಳೆಯುವುದು.

೨. ಹಿಂದೆ ಕಲಿಯುಗದ ಆದಿಯಲ್ಲಿ ವೇದಗಳಲ್ಲಿ ಪಾರಂಗತನಾದ ಆಂಗಿರನೆಂಬ ಬ್ರಾಹ್ಮಣನೊಬ್ಬನಿದ್ದನು. ಪುತ್ರಾಭಿಲಾಷೆಯಿಂದ ಆತನು ಬಹಳವಾಗಿ ತಪಸ್ಸನ್ನಾಚರಿಸಿದನು.

೩. ನಿತ್ಯವೂ ತ್ರಿಸಂಧ್ಯೆಗಳಲ್ಲಿ ಸ್ನಾನಗಳನ್ನು ಮಾಡುತ್ತ ಕೃಚ್ಛ್ರ, ಚಾಂದ್ರಾಯಣಾದಿ ನಿಯಮಗಳನ್ನು ಪಾಲಿಸಿ ಅನಾದಿನಿಧನನಾದ ಮಹಾದೇವನನ್ನು ಜಪತಪಗಳಿಂದಲೂ ಪೂಜೆಗಳಿಂದಲೂ ಸೇವಿಸುತ್ತಿದ್ದನು.

೪. ಹೀಗೆ ಹನ್ನೆರಡು ವರ್ಷಗಳು ಕಳೆದುಹೋಗಲು ಪರಮೇಶ್ವರನು ಆತನಲ್ಲಿ ಸಂತುಷ್ಟನಾಗಿ ಆ ದ್ವಿಜೋತ್ತಮನನ್ನು ಕರೆದು ವರವನ್ನು ಕೊಡಲು ಉದ್ಯುಕ್ತನಾದನು.

ವವ್ರೇ ಸತು ಮಹಾದೇವಂ ಪುತ್ರಂ ಪುತ್ರವತಾಂ ವರಂ ।
ವೇದವಿದ್ಯಾವ್ರತಸ್ನಾತಂ ಸರ್ವಶಾಸ್ತ್ರವಿಶಾರದಂ ॥ ೫ ॥
ದೇವಾನಾಂ ಮಂತ್ರಿಣಂ ರಾಜನ್ ಸರ್ವಲೋಕೇಷು ಪೂಜಿತಂ ।
ಬ್ರಹ್ಮಲಕ್ಷ್ಮ್ಯಾಃ ಸದಾವಾಸಮಕ್ಷಯಂ ಚಾಽವ್ಯಯಂ ಸುತ ॥ ೬ ॥
ತಥಾಽಭಿಲಷಿತಃ ಪುತ್ರಃ ಸರ್ವವಿದ್ಯಾವಿಶಾರದಃ ।
ಭವಿಷ್ಯತಿ ನ ಸಂದೇಹಶ್ಚೈವಮುಕ್ತ್ವಾ ಯಯೌ ಹರಃ ॥ ೭ ॥
ವರೈರಂಗಿರಸಶ್ಚಾಽಪಿ ಬೃಹಸ್ಪತಿರಜಾಯತ ।
ಯಥಾಽಭಿಲಷಿತಃ ಪುತ್ರೋ ವೇದವೇದಾಂಗಪಾರಗಃ ॥ ೮ ॥
ಜಾತೇ ಪುತ್ರೇಽಂಗಿರಾಸ್ತತ್ರ ಸ್ಥಾಪಯಾಮಾಸ ಶಂಕರಂ ।
ಹೃಷ್ಟತುಷ್ಟಮನಾ ಭೂತ್ವಾ ಜಗಾಮೋತ್ತರಪರ್ವತಂ ॥ ೯ ॥
ತತ್ರ ಚಾಂಗಿರಸೇ ತೀರ್ಥೇ ಯಃ ಸ್ನಾತ್ವಾ ಪೂಜಯೇಚ್ಛಿವಂ ।
ಸರ್ವಪಾಪವಿನಿರ್ಮುಕ್ತೋ ರುದ್ರಲೋಕಂ ಸ ಗಚ್ಛತಿ ॥ ೧೦ ॥

---

೫–೬. ಆತನು ಪುತ್ರವಂತರಲ್ಲಿ ಶ್ರೇಷ್ಠನಾದ ಮಹಾದೇವನನ್ನು ಕಂಡು ವೇದವಿದ್ಯೆಯಲ್ಲಿ ಸಂಪೂರ್ಣಜ್ಞಾನವುಳ್ಳವನೂ, ಸಕಲಶಾಸ್ತ್ರಗಳಲ್ಲಿ ವಿಶಾರದನೂ, ದೇವತೆಗಳಿಗೆ ಮಂತ್ರಿಯೂ, ಸಕಲಜನರಿಂದ ಪೂಜಾರ್ಹನೂ, ಬ್ರಹ್ಮತೇಜಸ್ಸಿಗೆ ಮಹಾನಿಲಯನೂ, ಜರಾಮರಣವರ್ಜಿತನೂ ಆದ ಪುತ್ರನನ್ನು ಕೇಳಿ ಕೊಂಡನು.

೭. "ನೀನು ಆಶಿಪಟ್ಟಂತೆಯೇ ಸಕಲವಿದ್ಯಾಪಾರಂಗತನಾದ ಪುತ್ರನು ನಿನಗಾಗುವನು; ಸಂದೇಹವಿಲ್ಲ" ಎಂದು ಅಭಯವನ್ನಿತ್ತು ಪರಮೇಶ್ವರನು ಹೊರಟುಹೋದನು.

೮. ಮಹೇಶ್ವರನ ವರಪ್ರಸಾದದಿಂದ ಅಂಗಿರಸನಿಗೆ ಬೃಹಸ್ಪತಿಯೆಂಬ ಪುತ್ರನಾದನು. ಆತನು ತಂದೆಯ ಇಚ್ಛೆಯಂತೆಯೇ ವೇದವೇದಾಂಗಗಳಲ್ಲಿ ನಿಷ್ಣಾತನಾಗಿದ್ದನು.

೯. ಪುತ್ರೋತ್ಸವವಾಗಲು ಆನಂದದಿಂದ ತುಂಬಿದ ಹೃದಯವುಳ್ಳವನಾಗಿ ಅಂಗಿರಸನು ಆ ಸ್ಥಳದಲ್ಲಿ ಒಂದು ಶಿವಲಿಂಗವನ್ನು ಪ್ರತಿಷ್ಠಿಸಿ ಉತ್ತರಪರ್ವತಕ್ಕೆ ಹೊರಟುಹೋದನು.

೧೦. ಈ ಅಂಗಿರಸತೀರ್ಥದಲ್ಲಿ ಯಾವನು ಸ್ನಾತನಾಗಿ ಪರಮೇಶ್ವರನ ಪೂಜೆಯನ್ನೆಸಗುವನೊ, ಅವನು ಸಕಲಪಾಪಗಳನ್ನೂ ಕಳೆದುಕೊಂಡು ರುದ್ರಲೋಕವನ್ನು ಸೇರುವನು.

**ಅಪುತ್ರೋ ಲಭತೇ ಪುತ್ರಮಧನೋ ಧನಮಾಪ್ನುಯಾತ್ ।**
**ಇಚ್ಛತೇ ಯಶ್ಚ ಯಂ ಕಾಮಂ ಸ ತಂ ಲಭತಿ ಮಾನವಃ ॥ ೧೧ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ**
**ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ**
**" ಅಂಗಿರಸತೀರ್ಥಮಾಹಾತ್ಮ್ಯವರ್ಣನಂ "ನಾಮ**
**ದ್ವಾದಶಾಽಧಿಕಶತತಮೋಽಧ್ಯಾಯಃ**

---

೧೧. ಪುತ್ರಹೀನನು ಸತ್ಪುತ್ರನನ್ನೂ, ದರಿದ್ರನು ಧನವನ್ನೂ ಪಡೆಯು ವರು. ಯಾವ ಮಾನವನು ಯಾವದನ್ನು ಅಪೇಕ್ಷಿಸಿದರೂ, ಅದನ್ನು ಸಮಗ್ರ ವಾಗಿ ಹೊಂದುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
" ಅಂಗಿರಸತೀರ್ಥಮಾಹಾತ್ಮ್ಯವರ್ಣನ "ವೆಂಬ
ನೂರಹನೆರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ತ್ರಯೋದಶಾಧಿಕಶತತಮೋಽಧ್ಯಾಯಃ

## ಕೋಟಿತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ತತೋ ಗಚ್ಛೇತ್ತು ರಾಜೇಂದ್ರ ಕೋಟಿತೀರ್ಥಮನುತ್ತಮಂ ।
ಋಷಿಕೋಟಿರ್ಗತಾ ತತ್ರ ಪರಾಂ ಸಿದ್ಧಿಮುಪಾಗತಾ ॥ ೧ ॥
ತತ್ರ ತೀರ್ಥೇ ತು ಯಃ ಸ್ನಾತ್ವಾ ಭೋಜಯೇದ್ಬ್ರಾಹ್ಮಣಾಂಛುಚಿಃ ।
ಏಕಸ್ಮಿನ್ಭೋಜಿತೇ ವಿಪ್ರೇ ಕೋಟಿರ್ಭವತಿ ಭೋಜಿತಾ ॥ ೨ ॥
ತತ್ರ ತೀರ್ಥೇ ತು ಯಃ ಸ್ನಾತ್ವಾ ಪೂಜಯೇತ್ಪಿತೃದೇವತಾಃ ।
ಪೂಜಿತೇ ತು ಮಹಾದೇವೇ ವಾಜಪೇಯಫಲಂ ಲಭೇತ್ ॥ ೩ ॥

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಅವಂತ್ಯಖಂಡೇ ತೃತೀಯೇ ರೇವಾಖಂಡೇ "ಕೋಟಿತೀರ್ಥಮಾಹಾತ್ಮ್ಯವರ್ಣನಂ"ನಾಮ ತ್ರಯೋದಶಾಧಿಕಶತತಮೋಽಧ್ಯಾಯಃ**

---

## ಕನ್ನಡದ ಅನುವಾದ

### ಕೋಟಿತೀರ್ಥಮಾಹಾತ್ಮ್ಯವರ್ಣನ

೧. ಮಾರ್ಕಂಡೇಯನು ಹೇಳುತ್ತಾನೆ.—ರಾಜೇಂದ್ರನೆ! ಬಳಿಕ ಸರ್ವೋತ್ತಮವಾದ ಕೋಟಿತೀರ್ಥಕ್ಕೆ ಹೋಗಬೇಕು. ಹಿಂದೆ ಒಂದು ಕೋಟಿ ಮಹರ್ಷಿಗಳ ಸಮೂಹವು ಅಲ್ಲಿಗೆ ಬಂದು ಕಾರ್ಯಸಿದ್ಧಿಯನ್ನು ಪಡೆಯಿತು.

೨. ಆ ತೀರ್ಥದಲ್ಲಿ ಮಿಂದು ಶುಚಿಯಾಗಿ ಯಾವನು ಬ್ರಾಹ್ಮಣರಿಗೆ ಭೋಜನವನ್ನುಮಾಡಿಸುವನೊ, ಅವನು ಮಾಡಿಸಿದ ಒಬ್ಬೊಬ್ಬ ಬ್ರಾಹ್ಮಣನ ಭೋಜನದಿಂದಲೂ ಒಂದುಕೋಟಿ ಬ್ರಾಹ್ಮಣರು ಉಂಡಂತಾಗುವುದು.

೩. ಅಲ್ಲಿ ಸ್ನಾನವನ್ನುಮಾಡಿ ಯಾವನು ಪಿತೃದೇವತೆಗಳಿಗೆ ತರ್ಪಣಾದಿಗಳನ್ನಿತ್ತು ಮಹಾದೇವನ ಪೂಜೆಯನ್ನು ಮಾಡುವನೊ, ಅವನು ವಾಜಪೇಯ ಯಜ್ಞದ ಫಲಕ್ಕೆ ಭಾಗಿಯಾಗುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಅವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ "ಕೋಟಿತೀರ್ಥಮಾಹಾತ್ಮ್ಯವರ್ಣನ"ವೆಂಬ ನೂರಹದಿಮೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಚತುರ್ದಶಾಽಧಿಕಶತತಮೋಽಧ್ಯಾಯಃ

## ಅಯೋನಿಸಂಭವತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

**ತತೋ ಗಚ್ಛೇತ್ತು ರಾಜೇಂದ್ರ ತೀರ್ಥಂ ಪರಮಶೋಭನಂ ।**
**ಅಯೋನಿಜಂ ಮಹಾಪುಣ್ಯಂ ಸರ್ವಪಾಪಪ್ರಣಾಶನಂ ॥ ೧ ॥**
**ಅಯೋನಿಜೇ ನರಃ ಸ್ನಾತ್ವಾ ಪೂಜಯೇತ್ಪರಮೇಶ್ವರಂ ।**
**ಪಿತೃದೇವಾಽರ್ಚನಂ ಕೃತ್ವಾ ಮುಚ್ಯತೇ ಸರ್ವಕಿಲ್ಬಿಷೈಃ ॥ ೨ ॥**
**ತತ್ರ ತೀರ್ಥೇ ತು ವಿಧಿನಾ ಪ್ರಾಣತ್ಯಾಗಂ ಕರೋತಿ ಯಃ ।**
**ಸ ಕದಾಚಿನ್ಮಹಾರಾಜ ಯೋನಿದ್ವಾರಂ ನ ಪಶ್ಯತಿ ॥ ೩ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಆವಂತ್ಯಖಂಡೇ ತೃತೀಯೋ ರೇವಾಖಂಡೇ "ಅಯೋನಿಸಂಭವತೀರ್ಥಮಾಹಾತ್ಮ್ಯವರ್ಣನಂ" ನಾಮ ಚತುರ್ದಶಾಽಧಿಕಶತತಮೋಽಧ್ಯಾಯಃ**

---

## ಕನ್ನಡದ ಅನುವಾದ

### ಅಯೋನಿಸಂಭವತೀರ್ಥಮಾಹಾತ್ಮ್ಯವರ್ಣನ

೧. ಮಾರ್ಕಂಡೇಯನು ಹೇಳುತ್ತಾನೆ —ಧರ್ಮರಾಜನೆ! ಅಲ್ಲಿಂದ ಪರಮಸುಂದರವೂ, ಮಹಾಪುಣ್ಯಪ್ರದವೂ, ಸಮಸ್ತದುರಿತಾಪಹಾರಕವೂ ಆದ ಅಯೋನಿಜತೀರ್ಥಕ್ಕೆ ಹೋಗಬೇಕು.

೨. ಅಯೋನಿಜತೀರ್ಥದಲ್ಲಿ ಸ್ನಾನವನ್ನುಮಾಡಿ ಮನುಜನು ಪರಮೇಶ್ವರನನ್ನರ್ಚಿಸಬೇಕು. ಅಲ್ಲಿ ಪಿತೃದೇವತೆಗಳನ್ನು ಪೂಜಿಸಿದವನು ಸಕಲಪಾತಕಗಳನ್ನೂ ಕಳೆದುಕೊಳ್ಳುವನು.

೩. ಮಹಾರಾಜನೆ! ಆ ತೀರ್ಥದಲ್ಲಿ ಯಾವನು ವಿಧಿವಿಹಿತರೀತಿಯಿಂದ ಪ್ರಾಣಗಳನ್ನು ತ್ಯಜಿಸುವನೊ, ಅವನೆಂದಿಗೂ ಪುನಃ ಸ್ತ್ರೀಯ ಯೋನಿಯಿಂದ ಜನಿಸುವುದಿಲ್ಲ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ "ಅಯೋನಿಸಂಭವತೀರ್ಥಮಾಹಾತ್ಮ್ಯವರ್ಣನ"ವೆಂಬ ನೂರಹದಿನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಪಂಚದಶೋತ್ತರಶತತಮೋಽಧ್ಯಾಯಃ

## ಅಂಗಾರಕತೀರ್ಥಮಾಹಾತ್ಮ್ಯವರ್ಣನಂ

**ಶ್ರೀ ಮಾರ್ಕಂಡೇಯ ಉವಾಚ:—**

**ತತೋ ಗಚ್ಛೇನ್ಮಹಾರಾಜ ತೀರ್ಥಮಂಗಾರಕಂ ಪರಂ ।**
**ರೂಪದಂ ಸರ್ವಲೋಕಾನಾಂ ವಿಶ್ರುತಂ ನರ್ಮದಾತಟೇ ॥ ೧ ॥**
**ಅಂಗಾರಕೇಣ ರಾಜೇಂದ್ರ ಪುರಾ ತಪ್ತಂ ತಪಃ ಕಿಲ ।**
**ಅರ್ಬುದಂ ಚ ನಿಖರ್ವಂ ಚ ಪ್ರಯುತಂ ವರ್ಷಸಂಖ್ಯಯಾ ॥ ೨ ॥**
**ತತಸ್ತುಷ್ಟೋ ಮಹಾದೇವಃ ಪರಯಾ ಕೃಪಯಾ ನೃಪ ।**
**ಪ್ರತ್ಯಕ್ಷದರ್ಶೀ ಭಗವಾನುವಾಚ ಕ್ಷಿತಿನಂದನಂ ॥ ೩ ॥**
**ವರದೋಽಸ್ಮಿ ಮಹಾಭಾಗ ದುರ್ಲಭಂ ತ್ರಿದಶೈರಪಿ ।**
**ವರಂ ದಾಸ್ಯಾಮ್ಯಹಂ ವತ್ಸ ಬ್ರೂಹಿ ಯತ್ತೇ ವಿವಕ್ಷಿತಂ ॥ ೪ ॥**

---

## ಕನ್ನಡದ ಅನುವಾದ

### ಅಂಗಾರಕತೀರ್ಥಮಾಹಾತ್ಮ್ಯವರ್ಣನ

೧. ಮಾರ್ಕಂಡೇಯನು ಹೇಳುತ್ತಾನೆ —ಮಹಾರಾಜನೆ! ಅಲ್ಲಿಂದ ಅಂಗಾರಕತೀರ್ಥವನ್ನು ಸೇರಬೇಕು. ನರ್ಮದಾತೀರದಲ್ಲಿ ಉತ್ತಮವಾದ ಈ ತೀರ್ಥವು ಸೇವಿಸಿದ ಸಕಲರಿಗೂ ಸೌಂದರ್ಯಪ್ರದವಾದುದೆಂದು ಪ್ರಖ್ಯಾತವಾಗಿರುವುದು.

೨. ಯುಧಿಷ್ಠಿರನೆ! ಅಲ್ಲಿ ಅಂಗಾರಕನು ಹಿಂದೆ ಅರ್ಬುದ, ನಿಖರ್ವ, ಪ್ರಯುತಗಳೆನ್ನದೆ ಅನೇಕವರ್ಷಗಳ ಕಾಲ ಮಹಾತಪಸ್ಸನ್ನಾಚರಿಸಿದನು.

೩. ಇದರಿಂದ ಸಂತೋಷವನ್ನು ಹೊಂದಿದ ಮಹಾದೇವನು ಅತ್ಯಂತ ದಯಾಮಯನಾಗಿ ಭೂದೇವಿಯ ಪುತ್ರನಾದ ಅತನಿಗೆ ಪ್ರತ್ಯಕ್ಷವಾಗಿ ಕಾಣಿಸಿಕೊಂಡು ಇಂತೆಂದನು.

೪. ಪ್ರಿಯನೆ! ನಿನಗೆ ವರವನ್ನು ಕೊಡಲು ಬಂದಿರುವೆನು. ಮಹಾಭಾಗ್ಯಶಾಲಿಯಾದ ನಿನಗೆ ದೇವತೆಗಳಿಗೂ ದುರ್ಲಭವಾದ ವರವನ್ನು ಸಹ ಕೊಡುವೆನು. ನಿನಗೆ ಬೇಕಾದುದನ್ನು ಕೇಳಿಕೊ.

**ಅಂಗಾರಕ ಉವಾಚ :—**

**ತವ ಪ್ರಸಾದಾದ್ದೇವೇಶ ಸರ್ವಲೋಕಮಹೇಶ್ವರ ।**
**ಗ್ರಹಮಧ್ಯಗತೋ ನಿತ್ಯಂ ವಿಚರಾಮಿ ನಭಸ್ತಲೇ ॥ ೫ ॥**
**ಯಾವದ್ಧರಾಧರೋ ಲೋಕೇ ಯಾವಚ್ಚಂದ್ರದಿವಾಕರೌ ।**
**ನದ್ಯೋ ನದಾಃ ಸಮುದ್ರಾಶ್ಚ ವರೋ ಮೇ ಚಾಽಕ್ಷಯೋ ಭವೇತ್ ॥ ೬ ॥**
**ಏವಮಸ್ತ್ವಿತಿ ದೇವೇಶೋ ದತ್ವಾ ವರಮನುತ್ತಮಂ ।**
**ಜಗಾಮಾಕಾಶಮಾವಿಶ್ಯ ವಂದ್ಯಮಾನಃ ಸುರಾಽಸುರೈಃ ॥ ೭ ॥**
**ಭೂಮಿಪುತ್ರಸ್ತತಸ್ತಸ್ಮಿಂಸ್ಥಾಪಯಾಮಾಸ ಶಂಕರಂ ।**
**ಗತಃ ಸುರಾಲಯೇ ಲೋಕೇ ಗ್ರಹಭಾವೇ ನಿವೇಶಿತಃ ॥ ೮ ॥**
**ತತ್ರ ತೀರ್ಥೇ ತು ಯಃ ಸ್ನಾತ್ವಾ ಪೂಜಯೇತ್ಪರಮೇಶ್ವರಂ ।**
**ಹುತಹೋಮೋ ಜಿತಕ್ರೋಧಃ ಸೋಽಶ್ವಮೇಧಫಲಂ ಲಭೇತ್ ॥ ೯ ॥**
**ಚತುರ್ಥ್ಯಾಂಗಾರಕೇ ಯಸ್ತು ಸ್ನಾತ್ವಾ ಚಾಽಭ್ಯರ್ಚಯೇದ್ಗ್ರಹಂ ।**
**ಅಂಗಾರಕಂ ವಿಧಾನೇನ ಸಪ್ತ ಜನ್ಮಾನಿ ಭಾರತ ।**
**ದಶಯೋಜನವಿಸ್ತೀರ್ಣೇ ಮಂಡಲೇ ರೂಪವಾನ್ ಭವೇತ್ ॥ ೧೦ ॥**

---

೫. ಅಂಗಾರಕನು ಹೇಳುತ್ತಾನೆ —ದೇವದೇವನೆ! ಸಮಸ್ತಲೋಕಗಳಿಗೆ ನಿಯಾಮಕನೆ! ನಿನ್ನ ಅನುಗ್ರಹದಿಂದ ನಾನು ಯಾವಾಗಲೂ ನವಗ್ರಹಗಳ ಮಧ್ಯಗತನಾಗಿ ಆಕಾಶಮಂಡಲದಲ್ಲಿ ಸಂಚರಿಸುತ್ತಿರುವೆನು.

೬. ಭೂಲೋಕದಲ್ಲಿ ಮೇರುಪರ್ವತವೂ, ಸೂರ್ಯಚಂದ್ರರೂ, ನದಿಗಳೂ, ನದಗಳೂ, ಸಮುದ್ರಗಳೂ ಎಲ್ಲಿಯವರೆಗಿರುವುವೊ, ಅಲ್ಲಿಯವರೆಗೂ ಈ ನನ್ನ ವರವು ನಡೆದುಕೊಂಡು ಬರಬೇಕು.

೭–೮. ಹಾಗೆಯೇ ಆಗಲೆಂದು ಅತ್ಯುತ್ತಮವಾದ ವರವನ್ನಿತ್ತು ದೇವದಾನವರಿಂದ ಹೊಗಳಲ್ಪಟ್ಟವನಾಗಿ ಮಹಾದೇವನು ಆಕಾಶವನ್ನು ಹೊಕ್ಕು ಅದೃಶ್ಯನಾದನು. ಬಳಿಕ ಭೂಮಿಪುತ್ರನು ಆ ಸ್ಥಳದಲ್ಲಿ ಲಿಂಗವೊಂದನ್ನು ಪ್ರತಿಷ್ಠಿಸಿ ಸ್ವರ್ಗಲೋಕಕ್ಕೆ ಹೋಗಿ ಗ್ರಹಗಳಲ್ಲಿ ಗಣ್ಯಸ್ಥಾನದಲ್ಲಿರಿಸಲ್ಪಟ್ಟನು.

೯. ಆ ತೀರ್ಥದಲ್ಲಿ ಯಾವನು ಸ್ನಾನವನ್ನುಮಾಡಿ, ಜಿತಕ್ರೋಧನಾಗಿ, ಪರಮೇಶ್ವರನ ಪೂಜೆಯನ್ನೆಸಗಿ ಹೋಮಗಳನ್ನು ನೆರವೇರಿಸುವನೊ, ಅವನಿಗೆ ಅಶ್ವಮೇಧಯಜ್ಞದ ಫಲವು ಲಭಿಸುವುದು.

೧೦. ಧರ್ಮನಂದನನೆ! ಚತುರ್ಥೀತಿಥಿಯು ಮಂಗಳವಾರದೊಡನಿರಲು ಯಾವನು ಇಲ್ಲಿ ಮಿಂದು ವಿಧಿವಿಹಿತರೀತಿಯಿಂದ ಅಂಗಾರಕಗ್ರಹದ ಪೂಜೆಯನ್ನು ಮಾಡುವನೊ, ಅವನು ಏಳು ಜನ್ಮಗಳವರೆಗೂ ತನ್ನ ಸುತ್ತಲಿನ ಹತ್ತುಯೋಜನಗಳ ಪ್ರದೇಶದಲ್ಲಿ ಪರಮಸೌಂದರ್ಯಶಾಲಿಯೆನಿಸುವನು.

**ತತ್ರೈವ ತು ಮೃತೋ ಜಂತುಃ ಕಾಮತೋಽಕಾಮತೋಽಪಿ ವಾ ।**
**ರುದ್ರಸ್ಯಾಽನುಚರೋ ಭೂತ್ವಾ ತೇನೈವ ಸಹ ಮೋದತೇ ॥ ೧೧ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ**
**ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ**
**"ಅಂಗಾರಕತೀರ್ಥಮಾಹಾತ್ಮ್ಯವರ್ಣನಂ" ನಾಮ**
**ಪಂಚದಶೋತ್ತರಶತತಮೋಽಧ್ಯಾಯಃ**

---

೧೧. ಸ್ವೇಚ್ಛೆಯಿಂದಾಗಲಿ, ಆಕಸ್ಮಿಕವಾಗಿಯಾಗಲಿ ಈ ತೀರ್ಥದ ಬಳಿಯಲ್ಲಿ ಮೃತಿಯನ್ನೈದಿದ ಯಾವ ಜಂತುವೇ ಆದರೂ ಪರಮೇಶ್ವರನ ಅನುಚರನಾಗಿ ಆತನೊಡನೆ ಪರಮಾನಂದದಲ್ಲಿರುವುದು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಅವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಅಂಗಾರಕತೀರ್ಥಮಾಹಾತ್ಮ್ಯವರ್ಣನ"ವೆಂಬ
ನೂರಹದಿನೈದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಷೋಡಶಾಧಿಕಶತತಮೋಽಧ್ಯಾಯಃ

## ಪಾಂಡುತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ:—

ಪಾಂಡುತೀರ್ಥಂ ತತೋ ಗಚ್ಛೇತ್ಸರ್ವಪಾಪವಿನಾಶನಂ ।
ತತ್ರ ಸ್ನಾತ್ವಾ ನರೋ ರಾಜನ್ಮುಚ್ಯತೇ ಸರ್ವಕಿಲ್ಬಿಷೈಃ ॥ ೧ ॥
ತತ್ರ ತೀರ್ಥೇ ತು ಯಃ ಸ್ನಾತ್ವಾ ದಾಪಯೇತ್ಕಾಂಚನಂ ಶುಚಿಃ ।
ಭ್ರೂಣಹತ್ಯಾದಿ ಪಾಪಾನಿ ನಶ್ಯಂತೇ ನಾಽತ್ರ ಸಂಶಯಃ ॥ ೨ ॥
ಪಿಂಡೋದಕಪ್ರದಾನೇನ ವಾಜಪೇಯಫಲಂ ಲಭೇತ್ ।
ಪಿತರಃ ಪಿತಾಮಹಾಶ್ಚ ನೃತ್ಯಂತೇ ಚ ಪ್ರಹರ್ಷಿತಾಃ ॥ ೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ಪಾಂಡುತೀರ್ಥಮಾಹಾತ್ಮ್ಯವರ್ಣನಂ"ನಾಮ
ಷೋಡಶಾಧಿಕಶತತಮೋಽಧ್ಯಾಯಃ

---

## ಕನ್ನಡದ ಅನುವಾದ

### ಪಾಂಡುತೀರ್ಥಮಾಹಾತ್ಮ್ಯವರ್ಣನ

೧. ಮಾರ್ಕಂಡೇಯನು ಹೇಳುತ್ತಾನೆ:—ಮಹಾರಾಜನೆ! ಬಳಿಕ ಪಾಂಡು ತೀರ್ಥವನ್ನು ಸೇರಬೇಕು. ಸರ್ವಪಾಪವಿನಾಶಕವಾದ ಆ ತೀರ್ಥದಲ್ಲಿ ಸ್ನಾನವನ್ನು ಮಾಡುವುದರಿಂದ ಮಾನವನ ಸಮಸ್ತ ಕಿಲ್ಬಿಷಗಳೂ ದೂರವಾಗುವುವು.

೨. ಅಲ್ಲಿ ಸ್ನಾನವನ್ನು ಮಾಡಿ ಶುಚಿಯಾಗಿ ಹಿರಣ್ಯದಾನವನ್ನು ಕೊಡಿಸಿದಾತನು ಭ್ರೂಣಹತ್ಯೆಯೇ ಮೊದಲಾದ ಮಹಾಪಾತಕಗಳನ್ನೂ ಕಳೆದುಕೊಳ್ಳುವುದರಲ್ಲಿ ಸಂದೇಹವಿಲ್ಲ.

೩. ಅಲ್ಲಿ ಪಿಂಡಪ್ರದಾನದಿಂದಲೂ, ಜಲತರ್ಪಣದಿಂದಲೂ ವಾಜಪೇಯದ ಫಲವು ಲಭಿಸುವುದು. ದಾತೃವಿನ ಪಿತೃಪಿತಾಮಹಾದಿಗಳು ಅತ್ಯಂತ ಹರ್ಷದಿಂದ ಕುಣಿದಾಡುತ್ತಿರುವರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಪಾಂಡುತೀರ್ಥಮಾಹಾತ್ಮ್ಯವರ್ಣನ"ವೆಂಬ
ನೂರಹದಿನಾರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಸಪ್ತದಶೋತ್ತರಶತತಮೋಽಧ್ಯಾಯಃ

## ತ್ರಿಲೋಚನತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

**ತತೋ ಗಚ್ಛೇತ್ತು ರಾಜೇಂದ್ರ ಪುಣ್ಯಂ ತೀರ್ಥಂ ತ್ರಿಲೋಚನಂ ।**
**ತತ್ರ ತಿಷ್ಠತಿ ದೇವೇಶಃ ಸರ್ವಲೋಕನಮಸ್ಕೃತಃ ॥ ೧ ॥**
**ತತ್ರ ತೀರ್ಥೇ ತು ಯಃ ಸ್ನಾತ್ವಾ ಭಕ್ತ್ಯಾಽರ್ಚಯತಿ ಶಂಕರಂ ।**
**ರುದ್ರಸ್ಯ ಭವನಂ ಯಾತಿ ಮೃತೋ ನಾಽಸ್ತ್ಯತ್ರ ಸಂಶಯಃ ॥ ೨ ॥**
**ಕಲ್ಪಕ್ಷಯೇ ತತಃ ಪೂರ್ಣೇ ಕ್ರೀಡಿತ್ವಾ ಚ ಇಹಾಽಽಗತಃ ।**
**ಅವಿಯೋಗೇನ ತಿಷ್ಠೇತ ಪೂಜ್ಯಮಾನಃ ಶತಂ ಸಮಾಃ ॥ ೩ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿ ಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಅವಂತ್ಯಖಂಡೇ ತೃತೀಯೇ ರೇವಾಖಂಡೇ "ತ್ರಿಲೋಚನತೀರ್ಥಮಾಹಾತ್ಮ್ಯವರ್ಣನಂ" ನಾಮ ಸಪ್ತದಶೋತ್ತರಶತತಮೋಽಧ್ಯಾಯಃ**

---

## ಕನ್ನಡದ ಅನುವಾದ

### ತ್ರಿಲೋಚನತೀರ್ಥಮಾಹಾತ್ಮ್ಯವರ್ಣನ

೧. ಮಾರ್ಕಂಡೇಯನು ಹೇಳುತ್ತಾನೆ.— ರಾಜೇಂದ್ರನೆ! ಅಲ್ಲಿಂದ ತ್ರಿಲೋಚನವೆಂಬ ಪುಣ್ಯತೀರ್ಥಕ್ಕೆ ಹೋಗಬೇಕು. ಅಲ್ಲಿ ಸರ್ವಲೋಕವಂದಿತನಾದ ದೇವಾಧಿದೇವನು ನೆಲಸಿರುವನು.

೨. ಅಲ್ಲಿ ಸ್ನಾನವನ್ನು ಮಾಡಿ ಭಕ್ತಿಯಿಂದ ಪರಮೇಶ್ವರನನ್ನು ಪೂಜಿಸಲು ಮಾನವನು ದೇಹತ್ಯಾಗವನ್ನು ಮಾಡಿದಾಗ ರುದ್ರಲೋಕಕ್ಕೆ ಹೋಗುವುದರಲ್ಲಿ ಸಂಶಯವಿಲ್ಲ.

೩. ಹೀಗೆ ಅಲ್ಲಿ ಒಂದು ಕಲ್ಪವು ಪೂರ್ತಿಯಾಗಿ ಕಳೆಯುವವರೆಗೂ ಆನಂದವನ್ನನುಭವಿಸಿ, ಪುನಃ ಭೂಲೋಕಕ್ಕೆ ಬಂದರೆ ನಾಶವಿಲ್ಲದ ಭೋಗ ಭಾಗ್ಯಗಳನ್ನನುಭವಿಸುತ್ತ ಪೂಜಾರ್ಹನಾಗಿ ನೂರುವರ್ಷಗಳ ಪೂರ್ಣಾಯುಷ್ಯವಂತನಾಗಿರುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಅವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ "ತ್ರಿಲೋಚನತೀರ್ಥಮಾಹಾತ್ಮ್ಯವರ್ಣನ" ವೆಂಬ ನೂರಹದಿನೇಳನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥಾಷ್ಟಾದಶೋತ್ತರಶತತಮೋಽಧ್ಯಾಯಃ

### ಇಂದ್ರತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ:—

ತತೋ ಗಚ್ಛೇತ್ತು ರಾಜೇಂದ್ರ ತೀರ್ಥಂ ಪರಮಶೋಭನಂ ।
ಇಂದ್ರತೀರ್ಥೇತಿ ವಿಖ್ಯಾತಂ ನರ್ಮದಾದಕ್ಷಿಣೇ ತಟೇ ॥ ೧ ॥

ಯುಧಿಷ್ಠಿರ ಉವಾಚ:—

ನರ್ಮದಾ ದಕ್ಷಿಣೇ ಕೂಲೇ ಇಂದ್ರತೀರ್ಥಂ ಕಥಂ ಭವೇತ್ ।
ಶ್ರೋತುಮಿಚ್ಛಾಮಿ ವಿಪ್ರೇಂದ್ರ ಹ್ಯಾದಿಮಧ್ಯಾಂತವಿಸ್ತರೈಃ ॥ ೨ ॥
ಏತಚ್ಛ್ರುತ್ವಾ ತು ವಚನಂ ಧರ್ಮಪುತ್ರಸ್ಯ ಧೀಮತಃ ।
ಕಥಯಾಮಾಸ ತದ್ವೃತ್ತಮಿತಿಹಾಸಂ ಪುರಾತನಂ ॥ ೩ ॥

ಶ್ರೀ ಮಾರ್ಕಂಡೇಯ ಉವಾಚ:—

ವಿಶ್ವಾಸಯಿತ್ವಾ ಸುಚಿರಂ ಧರ್ಮಶತ್ರುಂ ಮಹಾಬಲಂ ।
ವೃತ್ರಂ ಜಿತ್ವಾಽಥ ಹತ್ವಾ ತು ಗಚ್ಛಮಾನಂ ಶಚೀಪತಿಂ ॥ ೪ ॥

---

### ಕನ್ನಡದ ಅನುವಾದ

#### ಇಂದ್ರತೀರ್ಥಮಾಹಾತ್ಮ್ಯವರ್ಣನ

೧. ಮಾರ್ಕಂಡೇಯನು ಹೇಳುತ್ತಾನೆ —ರಾಜೇಂದ್ರನೆ! ಬಳಿಕ ನರ್ಮದೆಯ ದಕ್ಷಿಣತೀರದಲ್ಲಿ ಇಂದ್ರತೀರ್ಥವೆಂದು ಪ್ರಖ್ಯಾತವಾದ ಪರಮ ಪವಿತ್ರವಾದ ತೀರ್ಥವನ್ನು ಸೇರಬೇಕು.

೨. ಯುಧಿಷ್ಠಿರನು ಹೇಳುತ್ತಾನೆ —ಬ್ರಾಹ್ಮಣೋತ್ತಮನೆ! ಈ ಇಂದ್ರ ತೀರ್ಥವು ನರ್ಮದಾನದಿಯ ದಕ್ಷಿಣತೀರದಲ್ಲಿ ಹೇಗೆ ನಿರ್ಮಿತವಾಯಿತೆಂಬು ದನ್ನು ಆದಿಮಧ್ಯಾಂತಸಹಿತವಾಗಿ ತಿಳಿಯಲಿಚ್ಛಿಸುವೆನು.

೩. ಪ್ರಾಜ್ಞನಾದ ಧರ್ಮರಾಜನ ಈ ಮಾತನ್ನು ಕೇಳಿ ಮುನಿವರ್ಯನು ಈ ವಿಷಯಕ್ಕೆ ಸಂಬಂಧಿಸಿದ ಹಿಂದಿನ ಕಾಲದ ಇತಿಹಾಸವೊಂದನ್ನು ಹೇಳಲುಪ ಕ್ರಮಿಸಿದನು.

೪–೫. ಮಾರ್ಕಂಡೇಯನು ಹೇಳುತ್ತಾನೆ.—ಧರ್ಮಶತ್ರುವೂ, ಮಹಾ ಪರಾಕ್ರಮಿಯೂ ಆದ ವೃತ್ರಾಸುರನಲ್ಲಿ ಬಹುಕಾಲದ ಸ್ನೇಹವನ್ನು ಬೆಳಸಿ ಆತನನ್ನು ಜಯಿಸಿ ಕೊಂದ ಮಹೇಂದ್ರನು ತನ್ನ ಲೋಕಕ್ಕೆ ಹೊರಡಲು ದಾರಿಯಲ್ಲಿ ಸಹಿಸಲಸಾಧ್ಯವಾದ ಬ್ರಹ್ಮಹತ್ಯೆಯ ಪಾಪವು ಆತನನ್ನು ಹಿಂಬಾಲಿಸಿತು. ಹಗಲು

ನಿಷ್ಕ್ರಾಮಮಾಣಂ ಮಾರ್ಗೇಣ ಬ್ರಹ್ಮಹತ್ಯಾ ದುರಾಸದಾ ।
ಅಹೋರಾತ್ರಮವಿಶ್ರಾಂತಾ ಜಗಾಮ ಭುವನತ್ರಯಂ ॥ ೫ ॥
ಯತೋ ಯತೋ ಬ್ರಹ್ಮಹಣಂ ಯಾತಿ ಯಾನೇನ ಶೋಭನಂ ।
ದಿಶೋ ಭಾಗಂ ಸುರೈಃ ಸಾರ್ಧಂ ತತೋ ಹತ್ಯಾ ನ ಮುಂಚತಿ ॥ ೬ ॥
ಬ್ರಹ್ಮಹತ್ಯಾ ಸುರಾಪಾನಂ ಸ್ತೇಯಂ ಗುರ್ವಂಗನಾಗಮಃ ।
ಪಾತಕಾನಾಂ ಗತಿರ್ದೃಷ್ಟಾ ನ ತು ವಿಶ್ವಾಸಘಾತಿನಾಂ ॥ ೭ ॥
ಪಾಪಕರ್ಮಮುಖಂ ದೃಷ್ಟ್ವಾ ಸ್ನಾನದಾನೈರ್ವಿಶುಧ್ಯತಿ ।
ನಾರೀ ವಾ ಪುರುಷೋ ವಾಽಪಿ ನೈವ ವಿಶ್ವಾಸಘಾತಿನಃ ॥ ೮ ॥
ಏವಮಾದೀನಿ ಚಾಽನ್ಯಾನಿ ಶ್ರುತ್ವಾ ವಾಕ್ಯಾನಿ ದೇವರಾಟ್ ।
ವಚನಂ ತದ್ವಿಧೈರುಕ್ತಂ ವಿಷಾದಮಗಮತ್ಪರಂ ॥ ೯ ॥
ತ್ಯಕ್ತ್ವಾ ರಾಜ್ಯಂ ಸುರೈಃ ಸಾರ್ಧಂ ಜಗಾಮ ತಪ ಉತ್ತಮಂ ॥ ೧೦ ॥
ಪುತ್ರದಾರಗೃಹಂ ರಾಜ್ಯಂ ವಸೂನಿ ವಿವಿಧಾನಿ ಚ ।
ಫಲಾನ್ಯೇತಾನಿ ಧರ್ಮಸ್ಯ ಶೋಭಯಂತಿ ಜನೇಶ್ವರಂ ॥ ೧೧ ॥

---

ರಾತ್ರಿಗಳೆನ್ನದೆ ಮೂರು ಲೋಕಗಳಲ್ಲಿಯೂ ಆತನೊಡನೆಯೇ ಸಂಚರಿಸುತ್ತಿದ್ದಿತು.

೬. ಬ್ರಹ್ಮಘಾತಕನಾದ ಆ ಇಂದ್ರನಾದರೊ ದೇವತೆಗಳೊಡನೆ ಯಾವ ಯಾವ ದಿಕ್ಕುಗಳಿಗೆ ಜೈತ್ರಯಾತ್ರೆಗಳನ್ನು ಮಾಡುತ್ತಿದ್ದರೂ, ಆ ಬ್ರಹ್ಮಹತ್ಯೆಯು ಮಾತ್ರ ಆತನನ್ನು ಬಿಡದೆ ಹಿಂಬಾಲಿಸುತ್ತಿದ್ದಿತು.

೭. ಬ್ರಹ್ಮಹತ್ಯೆ, ಸುರಾಪಾನ, ಕಳ್ಳತನ, ಗುರುಪತ್ನೀಗಮನವೇ ಮುಂತಾದ ಮಹಾ ಪಾತಕಗಳಿಗೆ ಪ್ರಾಯಶ್ಚಿತ್ತವುಂಟು. ವಿಶ್ವಾಸಘಾತಕರಿಗೆ ಮಾತ್ರ ಯಾವ ಗತಿಯೂ ಇಲ್ಲ.

೮. ಪಾಪಕರ್ಮಗಳನ್ನು ಮಾಡಿದ ಸ್ತ್ರೀಯರಾಗಲಿ ಪುರುಷರಾಗಲಿ ಸ್ನಾನ ದಾನಾದಿಗಳನ್ನು ಮಾಡುವುದರಿಂದ ಪರಿಶುದ್ಧರಾಗಿರುವರು. ವಿಶ್ವಾಸಘಾತಕರಿಗೆ ಶುದ್ಧಿಯಿಲ್ಲ.

೯. ಇವೇ ಮೊದಲಾದ ಅನೇಕ ವಾಕ್ಯಗಳನ್ನು ದೇವರಾಜನಾದ ಇಂದ್ರನು ಧರ್ಮಸೂಕ್ಷ್ಮಗಳನ್ನರಿತವರಿಂದ ಕೇಳಿ ಬಹಳವಾದ ವ್ಯಸನವನ್ನು ತಾಳಿದನು.

೧೦. ಮತ್ತು ದೇವತೆಗಳೊಡನೆ ತನ್ನ ರಾಜ್ಯವನ್ನು ಬಿಟ್ಟು ಉತ್ತಮವಾದ ತಪಸ್ಸನ್ನಾಚರಿಸಲು ಹೊರಟನು.

೧೧. ಮಕ್ಕಳು, ಹೆಂಡಿರು, ಮನೆ, ರಾಜ್ಯ, ವಿಧವಿಧಗಳಾದ ಐಶ್ವರ್ಯಗಳೆಲ್ಲವೂ ಧರ್ಮದಫಲವಾಗಿ ಲಭಿಸಿದರೆ ಮಾತ್ರ ಮಹಾರಾಜರಿಗೆ ಶೋಭಿಸುವುವು.

ಫಲಂ ಧರ್ಮಸ್ಯ ಭುಂಜೀತಿ ಸುಹೃತ್ ಸ್ವಜನಬಾಂಧವಾಃ ।
ಪಶ್ಯತಾಂ ಸರ್ವಮೇತೇಷಾಂ ಪಾಪಮೇಕೇನ ಭುಜ್ಯತೇ ॥ ೧೨ ॥
ಪರಂ ಹಿ ಸುಖಮುತ್ಸೃಜ್ಯ ಕರ್ಶಯನ್ಸ್ವಕಲೇವರಂ ।
ದೇವರಾಜೋ ಜಗಾಮಾಽಸೌ ತೀರ್ಥಾನ್ಯಾಯತನಾನಿ ಚ ॥ ೧೩ ॥
ಗಂಗಾತೀರ್ಥೇಷು ಸರ್ವೇಷು ಯಾಮುನೇಷು ತಥೈವ ಚ ।
ಸಾರಸ್ವತೇಷು ಸರ್ವೇಷು ಸಾಮುದ್ರೇಷು ಪೃಥಕ್ ಪೃಥಕ್ ॥ ೧೪ ॥
ನದೀಷು ದೇವಖಾತೇಷು ತಡಾಗೇಷು ಸರಸ್ಸು ಚ ।
ಪಾಪಂ ನ ಮುಂಚತೇ ಸರ್ವೇ ಪಶ್ಚಾದ್ದೇವಸಮಾಗಮೇ ॥ ೧೫ ॥
ರೇವಾಪ್ರಭವತೀರ್ಥೇಷು ಕೂಲಯೋರುಭಯೋರಪಿ ।
ಪೂಜಯನ್ಸ್ವ ಮಹಾದೇವಂ ಸ್ಕಂದತೀರ್ಥಂ ಸಮಾಸದತ್ ॥ ೧೬ ॥
ತತ್ರ ಸ್ಥಿತ್ವೋಪವಾಸೈಶ್ಚ ಕೃಚ್ಛ್ರಚಾಂದ್ರಾಯಣಾದಿಭಿಃ ।
ಕರ್ಶಯನ್ಸ್ವ ಸ್ವಕಂ ದೇಹಂ ನ ಲೇಭೇ ಶರ್ಮ ವೈ ಕ್ವಚಿತ್ ॥ ೧೭ ॥
ಗ್ರೀಷ್ಮೇ ಪಂಚಾಗ್ನಿಮಧ್ಯಸ್ಥೋ ವರ್ಷಾಸು ಸ್ಥಂಡಿಲೇಶಯಃ ।
ಆರ್ದ್ರವಾಸಾಸ್ತು ಹೇಮಂತೇ ಚಚಾರ ವಿಪುಲಂ ತಪಃ ॥ ೧೮ ॥

---

೧೨. ಈತನ ಧರ್ಮದ ಫಲವನ್ನು ಸ್ನೇಹಿತರೂ, ಸ್ವಜನರೂ, ಬಂಧುಗಳೂ ಅನುಭವಿಸುವರು. ಆದರೆ ಪಾಪವನ್ನು ಮಾತ್ರ ಇವರ ಕಣ್ಣುಗಳೆದುರಿನಲ್ಲಿ ಆತನೊಬ್ಬನೇ ಅನುಭವಿಸಬೇಕಾಗುವುದು.

೧೩. ಇಂತು ಮಹೇಂದ್ರನು ತನ್ನ ಅತುಲೈಶ್ವರ್ಯವನ್ನು ತ್ಯಜಿಸಿ ದೇಹವನ್ನು ಸವೆಯಿಸುತ್ತ ಅನೇಕ ತೀರ್ಥಗಳಿಗೂ, ಕ್ಷೇತ್ರಗಳಿಗೂ ಅಲೆಯುತ್ತಿದ್ದನು.

೧೪–೧೫. ಗಂಗಾ, ಯಮುನಾ, ಸರಸ್ವತಿ ಮುಂತಾದ ನದಿಗಳ ಸಮಸ್ತ ತೀರ್ಥಗಳಲ್ಲಿಯೂ, ಬೇರೆ ಬೇರೆಯಾಗಿ ಸಮುದ್ರಗಳಲ್ಲಿಯೂ, ನದಿಗಳಲ್ಲಿಯೂ, ದೇವಖಾತಗಳಲ್ಲಿಯೂ, ತಟಾಕಗಳಲ್ಲಿಯೂ, ಸರೋವರಗಳಲ್ಲಿಯೂ ಮಿಂದರೂ ಪಾಪವು ಕಳೆಯದಿರಲು ಪುನ ಪ್ರನತಗಳೊಡಗೂಡಿ ಮುಂದಕ್ಕೆ ಹೋದನು.

೧೬–೧೭. ಬಳಿಕ ಅವನು ರೇವಾನದಿಯನ್ನು ಸೇರಿ ಅದರ ಎರಡು ತೀರಗಳಲ್ಲಿಯೂ ಸಕಲ ತೀರ್ಥಗಳನ್ನು ಸೇವಿಸಿ ಮಹಾದೇವನನ್ನು ಪೂಜಿಸುತ್ತ ಸ್ಕಂದತೀರ್ಥದ ಬಳಿಗೆ ಬಂದನು. ಅಲ್ಲಿ ನಿಂತು ಉಪವಾಸಗಳಿಂದಲೂ, ಕೃಚ್ಛ್ರ ಚಾಂದ್ರಾಯಣಾದಿ ಮಹಾವ್ರತಗಳಿಂದಲೂ ತನ್ನ ದೇಹವನ್ನು ಶೋಷಗೊಳಿಸಿದರೂ ಎಲ್ಲಿಯೂ ಸುಖವು ಮಾತ್ರ ಲಭಿಸಲಿಲ್ಲ.

೧೮. ಗ್ರೀಷ್ಮಕಾಲದಲ್ಲಿ ಪಂಚಾಗ್ನಿಗಳ ಮಧ್ಯದಲ್ಲಿಯೂ, ವರ್ಷರ್ತುವಿನಲ್ಲಿ ಭೂಮಿಯ ಮೇಲೆ ಮಲಗಿಯೂ, ಹೇಮಂತಋತುವಿನಲ್ಲಿ ಒದ್ದೆಯ ಬಟ್ಟೆಯನ್ನು ಧರಿಸಿಯೂ ಉಗ್ರವಾದ ತಪಸ್ಸನ್ನಾಚರಿಸಿದನು.

ಏವಂ ತು ತಪತಸ್ತಸ್ಯ ಇಂದ್ರಸ್ಯ ವಿದಿತಾತ್ಮನಃ ।
ವತ್ಸರಾಣಾಂ ಸಹಸ್ರಾಣಿ ಗತಾನಿ ದಶ ಭಾರತ ॥ ೧೯ ॥
ತತಸ್ತ್ವೇಕಾದಶೇ ಪ್ರಾಪ್ತೇ ವರ್ಷೇ ತು ನೃಪಸತ್ತಮ ।
ಸಹಸಾ ಭಗವಾನ್ದೇವಸ್ತುತೋಷ ಪರಮೇಶ್ವರಃ ॥ ೨೦ ॥
ತಥಾ ಬ್ರಹ್ಮರ್ಷಯಃ ಸಿದ್ಧಾ ಬ್ರಹ್ಮವಿಷ್ಣುಪುರೋಗಮಾಃ ।
ತತ್ರಾಽಽಜಗ್ಮುಃ ಸುರಾಃ ಸರ್ವೇ ಯತ್ರ ದೇವಃ ಶತಕ್ರತುಃ ॥ ೨೧ ॥
ದೃಷ್ಟ್ವಾ ಸಮಾಗತಾನ್ದೇವಾನೃಷೀಂಶ್ಚೈವ ಮಹಾಮತಿಃ ।
ಉವಾಚ ಪ್ರಣತೋ ಭೂತ್ವಾ ಸರ್ವದೇವಪುರೋಹಿತಃ ॥ ೨೨ ॥
ವಿದಿತಂ ಸರ್ವಮೇತೇಷಾಂ ಯಥಾ ವೃತ್ರವಧಃ ಕೃತಃ ।
ಯುಷ್ಮಾಕಂ ಚಾಜ್ಞಯಾ ಪೂರ್ವಂ ಬ್ರಹ್ಮವಿಷ್ಣುಮಹೇಶ್ವರಾಃ ॥ ೨೩ ॥
ತಥಾಪ್ಯೇವಂ ಬ್ರಹ್ಮಹಣಂ ಮತ್ವಾ ಪಾಪಸ್ಯ ಕಾರಿಣಂ ।
ಭ್ರಮಂತಂ ಸರ್ವತೀರ್ಥೇಷು ಬ್ರಹ್ಮಹತ್ಯಾ ನ ಮುಂಚತಿ ॥ ೨೪ ॥
ನ ನಂದತಿ ಜಗತ್ಸರ್ವಂ ತ್ರೈಲೋಕ್ಯಂ ಸಚರಾಚರಂ ।
ಯಥಾ ವಿಹೀನಚಂದ್ರಾರ್ಕಂ ತಥಾ ರಾಜ್ಯಮನಾಯಕಂ ॥ ೨೫ ॥

---

೧೯. ಧರ್ಮರಾಜನೆ! ಇಂತು ಆತ್ಮಜ್ಞಾನಿಯಾದ ಇಂದ್ರನೂ ತಪಸ್ಸನ್ನು ಮಾಡುತ್ತಿರಲು ಹತ್ತುಸಾವಿರ ವರ್ಷಗಳು ಕಳೆದುಹೋದುವು.

೨೦-೨೧. ರಾಜೇಂದ್ರ! ಬಳಿಕ ಹನ್ನೊಂದನೆಯ ಸಾವಿರ ವರ್ಷದ ಕಾಲವು ಪ್ರಾರಂಭವಾಗುತ್ತಿರಲು ಪರಮೇಶ್ವರನು ಆತನ ತಪಸ್ಸಿಗೆ ಸಂತೋಷಗೊಂಡು ಪ್ರಸನ್ನನಾದನು. ಆಗ ಆ ಮಹೇಂದ್ರನಿದ್ದೆಡೆಗೆ ಮಹರ್ಷಿಗಳೂ, ಸಿದ್ಧರೂ, ಬ್ರಹ್ಮವಿಷ್ಣುಗಳೇ ಮೊದಲಾದ ಸಕಲದೇವತೆಗಳೂ ಬಂದು ಸೇರಿದರು.

೨೨. ತನ್ನ ಬಳಿಗೆ ಬಂದ ದೇವತೆಗಳನ್ನೂ, ಮಹರ್ಷಿಗಳನ್ನೂ ಕಂಡು ಮಹಾ ಬುದ್ಧಿಶಾಲಿಯೂ, ದೇವಪುರೋಹಿತನೆನಿಸಿದವನೂ ಆದ ಬೃಹಸ್ಪತಿಯು ಪ್ರಣಾಮಪೂರ್ವಕವಾಗಿ ಇಂತೆಂದನು.

೨೩-೨೪. "ಬ್ರಹ್ಮವಿಷ್ಣುಮಹಾದೇವರಿರಾ! ಹಿಂದೆ ನಿಮ್ಮ ಅಪ್ಪಣೆಯನ್ನನುಸರಿಸಿ ಈತನು ವೃತ್ರಾಸುರನನ್ನು ಕೊಂದ ವೃತ್ತಾಂತವೆಲ್ಲವೂ ನಿಮಗೆ ತಿಳಿದೇ ಇರುವುದಷ್ಟೆ. ಹಾಗಾದರೂ ಈತನು ಬ್ರಹ್ಮಘಾತಕನೂ, ಪಾತಕವನ್ನು ಮಾಡಿದವನೂ ಎಂದು ತಿಳಿದು ಸಮಸ್ತ ತೀರ್ಥಗಳನ್ನೂ ತಿರುಗುತ್ತಿರುವನು. ಈತನನ್ನು ಬ್ರಹ್ಮಹತ್ಯೆಯು ಬಿಡಲೊಲ್ಲದಾಗಿರುವುದು.

೨೫. ಸೂರ್ಯಚಂದ್ರರಿಲ್ಲದ ಗಗನದಂತೆಯೂ, ರಾಜನಿಲ್ಲದ ರಾಜ್ಯದಂತೆಯೂ ಚರಾಚರಗಳನ್ನೊಳಗೊಂಡ ಮೂರು ಲೋಕಗಳೂ, ಬ್ರಹ್ಮಾಂಡವೂ ಸುಖಹೀನವಾಗಿರುವುವು.

ತಸ್ಮಾತ್ಸರ್ವೇ ಸುರಶ್ರೇಷ್ಠಾ ವಿಜ್ಞಾಪ್ಯಂ ಮಮ ಸಂಪ್ರತಿ ।
ಕುರ್ವಂತು ಶಕ್ರಂ ನಿರ್ದೋಷಂ ತಥಾ ಸರ್ವೇ ಮಹರ್ಷಯಃ ॥ ೨೬ ॥
ಬೃಹಸ್ಪತಿಮುಖೋದ್ಗೀರ್ಣಂ ಶ್ರುತ್ವಾ ತದ್ವಚನಂ ಶುಭಂ ।
ತತಃ ಪ್ರೋವಾಚ ಭಗವಾನ್ಬ್ರಹ್ಮಾ ಲೋಕಪಿತಾಮಹಃ ॥ ೨೭ ॥
ಏತತ್ಪಾಪಂ ಮಹಾಘೋರಂ ಬ್ರಹ್ಮಹತ್ಯಾಸಮುದ್ಭವಂ ।
ದೈವತೇಭ್ಯೋಽಥ ಭೂತೇಭ್ಯಶ್ಚತುರ್ಭಾಗಂ ಕ್ಷಿಪಾಮ್ಯಹಂ ॥ ೨೮ ॥
ಏವಂ ಮುಕ್ತ್ವಾಕ್ಷಿಪಚ್ಚೈನೋ ಜಲೋಪರಿ ಮಹಾಮತಿಃ ।
ಅವಗಾಹ್ಯ ತತಃ ಪೇಯಾ ಆಪೋ ವೈ ನಾಽನ್ಯಥಾ ಬುಧೈಃ ॥ ೨೯ ॥
ಧರಾಯಾಮಕ್ಷಿಪದ್ಭಾಗಂ ದ್ವಿತೀಯಂ ಪದ್ಮಸಂಭವಃ ।
ಅಭಕ್ಷ್ಯಾ ತೇನ ಸಂಜಾತಾ ಸದಾಕಾಲಂ ವಸುಂಧರಾ ॥ ೩೦ ॥
ತದರ್ಧಮರ್ಧಂ ನಾರೀಣಾಂ ದ್ವಿತೀಯೇಽಹ್ನಿ ಯುಧಿಷ್ಠಿರ ।
ನಿಕ್ಷಿಪ್ಯ ಭಗವಾನ್ದೇವಃ ಪುನರನ್ಯಜ್ಜಗಾದ ಹ ॥ ೩೧ ॥

---

೨೬. ಆದುದರಿಂದ ನನ್ನ ಈ ವಿಜ್ಞಾಪನೆಯನ್ನು ಲಾಲಿಸಿ ಸಮಸ್ತ ದೇವತೆಗಳೂ ಸಕಲ ಮಹರ್ಷಿಗಳೂ ಕೂಡಿ ಮಹೇಂದ್ರನನ್ನು ನಿಷ್ಪಾಪನನ್ನಾಗಿ ಮಾಡಬೇಕು.

೨೭. ಬೃಹಸ್ಪತ್ಯಾಚಾರ್ಯನ ಮುಖದಿಂದ ಹೊರಬಿದ್ದ ಈ ಮಾತುಗಳನ್ನು ಕೇಳಿ ಸಕಲೈಶ್ವರ್ಯಭರಿತನೂ, ಲೋಕಪಿತಾಮಹನೂ ಆದ ಬ್ರಹ್ಮದೇವನು ಹೇಳತೊಡಗಿದನು.

೨೮. ಬ್ರಹ್ಮಹತ್ಯೆಯಿಂದುಂಟಾದ ಈ ಪಾತಕವು ಮಹಾ ಭಯಂಕರವಾದುದು. ಇದನ್ನು ನಾಲ್ಕು ಭಾಗವಾಗಿ ಮಾಡಿ ದೇವತೆಗಳಲ್ಲಿಯೂ, ಇತರ ಭೂತಗಳಲ್ಲಿಯೂ ನಾನು ಹಂಚುವೆನು.

೨೯. ಇಂತೆಂದು ಮಹಾಮತಿಯಾದ ಬ್ರಹ್ಮನು ಆತನ ಪಾಪವನ್ನು ಕಳೆದು ಒಂದಂಶವನ್ನು ನೀರಿನಮೇಲೆ ಚೆಲ್ಲಿದನು. ಆದುದರಿಂದಲೇ ಬುದ್ಧಿವಂತರಾದವರು ನೀರಿನಲ್ಲಿ ಸ್ನಾನಮಾಡಿಯೇ ಪಾನವನ್ನು ಮಾಡಬೇಕು.

೩೦. ಪದ್ಮಸಂಭವನು ಪಾಪದ ಎರಡನೆಯ ಪಾದವನ್ನು ಭೂಮಿಯಲ್ಲಿ ಬಿಸುಟನು. ಆದುದರಿಂದ ಭೂಮಿಯು ಸರ್ವಕಾಲದಲ್ಲಿಯೂ ಭೋಜನಕ್ಕೆ ಅಯೋಗ್ಯವೆನಿಸಿತು.

೩೧. ಯುಧಿಷ್ಠಿರನೆ! ಅರ್ಧದ ಅರ್ಧವನ್ನು (ಮೂರನೆಯ ಪಾದವನ್ನು) ಸ್ತ್ರೀಯರಲ್ಲಿ ಬಹಿಷ್ಠೆಯಾದ ಎರಡನೆಯ ದಿನದಲ್ಲಿಟ್ಟನು. ಮತ್ತು ಇಂತೆಂದು ಕಟ್ಟಳೆಯನ್ನೂ ಮಾಡಿದನು.

**ಅಸಂಗ್ರಾಹ್ಯಾತ್ವಸಂಗ್ರಾಹ್ಯಾ ತೇನ ಜಾತಾ ರಜಸ್ವಲಾ ।**
**ಚತುರ್ದಿನಾನಿ ಸಾ ಪ್ರಾಜ್ಞೈಃ ಪಾಪಸ್ಯ ಮಹತೋ ಮಹಾನ್ ॥ ೩೨ ॥**
**ಚತುರ್ಥಂ ತು ತತೋ ಭಾಗಂ ವಿಭಜ್ಯ ಪರಮೇಶ್ವರಃ ।**
**ಕೃಷಿಗೋರಕ್ಷ್ಯವಾಣಿಜ್ಯೈಃ ಶೂದ್ರಸೇವಾಕರೇ ದ್ವಿಜೇ ॥ ೩೩ ॥**
**ತತೋಽಭಿನಂದಯಾಮಾಸುಃ ಸರ್ವೇ ದೇವಾ ಮಹರ್ಷಯಃ ।**
**ದೇವೇಂದ್ರಂ ವಾಗ್ಭಿರಿಷ್ಟಾಭಿರ್ನರ್ಮದಾಜಲಸಂಸ್ಥಿತಂ ॥ ೩೪ ॥**
**ವರೇಣ ಛಂದಯಾಮಾಸ ತತಸ್ತುಷ್ಟೋ ಮಹೇಶ್ವರಃ ।**
**ವರಂ ದಾಸ್ಯಾಮಿ ದೇವೇಶ ವರಂ ವೃಣು ಯಥೇಪ್ಸಿತಂ ॥ ೩೫ ॥**

**ಇಂದ್ರ ಉವಾಚ:—**

**ಯದಿ ತುಷ್ಟೋಽಸಿ ದೇವೇಶ ಯದಿ ದೇಯೋ ವರೋ ಮಮ ।**
**ಅತ್ರ ಸಂಸ್ಥಾಪಯಿಷ್ಯಾಮಿ ಸದಾ ಸನ್ನಿಹಿತೋ ಭವ ॥ ೩೬ ॥**
**ಏವಮಸ್ತ್ವಿತಿ ಚೋಕ್ತ್ವಾ ತಂ ಬ್ರಹ್ಮವಿಷ್ಣುಮಹೇಶ್ವರಾಃ ।**
**ಜಗ್ಮುರಾಕಾಶಮಾವಿಶ್ಯ ಸ್ತೂಯಮಾನಾ ಮಹರ್ಷಿಭಿಃ ॥ ೩೭ ॥**

---

೩೨. ರಜಸ್ವಲೆಯಾದ ಸ್ತ್ರೀಯು ಅಸಂಗ್ರಾಹ್ಯಳೆಂದೆನಿಸಿ ಪುರುಷ ಸಂಸರ್ಗಕ್ಕೆ ಅಯೋಗ್ಯಳಾಗಿರುವಳು. ಆದುದರಿಂದಲೇ ಆ ಪಾತಕದ ಹಿರಿಮೆಯನ್ನನುಸರಿಸಿ ಪ್ರಾಜ್ಞರು ಸ್ತ್ರೀಯರನ್ನು ನಾಲ್ಕು ದಿನಗಳವರೆಗೂ ದೂರ ಮಾಡಿರುವರು.

೩೩. ಬಳಿಕ ಪರಮೇಶ್ವರನು ಪಾಪದ ನಾಲ್ಕನೆಯ ಪಾದವನ್ನು ವಿಭಾಗ ಮಾಡಿ ಕೃಷಿ, ಪಶುಪಾಲನ, ವಾಣಿಜ್ಯ ಮತ್ತು ಶೂದ್ರನ ಸೇವೆಯನ್ನು ಮಾಡುವ ಬ್ರಾಹ್ಮಣರಲ್ಲಿ ನೆಲೆಗೊಳಿಸಿದನು.

೩೪. ಇಂತು ಪರಿಶುದ್ಧನಾಗಿ ನರ್ಮದಾತೀರದಲ್ಲಿ ನೆಲೆಸಿದ್ದ ಮಹೇಂದ್ರನನ್ನು ಸಮಸ್ತ ದೇವತೆಗಳೂ, ಮಹರ್ಷಿಗಳೂ ಉದಾರವಾದ ಮತ್ತು ಇಷ್ಟವಾದ ಮಾತುಗಳಿಂದ ಅಭಿನಂದಿಸಿದರು.

೩೫. ಆಗ ಸಂತುಷ್ಟನಾದ ಮಹಾದೇವನು ವರಪ್ರದನಾಗಿ ಆತನಿಗೆ "ದೇವೇಂದ್ರನೆ! ನಿನಗೆ ವರವನ್ನೀಯುವೆನು, ಬೇಕಾದುದನ್ನು ಬೇಡು" ಎಂದು ಆಶೆಗೊಳಿಸಿದನು.

೩೬–೩೭. ಇಂದ್ರನು ಹೇಳುತ್ತಾನೆ:—"ದೇವಾಧಿದೇವನೆ! ನೀನು ಸಂತುಷ್ಟನಾಗಿ ನನಗೆ ವರವನ್ನು ಕೊಡುವೆಯಾದರೆ ಕೇಳುವೆನು. ನಿನ್ನನ್ನಿಲ್ಲಿ ಪ್ರತಿಷ್ಠಿಸುವೆನು. ಯಾವಾಗಲೂ ನೀನು ಇಲ್ಲಿ ಪ್ರಸನ್ನನಾಗಿರು." ಹಾಗೆಯೇ ಆಗಲೆಂದು ಬ್ರಹ್ಮವಿಷ್ಣುಮಹೇಶ್ವರರು ಆತನಿಗೆ ಅಭಯವನ್ನಿತ್ತು ಮಹರ್ಷಿಗಳೆಲ್ಲರೂ ಸ್ತುತಿಸುತ್ತಿರಲು ಆಕಾಶ ಮಾರ್ಗದಲ್ಲಿ ಹೊರಟುಹೋದರು.

ಗತೇಷು ದೇವದೇವೇಷು ದೇವರಾಜಃ ಶತಕ್ರತುಃ ।
ಸ್ಥಾಪಯಿತ್ವಾ ಮಹಾದೇವಂ ಜಗಾಮ ತ್ರಿದಶಾಲಯಂ ॥ ೩೮ ॥
ಇಂದ್ರತೀರ್ಥೇ ತು ಯಃ ಸ್ನಾತ್ವಾ ತರ್ಪಯೇತ್ಪಿತೃದೇವತಾಃ ।
ಮಹಾಪಾತಕಯುಕ್ತೋಽಪಿ ಮುಚ್ಯತೇ ಸರ್ವಪಾತಕೈಃ ॥ ೩೯ ॥
ಇಂದ್ರತೀರ್ಥೇ ತು ಯಃ ಸ್ನಾತ್ವಾ ಪೂಜಯೇತ್ಪರಮೇಶ್ವರಂ ।
ಸೋಽಶ್ವಮೇಧಸ್ಯ ಯಜ್ಞಸ್ಯ ಪುಷ್ಕಲಂ ಫಲಮಶ್ನುತೇ ॥ ೪೦ ॥
ಏತತ್ತೇ ಕಥಿತಂ ಸರ್ವಂ ತೀರ್ಥಮಾಹಾತ್ಮ್ಯಮುತ್ತಮಂ ।
ಶ್ರುತಮಾತ್ರೇಣ ಯೇನೈವ ಮುಚ್ಯಂತೇ ಪಾತಕೈರ್ನರಾಃ ॥ ೪೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ಇಂದ್ರತೀರ್ಥಮಾಹಾತ್ಮ್ಯವರ್ಣನಂ"
ನಾಮಾಷ್ಟಾದಶೋತ್ತರಶತತಮೋಽಧ್ಯಾಯಃ

---

೩೮. ಆ ತ್ರಿಮೂರ್ತಿಗಳು ಹೊರಟುಹೋಗಲು ಶತಾಶ್ವಮೇಧಗಳನ್ನು ಮಾಡಿದ ಇಂದ್ರನು ಅಲ್ಲಿ ಒಂದು ಮಹಾಲಿಂಗವನ್ನು ಸ್ಥಾಪಿಸಿ ಸ್ವರ್ಗಲೋಕವನ್ನು ಕುರಿತು ಪ್ರಯಾಣವನ್ನು ಮಾಡುವವನಾದನು.

೩೯. ಮಹಾಪಾತಕಸಹಿತನಾಗಿದ್ದರೂ ಯಾವನು ಇಂದ್ರತೀರ್ಥದಲ್ಲಿ ಮಿಂದು ಪಿತೃದೇವತಗಳಿಗೆ ತರ್ಪಣಗಳನ್ನೀಯುವನೊ, ಅವನು ಸಮಸ್ತ ಪಾಪಗಳಿಂದಲೂ ಮುಕ್ತನಾಗುವನು.

೪೦. ಇಂದ್ರತೀರ್ಥದಲ್ಲಿ ಸ್ನಾನವನ್ನು ಮಾಡಿ ಅಲ್ಲಿರುವ ಮಹಾದೇವನ ಪೂಜೆಯನ್ನೆಸಗುವವನು ಅಶ್ವಮೇಧಯಜ್ಞವನ್ನು ಮಾಡಿದವನಿಗೆ ಲಭಿಸುವ ಮಹಾಫಲವನ್ನು ಪಡೆಯುವನು.

೪೧. ಇಂತು ನಿನಗೆ ಇಂದ್ರತೀರ್ಥದ ಉತ್ತಮ ಮಾಹಾತ್ಮ್ಯವನ್ನು ವಿವರಿಸಿ ಹೇಳಿದೆನು. ಈ ಕಥೆಯನ್ನು ಕೇಳಿದ ಮಾತ್ರದಿಂದಲೇ ನರಕಪಾತಕಗಳು ನಾಶವಾಗುವುವು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಇಂದ್ರತೀರ್ಥಮಾಹಾತ್ಮ್ಯವರ್ಣನ"ವೆಂಬ
ನೂರಹದಿನೆಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥೈಕೋನವಿಂಶತ್ಯುತ್ತರಶತತಮೋಽಧ್ಯಾಯಃ

### ರೇವಾಕಲ್ಲೋಡೀತೀರ್ಥಮಾಹಾತ್ಮ್ಯವರ್ಣನಂ

**ಶ್ರೀ ಮಾರ್ಕಂಡೇಯ ಉವಾಚ :—**

**ತತೋ ಗಚ್ಛೇತ್ತು ರಾಜೇಂದ್ರ ಕಲ್ಲೋಡೀತೀರ್ಥಮುತ್ತಮಂ ।**
**ರೇವಾಯಾಶ್ಚೋತ್ತರೇ ಕೂಲೇ ಸರ್ವಪಾಪವಿನಾಶನಂ ॥ ೧ ॥**
**ಹಿತಾರ್ಥಂ ಸರ್ವಭೂತಾನಾಮೃಷಿಭಿಃ ಸ್ಥಾಪಿತಂ ಪುರಾ ।**
**ತಪಸಾ ತು ಸಮುದ್ಧೃತ್ಯ ನರ್ಮದಾಯಾಂ ಮಹಾಂಭಸಿ ॥ ೨ ॥**
**ಸ್ನಾತ್ವಾ ತು ಕಪಿಲಾತೀರ್ಥೇ ಕಪಿಲಾಂ ಯಃ ಪ್ರಯಚ್ಛತಿ ।**
**ಶ್ರುತ್ವಾ ಚಾಖ್ಯಾನಕಂ ದಿವ್ಯಂ ಬ್ರಾಹ್ಮಣಾಂಚ್ಛೃಣು ಯತ್ಫಲಂ ॥ ೩ ॥**
**ಸರ್ವೇಷಾಮೇವ ದಾನಾನಾಂ ಕಪಿಲಾದಾನಮುತ್ತಮಂ ।**
**ಬ್ರಾಹ್ಮಣಾನ್ಸೇಷ್ಟಿತಂ ಪೂರ್ವಮೃಷಿದೇವಸಮಾಗಮೇ ॥ ೪ ॥**

---

### ಕನ್ನಡದ ಅನುವಾದ

#### ರೇವಾಕಲ್ಲೋಡೀತೀರ್ಥಮಾಹಾತ್ಮ್ಯವರ್ಣನ

೧. ಮಾರ್ಕಂಡೇಯನು ಹೇಳುತ್ತಾನೆ.—ಮಹಾರಾಜನೆ! ಬಳಿಕ ರೇವಾ ನದಿಯ ಉತ್ತರ ತೀರದಲ್ಲಿ ಸಮಸ್ತಪಾಪಗಳನ್ನೂ ನಿವಾರಿಸುವ ಮಹಿಮೆಯುಳ್ಳ ಕಲ್ಲೋಡೀತೀರ್ಥಕ್ಕೆ ಹೋಗಬೇಕು.

೨. ಹಿಂದೆ ನರ್ಮದೆಯ ಅಗಾಧವಾದ ಜಲದಿಂದ ಮಹಾತಪಸ್ಸಿನ ಫಲವಾಗಿ ಇದನ್ನುದ್ಧರಿಸಿ ಮಹರ್ಷಿಗಳು ಸಮಸ್ತ ಪ್ರಾಣಿಗಳಿಗೂ ಹಿತವನ್ನೆಸಗಿರುವರು.

೩. ಕಪಿಲಾತೀರ್ಥವೆಂದೂ ಪ್ರಖ್ಯಾತವಾದ ಈ ತೀರ್ಥದಲ್ಲಿ ಯಾವನು ಸುಸ್ನಾತನಾಗಿ ಕಪಿಲೆಯಾಕಳನ್ನು ದಾನಮಾಡುವನೊ, ಮತ್ತು ಅದರ ದಿವ್ಯವಾದ ಚರಿತ್ರೆಯನ್ನು ಯಾವನು ಬ್ರಾಹ್ಮಣನ ಮುಖದಿಂದ ಕೇಳುವನೊ, ಅವನಿಗೆ ಲಭಿಸುವ ಫಲವನ್ನು ಕೇಳು.

೪. ಸಮಸ್ತ ದಾನಗಳಲ್ಲಿಯೂ ಕಪಿಲೆಯ ದಾನವೇ ಸರ್ವೋತ್ತಮವಾದುದು. ಪೂರ್ವದಲ್ಲಿ ಮಹರ್ಷಿಗಳ ಮತ್ತು ದೇವತೆಗಳ ಸಭೆಯ ಮಧ್ಯದಲ್ಲಿ ಬ್ರಾಹ್ಮಣರು ಇದನ್ನೇ ತಮಗಾಗಿ ಆರಿಸಿಕೊಂಡರು.

ಸದ್ಯಃ ಪ್ರಸೂತಾಂ ಕಪಿಲಾಂ ಶೋಭನಾಂ ಯಃ ಪ್ರಯಚ್ಛತಿ ।
ಸೋಪವಾಸೋ ಜಿತಕ್ರೋಧಸ್ತಸ್ಯ ಪುಣ್ಯಫಲಂ ಶೃಣು ॥ ೫ ॥
ಸ ಸಮುದ್ರಗುಹಾ ತೇನ ಸಶೈಲವನಕಾನನಾ ।
ದತ್ತಾ ಚೈವ ಮಹಾಬಾಹೋ ಪೃಥಿವೀ ನಾಽತ್ರ ಸಂಶಯಃ ॥ ೬ ॥
ವಾಚಿಕಂ ಮಾನಸಂ ಪಾಪಂ ಕರ್ಮಣಾ ಯತ್ಪುರಾಕೃತಂ ।
ನಶ್ಯತೇ ಕಪಿಲಾಂ ದತ್ವಾ ಸಪ್ತಜನ್ಮಾರ್ಜಿತಂ ನೃಪ ॥ ೭ ॥
ಭೂಮಿದಾನಂ ಧನಂ ಧಾನ್ಯಂ ಹಸ್ತ್ಯಶ್ವಕನಕಾದಿಕಂ ।
ಕಪಿಲಾದಾನಸ್ಯೈಕಸ್ಯ ಕಲಾಂ ನಾಽರ್ಹಂತಿ ಷೋಡಶೀಂ ॥ ೮ ॥
ತತ್ರ ತೀರ್ಥೇ ನರಃ ಸ್ನಾತ್ವಾ ಕಪಿಲಾಂ ಯಃ ಪ್ರಯಚ್ಛತಿ ।
ಮೃತೋ ವಿಷ್ಣುಪುರಂ ಯಾತಿ ಗೀಯಮಾನೋಽಪ್ಸರೋಗಣೈಃ ॥ ೯ ॥
ಯಾವಂತಿ ತಸ್ಯಾ ರೋಮಾಣಿ ಸವತ್ಸಾಯಾಸ್ತು ಭಾರತ ।
ತಾವದ್ವರ್ಷಸಹಸ್ರಾಣಿ ಸ ಸ್ವರ್ಗೇ ಕ್ರೀಡತೇ ಚಿರಂ ॥ ೧೦ ॥

---

೫. ಆಗತಾನೆ ಕರುವನ್ನು ಹಾಕಿರುವುದೂ, ಶುಭಲಕ್ಷಣಗಳಿಂದೊಡಗೂಡಿರುವುದೂ ಆದ ಕಪಿಲೆಯಾಕಳನ್ನು ಯಾವನು ಉಪವಾಸ ನಿರತನೂ, ಕೋಪವನ್ನು ಜಯಿಸಿದವನೂ ಆಗಿ ದಾನಮಾಡುವನೊ, ಅವನಿಗೆ ದೊರಕುವ ಪುಣ್ಯಫಲವನ್ನು ಕೇಳು.

೬. ಸಮುದ್ರಗಳು, ಗುಹೆಗಳು, ಪರ್ವತಗಳು, ಅರಣ್ಯಗಳು, ಉದ್ಯಾನಗಳು, ಮುಂತಾದುವುಗಳಿಂದ ಕೂಡಿದ ಸಮಸ್ತ ಭೂಮಂಡಲವನ್ನೂ ಅವನು ದಾನಮಾಡಿದಂತಾಗುವುದರಲ್ಲಿ ಸಂದೇಹವಿಲ್ಲ.

೭. ಅಯ್ಯಾ ಧರ್ಮರಾಜನೆ! ಮಾತುಗಳಿಂದಲೂ, ಮನಸ್ಸಿನಿಂದಲೂ, ಕರ್ಮಗಳಿಂದಲೂ ಹಿಂದಿನ ಏಳು ಜನ್ಮಗಳಲ್ಲಿ ಮಾಡಿ ಸಂಪಾದಿಸಿದ್ದ ಪಾಪರಾಶಿಯೆಲ್ಲವೂ ಕಪಿಲೆಯ ದಾನದಿಂದ ನಾಶವಾಗುವುದು.

೮. ಭೂಮಿ, ಧನ, ಧಾನ್ಯ, ಆನೆ, ಕುದುರೆ, ಸುವರ್ಣ ಮುಂತಾದ ವಸ್ತುಗಳ ಯಾವ ದಾನಗಳೂ ಕಪಿಲೆಯ ಗೋವಿನ ದಾನದ ಹದಿನಾರನೆಯ ಭಾಗಕ್ಕೂ ಸರಿದೂಗಲಾರವು

೯. ಈ ತೀರ್ಥದಲ್ಲಿ ಸ್ನಾನವನ್ನು ಮಾಡಿ ಕಪಿಲೆಯ ದಾನವನ್ನು ಮಾಡಿದ ಮಾನವನು ದೇಹವನ್ನು ತ್ಯಜಿಸಲು ಅಪ್ಸರೋಗಣಗಳಿಂದ ಸ್ತುತಿಸಲ್ಪಟ್ಟು ವೈಕುಂಠವನ್ನು ಸೇರುವನು.

೧೦. ಎಲೈ ಭರತಕುಲೋತ್ಪನ್ನನೆ! ಆ ಆಕಳು ಮತ್ತು ಕರುಗಳ ಮೈಗಳಲ್ಲಿ ಎಷ್ಟು ಕೂದಲಿರುವುವೊ, ಅಷ್ಟು ಸಾವಿರ ವರ್ಷಗಳವರೆಗೂ ಆತನು ಸ್ವರ್ಗಲೋಕದಲ್ಲಿ ಕ್ರೀಡಿಸುತ್ತಿರುವನು.

**ತತೋಽವಕೀರ್ಣಕಾಲೇನ ತ್ವಿಹ ಮಾನುಷ್ಯತಾಂಗತಃ ।**
**ಧನಧಾನ್ಯಸಮೋಪೇತೋ ಜಾಯತೇ ವಿಮಲೇ ಕುಲೇ ॥ ೧೧ ॥**
**ವೇದವಿದ್ಯಾವ್ರತಸ್ನಾತಃ ಸರ್ವಶಾಸ್ತ್ರವಿಶಾರದಃ ।**
**ವ್ಯಾಧಿಶೋಕವಿನಿರ್ಮುಕ್ತೋ ಜೀವೇಚ್ಚ ಶರದಾಂ ಶತಂ ॥ ೧೨ ॥**
**ಏತತ್ತೇ ಸರ್ವಮಾಖ್ಯಾತಂ ಕಲ್ಹೋಡೀತೀರ್ಥಮುತ್ತಮಂ ।**
**ಯತ್ಕೃತ್ವಾ ಸರ್ವಪಾಪೇಭ್ಯೋ ಮುಚ್ಯತೇ ನಾಽತ್ರ ಸಂಶಯಃ ॥ ೧೩ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ**
**ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ**
**" ರೇವಾಕಲ್ಹೋಡೀತೀರ್ಥಮಾಹಾತ್ಮ್ಯವರ್ಣನಂ "**
**ನಾಮೈಕೋನವಿಂಶತ್ಯುತ್ತರಶತತಮೋಽಧ್ಯಾಯಃ**

---

೧೧. ಆ ಕಾಲವೂ ಕಳೆದಮೇಲೆ ಮತ್ತೆ ಮನುಷ್ಯಲೋಕಕ್ಕೆ ಬಂದು ಉತ್ತಮವಾದ ಕುಲದಲ್ಲಿ ಜನಿಸಿ ಧನಧಾನ್ಯಾದಿ ಸಕಲೈಶ್ವರ್ಯಗಳಿಂದ ಕೂಡಿರುವನು.

೧೨. ವೇದವಿದ್ಯೆಗಳಲ್ಲಿ ಸುಸ್ನಾತನಾಗಿ, ಸಕಲ ಶಾಸ್ತ್ರಗಳಲ್ಲಿಯೂ ಪಾಂಡಿತ್ಯವನ್ನು ಪಡೆದು, ರೋಗದುಃಖಾದಿಗಳನ್ನನುಭವಿಸದೆ ನೂರು ವರ್ಷಗಳ ಪೂರ್ಣಾಯುಷ್ಯವನ್ನನುಭವಿಸುವನು.

೧೩. ಇಂತು ನಿನಗೆ ರೇವಾಕಲ್ಹೋಡೀತೀರ್ಥದ ಉತ್ತಮವಾದ ಚರಿತ್ರೆಯನ್ನು ಹೇಳಿರುವೆನು. ಇದನ್ನು ಸೇವಿಸಿದವನು ಸಮಸ್ತ ಪಾಪಗಳಿಂದಲೂ ಮುಕ್ತನಾಗುವುದರಲ್ಲಿ ಸಂದೇಹವಿಲ್ಲ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
" ರೇವಾಕಲ್ಹೋಡೀತೀರ್ಥಮಾಹಾತ್ಮ್ಯವರ್ಣನ "ವೆಂಬ
ನೂರಹತ್ತೊಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ವಿಂಶತ್ಯುತ್ತರಶತತಮೋಽಧ್ಯಾಯಃ

## ಕಂಬುಕೇಶ್ವರತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ಅತಃ ಪರಂ ಪ್ರವಕ್ಷ್ಯಾಮಿ ಕಂಬುಕೇಶ್ವರಮುತ್ತಮಂ ।
ಹಿರಣ್ಯಕಶಿಪುರ್ದೈತ್ಯೋ ದಾನವೋ ಬಲದರ್ಪಿತಃ ॥ ೧ ॥
ಅವಧ್ಯಃ ಸರ್ವಲೋಕಾನಾಂ ತ್ರಿಷು ಲೋಕೇಷು ವಿಶ್ರುತಃ ।
ತಸ್ಯ ಪುತ್ರೋ ಮಹಾತೇಜಾಃ ಪ್ರಹ್ಲಾದೋ ನಾಮ ನಾಮತಃ ॥ ೨ ॥
ವಿಷ್ಣುಪ್ರಸಾದಾದ್ಭಕ್ತ್ಯಾ ಚ ತಸ್ಯ ರಾಜ್ಯೇ ಪ್ರತಿಷ್ಠಿತಃ ।
ವಿರೋಚನಸ್ತಸ್ಯ ಸುತಸ್ತಸ್ಯಾಽಪಿ ಬಲಿರೇವ ಚ ॥ ೩ ॥
ಬಲಿಪುತ್ರೋಽಭವದ್ಬಾಣಸ್ತಸ್ಮಾದಪಿ ಚ ಶಂಬರಃ ।
ಶಂಬರಸ್ಯಾನ್ವಯೇ ಜಾತಃ ಕಂಬುರ್ನಾಮ ಮಹಾಸುರಃ ॥ ೪ ॥
ಜ್ಞಾತ್ವಾ ವಿಷ್ಣುಮಯಂ ಘೋರಂ ಮಹದ್ಭಯಮುಪಸ್ಥಿತಂ ।
ದಾನವಾನಾಂ ವಿನಾಶಾಯ ನಾಽನ್ಯೋ ಹೇತುಃ ಕದಾಚನ ॥ ೫ ॥

---

## ಕನ್ನಡದ ಅನುವಾದ

### ಕಂಬುಕೇಶ್ವರತೀರ್ಥಮಾಹಾತ್ಮ್ಯವರ್ಣನ

೧. ಮಾರ್ಕಂಡೇಯನು ಹೇಳುತ್ತಾನೆ —ಇನ್ನು ಸರ್ವೋತ್ಕೃಷ್ಟವಾದ ಕಂಬುಕೇಶ್ವರತೀರ್ಥವನ್ನು ವರ್ಣಿಸುವೆನು. ಹಿಂದೆ ಪ್ರಾಣಿಹಿಂಸಕನೂ, ಮಹಾ ಬಲಶಾಲಿಯೂ ಆದ ಹಿರಣ್ಯಕಶಿಪುವೆಂಬ ರಾಕ್ಷಸನಿದ್ದನು.

೨. ಮೂರು ಲೋಕಗಳಲ್ಲಿಯೂ ಆತನು ಅವಧ್ಯನೆಂದೆನಿಸಿ ಪ್ರಖ್ಯಾತಿಯನ್ನು ಪಡೆದಿದ್ದನು. ಆತನಿಗೆ ಮಹಾ ತೇಜಸ್ವಿಯಾದ ಪ್ರಹ್ಲಾದನೆಂಬ ಹೆಸರಿನ ಪುತ್ರನಾದನು

೩. ಆತನ ಭಕ್ತಿಗೆ ಪ್ರಸನ್ನನಾಗಿ ಮಹಾವಿಷ್ಣುವೇ ಆತನನ್ನು ತಂದೆಯ ರಾಜ್ಯದಲ್ಲಿ ಅಭಿಷೇಕಮಾಡಿದನು. ಆತನ ಮಗನು ವಿರೋಚನನು. ವಿರೋಚನನ ಮಗನೇ ಬಲಿಚಕ್ರವರ್ತಿಯು.

೪. ಬಲಿಯ ಪುತ್ರನು ಬಾಣಾಸುರನು ಆತನಿಂದ ಶಂಬರನು ಹುಟ್ಟಿದನು. ಆ ಶಂಬರನ ವಂಶದಲ್ಲಿಯೇ ಕಂಬುವೆಂಬ ಹೆಸರಿನ ಮಹಾದೈತ್ಯನೊಬ್ಬನು ಹುಟ್ಟಿದನು.

೫. ದಾನವರ ವಿನಾಶಕ್ಕೆ ಬೇರೆ ಯಾವ ಕಾರಣವೂ ಇಲ್ಲ. ಮಹಾವಿಷ್ಣುವಿನಿಂದಲೇ ತಮಗೆ ಭಯಂಕರವೂ ಅನಿವಾರ್ಯವೂ ಆದ ಸಂಕಟವುಂಟಾಗುವುದೆಂದು ಆತನು ತಿಳಿದಿದ್ದನು.

ಸ ಯುಕ್ತ್ವಾ ಪುತ್ರದಾರಾಂಶ್ಚ ಸುಹೃದ್ಬಂಧುಪರಿಗ್ರಹಾನ್ ।
ಚಚಾರ ಮೌನಮಾಸ್ಥಾಯ ತಪಃ ಕಂಬುರ್ಮಹಾಮತಿಃ ॥ ೬
ಅಕ್ಷಸೂತ್ರಕರೋ ಭೂತ್ವಾ ದಂಡೀ ಮುಂಡೀ ಚ ಮೇಖಲೀ ।
ಶಾಕಯಾವಕಭಕ್ಷಶ್ಚ ವಲ್ಕಲಾಽಜಿನಸಂವೃತಃ ॥ ೭
ಸ್ನಾತ್ವಾ ನಿತ್ಯಂ ಧೃತಿಪರೋ ನರ್ಮದಾಜಲಮಾಶ್ರಿತಃ ।
ಪೂಜಯಂಸ್ತು ಮಹಾದೇವಮರ್ಬುದಂ ವರ್ಷಸಂಖ್ಯಯಾ ॥ ೮ ।
ತತಸ್ತುತೋಷ ಭಗವಾನ್ದೇವದೇವೋ ಮಹೇಶ್ವರಃ ।
ಉವಾಚ ದಾನವಂ ಕಾಲೇ ಮೇಘಗಂಭೀರಯಾ ಗಿರಾ ॥ ೯
ಭೋಭೋಃ ಕಂಬೋ ಮಹಾಭಾಗ ತುಷ್ಟೋಽಹಂ ತವ ಸುವ್ರತ ।
ಇಷ್ಟಂ ವ್ರತಾನಾಂ ಪರಮಂ ಮೌನಂ ಸರ್ವಾರ್ಥಸಾಧನಂ ॥ ೧೦ ।
ಚರಿತಂ ಚ ತ್ವಯಾ ಲೋಕೇ ದೇವದಾನವದುಶ್ಚರಂ ।
ವರಂ ವೃಣೀಷ್ವ ಭದ್ರಂ ತೇ ಯತ್ತೇ ಮನಸಿ ರೋಚತೇ ॥ ೧೧

---

೬. ಅವನು ಮಕ್ಕಳನ್ನೂ, ಹೆಂಡತಿಯನ್ನೂ, ಸ್ನೇಹಿತರನ್ನೂ, ಬಂಧುಗಳನ್ನೂ, ಪರಿಚಾರಕರನ್ನೂ ತ್ಯಜಿಸಿ ಮೌನವನ್ನವಲಂಬಿಸಿ ಮಹಾಬುದ್ಧಿಶಾಲಿಯಾಗಿ ತಪಸ್ಸನ್ನಾಚರಿಸತೊಡಗಿದನು.

೭. ರುದ್ರಾಕ್ಷಿಗಳ ಮಾಲೆಯನ್ನು ಕೈಯಲ್ಲಿ ಹಿಡಿದು, ದಂಡವನ್ನು ಸ್ವೀಕರಿಸಿ, ಮುಂಡನವನ್ನು ಮಾಡಿಸಿಕೊಂಡು, ಮೇಖಲೆಯನ್ನು ಧರಿಸಿ, ಕಾಡಿನ ಸೊಪ್ಪು, ಅಕ್ಕಿಗಳನ್ನೇ ತಿನ್ನುತ್ತ ನಾರುಬಟ್ಟೆಗಳನ್ನೂ ಚರ್ಮಗಳನ್ನೂ ಹೊದ್ದಿರುತ್ತಿದ್ದನು.

೮. ಬಹಳ ಧೈರ್ಯಪರನಾಗಿ ನರ್ಮದಾ ಜಲವನ್ನೇ ಆಶ್ರಯಿಸಿ ನಿತ್ಯವೂ ಅದರಲ್ಲಿ ಸ್ನಾನವನ್ನು ಮಾಡಿಕೊಂಡು ಅಲ್ಲಿ ಮಹಾದೇವನ ಪೂಜೆಯನ್ನು ನೆರವೇರಿಸುತ್ತಿರಲು ಅರ್ಬುದ (ಹತ್ತು ಕೋಟಿ) ಸಂಖ್ಯೆಯ ವರ್ಷಗಳು ಕಳೆದು ಹೋದುವು.

೯. ದೇವಾಧಿದೇವನಾದ ಪರಮೇಶ್ವರನು ಆ ದಾನವನ ತಪಸ್ಸಿನಿಂದ ಸಂತುಷ್ಟನಾಗಿ ಉಚಿತಕಾಲದಲ್ಲಿ ಪ್ರತ್ಯಕ್ಷನಾಗಿ ಮೇಘದ ಗರ್ಜನೆಯಂತೆ ಗಂಭೀರವಾದ ಧ್ವನಿಯಲ್ಲಿ ಹೇಳಿದನು.

೧೦. "ಅಯ್ಯಾ, ಮಹಾಭಾಗ್ಯಶಾಲಿಯಾದ ಕಂಬುವೆ! ನಿನ್ನ ಮಹಾವ್ರತದಿಂದ ಪರಿತುಷ್ಟನಾಗಿರುವೆನು. ವ್ರತಗಳಲ್ಲೆಲ್ಲ ಮೌನವೇ ನನಗೆ ಪರಮಪ್ರಿಯವಾದುದು. ಇದರಿಂದ ಸರ್ವಾರ್ಥಗಳೂ ಸಿದ್ಧಿಸುವುವು.

೧೧. ದೇವದಾನವರಿಗೂ ಅಸಾಧ್ಯವಾದ ಆ ವ್ರತವನ್ನು ನೀನು ಆಚರಿಸಿರುವೆ. ನಿನಗೆ ಮಂಗಳವಾಗಲಿ. ನಿನ್ನ ಮನಸ್ಸಿನಲ್ಲಿರುವ ವರವನ್ನು ಕೇಳಿಕೊ."

ಕಂಬರುವಾಚ :—

ಯದಿ ಪ್ರಸನ್ನೋ ದೇವೇಶ ಯದಿ ದೇಯೋ ವರೋ ಮಮ ।
ಅಕ್ಷಯ್ಯಶ್ಚಾಽವ್ಯಯಶ್ಚೈವ ಸ್ವೇಚ್ಛಯಾ ವಿಚರಾಮ್ಯಹಂ ॥ ೧೨ ॥
ದೈತ್ಯದಾನವಸಂಘಾನಾಂ ಸಂಯುಗೇಷ್ವಪಲಾಯಿತಾ ।
ಭಯಂ ಚಾಽನ್ಯನ್ನ ವಿದ್ಯೇತ ಮುಕ್ತ್ವಾ ದೇವಂ ಗದಾಧರಂ ॥ ೧೩ ॥
ತಸ್ಮಾಽಹಂ ಸಂಯುಗೇ ಸಾಧ್ಯೋ ಯೇನೋಪಾಯೇನ ಶಂಕರ ।
ಭವಾಮಿ ನ ಸದಾಕಾಲಂ ತಂ ವದಸ್ವ ವರಂ ಮಮ ॥ ೧೪ ॥

ಈಶ್ವರ ಉವಾಚ :—

ಮಮ ಸನ್ನಿಹಿತೋ ಯತ್ರ ತ್ವಂ ಭವಿಷ್ಯಸಿ ದಾನವ ।
ತತ್ರ ವಿಷ್ಣುಭಯಂ ನಾಽಸ್ತಿ ವಸಾಽತ್ರಾಽವಿಗತಜ್ವರಃ ॥ ೧೫ ॥
ತಸ್ಯ ದೇವಾಧಿದೇವಸ್ಯ ವೇದಗರ್ಭಸ್ಯ ಸಂಯುಗೇ ।
ಶಂಖಚಕ್ರಧರಸ್ಯೇಶಾ ನಾಽಹಂ ಸರ್ವೇ ಸುರಾಽಸುರಾಃ ॥ ೧೬ ॥
ಕಿ ಪುನರ್ಯೋ ದ್ವಿಷತ್ಯೇನಂ ಲೋಕಾಲೋಕಪ್ರಭುಂ ಹರಿಂ ।
ಸ ಸುಖೀ ವರ್ತತೇ ಕಾಲಂ ನ ನಿಮೇಷಂ ಮಿತಂ ಮಮ ॥ ೧೭ ॥

---

೧೨. ಕಂಬುವು ಹೇಳುತ್ತಾನೆ—ದೇವೇಶ್ವರನೆ! ನೀನು ಪ್ರಸನ್ನನಾಗಿ ನನಗೆ ವರವನ್ನು ಕೊಡುವೆಯಾದರೆ ಅಂಗಹಾನಿಯೂ, ನಾಶವೂ ಇಲ್ಲದವನಾಗಿ ಸ್ವೇಚ್ಛೆಯಿಂದ ಲೋಕದಲ್ಲಿ ವಿಹರಿಸುತ್ತಿರುವೆನು.

೧೩. ರಾಕ್ಷಸರ ಮತ್ತು ದೈತ್ಯರ ಯಾವ ಯುದ್ಧಗಳಲ್ಲಿಯೂ ನಾನು ಪಲಾಯನವನ್ನು ಮಾಡಿಲ್ಲ. ಗದಾಧರನಾದ ನಾರಾಯಣನನ್ನುಳಿದು ಬೇರೆ ಯಾರಿಂದಲೂ ನನಗೆ ಭಯವಿಲ್ಲ.

೧೪. ಶಂಕರನೆ! ಆತನೊಡನೆ ಯುದ್ಧದಲ್ಲಿ ನಾನು ಯಾವಾಗ ಅಜೇಯನಾಗುವೆನೊ, ಆ ಕಾಲವನ್ನು ತಿಳಿಸು. ಇದೇ ನನಗೆ ಬೇಕಾದ ವರವು.

೧೫. ಈಶ್ವರನು ಹೇಳುತ್ತಾನೆ —"ದಾನವೇಂದ್ರನೆ! ನನ್ನ ಬಳಿಯಲ್ಲಿ ನೀನಿರುವವರೆಗೂ ನಿನಗೆ ಮಹಾವಿಷ್ಣುವಿನ ಭಯವಿರುವುದಿಲ್ಲ. ಆದುದರಿಂದ ನೀನು ನಿರ್ಭಯನಾಗಿ ಇಲ್ಲಿಯೇ ವಾಸಮಾಡು.

೧೬. ದೇವಾಧಿದೇವನೂ, ವೇದಗಳಿಗೆ ಉತ್ಪತ್ತಿಸ್ಥಾನನೂ, ಶಂಖಚಕ್ರಾದ್ಯಾಯುಧಧಾರಿಯೂ ಆದ ಆತನನ್ನು ಯುದ್ಧದಲ್ಲಿ ಗೆಲ್ಲಲು ನಾನೂ ಅಶಕ್ತನು. ಸಮಸ್ತ ದೇವತೆಗಳೂ ಅಶಕ್ತರೇ.

೧೭. ಇನ್ನು ಲೋಕಾಲೋಕಗಳ ನಿಯಾಮಕನಾದ ಆತನನ್ನು ದ್ವೇಷಿಸುವ ನಿನ್ನಂತಹವರ ಮಾತನ್ನಾಡಲೇಕೆ? ಅಂತಹವನು ಒಂದು ನಿಮಿಷವೂ ಸುಖಿಯಾಗಿರಲಾರನೆಂದು ನನಗೆ ತೋರುವುದು.

ತಸ್ಮಾತ್ತ್ವಂ ಪರಯಾ ಭಕ್ತ್ಯಾ ಸರ್ವಭೂತಹಿತೇ ರತಃ ।
ವಸಿಷ್ಯಸಿ ಚಿರಂ ಕಾಲಮಿತ್ಯುಕ್ತ್ವಾಽದರ್ಶನಂ ಗತಃ ॥ ೧೮ ॥
ಗತೇ ಚಾಽದರ್ಶನಂ ದೇವೇ ಯತ್ರ ತೀರ್ಥೇ ಮಹಾಮತಿಃ ।
ಸ್ಥಾಪಯಾಮಾಸ ದೇವೇಶಂ ಶಿವಂ ಶಾಂತಮನಾಮಯಂ ॥ ೧೯ ॥
ತಸ್ಮಿಂಸ್ತೀರ್ಥೇ ಮಹಾದೇವಂ ಸ್ಥಾಪಯಿತ್ವಾ ದಿವಂಗತಃ ।
ತದಾ ಪ್ರಭೃತಿ ತತ್ತೀರ್ಥಂ ಕಂಬುತೀರ್ಥಮಿತಿ ಶ್ರುತಂ ।
ವಿಖ್ಯಾತಂ ಸರ್ವಲೋಕೇಷು ಮಹಾಪಾತಕನಾಶನಂ ॥ ೨೦ ॥
ಕಂಬುತೀರ್ಥೇ ನರಃ ಸ್ನಾತ್ವಾ ವಿಧಿನಾಽಭ್ಯರ್ಚ್ಯ ಭಾಸ್ಕರಂ ।
ಋಗ್ಯಜುಃಸಾಮಮಂತ್ರೈಶ್ಚ ಸ್ತೂಯಮಾನೋ ನೃಪೋತ್ತಮ ॥ ೨೧ ॥
ತಸ್ಯ ಪುಣ್ಯಂ ಸಮುದ್ದಿಷ್ಟಂ ಬ್ರಾಹ್ಮಣೈರ್ವೇದಪಾರಗೈಃ ।
ತತ್ಸರ್ವಂ ತು ಶೃಣುಷ್ವಾಽದ್ಯ ಮಮೈವ ಗದತೋ ನೃಪ ॥ ೨೨ ॥
ಋಗ್ಯಜುಃಸಾಮಗೀತೇಷು ಸಾಂಗೋಪಾಂಗೇಷು ಯತ್ಫಲಂ ।
ತತ್ಫಲಂ ಸಮವಾಪ್ನೋತಿ ಗಾಯತ್ರೀಮಾತ್ರಮಂತ್ರವಿತ್ ॥ ೨೩ ॥

---

೧೮. ಆದುದರಿಂದ ನೀನು ನನ್ನಲ್ಲಿಯೇ ಅತ್ಯಂತವಾದ ಭಕ್ತಿಯನ್ನುಮಾಡಿ ಸಮಸ್ತ ಪ್ರಾಣಿಗಳಲ್ಲಿಯೂ ದಯೆಯಿಂದ ನಡೆದುಕೊಂಡು ಬಹುಕಾಲದವರೆಗೂ ವಾಸಮಾಡು.'' ಇಂತೆಂದು ಮಹಾದೇವನು ಅದೃಶ್ಯನಾದನು.

೧೯. ದೇವೇಶ್ವರನೂ, ಮಂಗಳಪ್ರದನೂ, ಶಾಂತಮೂರ್ತಿಯೂ, ಜರಾ ಮರಣವರ್ಜಿತನೂ ಆದ ಆತನು ಕಣ್ಮರೆಯಾಗಲು ಮಹಾಪ್ರಾಜ್ಞನಾದ ಆ ದಾನವನು ಆ ತೀರ್ಥದ ಬಳಿಯಲ್ಲಿಯೇ ಶಿವಲಿಂಗವನ್ನು ಪ್ರತಿಷ್ಠಿಸಿದನು.

೨೦. ಇಂತು ಆ ತೀರ್ಥದಲ್ಲಿ ಲಿಂಗವನ್ನು ನೆಲೆಗೊಳಿಸಿ ಆತನು ಸ್ವರ್ಗ ಲೋಕಕ್ಕೆ ಹೋದನು. ಧರ್ಮನಂದನನೆ! ಅಂದಿನಿಂದ ಆ ತೀರ್ಥವು ಕಂಬು ತೀರ್ಥವೆಂದು ಕರೆಯಲ್ಪಡುವುದು. ಮತ್ತು ಮಹಾಪಾತಕಗಳನ್ನು ನಾಶಗೊಳಿಸು ವುದೆಂದೂ, ಮೂರು ಲೋಕಗಳಲ್ಲಿಯೂ ಪ್ರಖ್ಯಾತಿಯನ್ನು ಪಡೆದಿರುವುದು.

೨೧. ರಾಜೇಂದ್ರನೆ! ಕಂಬುತೀರ್ಥದಲ್ಲಿ ಸ್ನಾನವನ್ನು ಮಾಡಿ ಸೂರ್ಯ ದೇವನನ್ನು ವಿಧ್ಯುಕ್ತರೀತಿಯಿಂದ ಪೂಜಿಸಿದವನು ಮೂರು ವೇದಗಳಿಂದಲೂ ಸ್ತುತಿಸಲ್ಪಡುವ ಮಹಿಮೆಯುಳ್ಳವನಾಗುವನು.

೨೨. ವೇದವಿದ್ಯೆಯಲ್ಲಿ ಪಾರಂಗತರಾದ ಬ್ರಾಹ್ಮಣರು ಆತನಿಗೆ ಲಭಿಸುವ ಪುಣ್ಯವು ಎಂತಹುದೆಂಬುದನ್ನು ಸಂಪೂರ್ಣವಾಗಿ ಹೇಳಿರುವರು. ಅದನ್ನು ತಿಳಿಸುವೆನು, ಕೇಳು.

೨೩. ಅಲ್ಲಿ ಗಾಯತ್ರಿಯ ಮಂತ್ರವೊಂದನ್ನು ಮಾತ್ರ ತಿಳಿದು ಜಪಿಸಿದರೂ ಋಗ್ವೇದ, ಯಜುರ್ವೇದ, ಸಾಮವೇದಗಳನ್ನು ಸಾಂಗೋಪಾಂಗವಾಗಿ ಅಧ್ಯಯನಮಾಡಿದ ಫಲವನ್ನು ಪಡೆಯುವನು.

ತತ್ರ ತೀರ್ಥೇ ತು ಯಃ ಸ್ನಾತ್ವಾ ತರ್ಪಯೇತ್ಪಿತೃದೇವತಾಃ ।
ಪೂಜಯೇದ್ದೇವಮೀಶಾನಂ ಸೋಽಗ್ನಿಷ್ಟೋಮಫಲಂ ಲಭೇತ್ ॥ ೨೪ ॥
ಅಕಾಮೋ ವಾ ಸಕಾಮೋ ವಾ ತತ್ರ ತೀರ್ಥೇ ಕಲೇವರಂ ।
ಯಸ್ತ್ಯಜೇನ್ನಾಽತ್ರ ಸಂದೇಹೋ ರುದ್ರಲೋಕಂ ಸ ಗಚ್ಛತಿ ॥ ೨೫ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ಕಂಬುಕೇಶ್ವರತೀರ್ಥಮಾಹಾತ್ಮ್ಯವರ್ಣನಂ"
ನಾಮ ವಿಂಶತ್ಯುತ್ತರಶತತಮೋಽಧ್ಯಾಯಃ

---

೨೪. ಆ ತೀರ್ಥದಲ್ಲಿ ಯಾವನು ಸ್ನಾನವನ್ನು ಮಾಡಿ ಪಿತೃದೇವತೆಗಳನ್ನು ಪೂಜಿಸಿ ಮಹಾದೇವನ ಅರ್ಚನೆಯನ್ನು ನೆರವೇರಿಸುವನೊ, ಅವನಿಗೆ ಅಗ್ನಿಷ್ಟೋಮದ ಫಲವು ಲಭಿಸುವುದು.

೨೫. ಇಚ್ಛೆಯಿಂದಲಾಗಲಿ, ಅಕಸ್ಮಾತ್ತಾಗಿಯಾಗಲಿ ಆ ತೀರ್ಥದಲ್ಲಿ ದೇಹತ್ಯಾಗವನ್ನು ಮಾಡಿದವನು ರುದ್ರಲೋಕಕ್ಕೆ ಹೋಗುವುದರಲ್ಲಿ ಸಂಶಯವಿಲ್ಲ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಕಂಬುಕೇಶ್ವರತೀರ್ಥಮಾಹಾತ್ಮ್ಯವರ್ಣನ"ವೆಂಬ
ನೂರಇಪ್ಪತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥೈಕವಿಂಶತ್ಯುತ್ತರಶತತಮೋಽಧ್ಯಾಯಃ

### ಸೋಮತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ತತೋ ಗಚ್ಛೇನ್ಮಹೀಪಾಲ ಚಂದ್ರಹಾಸಮತಃ ಪರಂ ।
ಯತ್ರ ಸಿದ್ಧಿಂ ಪರಾಂ ಪ್ರಾಪ್ತಃ ಸೋಮರಾಜಃ ಸುರೋತ್ತಮಃ ॥ ೧ ॥

ಯುಧಿಷ್ಠಿರ ಉವಾಚ :—

ಕಥಂ ಸಿದ್ಧಿಂ ಪರಾಂ ಪ್ರಾಪ್ತಃ ಸೋಮನಾಥೋ ಜಗತ್ಪತಿಃ ।
ತತ್ಸರ್ವಂ ಶ್ರೋತುಮಿಚ್ಛಾಮಿ ಕಥಯಸ್ವ ಮಮಾಽನಘ ॥ ೨ ॥

ಶ್ರೀ ಮಾರ್ಕಂಡೇಯ ಉವಾಚ :—

ಪುರಾ ಶಪ್ತೋ ಮುನೀಂದ್ರೇಣ ದಕ್ಷೇಣ ಕಿಲ ಭಾರತ ।
ಅಸೇವನಾದ್ಧಿ ದಾರಾಣಾಂ ಕ್ಷಯರೋಗೀ ಭವಿಷ್ಯಸಿ ॥ ೩ ॥
ಉದ್ವಾಹಿತಾನಾಂ ಪತ್ನೀನಾಂ ಯೇನ ಕುರ್ವಂತಿ ಸೇವನಂ ।
ಯಾ ನಿಷ್ಠಾ ಜಾಯತೇ ನೄಣಾಂ ತಾಂ ಶೃಣುಷ್ವ ನರಾಧಿಪ ॥ ೪ ॥

---

### ಕನ್ನಡದ ಅನುವಾದ

#### ಸೋಮತೀರ್ಥಮಾಹಾತ್ಮ್ಯವರ್ಣನ

೧. ಮಾರ್ಕಂಡೇಯನು ಹೇಳುತ್ತಾನೆ:—ಮಹೀನಾಥನೆ! ಬಳಿಕ ಚಂದ್ರಹಾಸತೀರ್ಥವೆಂಬ ಉತ್ತಮತೀರ್ಥವನ್ನು ಸೇರಬೇಕು. ಅಲ್ಲಿಯೇ ದೇವತೆಗಳಲ್ಲಿ ಮುಖ್ಯನಾದ ಸೋಮರಾಜನು ಉತ್ತಮ ಸಿದ್ಧಿಯನ್ನು ಪಡೆದನು.

೨. ಯುಧಿಷ್ಠಿರನು ಹೇಳುತ್ತಾನೆ:—ನಿಷ್ಕಲ್ಮಷನೆ! ಲೋಕೇಶ್ವರನಾದ ಸೋಮನಾಥನು ಇಲ್ಲಿ ಹೇಗೆ ಸಿದ್ಧಿಯನ್ನು ಪಡೆದನೆಂಬುದನ್ನು ಕೇಳಲಿಚ್ಛಿಸುವೆನು. ಆ ಕಥೆಯನ್ನು ನನಗೆ ಹೇಳು.

೩. ಮಾರ್ಕಂಡೇಯನು ಹೇಳುತ್ತಾನೆ.—ಯುಧಿಷ್ಠಿರನೆ! ಹಿಂದೆ ತನ್ನ ಹೆಂಡತಿಯರೆಲ್ಲರಲ್ಲಿಯೂ ಏಕರೀತಿಯಿಂದ ವರ್ತಿಸದೆ ಇದ್ದುದರಿಂದ ದಕ್ಷಪ್ರಜೇಶ್ವರನು ಆತನಿಗೆ, "ನೀನು ಕ್ಷಯರೋಗವನ್ನನುಭವಿಸು" ಎಂದು ಶಾಪವನ್ನಿತ್ತನು.

೪. ಮದುವೆಯಾದ ಸ್ತ್ರೀಯರನ್ನು ಕಾಲಾನುಗುಣವಾಗಿ ಯಾವನು ಸೇವಿಸುವುದಿಲ್ಲವೊ, ಅಂತಹ ಮಾನವನಿಗೆ ಯಾವ ಗತಿಯುಂಟಾಗುವುದೆಂಬುದನ್ನು ಕೇಳು.

ಋತಾವೃತೌ ಹಿ ನಾರೀಣಾಂ ಸೇವನಾಜ್ಜಾಯತೇ ಸುತಃ ।
ಸುತಾತ್ಸ್ವರ್ಗಶ್ಚ ಮೋಕ್ಷಶ್ಚ ಇತ್ಯೇವಂ ಶ್ರುತಿಭಾಷಿತಂ ॥ ೫ ॥
ತತ್ಕಾಲೋಚಿತಧರ್ಮೇಣ ವೇಷ್ಟಿತೋ ರೌರವೇ ಪತೇತ್ ।
ತಸ್ಯಾಸ್ತದ್ರುಧಿರಂ ಪಾಪಃ ಪಿಬತೇ ಕಾಲಮೀಪ್ಸಿತಂ ॥ ೬ ॥
ತತೋಽವತೀರ್ಣಃ ಕಾಲೇನ ಯಾಂ ಯಾಂ ಯೋನೀಂ ಪ್ರಯಾಸ್ಯತಿ ।
ತಸ್ಯಾಂ ತಸ್ಯಾಂ ಸದುಷ್ಟಾತ್ಮಾ ದುರ್ಭಗೋ ಜಾಯತೇ ಸದಾ ॥ ೭ ॥
ನಾರೀಣಾಂ ತು ಸದಾ ಕಾಮೋಽಭ್ಯಧಿಕಃ ಪರಿವರ್ತತೇ ।
ವಿಶೇಷೇಣ ಋತೌ ಕಾಲೇ ಪೀಡ್ಯತೇ ಕಾಮಸಾಯಕೈಃ ॥ ೮ ॥
ಪರಿಭೂತಾ ಹಿ ತಾ ಭರ್ತ್ರಾ ಧ್ಯಾಯಂತೇಽನ್ಯಂ ಪತಿಂ ಸ್ತ್ರಿಯಃ ।
ತತಃ ಪುತ್ರಃ ಸಮುತ್ಪನ್ನೋ ಹ್ಯಟತೇ ಕುಲಮುತ್ತಮಂ ॥ ೯ ॥
ಸ್ವರ್ಗಸ್ಥಾಸ್ತೇನ ಪಿತರಃ ಪೂರ್ವಜಾಸ್ತೇ ಪಿತಾಮಹಾಃ ।
ಪತಂತಿ ಜಾತಮಾತ್ರೇಣ ಕುಲಟಸ್ತೇನಚೋಚ್ಯತೇ ॥ ೧೦ ॥

---

೫. ಪ್ರತಿಯೊಂದು ಋತುಕಾಲದಲ್ಲಿಯೂ ಸ್ತ್ರೀಯನ್ನು ಸೇವಿಸುವುದರಿಂದ ಪುತ್ರನು ಹುಟ್ಟುವನು. ಪುತ್ರನಿಂದಲೇ ಸ್ವರ್ಗವೂ ಮೋಕ್ಷವೂ ಲಭಿಸುವುದೆಂದು ಶ್ರುತಿಯು ಹೇಳುತ್ತಿರುವುದು.

೬. ಋತುಕಾಲಕ್ಕೆ ಉಚಿತವಾದ ಧರ್ಮವನ್ನು ಮೀರಲು ರೌರವ ನರಕದಲ್ಲಿ ಬೀಳುವನು. ಅಲ್ಲಿ ಬಹುಕಾಲದವರೆಗೂ ಆ ಸ್ತ್ರೀಯ ಋತುರಕ್ತವನ್ನು ಪಾನಮಾಡುತ್ತಿರುವನು

೭. ಕಾಲಕ್ರಮದಿಂದ ಪುನಃ ಭೂಲೋಕಕ್ಕೆ ಬಂದು ಯಾವ ಯಾವ ಜನ್ಮವನ್ನು ತಾಳಿದರೂ ಆ ಪಾಪಿಯು ಆಯಾ ಜನ್ಮಗಳಲ್ಲಿಯೇ ದೌರ್ಭಾಗ್ಯವಂತನಾಗಿರುವನು.

೮. ಸ್ತ್ರೀಯರಲ್ಲಿ ಪುರುಷರಿಗಿಂತ ಅಧಿಕವಾದ ಕಾಮವು ಸಹಜವಾಗಿಯೇ ಇರುವುದು. ಅದರಲ್ಲಿಯೂ ಋತುಕಾಲದಲ್ಲಿ ಅವರು ಬಹಳವಾಗಿ ಮನ್ಮಥಬಾಣ ಪೀಡಿತರಾಗಿರುವರು.

೯. ಆಗ ಗಂಡನು ಉಪೇಕ್ಷೆಯನ್ನು ಮಾಡಲು ಅವರು ಅನ್ಯಪುರುಷನನ್ನು ಕುರಿತು ಚಿಂತಿಸುತ್ತಿರುವರು. ಆಗ ಹುಟ್ಟಿದ ಪುತ್ರನು ಉತ್ತಮಕುಲವನ್ನು ನಾಶಮಾಡುವನು.

೧೦. ಅದರಿಂದ ಸ್ವರ್ಗಲೋಕದಲ್ಲಿರುವ ಪಿತೃದೇವತೆಗಳೂ ಪೂರ್ವಜರಾದ ಪಿತಾಮಹಾದಿಗಳೂ ಜಾರಜಾತನು ಹುಟ್ಟಿದ ಮಾತ್ರದಿಂದಲೇ ಕೆಳಗೆ ಬೀಳುವರು. ಆದುದರಿಂದಲೇ ಅವನಿಗೆ ಕುಲಟನೆಂದು ಕರೆಯುವರು.

**ತೇನ ಕರ್ಮವಿಪಾಕೇನ ಕ್ಷಯರೋಗ್ಯಭವಚ್ಛಶೀ ।**
**ತ್ಯಕ್ತ್ವಾ ಲೋಕಂ ಸುರೇಂದ್ರಾಣಾಂ ಮರ್ತ್ಯಲೋಕಮುಪಾಗತಃ ॥ ೧೧ ॥**
**ತತಸ್ತೀರ್ಥಾನ್ಯನೇಕಾನಿ ಪುಣ್ಯಾನ್ಯಾಯತನಾನಿ ಚ ।**
**ಭ್ರಮನ್ಸ್ವೈ ನರ್ಮದಾಂ ಪ್ರಾಪ್ತಃ ಸರ್ವಪಾಪಪ್ರಣಾಶನೀಂ ॥ ೧೨ ॥**
**ಉಪವಾಸಂ ಚ ದಾನಾನಿ ವ್ರತಾನಿ ನಿಯಮಾಂಸ್ತಥಾ ।**
**ಚಚಾರ ದ್ವಾದಶಾಽಬ್ದಾನಿ ತತೋ ಮುಕ್ತಃ ಸ ಕಿಲ್ಬಿಷೈಃ ॥ ೧೩ ॥**
**ಸ್ನಾಪಯಿತ್ವಾ ಮಹದೇವಂ ಸರ್ವಪಾತಕನಾಶನಂ ।**
**ಜಗಾಮ ಪ್ರಭಯಾ ಪೂರ್ಣಃ ಸ ಚ ಲೋಕಮನುತ್ತಮಂ ॥ ೧೪ ॥**
**ಯೇನೈವ ಸ್ಥಾಪಿತೋ ದೇವಃ ಪೂಜ್ಯತೇ ವರ್ಷಸಂಖ್ಯಯಾ ।**
**ತಾವದ್ವರ್ಷಸಹಸ್ರಾಣಿ ರುದ್ರಲೋಕೇ ಸ ಪೂಜ್ಯತೇ ॥ ೧೫ ॥**
**ತೇನ ದೇವಾನ್ವಿಧಾನೋಕ್ತಾನ್ ಸ್ಥಾಪಯಂತಿ ನರಾ ಭುವಿ ।**
**ಅಕ್ಷಯಂ ಚಾಽವ್ಯಯಂ ಯಸ್ಮಾತ್ಕಾಲಂ ಭುಂಜಂತಿ ಮಾನವಾಃ ॥ ೧೬ ॥**

---

೧೧. ಹೀಗೆ ಪತ್ನಿಯರನ್ನು ಋತುಕಾಲದಲ್ಲಿ ತ್ಯಜಿಸಿದ ಪಾಪದ ಫಲವಾಗಿ **ಚಂದ್ರನು** ಕ್ಷಯರೋಗಿಯಾದನು. ದೇವತೆಗಳ ಲೋಕವನ್ನು ತ್ಯಜಿಸಿ ಮನುಷ್ಯ ಲೋಕಕ್ಕಿಳಿದನು.

೧೨. ಅಲ್ಲಿ ಅನೇಕ ತೀರ್ಥಗಳನ್ನೂ ಪುಣ್ಯಪ್ರದಗಳಾದ ದೇವತಾಯತನ ಗಳನ್ನೂ ನೋಡಿಕೊಂಡು ಸಂಚರಿಸುತ್ತ ಸಮಸ್ತಪಾತಕಗಳನ್ನೂ ಪರಿಹರಿಸುವ ನರ್ಮದೆಯ ಬಳಿಗೆ ಬಂದನು.

೧೩. ಅಲ್ಲಿ ಹನ್ನೆರಡು ವರ್ಷಗಳಕಾಲ ಉಪವಾಸಗಳನ್ನೂ, ದಾನ ಗಳನ್ನೂ, ವ್ರತಗಳನ್ನೂ, ನಿಯಮಗಳನ್ನೂ ಆಚರಿಸಿ ತನ್ನ ಪಾಪವನ್ನು ಕಳೆದು ಕೊಂಡನು.

೧೪. ಸರ್ವಪಾಪನಿವಾರಕನಾದ ಮಹಾದೇವನಿಗೆ ಅಭಿಷೇಕವನ್ನು ನೆರ ವೇರಿಸಿ ಪುನಃ ತನ್ನ ಕಳೆಗಳನ್ನೆಲ್ಲ ಪಡೆದುಕೊಂಡು ಸರ್ವಶ್ರೇಷ್ಠವೆನಿಸಿದ ಲೋಕಕ್ಕೆ ತೆರಳಿದನು.

೧೫. ಆತನಿಂದ ಸ್ಥಾಪಿತವಾದ ಶಿವಲಿಂಗವನ್ನು ಮಾನವನು ಎಷ್ಟು ವರ್ಷಗಳು ಪೂಜಿಸುವನೊ, ಅಷ್ಟು ಸಾವಿರ ವರ್ಷಗಳವರೆಗೂ ಆತನು ರುದ್ರ ಲೋಕದಲ್ಲಿ ಪೂಜೆಗೊಳ್ಳುತ್ತಿರುವನು.

೧೬. ಆದುದರಿಂದಲೇ ಭೂಲೋಕದಲ್ಲಿ ಮನುಜರು ಶಾಸ್ತ್ರೋಕ್ತರೀತಿ ಯಿಂದ ದೇವತೆಗಳನ್ನು ಪ್ರತಿಷ್ಠಿಸುವರು. ಅದರಿಂದ ಬಹುಕಾಲದವರೆಗೂ ಸೌಖ್ಯಗಳನ್ನನುಭವಿಸುತ್ತಿರುವರು.

**ಸೋಮತೀರ್ಥೇ ನರಃ ಸ್ನಾತ್ವಾ ಪೂಜಯೇದ್ದೇವಮೀಶ್ವರಂ ।**
**ಸ ಭ್ರಾಜತೇ ನರೋ ಲೋಕೇ ಸೋಮವತ್ಪ್ರಿಯದರ್ಶನಃ ॥ ೧೭ ॥**
**ಚಂದ್ರಹಾಸೇ ತು ಯೋ ಗತ್ವಾ ಗ್ರಹಣೇ ಚಂದ್ರಸೂರ್ಯಯೋಃ ।**
**ಸ್ನಾನಂ ಸಮಾಚರೇದ್ಭಕ್ತ್ಯಾ ಮುಚ್ಯತೇ ಸರ್ವಕಿಲ್ಬಿಷೈಃ ॥ ೧೮ ॥**
**ತತ್ರ ಸ್ನಾನಂ ಚ ದಾನಂ ಚ ಚಂದ್ರಹಾಸೇ ಶುಭಾಽಶುಭಂ ।**
**ಕೃತಂ ನೃಪವರಶ್ರೇಷ್ಠ ಸರ್ವಂ ಭವತಿ ಚಾಽಕ್ಷಯಂ ॥ ೧೯ ॥**
**ತೇ ಧನ್ಯಾಸ್ತೇ ಮಹಾತ್ಮಾನಸ್ತೇಷಾಂ ಜನ್ಮ ಸುಜೀವಿತಂ ।**
**ಚಂದ್ರಹಾಸೇ ತು ಯೇ ಸ್ನಾತ್ವಾ ಪಶ್ಯಂತಿ ಗ್ರಹಣಂ ನರಾಃ ॥ ೨೦ ॥**
**ವಾಚಿಕಂ ಮಾನಸಂ ಪಾಪಂ ಕರ್ಮಜಂ ಯತ್ಪುರಾಕೃತಂ ।**
**ಸ್ನಾನಮಾತ್ರೇಣ ರಾಜೇಂದ್ರ ತತ್ರ ತೀರ್ಥೇ ಪ್ರಣಶ್ಯತಿ ॥ ೨೧ ॥**
**ಬಹವಸ್ತಂ ನ ಜಾನಂತಿ ಮಹಾಮೋಹಸಮನ್ವಿತಾಃ ।**
**ದೇಹಸ್ಥಮಿವ ಸರ್ವೇಷಾಂ ಪರಮಾನಂದರೂಪಿಣಂ ॥ ೨೨ ॥**

---

೧೭. ಸೋಮತೀರ್ಥದಲ್ಲಿ ಸ್ನಾನವನ್ನು ಮಾಡಿದ ಮಾನವನು ಅಲ್ಲಿರುವ ಮಹಾದೇವನನ್ನು ಪೂಜಿಸಲು ಲೋಕದಲ್ಲಿ ಚಂದ್ರನಂತೆಯೇ ಸಕಲರಿಗೂ ಆಹ್ಲಾದಕರನಾಗಿ ಪ್ರಕಾಶಿಸುತ್ತಿರುವನು.

೧೮. ಸೂರ್ಯಚಂದ್ರರ ಗ್ರಹಣಗಳ ಸಮಯದಲ್ಲಿ ಯಾವನು ಚಂದ್ರಹಾಸ ತೀರ್ಥಕ್ಕೆ ಹೋಗಿ ಸ್ನಾನವನ್ನಾಚರಿಸುವನೊ, ಅವನ ಸಮಸ್ತ ಪಾತಕಗಳೂ ಕಳೆದುಹೋಗುವುವು

೧೯. ಚಕ್ರವರ್ತಿಯೆ! ಅಲ್ಲಿ ಸ್ನಾನವೂ, ದಾನವೂ, ಪುಣ್ಯಪಾಪ ಗಳನ್ನು ಗಳಿಸುವ ಯಾವ ಕರ್ಮವೇ ಆದರೂ ಎಲ್ಲವೂ ಅನಂತಗುಣಿತ ವಾಗುವುದು.

೨೦. ಯಾವ ನರರು ಚಂದ್ರಹಾಸತೀರ್ಥದಲ್ಲಿ ಸ್ನಾನವನ್ನು ಮಾಡಿ ಗ್ರಹಣವನ್ನು ನೋಡುವರೂ, ಅವರೇ ಧನ್ಯರು. ಮಹಾತ್ಮರು. ಅವರ ಜನ್ಮವೇ ಸಫಲ ಜೀವಿತವು.

೨೧. ರಾಜೇಂದ್ರನೆ! ಹಿಂದೆ ಮಾತಿನಿಂದಲೂ, ಮನಸ್ಸಿನಿಂದಲೂ, ಕಾರ್ಯದಿಂದಲೂ, ಮಾಡಿದ ಸಕಲ ಪಾತಕಗಳೂ ಈ ಉತ್ತಮ ತೀರ್ಥದಲ್ಲಿ ಸ್ನಾನವನ್ನು ಮಾಡುವುದರಿಂದ ನಾಶವಾಗುವುವು.

೨೨. ಸಮಸ್ತ ಜೀವರ ಅಂತರ್ಯಾಮಿಯಾದ ಪರಮಾನಂದ ವಿಗ್ರಹನನ್ನು ಹೇಗೆ ಅನೇಕ ಜನರು ತಿಳಿಯರೊ, ಹಾಗೆಯೇ ಅನೇಕರು ಈ ತೀರ್ಥವನ್ನು ತಿಳಿಯಲಾರರು.

ಪಶ್ಚಿಮೇ ಸಾಗರೇ ಗತ್ವಾ ಸೋಮತೀರ್ಥೇ ತು ಯತ್ಫಲಂ ।
ತತ್ಸಮಗ್ರಮವಾಪ್ನೋತಿ ಚಂದ್ರಹಾಸೇನ ಸಂಶಯಃ ॥ ೨೩ ॥
ಸಂಕ್ರಾಂತೌ ಚ ವ್ಯತೀಪಾತೇ ಅಯನೇ ವಿಷುವೇ ತಥಾ ।
ಚಂದ್ರಹಾಸೇ ನರಃ ಸ್ನಾತ್ವಾ ಸರ್ವಪಾಪೈಃ ಪ್ರಮುಚ್ಯತೇ ॥ ೨೪ ॥
ತೇ ಮೂಢಾಸ್ತೇ ದುರಾಚಾರಾಸ್ತೇಷಾಂ ಜನ್ಮ ನಿರರ್ಥಕಂ ।
ಚಂದ್ರಹಾಸಂ ನ ಜಾನಂತಿ ಯೇ ರೇವಾಯಾಂ ವ್ಯವಸ್ಥಿತಂ ॥ ೨೫ ॥
ಚಂದ್ರಹಾಸೇ ತು ಯಃ ಕಶ್ಚಿತ್ಸನ್ಯಾಸಂ ಕುರುತೇ ದ್ವಿಜಃ ।
ಅನಿವರ್ತಿಕಾ ಗತಿಸ್ತಸ್ಯ ಸೋಮಲೋಕಾನ್ನ ಸಂಶಯಃ ॥ ೨೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಅವಂತ್ಯಖಂಡೇ ತೃತೀಯೇ ರೇವಾಖಂಡೇ
"ಸೋಮತೀರ್ಥಮಾಹಾತ್ಮ್ಯವರ್ಣನಂ"
ನಾಮೈಕವಿಂಶತ್ಯುತ್ತರಶತತಮೋಽಧ್ಯಾಯಃ

---

೨೩. ಪಶ್ಚಿಮ ತೀರ್ಥದಲ್ಲಿರುವ ಸೋಮ ತೀರ್ಥವನ್ನು ಸೇವಿಸಿದವರಿಗೆ ಯಾವ ಫಲವುಂಟೊ, ಆ ಫಲವನ್ನೇ ಮಾನವನು ಈ ಚಂದ್ರಹಾಸತೀರ್ಥದಿಂದ ಪಡೆಯುವನು.

೨೪. ಸೂರ್ಯಚಂದ್ರಸಂಕ್ರಮಣಗಳು, ವ್ಯತೀಪಾತಯೋಗದ ದಿನಗಳು, ಅಯನ ಪುಣ್ಯಕಾಲಗಳು, ವಿಷುವತ್ಕಾಲಗಳು ಮುಂತಾದುವುಗಳಲ್ಲಿ ಚಂದ್ರಹಾಸತೀರ್ಥದಲ್ಲಿ ಸ್ನಾನವನ್ನು ಮಾಡಿದವನು ಸರ್ವ ಪಾಪಗಳಿಂದಲೂ ಮುಕ್ತನಾಗುವನು.

೨೫. ರೇವಾತೀರದಲ್ಲಿ ನೆಲಸಿರುವ ಈ ಚಂದ್ರಹಾಸತೀರ್ಥವನ್ನು ತಿಳಿಯದವರೇ ಮೂಢರು. ಅವರೇ ದುರಾಚಾರಿಗಳು. ಅವರ ಜನ್ಮವು ವ್ಯರ್ಥವೇ ಸರಿ.

೨೬. ಯಾವ ನರನು ಚಂದ್ರಹಾಸತೀರ್ಥದಲ್ಲಿ ಸನ್ಯಾಸವಿಧಿಯನ್ನು ಸ್ವೀಕರಿಸುವನೊ, ಅವನಿಗೆ ಸೋಮಲೋಕದಲ್ಲಿ ಪುನರಾವೃತ್ತಿರಹಿತವಾದ ವಾಸವು ಲಭಿಸುವುದರಲ್ಲಿ ಸಂದೇಹವಿಲ್ಲ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಅವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಸೋಮತೀರ್ಥಮಾಹಾತ್ಮ್ಯವರ್ಣನ"ವೆಂಬ
ನೂರಇಪ್ಪತ್ತೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ದ್ವಾವಿಂಶತ್ಯುತ್ತರಶತತಮೋಽಧ್ಯಾಯಃ

### ಕೋಹನತೀರ್ಥಮಾಹಾತ್ಮ್ಯವರ್ಣನಂ

**ಶ್ರೀ ಮಾರ್ಕಂಡೇಯ ಉವಾಚ :—**

**ತತೋ ಗಚ್ಛೇನ್ಮಹೀಪಾಲ ಕೋಹನಸ್ವೇತಿ ವಿಶ್ರುತಂ ।**
**ಸರ್ವಪಾಪಹರಂ ಪುಣ್ಯಂ ತೀರ್ಥಂ ಮೃತ್ಯುವಿನಾಶನಂ ॥ ೧ ॥**
**ಪುರಾ ತತ್ರ ದ್ವಿಜಃ ಕಶ್ಚಿದ್ವೇದವೇದಾಂಗಪಾರಗಃ ।**
**ಪತ್ನೀಪುತ್ರಸುಹೃದ್ವರ್ಗೈಃ ಸ್ವಕರ್ಮನಿರತೋಽವಸತ್ ॥ ೨ ॥**

**ಯುಧಿಷ್ಠಿರ ಉವಾಚ :—**

**ಬ್ರಾಹ್ಮಣಸ್ಯ ತು ಯತ್ಕರ್ಮ ಉತ್ಪತ್ತಿಃ ಕ್ಷತ್ರಿಯಸ್ಯ ತು ।**
**ವೈಶ್ಯಸ್ಯಾಽಪಿ ಚ ಶೂದ್ರಸ್ಯ ತತ್ಸರ್ವಂ ಕಥಯಸ್ವ ಮೇ ॥ ೩ ॥**
**ಧರ್ಮಸ್ಯಾರ್ಥಸ್ಯ ಕಾಮಸ್ಯ ಮೋಕ್ಷಸ್ಯ ಚ ಪರಂ ವಿಧಿಂ ।**
**ನಿಖಿಲಂ ಜ್ಞಾತುಮಿಚ್ಛಾಮಿ ನಾಽನ್ಯೋ ವೇತ್ತಾ ಮತಿರ್ಮಮ ॥ ೪ ॥**

---

## ಕನ್ನಡದ ಅನುವಾದ

### ಕೋಹನತೀರ್ಥಮಾಹಾತ್ಮ್ಯವರ್ಣನ

೧. ಮಾರ್ಕಂಡೇಯನು ಹೇಳುತ್ತಾನೆ —ಮಹಾರಾಜನೆ! ಅಲ್ಲಿಂದ ಸಮಸ್ತ ಪಾಪನಿವಾರಕವೂ, ಪುಣ್ಯಪ್ರದವೂ, ಮೃತ್ಯುವಿನಾಶಕವೂ ಆದ ಕೋಹನವೆಂದು ಪ್ರಖ್ಯಾತವಾದ ತೀರ್ಥವನ್ನು ಸೇವಿಸಬೇಕು.

೨. ಹಿಂದೆ ವೇದವೇದಾಂಗಗಳಲ್ಲಿ ನಿಷ್ಣಾತನೂ, ಸ್ವಕರ್ಮನಿರತನೂ ಆದ ಬ್ರಾಹ್ಮಣೋತ್ತಮನೊಬ್ಬನು ಹೆಂಡತಿ, ಮಕ್ಕಳು, ಸ್ನೇಹಿತರೊಡನೆ ಅಲ್ಲಿ ವಾಸ ಮಾಡುತ್ತಿದ್ದನು.

೩. ಯುಧಿಷ್ಠಿರನು ಹೇಳುತ್ತಾನೆ —ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ಚಾತುರ್ವರ್ಣ್ಯದವರಿಗೆ ಉಚಿತಗಳಾದ ಕರ್ಮಗಳನ್ನೂ, ಅವರು ಹುಟ್ಟಿದ ಕ್ರಮವನ್ನೂ ನನಗೆ ಸಾಂಗವಾಗಿ ತಿಳಿಸು.

೪. ಮತ್ತು ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ಚತುರ್ವಿಧ ಪುರುಷಾರ್ಥಗಳನ್ನು ಪಡೆಯುವ ವಿಧಾನವೆಲ್ಲವನ್ನೂ ತಿಳಿಯಲಾಶಿಸುವೆನು. ಇದನ್ನು ನೀನಲ್ಲದೆ ತಿಳಿದವನು ಬೇರೊಬ್ಬನಿಲ್ಲವೆಂದು ನೆನಸಿರುವೆನು.

ಮಾರ್ಕಂಡೇಯ ಉವಾಚ :—

ಉತ್ಪತ್ತಿಕಾರಣಂ ಬ್ರಹ್ಮಾ ದೇವದೇವಃ ಪ್ರಕೀರ್ತಿತಃ ।
ಪ್ರಥಮಂ ಸರ್ವಭೂತಾನಾಂ ಚರಾಚರಜಗದ್ಗುರುಃ ॥ ೫ ॥
ದ್ವಿಜಾತಯೋ ಮುಖಾಜ್ಜಾತಾಃ ಕ್ಷತ್ರಿಯಾ ಬಾಹುಯಂತ್ರತಃ ।
ಊರುಪ್ರದೇಶಾದ್ವೈಶ್ಯಾಸ್ತು ಶೂದ್ರಾಃ ಪಾದೇಷ್ವಥಾಽಭವನ್ ॥ ೬ ॥
ತತಸ್ತ್ವನ್ಯೇ ಪೃಥಗ್ವರ್ಣಾಃ ಪೃಥಗ್ಧರ್ಮಾನ್ ಸಮಾಚರನ್ ।
ಪರ್ಯಾಯೇಣ ಸಮುತ್ಪನ್ನಾ ಹ್ಯನುಲೋಮವಿಲೋಮತಃ ॥ ೭ ॥
ತೇಷಾಂ ಧರ್ಮಂ ಪ್ರವಕ್ಷ್ಯಾಮಿ ಶ್ರುತಿಸ್ಮೃತ್ಯರ್ಥಚೋದಿತಂ ।
ಯೇನ ಸಮ್ಯಕ್ಕೃತೇನೈವ ಸರ್ವೇ ಯಾಂತಿ ಪರಾಂಗತಿಂ ॥ ೮ ॥
ಗತಿರ್ಧ್ಯಾನಂ ವಿನಾಭಕ್ತೈರ್ಬ್ರಾಹ್ಮಣೈಃ ಪ್ರಾಪ್ಯತೇ ನೃಪ ।
ಅಧ್ಯಾಪಯನ್ಯತೋ ವೇದಾನ್ವೇದಂ ವಾಽಪಿ ಯಥಾವಿಧಿ ॥ ೯ ॥
ಕುಲಜಾಂ ರೂಪಸಂಪನ್ನಾಂ ಸರ್ವಲಕ್ಷಣಲಕ್ಷಿತಾಂ ।
ಉದ್ವಾಹಯೇತ್ತತಃ ಪತ್ನೀಂ ಗುರುಣಾಽನುಮತೇ ತದಾ ॥ ೧೦ ॥

---

೫. ಮಾರ್ಕಂಡೇಯನು ಹೇಳುತ್ತಾನೆ —ಜಗತ್ತಿಗೆಲ್ಲ ದೇವದೇವನಾದ ಬ್ರಹ್ಮದೇವನೇ ಉತ್ಪತ್ತಿಗೆ ಕಾರಣನೆಂದು ಕರೆಯಲ್ಪಟ್ಟಿರುವನು ಸಮಸ್ತ ಭೂತಗಳಲ್ಲಿಯೂ ಮೊದಲಿಗನೆನಿಸಿ ಚರಾಚರಾತ್ಮಕವಾದ ಜಗತ್ತಿಗೆಲ್ಲ ಗುರುವಾಗಿ ರುವನು.

೬ ಆತನ ಮುಖದಿಂದ ಬ್ರಾಹ್ಮಣರೂ, ಬಾಹುದ್ವಯದಿಂದ ಕ್ಷತ್ರಿಯರೂ, ತೊಡೆಗಳಿಂದ ವೈಶ್ಯರೂ, ಪಾದಗಳಿಂದ ಶೂದ್ರರೂ ಜನಿಸಿದರು

೭. ಬಳಿಕ ಇವರಲ್ಲಿಯೇ ಅನುಲೋಮ ವಿಲೋಮ ಕ್ರಮಗಳಿಂದ ಬೇರೆ ಬೇರೆ ಅವಾಂತರ ವರ್ಣಗಳುಂಟಾಗಿ ಅವರೆಲ್ಲ ಬೇರೆ ಬೇರೆ ಕರ್ಮಗಳನ್ನು ಮಾಡ ತೊಡಗಿದರು

೮. ಶ್ರುತಿಸ್ಮೃತಿಗಳ ಅಭಿಪ್ರಾಯವನ್ನನುಸರಿಸಿ ಅವರ ಧರ್ಮಗಳನ್ನು ಹೇಳುವೆನು. ಇವುಗಳನ್ನು ಚೆನ್ನಾಗಿ ಆಚರಿಸುವುದರಿಂದ ಎಲ್ಲರೂ ಉತ್ತಮ ಗತಿಯನ್ನು ಪಡೆಯುವರು.

೯. ಧ್ಯಾನವಿಲ್ಲದೆಯೇ ಭಕ್ತರಾದ ಬ್ರಾಹ್ಮಣರಿಗೆ ಸದ್ಗತಿಯು ಲಭಿಸುವುದು. ಮೊದಲು ಸಕಲ ವೇದಗಳನ್ನೊ, ಒಂದೇ ವೇದವನ್ನೊ ಅಧ್ಯಯನಮಾಡಿಸ ಬೇಕು.

೧೦. ಗುರುವಿನ ಅನುಜ್ಞೆಯನ್ನು ಪಡೆದ ವಟುವು ಸತ್ಕುಲಪ್ರಸೂತೆಯೂ, ರೂಪವಂತೆಯೂ, ಶುಭಲಕ್ಷಣಾನ್ವಿತೆಯೂ ಆದ ಕನ್ಯೆಯನ್ನು ಮದುವೆಯಾಗ ಬೇಕು.

ತತಃ ಸ್ಮಾರ್ತಂ ವಿವಾಹಾಗ್ನಿಂ ಶ್ರೌತಂ ವಾ ಪೂಜಯೇತ್ಕ್ರಮಾತ್ ।
ಪ್ರತಿಗ್ರಹಧನೋ ಭೂತ್ವಾ ದಂಭಲೋಭವಿವರ್ಜಿತಃ ॥ ೧೧ ॥
ಪಂಚಯಜ್ಞವಿಧಾನಾನಿ ಕಾರಯೇದ್ವೈ ಯಥಾವಿಧಿ ।
ವನಂ ಗಚ್ಛೇತ್ತತಃ ಪಶ್ಚಾದ್ದ್ವಿತೀಯಾಶ್ರಮಸೇವನಾತ್ ॥ ೧೨ ॥
ಪುತ್ರೇಷು ಭಾರ್ಯಾಂ ನಿಕ್ಷಿಪ್ಯ ಸರ್ವಸಂಗವಿವರ್ಜಿತಃ ।
ಇಷ್ಟಾಂಲ್ಲೋಕಾನವಾಪ್ನೋತಿ ನ ಚೇಹ ಜಾಯತೇ ಪುನಃ ॥ ೧೩ ॥
ಕ್ಷತ್ರಿಯಸ್ತು ಸ್ಥಿತೋ ರಾಜ್ಯೇ ಪಾಲಯಿತ್ವಾ ವಸುಂಧರಾಂ ।
ಶಶ್ವದ್ಧರ್ಮಮನಾಶ್ಚೈವ ಪ್ರಾಪ್ನೋತಿ ಪರಮಾಂ ಗತಿಂ ॥ ೧೪ ॥
ವೈಶ್ಯಧರ್ಮೋ ನ ಸಂದೇಹಃ ಕೃಷಿಗೋರಕ್ಷಣೇ ರತಃ ।
ಸತ್ಯಶೌಚಸಮೋಪೇತೋ ಗಚ್ಛತೇ ಸ್ವರ್ಗಮುತ್ತಮಂ ॥ ೧೫ ॥
ನ ಶೂದ್ರಸ್ಯ ಪೃಥಗ್ಧರ್ಮೋ ವಿಹಿತಃ ಪರಮೇಷ್ಠಿನಾ ।
ನ ಮಂತ್ರೋ ನ ಚ ಸಂಸ್ಕಾರೋ ನ ವಿದ್ಯಾಪರಿಸೇವನಂ ॥ ೧೬ ॥

೧೧. ಬಳಿಕ ಸ್ಮಾರ್ತಶ್ರೌತಕರ್ಮಗಳಿಗೆ ಸಾಧನವಾದ ಗಾರ್ಹಪತ್ಯಾಗ್ನಿಯನ್ನು ರಕ್ಷಿಸಿಕೊಂಡು ಪೂಜಿಸುತ್ತ ದಾನಗಳ ಸ್ವೀಕಾರದಿಂದಲೇ ಧನವನ್ನು ಸಂಪಾದಿಸಿ ಅಭಿಮಾನ ಲೋಭಗಳನ್ನು ಬಿಟ್ಟಿರಬೇಕು.

೧೨. ನಿತ್ಯವೂ ಯಥಾವಿಧಿಯಾಗಿ ಪಂಚಯಜ್ಞಗಳನ್ನು ನೆರವೇರಿಸಬೇಕು. ಬಳಿಕ ಈ ಎರಡನೆಯ ಗೃಹಸ್ಥಾಶ್ರಮದಿಂದ ವಾನಪ್ರಸ್ಥಾಶ್ರಮಕ್ಕೆ ಸಿದ್ಧನಾಗಬೇಕು.

೧೩. ಕಡೆಯಲ್ಲಿ ಹೆಂಡತಿಯನ್ನು ಮಕ್ಕಳ ಪೋಷಣೆಯಲ್ಲಿಟ್ಟು ಸರ್ವಸಂಗವನ್ನು ತ್ಯಜಿಸಿದವನು ಇಷ್ಟಲೋಕಗಳನ್ನು ಗಳಿಸುವನು. ಪುನಃ ಈ ಲೋಕದಲ್ಲಿ ಹುಟ್ಟುವುದಿಲ್ಲ.

೧೪. ಕ್ಷತ್ರಿಯನಾದವನು ರಾಜ್ಯಾಧಿಕಾರದಲ್ಲಿ ನಿರತನಾಗಿ ಭೂಮಂಡಲವನ್ನು ಪಾಲಿಸುತ್ತ ನಿತ್ಯವೂ ಧರ್ಮಾಚರಣೆಯಲ್ಲಿಯೇ ಮನಸ್ಸುಳ್ಳವನಾಗಿರಲು ಪರಮ ಗತಿಯನ್ನು ಹೊಂದುವನು.

೧೫. ಕೃಷಿಗೋರಕ್ಷಣಗಳಲ್ಲಿ ನಿರತನಾಗಿರುವುದೇ ವೈಶ್ಯನ ಧರ್ಮವು ಸಂದೇಹವಿಲ್ಲವು. ಸತ್ಯ, ಶೌಚ, ಸಮಬುದ್ಧಿಗಳಿಂದ ಕೂಡಿರಲು ಆತನೂ ಉತ್ತಮವಾದ ಸ್ವರ್ಗವನ್ನು ಪಡೆಯುವನು.

೧೬. ಶೂದ್ರನಿಗೆ ಪರಮೇಷ್ಠಿಯಿಂದ ಬೇರೆ ಧರ್ಮವು ವಿಹಿತವಾಗಿಲ್ಲ. ಆತನಿಗೆ ಮಂತ್ರವಾಗಲಿ, ಸಂಸ್ಕಾರವಾಗಲಿ, ಬೇರೆ ವಿದ್ಯೆಯ ಅಭ್ಯಾಸವಾಗಲಿ ಇಲ್ಲವು.

**ನ ಶಬ್ದವಿದ್ಯಾಸಮಯೋ ದೇವತಾಭ್ಯರ್ಚನಾನಿ ಚ ।**
**ಯಥಾ ಜಾತೇನ ಸತತಂ ವರ್ತಿತವ್ಯಮಹರ್ನಿಶಂ ॥ ೧೭ ॥**
**ಸ ಧರ್ಮಃ ಸರ್ವವರ್ಣಾನಾಂ ಪುರಾಸೃಷ್ಟಃ ಸ್ವಯಂಭುವಾ ।**
**ಮಂತ್ರಸಂಸ್ಕಾರಸಂಪನ್ನಾಸ್ತ್ರಯೋ ವರ್ಣಾ ದ್ವಿಜಾತಯಃ ॥ ೧೮ ॥**
**ತೇಷಾಂ ಮತಮನಾದೃತ್ಯ ಯದಿ ವರ್ತೇತ ಕಾಮತಃ ।**
**ಸ ಮೃತೋ ಜಾಯತೇ ಶ್ವಾ ವೈ ಗತಿರೂರ್ಧ್ವಾ ನ ವಿದ್ಯತೇ ॥ ೧೯ ॥**
**ನ ತೇಷಾಂ ಪ್ರೇಷಣಂ ನಿತ್ಯಂ ತೇಷಾಂ ಮತಮನುಸ್ಮರನ್ ।**
**ಯಶೋಭಾಗೀ ಸ್ವಧರ್ಮಸ್ಥಃ ಸ್ವರ್ಗಭಾಗೀ ಸ ಜಾಯತೇ ॥ ೨೦ ॥**
**ಏವಂ ಗುಣಗಣಾಕೀರ್ಣೋಽವಸದ್ವಿಪ್ರಃ ಸ ಭಾರತ ।**
**ಹನಸ್ವೇತಿ ಹನಸ್ವೇತಿ ಶೃಣೋತಿ ವಾಕ್ಯಮೀದೃಶಂ ॥ ೨೧ ॥**
**ತತೋ ನಿರೀಕ್ಷತೇ ಚೋರ್ಧ್ವಮಧಶ್ಚವ ದಿಶೋ ದಶ ।**
**ವೇಪಮಾನಃ ಸ ಭೀತಶ್ಚ ಪ್ರಸ್ಖಲಂಶ್ಚ ಪದೇ ಪದೇ ॥ ೨೨ ॥**

---

೧೭. ಶಬ್ದ ವಿದ್ಯೆಯ (ಭಾಷೆಯ ವ್ಯಾಕರಣದ) ನಿಯಮಗಳಾಗಲಿ, ದೇವಾದಿಗಳ ಪೂಜೆಗಳಾಗಲಿ ಆತನಿಗಿಲ್ಲ. ಹುಟ್ಟಿದಂತೆಯೇ ಯಾವಜ್ಜೀವವೂ ಅಹೋರಾತ್ರಿಗಳಲ್ಲಿ ವರ್ತಿಸುತ್ತಿರಬೇಕು.

೧೮. ಈ ವಿಧವಾಗಿ ಚತುರ್ಮುಖನು ಸಕಲ ವರ್ಣಗಳಿಗೂ ಧರ್ಮವನ್ನು ಸೃಷ್ಟಿಮಾಡಿದನು. ಮೊದಲಿನ ಮೂರು ವರ್ಣಗಳವರೂ ಮಂತ್ರ, ಉಪನಯನಾದಿ ಸಂಸ್ಕಾರಗಳುಳ್ಳವರಾದುದರಿಂದ ದ್ವಿಜರೆಂದು ಕರೆಯಲ್ಪಡುವರು.

೧೯. ಅವರ ಉಪದೇಶವನ್ನು ಕಡೆಗಣಿಸಿ ಯಾವ ಶೂದ್ರನು ಸ್ವೇಚ್ಛೆಯಿಂದ ವರ್ತಿಸುವನೊ, ಅವನು ಸತ್ತು ನಾಯಿಯಾಗಿ ಜನ್ಮವನ್ನು ತಾಳುವನು. ಅವನಿಗೆ ಉತ್ತಮಗತಿಯು ಲಭಿಸುವುದಿಲ್ಲ.

೨೦. ತ್ರಿವರ್ಣಗಳವರಿಗೆ ಮತ್ತೊಬ್ಬರ ಅಪ್ಪಣೆಯಂತೆ ನಡೆಯಬೇಕೆಂಬ ನಿಯಮವಿಲ್ಲ. ಅವರ ಮತವನ್ನು ಜ್ಞಾಪಿಸಿಕೊಳ್ಳುತ್ತ ತನ್ನ ವರ್ಣಾಶ್ರಮೋಚಿತ ಧರ್ಮವನ್ನು ನಡೆಸುವವನು ಇಹದಲ್ಲಿ ಯಶಸ್ಸನ್ನೂ ಪರದಲ್ಲಿ ಸ್ವರ್ಗಭೋಗಗಳನ್ನೂ ಪಡೆಯುವನು.

೨೧. ಧರ್ಮರಾಜನೆ! ಇಂತಹ ಸದ್ಗುಣಗಳಿಂದ ಕೂಡಿದ್ದ ಆ ಬ್ರಾಹ್ಮಣನು "ಕೊಲ್ಲು, ಕೊಲ್ಲು" ಎಂಬ ವಾಕ್ಯವನ್ನು ಹಠಾತ್ತಾಗಿ ಕೇಳಿದನು.

೨೨. ಆದರಿಂದ ನಡುಗಿ ಭಯಗೊಂಡು ಹೆಜ್ಜೆ ಹೆಜ್ಜೆಗೂ ಎಡವಿಬೀಳುತ್ತ ಮೇಲೂ, ಕೆಳಗೂ, ಹತ್ತು ದಿಕ್ಕುಗಳಿಗೂ ನೋಡಿದನು.

ಶೃಂಖಲಾಯುಧಹಸ್ತೈಶ್ಚ ಪಾಶೈಶ್ಚೈವ ಸುದಾರುಣೈಃ ।
ವೇಷ್ಟಿತಂ ಮಹಿಷಾರೂಢಂ ನರಂ ಪಶ್ಯತಿ ಸಮ್ಮುಖಂ ॥ ೨೩ ॥
ಕೃಷ್ಣಾಂಜನಚಯಪ್ರಖ್ಯಂ ಕೃಷ್ಣಾಂಬರವಿಭೂಷಿತಂ ।
ರಕ್ತಾಕ್ಷಮಾಯತಭುಜಂ ಸರ್ವಲಕ್ಷಣಲಕ್ಷಿತಂ ॥ ೨೪ ॥
ದೃಷ್ಟ್ವಾ ತಂ ತು ಸಮಾಯಾಂತಂ ನಿರೀಕ್ಷ್ಯಾತ್ಮಾನಮಾತ್ಮನಾ ।
ಜಪಂ ಜಾಪ್ಯಂ ಚ ಪರಮಂ ಶತರುದ್ರೀಯಸಂಸ್ತವಂ ॥ ೨೫ ॥
ತತಃ ಪ್ರೋವಾಚ ಭಗವಾನ್ಯಮಃ ಸಂಯಮನೋ ಮಹಾನ್ ।
ಶೃಣು ವಾಕ್ಯಮತೋ ಬ್ರಹ್ಮನ್ಯಮೋಽಹಂ ಸರ್ವಜಂತುಷು ॥ ೨೬ ॥
ಸಂಹರಸ್ವ ಮಹಾಭಾಗ ರುದ್ರಜಾಪ್ಯಂ ಸುದುರ್ಭಿದಂ ।
ಯೇನಾಽಹಂ ಕಾಲಪಾಶೈಸ್ತ್ವಾಂ ಸಂಯಮಾಮಿ ಗತವ್ಯಥಃ ॥ ೨೭ ॥
ತಚ್ಛ್ರುತ್ವಾ ನಿಷ್ಠುರಂ ವಾಕ್ಯಂ ಯಮಸ್ಯ ಮುಖನಿರ್ಗತಂ ।
ಮಹಾಭಯಸಮೋಪೇತೋ ಬ್ರಾಹ್ಮಣಃ ಪ್ರಪಲಾಯಿತಃ ॥ ೨೮ ॥

---

೨೩. ಸಂಕೋಲೆಗಳೇ ಮುಂತಾದ ಆಯುಧಗಳನ್ನೂ, ಭಯಂಕರಗಳಾದ ಪಾಶಗಳನ್ನೂ ಕೈಗಳಲ್ಲಿ ಹಿಡಿದಿರುವ ಸೇವಕರಿಂದ ಸುತ್ತುವರೆಯಲ್ಪಟ್ಟು ಕೋಣನನ್ನೇರಿ ಬರುತ್ತಿರುವ ವಿಶಾಲಮುಖದವನೊಬ್ಬನನ್ನು ಆತನು ಕಂಡನು.

೨೪. ಆತನು ಕಾಡಿಗೆಯ ಬಣ್ಣದವನೂ, ಕರಿಯ ವಸ್ತ್ರಗಳನ್ನು ಧರಿಸಿದವನೂ, ಕೆಂಪಾದ ಕಣ್ಣುಗಳುಳ್ಳವನೂ, ವಿಶಾಲವಾದ ಭುಜಪ್ರದೇಶದವನೂ, ಸಕಲ ಶುಭಲಕ್ಷಣಸಹಿತನೂ ಆಗಿದ್ದನು.

೨೫. ಆತನು ತನ್ನ ಬಳಿಗೆ ಬರುತ್ತಿದ್ದುದನ್ನು ಕಂಡು ತನ್ನಲ್ಲಿಯೇ ಚಿಂತಿಸುತ್ತ ವೇದಗಳಲ್ಲಿ ಪರಮಮಂತ್ರವೆನಿಸಿದ ಶತರುದ್ರೀಯಸ್ತೋತ್ರವನ್ನು ಜಪಿಸತೊಡಗಿದನು.

೨೬. ಆಗ ಷಡ್ಗುಣೈಶ್ವರ್ಯಯುಕ್ತನೂ, ಜೀವರ ಅನುಶಾಸಕನೂ, ಮಹಾತ್ಮನೂ ಆದ ಯಮನು ಆ ಬ್ರಾಹ್ಮಣನಿಗಿಂತೆಂದನು. ಬ್ರಾಹ್ಮಣನೆ! ನನ್ನ ಮಾತನ್ನು ಕೇಳು. ನಾನು ಸಮಸ್ತ ಜೀವರಲ್ಲಿಯೂ ಯಮನಾಗಿ ವರ್ತಿಸುವವನು.

೨೭. ಮಹಾಭಾಗ್ಯಶಾಲಿಯೆ! ಅಭೇದ್ಯ ಕವಚದಂತಿರುವ ಈ ರುದ್ರಾಧ್ಯಾಯದ ಜಪವನ್ನುಪಸಂಹರಿಸು. ನಾನು ನಿರ್ಭಯನಾಗಿ ನಿನ್ನನ್ನು ಕಾಲಪಾಶಗಳಿಂದ ಬಂಧಿಸಿ ತೆಗೆದುಕೊಂಡು ಹೋಗುವೆನು.

೨೮. ಯಮನ ಮುಖದಿಂದ ಹೊರಬಿದ್ದ ಈ ಕಠೋರ ವಾಕ್ಯವನ್ನು ಕೇಳಿ ಬ್ರಾಹ್ಮಣನು ಮಹಾ ಭಯವನ್ನು ತಾಳಿ ಓಡಿಹೋಗಲನುವಾದನು.

ತಸ್ಯ ಮಾರ್ಗೇ ಗತಾಃ ಸರ್ವೇ ಯಮೇನ ಸಹಕಿಂಕರಾಃ ।
ತಿಷ್ಠ ತಿಷ್ಠೇತಿ ತಂ ವಿಪ್ರಮೂಚುಸ್ತೇ ಸೋಽಪ್ಯಧಾವತ ॥ ೨೯ ॥
ತ್ವರಮಾಣಃ ಪರಿಶ್ರಾಂತೋ ಹಾ ಹತೋಽಹಂ ದುರಾತ್ಮಭಿಃ ।
ರಕ್ಷ ರಕ್ಷ ಮಹಾದೇವ ಶರಣಾಗತವತ್ಸಲ ॥ ೩೦ ॥
ಏವಮುಕ್ತ್ವಾಽಪತದ್ಭೂಮೌ ಲಿಂಗಮಾಲಿಂಗ್ಯ ಭಾರತ ।
ಗತಸತ್ವಃ ಸ ವಿಪ್ರೇಂದ್ರಃ ಸಮಾಶ್ರಿತ್ಯ ಸುರೇಶ್ವರಂ ॥ ೩೧ ॥
ತಂ ದೃಷ್ಟ್ವಾ ಪತಿತಂ ಭೂಮೌ ದೇವದೇವೋ ಮಹೇಶ್ವರಃ ।
ಕೋಽಹನಿಷ್ಯತಿ ಮಾಭೈಸ್ತ್ವಂ ಹುಂಕಾರಮಕರೋತ್ತದಾ ॥ ೩೨ ॥
ತೇನ ತೇ ಕಿಂಕರಾಃ ಸರ್ವೇ ಯಮೇನ ಸಹ ಭಾರತ ।
ಹುಂಕಾರೇಣ ಗತಾಃ ಸರ್ವೇ ಮೇಘಾ ವಾತಹತಾ ಯಥಾ ॥ ೩೩ ॥
ತದಾ ಪ್ರಭೃತಿ ತತ್ತೀರ್ಥಂ ಕೋಽಹನಸ್ಯೇತಿ ವಿಶ್ರುತಂ ।
ಸರ್ವಪಾಪಹರಂ ಪುಣ್ಯಂ ಸರ್ವತೀರ್ಥೇಷ್ವನುತ್ತಮಂ ॥ ೩೪ ॥
ತತ್ರ ತೀರ್ಥೇ ತು ಯಃ ಸ್ನಾತ್ವಾ ಪೂಜಯೇತ್ಪರಮೇಶ್ವರಂ ।
ಅಗ್ನಿಷ್ಟೋಮಸ್ಯ ಯಜ್ಞಸ್ಯ ಫಲಮಾಪ್ನೋತ್ಯನುತ್ತಮಂ ॥ ೩೫ ॥

೨೯-೩೦. ಆತನು ಹೋದ ದಾರಿಯಲ್ಲಿಯೇ ಯಮನೊಡನೆ ಆತನ ಕಿಂಕರರೂ ಹಿಂಬಾಲಿಸಿ "ನಿಲ್ಲು, ನಿಲ್ಲು" ಎಂದು ಕೂಗುತ್ತ ಓಡಿದರು ಆತನು ಓಡುತ್ತಿದ್ದನು. ವೇಗದಿಂದ ಓಡುತ್ತ ಆಯಾಸಗೊಂಡು ವಿಪ್ರನು 'ಆಹಾ' ಈ ದುರಾತ್ಮರಿಂದ ನಾನು ಹತನಾದನು, ಶರಣಾಗತವತ್ಸಲನಾದ ಮಹಾದೇವನೆ! ನನ್ನನ್ನು ರಕ್ಷಿಸು" ಎಂದು ಮೊರೆಯಿಟ್ಟನು.

೩೧. ಹೀಗೆನ್ನುತ್ತಲೇ ಆ ಬ್ರಾಹ್ಮಣನು ನಿಶ್ಶಕ್ತನಾಗಿ ಅಕಸ್ಮಾತ್ತಾಗಿ ಸಿಕ್ಕಿದ ಒಂದು ಲಿಂಗವನ್ನು ತಬ್ಬಿಕೊಂಡು ಭೂಮಿಯಲ್ಲಿ ಬಿದನು

೩೨ ಭೂಮಿಯಲ್ಲಿ ಬಿದ್ದ ಆತನನ್ನು ಕಂಡು ದೇವಾಧಿದೇವನಾದ ಪರಮೇಶ್ವರನು "ನಿನ್ನನ್ನು ಯಾರು ಕೊಲ್ಲುವವರು? ಹೆದರಬೇಡ" ಎಂದು ಅಭಯವನ್ನಿತ್ತು ಹುಂಕಾರವನ್ನು ಮಾಡಿದನು.

೩೩. ಧರ್ಮರಾಜನೆ! ಆ ಹುಂಕಾರದಿಂದ ಯಮಸಹಿತರಾದ ಕಿಂಕರರೆಲ್ಲರೂ ಬಿರುಗಾಳಿಗೆ ಸಿಕ್ಕಿದ ಮೇಘಗಳಂತೆ ದಿಕ್ಕಾಪಾಲಾಗಿ ಚೆದರಿಹೋದರು

೩೪. ಆ ದಿನದಿಂದ ಆ ತೀರ್ಥವು ಕೋಹನವೆಂದು ಪ್ರಖ್ಯಾತವಾಯಿತು. ಇದು ಸಮಸ್ತ ಪಾಪಗಳನ್ನು ಕಳೆಯುವುದೂ, ಪುಣ್ಯವನ್ನು ಸಂಪಾದಿಸುವುದೂ, ಸರ್ವ ತೀರ್ಥಗಳಲ್ಲಿ ಶ್ರೇಷ್ಠವೂ ಆಗಿರುವುದು

೩೫. ಆ ತೀರ್ಥದಲ್ಲಿ ಯಾವನು ಸ್ನಾನವನ್ನು ಮಾಡಿ ಪರಮೇಶ್ವರನ ಪೂಜೆಯನ್ನು ಕೈಗೊಳ್ಳುವನೊ, ಅವನು ಅಗ್ನಿಷ್ಟೋಮದ ಉತ್ತಮ ಪುಣ್ಯವನ್ನು ಪಡೆಯುವನು.

ತತ್ರ ತೀರ್ಥೇ ತು ರಾಜೇಂದ್ರ ಪ್ರಾಣತ್ಯಾಗಂ ಕರೋತಿ ಯಃ ।
ನ ಪಶ್ಯತಿ ಯಮಂ ದೇವಮಿತ್ಯೇವಂ ಶಂಕರೋಽಬ್ರವೀತ್ ॥ ೩೬ ॥
ಅಗ್ನಿಪ್ರವೇಶಂ ಯಃ ಕುರ್ಯಾಜ್ಜಲೇ ವಾ ನೃಪಸತ್ತಮ ।
ಅಗ್ನಿಲೋಕೇ ವಸೇತ್ತಾವದ್ಯಾವತ್ಕಲ್ಪಶತತ್ರಯಂ ॥ ೩೭ ॥
ಏವಂ ವರುಣಲೋಕೇಽಪಿ ವಸಿತ್ವಾ ಕಾಲಮೀಪ್ಸಿತಂ ।
ಇಹಲೋಕಮನುಪ್ರಾಪ್ತೋ ಮಹಾಧನಪತಿರ್ಭವೇತ್ ॥ ೩೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ಕೋಹನತೀರ್ಥಮಾಹಾತ್ಮ್ಯವರ್ಣನಂ" ನಾಮ
ದ್ವಾವಿಂಶತ್ಯುತ್ತರಶತತಮೋಽಧ್ಯಾಯಃ

---

೩೬. ರಾಜೇಂದ್ರನೆ! ಆ ತೀರ್ಥದಲ್ಲಿ ಪ್ರಾಣತ್ಯಾಗವನ್ನು ಮಾಡಿದ ಮಾನವನು ಯಮದೇವತೆಯನ್ನು ನೋಡುವುದಿಲ್ಲವೆಂದು ಶಂಕರನೇ ಹೇಳಿರುವನು.

೩೭. ರಾಜಸತ್ತಮನೆ! ಆ ತೀರ್ಥದಲ್ಲಿ ಅಗ್ನಿಪ್ರವೇಶದಿಂದಾಗಲಿ ಜಲ ಪ್ರವೇಶದಿಂದಾಗಲಿ ದೇಹವನ್ನು ತ್ಯಜಿಸಿದವನು ಮುನ್ನೂರು ಕಲ್ಪಗಳವರೆಗೂ ಅಗ್ನಿಲೋಕದಲ್ಲಿ ವಾಸಮಾಡುವನು.

೩೮. ವರುಣಲೋಕದಲ್ಲಿಯೂ ಹಾಗೆಯೇ ಯಥೇಚ್ಛಕಾಲದವರೆಗೂ ವಾಸಿಸಿ ಈ ಲೋಕಕ್ಕೆ ಬಂದರೆ ಮಹಾ ವಿಭವಸಂಪನ್ನನಾಗಿ ಬಾಳುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಕೋಹನತೀರ್ಥಮಾಹಾತ್ಮ್ಯವರ್ಣನ"ವೆಂಬ
ನೂರಇಪ್ಪತ್ತೆರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ತ್ರಯೋವಿಂಶತ್ಯುತ್ತರಶತತಮೋಽಧ್ಯಾಯಃ

### ಕರ್ಮದೇಶ್ವರತೀರ್ಥಮಾಹಾತ್ಮ್ಯವರ್ಣನಂ

ಮಾರ್ಕಂಡೇಯ ಉವಾಚ :—

ತತೋ ಗಚ್ಛೇತ್ತು ರಾಜೇಂದ್ರ ಕರ್ಮದೀತೀರ್ಥಮುತ್ತಮಂ ।
ಯತ್ರ ತಿಷ್ಠತಿ ವಿಘ್ನೇಶೋ ಗಣನಾಥೋ ಮಹಾಬಲಃ ॥ ೧ ॥
ತತ್ರ ತೀರ್ಥೇ ನರಃ ಸ್ನಾತ್ವಾ ಚತುರ್ಥ್ಯಾಂ ವಾ ಹ್ಯುಪೋಷಿತಃ ।
ವಿಘ್ನಂ ನ ವಿದ್ಯತೇ ತಸ್ಯ ಸಪ್ತಜನ್ಮನಿ ಭಾರತ ॥ ೨ ॥
ತತ್ರ ತೀರ್ಥೇ ಹಿ ಯತ್ಕಿಂಚಿದ್ದೀಯತೇ ನೃಪಸತ್ತಮ ।
ತದಕ್ಷಯಫಲಂ ಸರ್ವಂ ಜಾಯತೇ ನಾಽತ್ರ ಸಂಶಯಃ ॥ ೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ಕರ್ಮದೇಶ್ವರತೀರ್ಥಮಾಹಾತ್ಮ್ಯವರ್ಣನಂ" ನಾಮ
ತ್ರಯೋವಿಂಶತ್ಯುತ್ತರಶತತಮೋಽಧ್ಯಾಯಃ

---

## ಕನ್ನಡದ ಅನುವಾದ

### ಕರ್ಮದೇಶ್ವರತೀರ್ಥಮಾಹಾತ್ಮ್ಯವರ್ಣನ

೧. ಮಾರ್ಕಂಡೇಯನು ಹೇಳುತ್ತಾನೆ :—ರಾಜಾಧಿರಾಜನೆ! ಬಳಿಕ ಉತ್ತಮವಾದ ಕರ್ಮದೀತೀರ್ಥಕ್ಕೆ ಹೋಗಬೇಕು. ಅಲ್ಲಿ ಶಿವಗಣಗಳಿಗೆ ನಾಥನೂ, ಮಹಾ ಪರಾಕ್ರಮಿಯೂ ಆದ ಗಣಪತಿಯಿರುವನು.

೨. ಯುಧಿಷ್ಠಿರನೆ! ಚತುರ್ಥಿಯ ದಿನದಲ್ಲಿ ಆ ತೀರ್ಥದಲ್ಲಿ ಸ್ನಾನವನ್ನು ಮಾಡಿ ಉಪವಾಸದಿಂದ ದಿವಸವನ್ನು ಕಳೆದವನಿಗೆ ಏಳು ಜನ್ಮಗಳಲ್ಲಿಯೂ ವಿಘ್ನಗಳು ಸಂಭವಿಸುವುದಿಲ್ಲ.

೩. ಚಕ್ರವರ್ತಿಯೆ! ಆ ತೀರ್ಥದಲ್ಲಿ ಎಷ್ಟೇ ಅಲ್ಪ ಪದಾರ್ಥವನ್ನು ದಾನ ಮಾಡಿದರೂ ಅದೆಲ್ಲವೂ ಅನಂತಗುಣಿತವಾದ ಫಲವನ್ನು ಕೊಡುವುದರಲ್ಲಿ ಸಂಶಯವಿಲ್ಲ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಕರ್ಮದೇಶ್ವರಮಾಹಾತ್ಮ್ಯವರ್ಣನ"ವೆಂಬ
ನೂರಇಪ್ಪತ್ತಮೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಚತುರ್ವಿಂಶತ್ಯುತ್ತರಶತತಮೋಽಧ್ಯಾಯಃ

## ನರ್ಮದೇಶ್ವರತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ತತೋ ಗಚ್ಛೇನ್ಮಹೀಪಾಲ ನರ್ಮದೇಶ್ವರಮುತ್ತಮಂ ।
ತತ್ರ ತೀರ್ಥೇ ನರಃ ಸ್ನಾತ್ವಾ ಮುಚ್ಯತೇ ಸರ್ವಕಿಲ್ಬಿಷೈಃ ॥ ೧ ॥
ಅಗ್ನಿಪ್ರವೇಶಶ್ಚ ಜಲೇಽಥವಾ ಮೃತ್ಯುರನಾಶಕೇ ।
ಅನಿವರ್ತಿಕಾ ಗತಿಸ್ತಸ್ಯ ಯಥಾ ಮೇ ಶಂಕರೋಽಬ್ರವೀತ್ ॥ ೨ ॥

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಅವಂತ್ಯಖಂಡೇ ತೃತೀಯೇ ರೇವಾಖಂಡೇ "ನರ್ಮದೇಶ್ವರತೀರ್ಥಮಾಹಾತ್ಮ್ಯವರ್ಣನಂ"ನಾಮ ಚತುರ್ವಿಂಶತ್ಯುತ್ತರಶತತಮೋಽಧ್ಯಾಯಃ**

---

## ಕನ್ನಡದ ಅನುವಾದ

### ನರ್ಮದೇಶ್ವರತೀರ್ಥಮಾಹಾತ್ಮ್ಯವರ್ಣನ

೧. ಮಾರ್ಕಂಡೇಯನು ಹೇಳುತ್ತಾನೆ:—ಬಳಿಕ ಸರ್ವಶ್ರೇಷ್ಠವೆನಿಸಿದ ನರ್ಮದೇಶ್ವರನನ್ನು ನೋಡಬೇಕು. ಆ ತೀರ್ಥದಲ್ಲಿ ಮಾನವನು ಸ್ನಾನಮಾಡುವುದರಿಂದ ಸಕಲ ಪಾಪಗಳನ್ನೂ ಕಳೆಯುವನು.

೨. ಅಲ್ಲಿ ಅಗ್ನಿಪ್ರವೇಶದಿಂದಲಾಗಲಿ, ಜಲಪ್ರವೇಶದಿಂದಾಗಲಿ, ನಿರಶನ ವ್ರತದಿಂದಾಗಲಿ ಪ್ರಾಣಗಳನ್ನು ತ್ಯಾಗಮಾಡಿದವನಿಗೆ ಭೂಲೋಕಕ್ಕೆ ತಿರುಗಿ ಬರದಂತೆ ಶಾಶ್ವತಮೋಕ್ಷವು ಲಭಿಸುವುದೆಂದು ಮಹಾದೇವನು ನನಗೆ ಹೇಳಿರುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಅವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ "ನರ್ಮದೇಶ್ವರತೀರ್ಥಮಾಹಾತ್ಮ್ಯವರ್ಣನ"ವೆಂಬ ನೂರಇಪ್ಪತ್ತನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಪಂಚವಿಂಶತ್ಯುತ್ತರಶತತಮೋಽಧ್ಯಾಯಃ

## ರವಿತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ:—

ತತೋ ಗಚ್ಛೇನ್ಮಹೀಪಾಲ ರವಿತೀರ್ಥಮನುತ್ತಮಂ ।
ಯತ್ರ ದೇವಃ ಸಹಸ್ರಾಂಶುಸ್ತಪಸ್ತಪ್ತ್ವಾ ದಿವಂಗತಃ ॥ ೧ ॥

ಯುಧಿಷ್ಠಿರ ಉವಾಚ:—

ಕಥಂ ದೇವೋ ಜಗದ್ಧಾತಾ ಸರ್ವದೇವನಮಸ್ಕೃತಃ ।
ತಪಸ್ತಪತಿ ದೇವೇಶಸ್ತಾಪಸೋ ಭಾಸ್ಕರೋ ರವಿಃ ॥ ೨ ॥
ಆರಾಧ್ಯ ಸರ್ವಭೂತಾನಾಂ ಸರ್ವದೇವೈಶ್ಚ ಪೂಜಿತಃ ।
ಪ್ರತ್ಯಕ್ಷೋ ದೃಶ್ಯತೇ ಲೋಕೇ ಸೃಷ್ಟಿಸಂಹಾರಕಾರಕಃ ॥ ೩ ॥
ಆದಿತ್ಯತ್ವಂ ಕಥಂ ಪ್ರಾಪ್ತಃ ಕಥಂ ಭಾಸ್ಕರ ಉಚ್ಯತೇ ।
ಸರ್ವಮೇತತ್ಸಮಾಸೇನ ಕಥಯಸ್ವ ಮಮಾಽನಘ ॥ ೪ ॥

---

## ಕನ್ನಡದ ಅನುವಾದ

### ರವಿತೀರ್ಥಮಾಹಾತ್ಮ್ಯವರ್ಣನ

೧. ಮಾರ್ಕಂಡೇಯನು ಹೇಳುತ್ತಾನೆ —ಮಹೀಪಾಲಕನೆ! ಬಳಿಕ ಅನುತ್ತಮವೆನಿಸಿ ಪ್ರಖ್ಯಾತವಾದ ರವಿತೀರ್ಥವನ್ನು ಸೇರಬೇಕು. ಅಲ್ಲಿ ದೇವ ದೇವನಾದ ಸೂರ್ಯನು ತಪಸ್ಸನ್ನಾಚರಿಸಿ ಸ್ವರ್ಗಲೋಕವನ್ನು ಸೇರಿದನು.

೨. ಯುಧಿಷ್ಠಿರನು ಹೇಳುತ್ತಾನೆ.—ಜಗತ್ತಿಗೆ ಆಧಾರಭೂತನೂ, ಸಕಲ ದೇವತೆಗಳಿಂದ ನಮಸ್ಕೃತನೂ, ದೇವಾಧಿದೇವನೂ, ಪ್ರಭಾಶಾಲಿಯೂ ಆದ ಸೂರ್ಯನು ಮುನಿಯಾಗಿ ಹೇಗೆ ತಪಸ್ಸನ್ನಾಚರಿಸಿದನು?

೩. ಸಕಲ ಭೂತಗಳಿಗೂ ಪೂಜಾರ್ಹನೂ, ಸಮಸ್ತ ದೇವತೆಗಳಿಂದ ಅರ್ಚಿತನೂ, ಆದ ಆತನು ಲೋಕದಲ್ಲಿ ಸೃಷ್ಟಿಸಂಹಾರಗಳನ್ನು ಮಾಡುತ್ತಿರುವುದು ಪ್ರತ್ಯಕ್ಷವಾಗಿಯೇ ಕಾಣುತ್ತಿರುವುದು.

೪. ಈತನಿಗೆ ಆದಿತ್ಯಪದವಿಯು ಹೇಗೆ ಲಭಿಸಿತು? ಭಾಸ್ಕರನೆಂದು ಹೆಸರು ಬರಲು ಕಾರಣವೇನು? ಇದೆಲ್ಲವನ್ನೂ ನಿಷ್ಕಲ್ಮಷನಾದ ನೀನು ನನಗೆ ತಿಳಿಸುವವನಾಗು.

**ಮಾರ್ಕಂಡೇಯ ಉವಾಚ:—**

**ಮಹಾಪ್ರಶ್ನೋ ಮಹಾರಾಜ ಯಸ್ತ್ವಯಾ ಪರಿಪೃಚ್ಛಿತಃ ।**
**ತತ್ಸರ್ವಂ ಸಂಪ್ರವಕ್ಷ್ಯಾಮಿ ನಮಸ್ಕೃತ್ಯ ಸ್ವಯಂಭುವಂ ॥ ೫ ॥**
**ಆಸೀದಿದಂ ತಮೋಭೂತಮಪ್ರಜ್ಞಾತಮಲಕ್ಷಣಂ ।**
**ಅಪ್ರತರ್ಕ್ಯಮವಿಜ್ಞೇಯಂ ಪ್ರಸುಪ್ತಮಿವ ಸರ್ವತಃ ॥ ೬ ॥**
**ತತಸ್ತೇಜಶ್ಚ ದಿವ್ಯಂ ಚ ತಪ್ತಪಿಂಡಮನುತ್ತಮಂ ।**
**ಆಕಾಶಾತ್ತು ಯಥೈವೋಲ್ಕಾ ಸೃಷ್ಟಿಹೇತೋರಧೋಮುಖೀ ॥ ೭ ॥**
**ತತ್ತೇಜಸೋಽಂತಃ ಪುರುಷಃ ಸಂಜಾತಃ ಸರ್ವಭೂಷಿತಃ ।**
**ಸ ಶಿವೋಽಪಾಣಿಪಾದಶ್ಚ ಯೇನ ಸರ್ವಮಿದಂ ತತಂ ॥ ೮ ॥**
**ತಸ್ಯೋತ್ಪನ್ನಸ್ಯ ಭೂತಸ್ಯ ತೇಜೋ ರೂಪಸ್ಯ ಭಾರತ ।**
**ಪಶ್ಚಾತ್ಪ್ರಜಾಪತಿರ್ಭೂಯಃ ಕಾಲಃ ಕಾಲಾಂತರೇಣ ವೈ ॥ ೯ ॥**
**ಅಗ್ನಿರ್ಜಾತಃ ಸ ಭೂತಾನಾಂ ಮನುಷ್ಯಾಸುರರಕ್ಷಸಾಂ ।**
**ಸರ್ವದೇವಾಧಿದೇವಶ್ಚ ಆದಿತ್ಯಸ್ತೇನ ಚೋಚ್ಯತೇ ॥ ೧೦ ॥**

---

೫. ಮಾರ್ಕಂಡೇಯನು ಹೇಳುತ್ತಾನೆ:—ಮಹಾರಾಜನೆ! ನೀನು ಕೇಳಿದ ಪ್ರಶ್ನೆಯು ಬಹಳ ದೊಡ್ಡದು. ಮೊದಲು ಬ್ರಹ್ಮದೇವನನ್ನು ನಮಸ್ಕರಿಸಿ ಅದೆಲ್ಲವನ್ನೂ ಹೇಳುವೆನು.

೬. ಆದಿಯಲ್ಲಿ ಇದೆಲ್ಲವೂ ತಮಸ್ಸಿನಿಂದಾವೃತವೂ, ತಿಳಿಯಲಸದಳವೂ, ಲಕ್ಷಣರಹಿತವೂ, ಅನುಮಾನಕ್ಕೆ ನಿಲುಕದುದೂ, ನಿರ್ವಿಶೇಷವೂ, ಎಲ್ಲವೂ ಪ್ರಸುಪ್ತವೂ ಆದಂತಿದ್ದಿತು.

೭. ಬಳಿಕ ಕಾದ ಕಬ್ಬಿಣದ ಪಿಂಡವನ್ನು ಹೋಲುವ ಒಂದು ದಿವ್ಯ ತೇಜಸ್ಸು ಸೃಷ್ಟಿಕಾಲದಲ್ಲಿ ಕೆಳಮುಖವಾದ ಬಾಲದ ಚುಕ್ಕೆಯಂತೆ ಆಕಾಶದಿಂದ ಕೆಳಕ್ಕೆ ಬಿದ್ದಿತು.

೮. ಆ ತೇಜಸ್ಸಿನ ಒಳಗಿನಿಂದ ಸರ್ವಾಭರಣಭೂಷಿತನಾದ ಪುರುಷನೊಬ್ಬನು ಹುಟ್ಟಿದನು. ಕೈಕಾಲುಗಳೇ ಮುಂತಾದ ಪ್ರಾಕೃತಾವಯವಗಳಿಲ್ಲದ ಆತನೇ ಪರಮಶಿವನು. ಆತನಿಂದಲೇ ಇದೆಲ್ಲವೂ ವ್ಯಾಪ್ತವಾಗಿರುವುದು.

೯. ಯುಧಿಷ್ಠಿರನೆ! ಇಂತು ತೇಜೋರಾಶಿಯಾಗಿ ಹುಟ್ಟಿದ ಮೊದಲನೆಯ ಸದಾಶಿವನಿಂದ ಮೊದಲು ಬ್ರಹ್ಮದೇವನೂ ಬಳಿಕ ಕಾಲಾನಂತರದಲ್ಲಿ ಕಾಲವೂ ಹುಟ್ಟಿದುವು.

೧೦. ಮನುಷ್ಯರು, ದಾನವರು, ರಾಕ್ಷಸರು, ದೇವತೆಗಳು ಮೊದಲಾದ ಭೂತಗಳಿಗೆಲ್ಲ ಅಧಿದೇವತೆಯಾಗಿ ಆಕಾಶದಲ್ಲಿ ಅಗ್ನಿದೇವನು ಹುಟ್ಟಿದನು. ಆದುದರಿಂದಲೇ ಆತನನ್ನು ಆದಿತ್ಯನೆಂದು ಕರೆಯುತ್ತಿರುವರು.

**ಆದೌ ತಸ್ಯ ನಮಸ್ಕಾರೋಽನ್ಯೇಷಾಂ ಚ ತದನಂತರಂ ।**
**ಕ್ರಿಯತೇ ದೇವತೈಃ ಸರ್ವೈಸ್ತೇನ ಸರ್ವೈರ್ಮಹರ್ಷಿಭಿಃ ॥ ೧೧ ॥**
**ತಿಸ್ರಃ ಸಂಧ್ಯಾಸ್ತ್ರಯೋ ದೇವಾಃ ಸಾನ್ನಿಧ್ಯಾಃ ಸೂರ್ಯಮಂಡಲೇ ।**
**ನಮಸ್ಕೃತೇನ ಸೂರ್ಯೇಣ ಸರ್ವೇ ದೇವಾ ನಮಸ್ಕೃತಾಃ ॥ ೧೨ ॥**
**ನ ದಿವಾ ನ ಭವೇದ್ರಾತ್ರಿಃ ಷಣ್ಮಾಸಾ ದಕ್ಷಿಣಾಯನಂ ।**
**ಅಯನಂ ಚೋತ್ತರಂ ಚಾಽಪಿ ಭಾಸ್ಕರೇಣ ವಿನಾ ನೃಪ ॥ ೧೩ ॥**
**ಸ್ನಾನಂ ದಾನಂ ಜಪೋ ಹೋಮಃ ಸ್ವಾಧ್ಯಾಯೋ ದೇವತಾರ್ಚನಂ ।**
**ನ ವರ್ತತೇ ವಿನಾ ಸೂರ್ಯಂ ತೇನ ಪೂಜ್ಯತಮೋ ರವಿಃ ॥ ೧೪ ॥**
**ಶಬ್ದಗಾಃ ಶ್ರುತಿಮುಖ್ಯಾಶ್ಚ ಬ್ರಹ್ಮವಿಷ್ಣುಮಹೇಶ್ವರಾಃ ।**
**ಪ್ರತ್ಯಕ್ಷೋ ಭಗವಾನ್ದೇವೋ ದೃಶ್ಯತೇ ಲೋಕಪಾವನಃ ॥ ೧೫ ॥**
**ಉತ್ಪತ್ತಿಃ ಪ್ರಲಯಸ್ಥಾನಂ ನಿಧಾನಂ ಬೀಜಮವ್ಯಯಂ ।**
**ಹೇತುರೇಕೋ ಜಗನ್ನಾಥೋ ನಾಽನ್ಯೋ ವಿದ್ಯೇತ ಭಾಸ್ಕರಾತ್ ॥ ೧೬ ॥**
**ಏವಮಾತ್ಮಭವಂ ಕೃತ್ವಾ ಜಗತ್ ಸ್ಥಾವರಜಂಗಮಂ ।**
**ಲೋಕಾನಾಂ ತು ಹಿತಾರ್ಥಾಯ ಸ್ಥಾಪಯೇದ್ಧರ್ಮಪದ್ಧತಿಂ ॥ ೧೭ ॥**

---

೧೧. ಸರ್ವದೇವತೆಗಳೂ ಸಮಸ್ತಮಹರ್ಷಿಗಳೂ ಮೊದಲು ಆತನಿಗೆ ನಮಸ್ಕರಿಸಿ ಆ ಬಳಿಕ ಇತರರಿಗೆ ನಮಸ್ಕಾರಾದಿಗಳನ್ನು ಮಾಡುವರು.

೧೨. ಸೂರ್ಯಮಂಡಲದಲ್ಲಿ ಮೂರು ಸಂಧ್ಯಾಶಕ್ತಿಗಳೂ, ಬ್ರಹ್ಮವಿಷ್ಣು ಮಹೇಶ್ವರರೂ ಸನ್ನಿಹಿತರಾಗಿರುವರು. ಆತನಿಗೆ ನಮಸ್ಕರಿಸಿದುದರಿಂದ ಸಕಲ ದೇವತೆಗಳಿಗೆ ನಮಸ್ಕರಿಸಿದಂತಾಗುವುದು.

೧೩. ಮಹಾರಾಜನೆ! ಸೂರ್ಯನಿಂದಲ್ಲದೆ ಹಗಲು ರಾತ್ರಿಗಳಾಗಲಿ, ಆರಾರು ತಿಂಗಳುಗಳ ಉತ್ತರಾಯಣ ದಕ್ಷಿಣಾಯನಗಳಾಗಲಿ ಸಂಭವಿಸಲಾರವು.

೧೪. ಸೂರ್ಯನಿಲ್ಲದೆ ಯಾವ ಸ್ನಾನಗಳೂ, ದಾನಗಳೂ, ಜಪಗಳೂ, ಹೋಮಗಳೂ, ವೇದಾಧ್ಯಯನಗಳೂ, ದೇವತಾರ್ಚನೆಗಳೂ ನಡೆಯಲಾರವಾದುದರಿಂದ ಆತನೇ ಪರಮಪೂಜ್ಯನು.

೧೫. ಬ್ರಹ್ಮವಿಷ್ಣು ಮಹೇಶ್ವರರೆಂಬ ತ್ರಿಮೂರ್ತಿಗಳು ಶಬ್ದೈಕಗಮ್ಯರಾಗಿ ವೇದಗಳಿಂದಲೇ ತಿಳಿಯಲ್ಪಡತಕ್ಕವರು. ಆದರೆ ಲೋಕಗಳನ್ನು ಪಾವನಗೊಳಿಸುವ ಸೂರ್ಯಭಗವಂತನು ಪ್ರತ್ಯಕ್ಷನಾಗಿಯೇ ಕಾಣುತ್ತಿರುವನು.

೧೬. ಬ್ರಹ್ಮಾಂಡದ ಉತ್ಪತ್ತಿಯೂ, ಲಯಸ್ಥಾನವೂ, ನೆಲೆವನೆಯೂ, ನಾಶರಹಿತವಾದ ಕಾರಣವೂ, ಲೋಕನಾಥನೂ ಎನಿಸಿದವನು ಸೂರ್ಯನಲ್ಲದೆ ಬೇರೊಬ್ಬನಿಲ್ಲ.

೧೭. ಇಂತು ಆತನು ಸ್ಥಾವರಜಂಗಮಜೀವರಿಂದೊಡಗೂಡಿದ ಜಗತ್ತನ್ನು

ನರ್ಮದಾತಟಮಾಶ್ರಿತ್ಯ ಸ್ಥಾಪಯಿತ್ವಾತ್ಮನಸ್ತನುಂ ।
ಸಹಸ್ರಾಂಶುಂ ನಿಧಿಂ ಧಾಮ್ನಾಂ ಜಗಾಮಾಕಾಶಮವ್ಯಯಂ ॥ ೧೮ ॥
ತತ್ರ ತೀರ್ಥೇ ತು ಯಃ ಸ್ನಾತ್ವಾ ಪೂಜಯೇತ್ಪರಮೇಶ್ವರಂ ।
ಸಹಸ್ರಕಿರಣಂ ದೇವಂ ನಾಮಮಂತ್ರವಿಧಾನತಃ ॥ ೧೯ ॥
ತೇನ ತಪ್ತಂ ಹುತಂ ತೇನ ತೇನ ಸರ್ವಮನುಷ್ಠಿತಂ ।
ತೇನ ಸಮ್ಯಗ್ವಿಧಾನೇನ ಸಂಪ್ರಾಪ್ತಂ ಪರಮಂ ಪದಂ। ॥ ೨೦ ॥
ತೇ ಧನ್ಯಾಸ್ತೇ ಮಹಾತ್ಮಾನಸ್ತೇಷಾಂ ಜನ್ಮ ಸುಜೀವಿತಂ ।
ಸ್ನಾತ್ವಾ ಯೇ ನರ್ಮದಾತೋಯೇ ದೇವಂ ಪಶ್ಯಂತಿ ಭಾಸ್ಕರಂ ॥ ೨೧ ॥
ತಥಾ ದೇವಸ್ಯ ರಾಜೇಂದ್ರ ಯೇ ಕುರ್ವಂತಿ ಪ್ರದಕ್ಷಿಣಂ ।
ಅನನ್ಯಭಕ್ತ್ಯಾ ಸತತಂ ತ್ರಿರಕ್ಷರಸಮನ್ವಿತಾಃ ॥ ೨೨ ॥
ತೇನ ಪೂತಶರೀರಾಸ್ತೇ ಮಂತ್ರೇಣ ಗತಪಾತಕಾಃ ।
ಯತ್ಪುಣ್ಯಂ ಚ ಭವೇತ್ತೇಷಾಂ ತದಿಹೈಕಮನಾಃ ಶೃಣು ॥ ೨೩ ॥

---

ತನ್ನಿಂದಲೇ ಉಂಟುಮಾಡಿ, ಅವುಗಳ ಹಿತಕ್ಕಾಗಿಯೇ ಧರ್ಮದ ಕಟ್ಟಳೆಗಳನ್ನು ಸ್ಥಾಪಿಸಿದನು.

೧೮. ಆತನೇ ನರ್ಮದಾತೀರವನ್ನು ಸೇರಿ ಸಹಸ್ರಕಿರಣಸಹಿತವೂ, ತೇಜಸ್ಸಿನ ರಾಶಿಯೂ ಆದ ತನ್ನ ರೂಪವನ್ನು ಅಲ್ಲಿ ಪ್ರತಿಷ್ಠಿಸಿ ತಾನು ಆಕಾಶಕ್ಕೆ ಹೊರಟುಹೋದನು.

೧೯–೨೦. ಆ ತೀರ್ಥದಲ್ಲಿ ಯಾವನು ಸ್ನಾನವನ್ನುಮಾಡಿ, ಪರಮೇಶ್ವರನನ್ನರ್ಚಿಸಿ, ನಾಮಮಂತ್ರಗಳ ಪುನಶ್ಚರಣೆಯಿಂದ ಸೂರ್ಯದೇವನನ್ನೂ ಪೂಜಿಸುವನೊ, ಆತನು ಸಕಲ ವಿಧಗಳಾದ ತಪಸ್ಸುಗಳನ್ನೂ ಹೋಮಗಳನ್ನೂ ನಡೆಸಿದಂತಾಗುವುದು. ಈ ಕಾರ್ಯಗಳನ್ನು ಯಥೋಕ್ತವಿಧಿಯಿಂದ ನಡೆಸಲು ಆತನಿಗೆ ಪರಮಪದವು ಲಭಿಸುವುದು.

೨೧. ನರ್ಮದೆಯ ನೀರಿನಲ್ಲಿ ಮಿಂದು ಯಾರು ಭಾಸ್ಕರನ ದರ್ಶನವನ್ನು ಪಡೆದುಕೊಳ್ಳುವರೊ, ಅವರೇ ಧನ್ಯರು. ಅವರೇ ಮಹಾತ್ಮರು. ಅವರ ಜನ್ಮವೇ ಸಾರ್ಥಕವು.

೨೨. ರಾಜೇಂದ್ರನೆ! ಅನನ್ಯಭಕ್ತಿಯುಕ್ತರಾಗಿ ನಿತ್ಯವೂ ಮೂರು ಸಲ ಮಂತ್ರಜಪಗಳನ್ನುಚ್ಚರಿಸುತ್ತ ಅಲ್ಲಿರುವ ದೇವದೇವನಿಗೆ ಪ್ರದಕ್ಷಿಣೆಯನ್ನು ಮಾಡಬೇಕು.

೨೩. ಪ್ರದಕ್ಷಿಣೆಯಿಂದ ಅವರ ದೇಹವು ಪರಿಶುದ್ಧವಾಗುವುದು. ಮಂತ್ರೋಚ್ಚಾರಣೆಯಿಂದ ಪಾತಕಗಳು ನಾಶವಾಗುವುವು, ಅವರಿಗೆ ಲಭಿಸುವ ಪುಣ್ಯವಿಶೇಷವನ್ನು ಏಕಾಗ್ರಚಿತ್ತದಿಂದ ಕೇಳು.

ಸಸಮುದ್ರಗುಹಾ ತೇನ ಸಶೈಲವನಕಾನನಾ ।
ಪ್ರದಕ್ಷಿಣೀಕೃತಾ ಸರ್ವಾ ಪೃಥಿವೀ ನಾಽತ್ರ ಸಂಶಯಃ ॥ ೨೪ ॥
ಮಂತ್ರಮೂಲಮಿದಂ ಸರ್ವಂ ತ್ರೈಲೋಕ್ಯಂ ಸಚರಾಚರಂ ।
ತೇನ ಮಂತ್ರವಿಹೀನಂ ತು ಕಾರ್ಯಂ ಲೋಕೇನ ಸಿದ್ಧ್ಯತಿ ॥ ೨೫ ॥
ಯಥಾ ಕಾಷ್ಠಮಯೋ ಹಸ್ತೀ ಯಥಾ ಚರ್ಮಮಯೋ ಮೃಗಃ ।
ಕಾರ್ಯಾರ್ಥಂ ನೈವ ಸಿದ್ಧ್ಯೇತ ತಥಾ ಕರ್ಮ ಹ್ಯಮಂತ್ರಕಂ ॥ ೨೬ ॥
ಯಥಾ ಭಸ್ಮಹುತಂ ಪಾರ್ಥ ಯಥಾ ತೋಯವಿವರ್ಜಿತಂ ।
ನಿಷ್ಫಲಂ ಜಾಯತೇ ದಾನಂ ತಥಾ ಮಂತ್ರವಿವರ್ಜಿತಂ ॥ ೨೭ ॥
ಕಾಷ್ಠಪಾಷಾಣಲೋಷ್ಠೇಷು ಮೃಣ್ಮಯೇಷು ವಿಶೇಷತಃ ।
ತೇನ ಲೋಕೇ ಪೂಜಾಂ ತು ಕುರ್ವಂತಿ ನಹ್ಯಮಂತ್ರತಃ ॥ ೨೮ ॥
ದ್ವಾದಶಾಬ್ದಾನ್ನಮಸ್ಕಾರಾದ್ಭಕ್ತ್ಯಾ ಯಲ್ಲಭತೇ ಫಲಂ ।
ಮಂತ್ರಯುಕ್ತನಮಸ್ಕಾರಾತ್ಸಕೃತ್ತಲ್ಲಭತೇ ಫಲಂ ॥ ೨೯ ॥

---

೨೪. ಸಮುದ್ರಗಳು, ಗುಹೆಗಳು, ಪರ್ವತಗಳು, ವನಗಳು, ಅರಣ್ಯಗಳು ಮುಂತಾದುವುಗಳಿಂದ ಕೂಡಿದ ಸಕಲ ಭೂಮಂಡಲವನ್ನೂ ಸುತ್ತಿದ ಫಲವು ಒಂದು ಪ್ರದಕ್ಷಿಣೆಯಿಂದಲೇ ಲಭಿಸುವುದರಲ್ಲಿ ಸಂಶಯವಿಲ್ಲ.

೨೫. ಚರಾಚರವಸ್ತುಗಳಿಂದ ತುಂಬಿದ ಈ ಬ್ರಹ್ಮಾಂಡವೆಲ್ಲವೂ ಮಂತ್ರದಿಂದಲೇ ಹೊರಟಿರುವುದು ಆದುದರಿಂದ ಲೋಕದಲ್ಲಿ ಮಂತ್ರರಹಿತವಾದ ಯಾವ ಕಾರ್ಯವೂ ಸಿದ್ಧಿಸುವುದಿಲ್ಲ.

೨೬. ಮರದಲ್ಲಿ ಮಾಡಿದ ಆನೆಯೂ, ಚರ್ಮದಲ್ಲಿ ಮಾಡಿದ ಜಿಂಕೆಯೂ ಹೇಗೆ ಕೆಲಸಕ್ಕೆ ಬಾರವೊ, ಹಾಗೆಯೇ ಮಂತ್ರಹೀನವಾದ ಕರ್ಮವೂ ನಿಷ್ಫಲವಾಗುವುದು.

೨೭. ಧರ್ಮರಾಜನೆ! ಭಸ್ಮದಲ್ಲಿ ಹೋಮಮಾಡಿದುದೂ, ದಾನೋದಕರಹಿತವಾದ ದಾನವೂ ನಿಷ್ಫಲಗಳಾಗುವಂತೆಯೇ ಮಂತ್ರರಹಿತವಾದ ಕರ್ಮವೂ ನಿಷ್ಪ್ರಯೋಜನವು.

೨೮. ಮರ, ಕಲ್ಲು, ಲೋಹ, ಮಣ್ಣುಗಳಿಂದ ಮಾಡಿದ ವಿಗ್ರಹಗಳನ್ನು ಪೂಜಿಸಿದರೂ ಮಂತ್ರಗಳಿಂದಲೇ ಹೊರತು ಮಂತ್ರರಹಿತವಾಗಿ ಯಾರೂ ಪೂಜಿಸುವುದಿಲ್ಲ.

೨೯. ಭಕ್ತಿಯುಕ್ತನಾಗಿ ಹನ್ನೆರಡು ವರ್ಷಗಳು ಸುಮ್ಮನೆ ನಮಸ್ಕಾರಗಳನ್ನುಮಾಡಲು ಯಾವ ಫಲವುಂಟೊ, ಅದನ್ನೇ ಮಂತ್ರಸಹಿತವಾಗಿ ಒಂದು ನಮಸ್ಕಾರದಿಂದಲೇ ಪಡೆಯಬಹುದು.

ಸಂಕ್ರಾಂತೌ ಚ ವ್ಯತೀಪಾತೇ ಅಯನೇ ವಿಷುವೇ ತಥಾ ।
ನರ್ಮದಾಯಾ ಜಲೇ ಸ್ನಾತ್ವಾ ಯಸ್ತು ಪೂಜಯತೇ ರವಿಂ ॥ ೩೦ ॥
ದ್ವಾದಶಾಬ್ದೇನ ಯತ್ಪಾಪಮಜ್ಞಾನಜ್ಞಾನಸಂಚಿತಂ ।
ತತ್ಕ್ಷಣಾನ್ನಶ್ಯತೇ ಸರ್ವಂ ವಹ್ನಿನಾತು ತುಷಂ ಯಥಾ ॥ ೩೧ ॥
ಚಂದ್ರಸೂರ್ಯಗ್ರಹೇ ಸ್ನಾತ್ವಾ ಸೋಽಪವಾಸೋ ಜಿತೇಂದ್ರಿಯಃ ।
ತತ್ರಾದಿತ್ಯಮುಖಂ ದೃಷ್ಟ್ವಾ ಮುಚ್ಯತೇ ಸರ್ವಕಿಲ್ಬಿಷೈಃ ॥ ೩೨ ॥
ಮಾಘಮಾಸೇ ತು ಸಂಪ್ರಾಪ್ತೇ ಸಪ್ತಮ್ಯಾಂ ನೃಪಸತ್ತಮ ।
ಸೋಽಪವಾಸೋ ಜಿತಕ್ರೋಧ ಉಷಿತ್ವಾ ಸೂರ್ಯಮಂದಿರೇ ॥ ೩೩ ॥
ಪ್ರಾತಃ ಸ್ನಾತ್ವಾ ವಿಧಾನೇನ ದದಾತ್ಯರ್ಘ್ಯಂ ದಿವಾಕರೇ ।
ವಿಧಿನಾ ಮಂತ್ರಯುಕ್ತೇನ ಸ ಲಭೇತ್ಪುಣ್ಯಮುತ್ತಮಂ ॥ ೩೪ ॥
ಪಿತೃದೇವಮನುಷ್ಯಾಣಾಂ ಕೃತ್ವಾ ಹ್ಯುದಕತರ್ಪಣಂ ।
ಮಂದಿರೇ ದೇವದೇವಸ್ಯ ತತಃ ಪೂಜಾಂ ಸಮಾಚರೇತ್ ॥ ೩೫ ॥
ಗಂಧೈಃ ಪುಷ್ಪೈಸ್ತಥಾ ಧೂಪೈರ್ದೀಪೈರ್ನೈವೇದ್ಯಶೋಭನೈಃ ।
ಪೂಜಯಿತ್ವಾ ಜಗನ್ನಾಥಂ ತತೋ ಮಂತ್ರಮುದೀರಯೇತ್ ॥ ೩೬ ॥

---

೩೦. ಸಂಕ್ರಾಂತಿಯ ದಿನಗಳು, ವ್ಯತೀಪಾತಗಳು, ಅಯನದಿನಗಳು, ವಿಷುವತ್ಪುಣ್ಯಕಾಲಗಳು ಮುಂತಾದ ದಿನಗಳಲ್ಲಿ ನರ್ಮದಾನದಿಯಲ್ಲಿ ಮಿಂದು ಸೂರ್ಯನ ಪೂಜೆಯನ್ನುಮಾಡಬೇಕು.

೩೧. ಇದರಿಂದ ತಿಳಿದೊ ತಿಳಿಯದೆಯೂ ಹನ್ನೆರಡು ವರ್ಷಗಳಲ್ಲಿ ಮಾಡಿದ ಪಾಪವೆಲ್ಲವೂ ಬೆಂಕಿಗೆ ಸಿಕ್ಕಿದ ಹೊಟ್ಟಿನಂತೆ ಭಸ್ಮವಾಗುವುದು.

೩೨. ಚಂದ್ರಸೂರ್ಯರ ಗ್ರಹಣಗಳಲ್ಲಿ ಉಪವಾಸವನ್ನುಮಾಡಿ ಜಿತೇಂದ್ರಿಯನಾಗಿ ಸ್ನಾನಪೂರ್ವಕವಾಗಿ ಅಲ್ಲಿ ಸೂರ್ಯನ ದರ್ಶನವನ್ನು ಮಾಡುವವನು ಸಕಲಪಾಪಗಳನ್ನೂ ಕಳೆದುಕೊಳ್ಳುವನು.

೩೩. ಚಕ್ರವರ್ತಿಯೆ! ಮಾಘಮಾಸದಲ್ಲಿ ಸಪ್ತಮಿಯ ದಿನದಲ್ಲಿ ಉಪವಾಸವನ್ನುಮಾಡಿ ಕ್ರೋಧಾದಿ ದುರ್ಗುಣಗಳಿನ್ನು ಜಯಿಸಿ ಆ ಸೂರ್ಯದೇವಾಲಯದಲ್ಲಿ ವಾಸಮಾಡಬೇಕು.

೩೪. ಮಾರನೆಯ ಪ್ರಾತಃಕಾಲದಲ್ಲಿ ವಿಧ್ಯುಕ್ತರೀತಿಯಿಂದಲೂ ಮಂತ್ರಸಹಿತವಾಗಿಯೂ ಸೂರ್ಯದೇವನಿಗೆ ಅರ್ಘ್ಯಗಳನ್ನು ಕೊಟ್ಟವನು ಉತ್ತಮಪುಣ್ಯಶಾಲಿಯಾಗುವನು.

೩೫–೩೬. ಪಿತೃಗಳಿಗೂ, ದೇವತೆಗಳಿಗೂ, ಮನುಷ್ಯರಿಗೂ ಮೊದಲು ಜಲತರ್ಪಣಗಳನ್ನಿತ್ತು ಬಳಿಕ ಆ ದೇವದೇವನ ಮಂದಿರವನ್ನು ಪ್ರವೇಶಿಸಿ ಪೂಜೆಯನ್ನು ಮಾಡಬೇಕು. ಗಂಧದ್ರವ್ಯಗಳು, ಪುಷ್ಪಗಳು, ಧೂಪಗಳು, ಚಿತ್ರದೀಪಗಳು,

ವಿಷ್ಣುಃ ಶಕ್ರೋ ಯಮೋ ಧಾತಾ ಮಿತ್ರೋಽಥ ವರುಣಸ್ತಥಾ ।
ವಿವಸ್ವಾನ್ ಸವಿತಾ ಪೂಷಾ ಚಂಡಾಂಶುರ್ಭರ್ಗ ಏವ ಚ ॥ ೩೭ ॥
ಇತಿ ದ್ವಾದಶನಾಮಾನಿ ಜಪನ್ಕೃತ್ವಾ ಪ್ರದಕ್ಷಿಣಾಂ ।
ಯತ್ಫಲಂ ಲಭತೇ ಪಾರ್ಥ ತದಿಹೈಕಮನಾಃ ಶೃಣು ॥ ೩೮ ॥
ದರಿದ್ರೋ ವ್ಯಾಧಿತೋ ಮೂಕೋ ಬಧಿರೋ ಜಡ ಏವ ಚ ।
ನ ಭವೇತ್ಸಪ್ತಜನ್ಮಾನಿ ಇತ್ಯೇವಂ ಶಂಕರೋಽಬ್ರವೀತ್ ॥ ೩೯ ॥
ಏವಂ ಜ್ಞಾತ್ವಾ ವಿಧಾನೇನ ಜಪನ್ಮಂತ್ರಂ ವಿಚಕ್ಷಣಃ ।
ಆರಾಧಯೇದ್ರವಿಂ ಭಕ್ತ್ಯಾ ಯ ಇಚ್ಛೇತ್ಪುಣ್ಯಮುತ್ತಮಂ ॥ ೪೦ ॥
ಮಂತ್ರಹೀನಾಂ ತು ಯಃ ಕುರ್ಯಾದ್ಭಕ್ತಿಂ ದೇವಸ್ಯ ಭಾರತ ।
ಸ ವಿಡಂಬತಿ ಚಾತ್ಮಾನಂ ಪಶುಕೀಟಪತಂಗವತ್ ॥ ೪೧ ॥
ತತ್ರ ತೀರ್ಥೇ ತು ಯಃ ಕಶ್ಚಿತ್ತ್ಯಜತೇ ದೇಹಮುತ್ತಮಂ ।
ಸ ಗತಸ್ತತ್ರ ದೇವೈಸ್ತು ಪೂಜ್ಯಮಾನೋ ಮಹರ್ಷಿಭಿಃ ॥ ೪೨ ॥

---

ವಿಧವಿಧಗಳಾದ ನೈವೇದ್ಯಗಳು ಮುಂತಾದುವುಗಳಿಂದ ಲೋಕನಾಥನಾದ ಸೂರ್ಯನನ್ನು ಪೂಜಿಸಿ ಬಳಿಕ ಮಂತ್ರದ ಪುರಶ್ಚರಣೆಯನ್ನು ಮಾಡಬೇಕು.

೩೭. ವಿಷ್ಣು, ಶಕ್ರ, ಯಮ, ಧಾತೃ, ಮಿತ್ರ, ವರುಣ, ವಿವಸ್ವತ್, ಸವಿತೃ, ಪೂಷ, ಚಂಡ, ಅಂಶುಮಾನ್, ಭರ್ಗ ಎಂಬುವೇ ಆತನ ನಾಮಗಳು.

೩೮. ಈ ಹನ್ನೆರಡು ಹೆಸರುಗಳನ್ನು ಜಪಿಸುತ್ತ ಭಾಸ್ಕರನಿಗೆ ಪ್ರದಕ್ಷಿಣೆಯನ್ನು ಮಾಡಲು ಲಭಿಸುವ ಫಲವನ್ನು ಚಿತ್ತೈಕಾಗ್ರತೆಯಿಂದ ಕೇಳುವವನಾಗು.

೩೯. ಆತನು ಏಳು ಜನ್ಮಗಳಲ್ಲಿ ದರಿದ್ರನೂ, ವ್ಯಾಧಿಪೀಡಿತನೂ, ಮೂಕನೂ, ಬಧಿರನೂ, ಮೂರ್ಖನೂ ಆಗುವುದಿಲ್ಲವೆಂದು ಪರಮಶಿವನೇ ಹೇಳಿರುವನು.

೪೦. ಯಾವನಿಗೆ ಉತ್ತಮಪುಣ್ಯದ ಇಚ್ಛೆಯಿದೆಯೊ, ಆವನು ಇದನ್ನೆಲ್ಲ ತಿಳಿದುಕೊಂಡು ವಿಚಕ್ಷಣನಾಗಿ ಯಥೋಕ್ತವಿಧಿಯಿಂದ ಮಂತ್ರವನ್ನು ಜಪಿಸುತ್ತ ಭಕ್ತಿಯಿಂದ ಸೂರ್ಯನನ್ನಾರಾಧಿಸಬೇಕು.

೪೧. ಧರ್ಮರಾಜನೆ! ಸೂರ್ಯನಲ್ಲಿ ಮಂತ್ರರಹಿತವಾದ ಭಕ್ತಿಯನ್ನು ಮಾಡಲು ಅದು ಪಶು, ಕ್ರಿಮಿ, ಪತಂಗಗಳ ವ್ಯಾಪಾರದಂತೆ ಕೇವಲ ಆತ್ಮ ವಿಡಂಬನೆಯೆಂದೇ ತಿಳಿಯಬೇಕು.

೪೨. ಆ ತೀರ್ಥದೇಹದಲ್ಲಿ ಉತ್ತಮವಾದ ಮಾನವದೇಹವನ್ನು ತ್ಯಜಿಸಿದವನು ಸ್ವರ್ಗಲೋಕಕ್ಕೆ ಹೋಗಿ ದೇವತೆಗಳಿಂದಲೂ ಮಹರ್ಷಿಗಳಿಂದಲೂ ಪೂಜೆಗೊಳ್ಳುತ್ತಿರುವನು.

ಸ್ವೇಚ್ಛಯಾ ಸುಚಿರಂ ಕಾಲಮಿಹಲೋಕೇ ನೃಪೋ ಭವೇತ್ ॥ ೪೩ ॥
ಪುತ್ರಪೌತ್ರಸಮಾಯುಕ್ತೋ ಹಸ್ತ್ಯಶ್ವರಥಸಂಕುಲಃ ।
ದಾಸೀ ದಾಸಶತೋಪೇತೋ ಜಾಯತೇ ವಿಪುಲೇ ಕುಲೇ ॥ ೪೪ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ರವಿತೀರ್ಥಮಾಹಾತ್ಮ್ಯವರ್ಣನಂ" ನಾಮ
ಪಂಚವಿಂಶತ್ಯುತ್ತರಶತತಮೋಽಧ್ಯಾಯಃ

---

೪೩. ಮತ್ತೆ ಜನಿಸಿದರೆ ಈ ಲೋಕದಲ್ಲಿ ಬಹುಕಾಲದವರೆಗೂ ರಾಜನಾಗಿ ಸ್ವೇಚ್ಛೆಯಿಂದಿರುವನು.

೪೪. ಪುತ್ರಪೌತ್ರಪರಿವಾರಿತನಾಗಿ, ಆನೆ, ಕುದುರೆ, ರಥಗಳನ್ನು ಹೊಂದಿ, ನೂರಾರು ದಾಸದಾಸಿಯರ ಸೇವೆಯನ್ನು ಪಡೆಯುವಂತೆ ಪ್ರಖ್ಯಾತವಾದ ಕುಲದಲ್ಲಿ ಜನಿಸುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ರವಿತೀರ್ಥಮಾಹಾತ್ಮ್ಯವರ್ಣನ"ವೆಂಬ
ನೂರಇಪ್ಪತ್ತೈದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಷಡ್ವಿಂಶತ್ಯುತ್ತರಶತತಮೋಽಧ್ಯಾಯಃ

## ಅಯೋನಿಜಪ್ರಭವತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ತತೋ ಗಚ್ಛೇತ್ತು ರಾಜೇಂದ್ರ ಪರಂ ತೀರ್ಥಮಯೋನಿಜಂ ।
ಸ್ನಾತಮಾತ್ರೋ ನರಸ್ತತ್ರ ನ ಪಶ್ಯೇದ್ಯೋನಿಸಂಕಟಂ ॥ ೧ ॥
ತತ್ರ ತೀರ್ಥೇ ನರಃ ಸ್ನಾತ್ವಾ ಪೂಜಯೇದ್ದೇವಮೀಶ್ವರಂ ।
ಅಯೋನಿಜೋ ಮಹಾದೇವ ಯಥಾ ತ್ವಂ ಪರಮೇಶ್ವರ ॥ ೨ ॥
ತಥಾ ಮೋಚಯ ಮಾಂ ದೇವ ಸಂಭವಾದ್ಯೋನಿಸಂಕಟಾತ್ ।
ಗಂಧಪುಷ್ಪಾದಿಧೂಪೈಶ್ಚ ಸಮುಚ್ಯೇತ್ಸರ್ವಪಾತಕೈಃ ॥ ೩ ॥
ತಸ್ಯ ದೇವಸ್ಯ ಯೋ ಭಕ್ತ್ಯಾ ಕುರುತೇ ಲಿಂಗಪೂರಣಂ ।
ಸ ವಸೇದ್ದೇವದೇವಸ್ಯ ಯಾವತ್ಸಿಕ್ಥಸ್ಯ ಸಂಖ್ಯಯಾ ॥ ೪ ॥
ಅಯೋನಿಜೇ ಮಹಾದೇವಂ ಸ್ನಾಪಯೇದ್ಗಂಧವಾರಿಣಾ ।
ಮಧುಕ್ಷೀರೇಣ ದಧ್ನಾ ವಾ ಸ ಲಭೇದ್ವಿಪುಲಾಂ ಶ್ರಿಯಂ ॥ ೫ ॥

---

## ಕನ್ನಡದ ಅನುವಾದ

### ಅಯೋನಿಜಪ್ರಭವತೀರ್ಥಮಾಹಾತ್ಮ್ಯವರ್ಣನ

೧. ಮಾರ್ಕಂಡೇಯನು ಹೇಳುತ್ತಾನೆ.—ರಾಜೇಂದ್ರನೆ! ಬಳಿಕ ಪರಮೋತ್ಕೃಷ್ಟವೆನಿಸಿದ ಅಯೋನಿಜವೆಂಬ ತೀರ್ಥವನ್ನು ಸೇರಬೇಕು. ಅಲ್ಲಿ ಸ್ನಾನವನ್ನುಮಾಡುವ ಮಾತ್ರದಿಂದಲೇ ಮನುಷ್ಯನು ಪುನಃ ಯೋನಿಯ ಸಂಕಟವನ್ನನುಭವಿಸುವುದಿಲ್ಲ.

೨–೩. ಆ ತೀರ್ಥದಲ್ಲಿ ಸ್ನಾನಮಾಡಿ ಅಲ್ಲಿರುವ ಮಹಾದೇವನನ್ನು ಪೂಜಿಸಿ ಪ್ರಾರ್ಥಿಸಿಕೊಳ್ಳಬೇಕು. "ದೇವಾಧಿದೇವನೆ! ಪರಮೇಶ್ವರನೆ! ನೀನು ಹೇಗೆ ಅಯೋನಿಸಂಭವನಾಗಿರುವೆಯೊ, ಹಾಗೆಯೇ ನಾನೂ ಈ ಯೋನಿ ಜನ್ಮದಸಂಕಟಕ್ಕೆ ಸಿಕ್ಕದಂತೆ ನನ್ನನ್ನು ಮುಕ್ತನನ್ನಾಗಿ ಮಾಡು" ಎಂದು ಕೇಳಿಕೊಂಡು ಗಂಧಪುಷ್ಪಧೂಪಾದಿಗಳಿಂದ ಪೂಜಿಸಿದವನು ಸಕಲಪಾತಕಗಳಿಂದ ಮುಕ್ತನಾಗುವನು.

೪. ಯಾವನು ಭಕ್ತಿಯಿಂದ ಆ ದೇವದೇವನ ಲಿಂಗಕ್ಕೆ ವಿವಿಧಾನ್ನಗಳ ಅಭಿಷೇಕಗಳನ್ನು ಮಾಡುವನೊ, ಅವನು ಆ ಅನ್ನದ ಕಬಳಗಳ ಸಂಖ್ಯೆಗನುಗುಣವಾಗಿ ಮಹಾದೇವನ ಲೋಕದಲ್ಲಿ ವಾಸಿಸುವನು.

೫. ಅಯೋನಿಜತೀರ್ಥದಲ್ಲಿರುವ ಮಹಾದೇವನಿಗೆ ಗಂಧೋದಕದಿಂದಾಗಲಿ, ಜೇನುತುಪ್ಪದಿಂದಾಗಲಿ, ಹಾಲಿನಿಂದಾಗಲಿ, ಮೊಸರಿನಿಂದಾಗಲಿ ಅಭಿಷೇಕಗಳನ್ನು ಮಾಡಿದವನು ಅನಂತೈಶ್ವರ್ಯಕ್ಕೆ ಭಾಗಿಯಾಗುವನು.

ಅಷ್ಟಮ್ಯಾಂ ಚ ಸಿತೇ ಪಕ್ಷೇ ಅಸಿತಾಂ ವಾ ಚತುರ್ದಶೀಂ ।
ಪೂಜಯಿತ್ವಾ ಮಹಾದೇವಂ ಪ್ರೀಣಯೇದ್ಗೀತವಾದ್ಯಕೈಃ ॥ ೬ ॥
ವಸೇತ್ಸ ಚ ಶಿವೇ ಲೋಕೇ ಯೇ ಕುರ್ವಂತಿ ಮನೋಹರಂ ।
ತೇ ವಸಂತಿ ಶಿವೇ ಲೋಕೇ ಯಾವದಾಭೂತಸಂಪ್ಲವಂ ॥ ೭ ॥
ತಸ್ಯ ದೇವಸ್ಯ ಭಕ್ತ್ಯಾ ತು ಯಃ ಕರೋತಿ ಪ್ರದಕ್ಷಿಣಾಂ ।
ವಿಜ್ಞಾಪಯಂಶ್ಚ ಸತತಂ ಮಂತ್ರೇಣಾಽನೇನ ಭಾರತ ॥ ೮ ॥
ತಸ್ಯ ಯತ್ಫಲಮುದ್ದಿಷ್ಟಂ ಪಾರಂಪರ್ಯೇಣ ಮಾನವೈಃ ।
ಸಕಾಶಾದ್ದೇವದೇವಸ್ಯ ತಚ್ಛೃಣುಷ್ವ ಸಮಾಧಿನಾ ॥ ೯ ॥
ಅಯೋನಿಜೋ ಮಹಾದೇವ ಯಥಾತ್ವಂ ಪರಮೇಶ್ವರ ।
ತಥಾ ಮೋಚಯ ಮಾಂ ಶರ್ವ ಸಂಭವಾದ್ಯೋನಿಸಂಕಟಾತ್ ॥ ೧೦ ॥
ಕಿಂ ತಸ್ಯ ಬಹುಭಿರ್ಮಂತ್ರೈಃ ಕಂಠಶೋಷಣತತ್ಪರೈಃ ।
ಯೇನೋನ್ನಮಃಶಿವಾಯೇತಿ ಪ್ರೋಕ್ತಂ ದೇವಸ್ಯ ಸನ್ನಿಧೌ ॥ ೧೧ ॥

---

೬. ಪ್ರತಿಮಾಸದ ಶುಕ್ಲಪಕ್ಷದ ಅಷ್ಟಮಿಯಲ್ಲಾಗಲಿ, ಕೃಷ್ಣಪಕ್ಷದ ಚತುರ್ದಶಿಯ ದಿನದಲ್ಲಾಗಲಿ ಮಹೇಶ್ವರನ ಪೂಜೆಯನ್ನುಮಾಡಿ ಗೀತವಾದ್ಯಗಳಿಂದ ಆ ಸ್ವಾಮಿಯನ್ನು ಸಂತೋಷಗೊಳಿಸಬೇಕು.

೭. ಅಂಥವನು ಶಿವಲೋಕಕ್ಕೆ ಹೋಗುವನು. ಯಾರು ಮಹಾದೇವನಿಗೆ ಅಲಂಕಾರಗಳನ್ನುಮಾಡುವರೊ, ಅವರು ಪಂಚಭೂತಗಳೊಡನೆ ಮಹಾಪ್ರಳಯವಾಗುವವರೆಗೂ ಶಿವಲೋಕದಲ್ಲಿರುವರು.

೮. ಭರತಕುಲದೀಪಕನೆ! ಭಕ್ತಿಯಿಂದ ಆ ದೇವನಿಗೆ ಪ್ರದಕ್ಷಿಣೆಯನ್ನು ನಿತ್ಯವೂ ಮಾಡುತ್ತ ಮುಂದೆ ಹೇಳುವ ಮಂತ್ರದಿಂದ ಈ ರೀತಿ ವಿಜ್ಞಾಪಿಸಿಕೊಳ್ಳಬೇಕು.

೯. ಅದರಿಂದ ಆತನಿಗೆ ದೇವದೇವನಿಂದ ಯಾವ ಫಲವು ಲಭಿಸುವುದೆಂಬುದನ್ನು ಮನುಷ್ಯರು ಪರಂಪರೆಯಿಂದ ತಿಳಿದು ಹೇಳುತ್ತಿರುವರು. ಅದನ್ನು ಸಮಾಹಿತಚಿತ್ತನಾಗಿ ಕೇಳು.

೧೦. "ಮಹಾದೇವನೆ! ಪರಮೇಶ್ವರನೆ! ಶರ್ವನೆ! ನೀನು ಹೇಗೆ ಯೋನಿಜಾತನಾಗಿರುವೆಯೊ, ನಾನೂ ಹಾಗೆಯೇ ಆಗುವಂತೆ ಅನುಗ್ರಹಿಸು. ಯೋನಿಯಲ್ಲಿ ಹುಟ್ಟುವ ಸಂಕಟದಿಂದ ನನ್ನನ್ನುದ್ಧರಿಸು."

೧೧. ಆ ಮಹಾದೇವನ ಸನ್ನಿಧಿಯಲ್ಲಿ ಒಮ್ಮೆ "ಓಂ ನಮಶ್ಶಿವಾಯ" ಎಂದುಚ್ಚರಿಸಿದವನಿಗೆ ಗಂಟಲನ್ನೊಣಗಿಸಿಕೊಂಡು ಇತರ ಅನೇಕ ಮಂತ್ರಗಳನ್ನು ಜಪಿಸುವುದರಿಂದೇನು ?

ತೇನಾಽಧೀತಂ ಶ್ರುತಂ ತೇನ ತೇನ ಸರ್ವಮನುಷ್ಠಿತಂ ।
ಯೇನೋಂನ್ನಮಃಶಿವಾಯೇತಿ ಮಂತ್ರಾಭ್ಯಾಸಃ ಸ್ಥಿರೀಕೃತಃ ॥ ೧೨ ॥
ನ ತತ್ಫಲಮವಾಪ್ನೋತಿ ಸರ್ವದೇವೇಷು ವೈ ದ್ವಿಜಃ ।
ಯತ್ಫಲಂ ಸಮವಾಪ್ನೋತಿ ಷಡಕ್ಷರ ಉದೀರಣಾತ್ ॥ ೧೩ ॥
ತತ್ರ ತೀರ್ಥೇ ತು ಯಃ ಸ್ನಾತ್ವಾ ಪೂಜಯೇಚ್ಛಿವಯೋಗಿನಂ ।
ದ್ವಿಜಾನಾಮಯುತಂ ಸಾಗ್ರಂ ಸ ಲಭೇತ್ಫಲಮುತ್ತಮಂ ॥ ೧೪ ॥
ಅಥವಾ ಭಕ್ತಿಯುಕ್ತಸ್ತು ತೇಷಾಂ ದಾಂತೇ ಜಿತೇಂದ್ರಿಯೇ ।
ಸಂಸ್ಕೃತ್ಯ ದದತೇ ಭಿಕ್ಷಾಂ ಫಲಂ ತಸ್ಯ ತತೋಽಧಿಕಂ ॥ ೧೫ ॥
ಯತಿಹಸ್ತೇ ಜಲಂ ದದ್ಯಾದ್ಭಿಕ್ಷಾಂ ದತ್ವಾ ಪುನರ್ಜಲಂ ।
ಸಾ ಭಿಕ್ಷಾ ಮೇರುಣಾ ತುಲ್ಯಾ ತಜ್ಜಲಂ ಸಾಗರೋಪಮಂ ॥ ೧೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಅವಂತ್ಯಖಂಡೇ ತೃತೀಯೇ ರೇವಾಖಂಡೇ
"ಅಯೋನಿಜಪ್ರಭವತೀರ್ಥಮಾಹಾತ್ಮ್ಯವರ್ಣನಂ"ನಾಮ
ಷಡ್ತ್ರಿಂಶತ್ಯುತ್ತರಶತತಮೋಽಧ್ಯಾಯಃ

---

೧೨. ಯಾವನು ಈ "ಓಂ ನಮಶ್ಶಿವಾಯ" ಎಂಬ ಮಂತ್ರವನ್ನು ಸ್ಥಿರವಾಗಿ ಅಭ್ಯಾಸಮಾಡುತ್ತಿರುವನೊ, ಅವನು ಸಕಲವೇದಗಳನ್ನೂ ಓದಿದಂತೆಯೇ ಸರಿ. ಸಮಸ್ತ ಜ್ಞಾನವನ್ನೂ ಪಡೆದು ಕರ್ಮಗಳನ್ನನುಷ್ಠಿಸಿದಂತಾಗುವುದು.

೧೩. ಈ ಷಡಕ್ಷರಮಂತ್ರದ ಪುರಶ್ಚರಣೆಯಿಂದ ಲಭಿಸುವ ಫಲವನ್ನು ಬ್ರಾಹ್ಮಣನು ಸಮಸ್ತದೇವತೆಗಳ ಉಪಾಸನೆಯಿಂದಲೂ ಪಡೆಯಲಾರನು.

೧೪. ಆ ತೀರ್ಥದಲ್ಲಿ ಸ್ನಾನವನ್ನು ಮಾಡಿಕೊಂಡು ಒಬ್ಬ ಶಿವಯೋಗಿಯನ್ನು ಪೂಜಿಸಿದರೂ ಪೂರ್ತಿಯಾಗಿ ಹತ್ತುಸಾವಿರ ಬ್ರಾಹ್ಮಣರಿಗೆ ಪೂಜೆಯನ್ನು ಮಾಡಿದ ಫಲವು ಸಿಕ್ಕುವುದು.

೧೫. ಅಲ್ಲದೆ ಆವರಲ್ಲಿ ಭಕ್ತಿಯುಕ್ತನಾಗಿ ಸಂಯಮಿಯೂ, ಜಿತೇಂದ್ರಿಯನೂ ಆದ ಶಿವಯೋಗಿಗೆ ಪರಿಶುದ್ಧವಾದ ಮೃಷ್ಟಾನ್ನದ ಭಿಕ್ಷೆಯನ್ನು ನೀಡಲು ಅದಕ್ಕೂ ಹೆಚ್ಚಿನ ಫಲವು ಆತನಿಗೆ ಲಭಿಸುವುದು.

೧೬. ಸನ್ಯಾಸಿಗೆ ಮೊದಲು ಕೈಗಳಿಗೆ ನೀರನ್ನೆರೆದು, ಬಳಿಕ ಭಿಕ್ಷೆಯನ್ನು ನೀಡಿ, ಪುನಃ ಕೈಗಳಿಗೆ ನೀರನ್ನೆರೆಯಬೇಕು. ಆ ಭಿಕ್ಷೆಯು ಮೇರುವಿಗೆ ಸಮಾನವೂ, ಆ ಜಲವು ಸಪ್ತಸಮುದ್ರಗಳಿಗೆ ಸಮವೂ ಎನಿಸುವುದು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಅಯೋನಿಜಪ್ರಭವತೀರ್ಥಮಾಹಾತ್ಮ್ಯವರ್ಣನ"ವೆಂಬ
ನೂರಇಪ್ಪತ್ತಾರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಸಪ್ತವಿಂಶತ್ಯುತ್ತರಶತತಮೋಽಧ್ಯಾಯಃ

## ಅಗ್ನಿತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ:—

ತತೋ ಗಚ್ಛೇತ್ತು ರಾಜೇಂದ್ರ ಅಗ್ನಿತೀರ್ಥಮನುತ್ತಮಂ ।
ತತ್ರ ಸ್ನಾತ್ವಾ ತು ಶಕ್ರಾದೌ ಮುಚ್ಯತೇ ಸರ್ವಕಿಲ್ಬಿಷೈಃ ॥ ೧ ॥
ತತ್ರ ತೀರ್ಥೇ ತು ಯಃ ಕನ್ಯಾಂ ದದ್ಯಾತ್ಸ್ವಯಮಲಂಕೃತಾಂ ।
ತಸ್ಯ ಯತ್ಫಲಮುದ್ದಿಷ್ಟಂ ತಚ್ಛೃಣುಷ್ವ ನರೋತ್ತಮ ॥ ೨ ॥
ಅಗ್ನಿಷ್ಟೋಮಾಽತಿರಾತ್ರಾಭ್ಯಾಂ ಶತಂ ಶತಗುಣೀಕೃತಂ ।
ಪ್ರಾಪ್ನೋತಿ ಪುರುಷೋ ದತ್ವಾ ಯಥಾಶಕ್ತ್ಯಾ ಹ್ಯಲಂಕೃತಾಂ ॥ ೩ ॥
ತಸ್ಯಾಃ ಪುತ್ರಪ್ರಪೌತ್ರಾಣಾಂ ಯಾ ಭವೇದ್ರೋಮಸಂಗತಿಃ ।
ಸ ಯಾತಿ ತೇನ ಮಾನೇನ ಶಿವಲೋಕೇ ಪರಾಂ ಗತಿಂ ॥ ೪ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ಅಗ್ನಿತೀರ್ಥಮಾಹಾತ್ಮ್ಯವರ್ಣನಂ" ನಾಮ
ಸಪ್ತವಿಂಶತ್ಯುತ್ತರಶತತಮೋಽಧ್ಯಾಯಃ

---

## ಕನ್ನಡದ ಅನುವಾದ

### ಅಗ್ನಿತೀರ್ಥಮಾಹಾತ್ಮ್ಯವರ್ಣನ

೧. ಮಾರ್ಕಂಡೇಯನು ಹೇಳುತ್ತಾನೆ —ಬಳಿಕ ಅಗ್ನಿತೀರ್ಥವನ್ನು ಸೇರಬೇಕು ಪ್ರತಿಪಾಡ್ಯಮಿಯಲ್ಲಿಯೂ ಅದರಲ್ಲಿ ಸ್ನಾನವನ್ನು ಮಾಡಲು ಮನುಷ್ಯನು ಪಾಪಗಳನ್ನು ಕಳೆಯುವನು.

೨. ನರೋತ್ತಮನೆ! ಆ ತೀರ್ಥದ ಬಳಿಯಲ್ಲಿ ಯಾವನು ಅಲಂಕೃತಳಾದ ಕನ್ಯೆಯನ್ನು ದಾನಮಾಡುವನೊ, ಆತನಿಗೆ ಲಭಿಸುವ ಫಲವನ್ನು ಕೇಳು.

೩—೪. ಶಕ್ತ್ಯನುಸಾರವಾಗಿ ಅಲಂಕರಿಸಿದ ಕನ್ಯೆಯನ್ನು ದಾನಮಾಡಲು ಹತ್ತುಸಾವಿರ ಅಗ್ನಿಷ್ಟೋಮಗಳನ್ನೂ ಅಷ್ಟೇ ಅತಿರಾತ್ರಗಳನ್ನೂಮಾಡಿ ಪುಣ್ಯವನ್ನು ಪಡೆಯುವನು. ಆತನ ಮಕ್ಕಳು, ಮೊಮ್ಮಕ್ಕಳು, ಮುಮ್ಮಕ್ಕಳ ದೇಹಗಳಲ್ಲಿ ಎಷ್ಟು ರೋಮಗಳಿರುವುವೊ, ಅಷ್ಟು ವರ್ಷಗಳವರೆಗೂ ಆತನು ಶಿವಲೋಕದಲ್ಲಿ ಸುಖವಾಗಿರುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಅಗ್ನಿತೀರ್ಥಮಾಹಾತ್ಮ್ಯವರ್ಣನ" ವೆಂಬ
ನೂರಇಪ್ಪತ್ತೇಳನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥಾಷ್ಟವಿಂಶತ್ಯುತ್ತರಶತತಮೋಽಧ್ಯಾಯಃ

## ಭೃಕುಟೀಶ್ವರತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ತತೋ ಗಚ್ಛೇತ್ತು ರಾಜೇಂದ್ರ ಭೃಕುಟೇಶ್ವರಮುತ್ತಮಂ ।
ಯತ್ರ ಸಿದ್ಧೋ ಮಹಾಭಾಗೋ ಭೃಗುಃ ಪರಮಕೋಪನಃ ॥ ೧ ॥
ತೇನ ವರ್ಷಶತಂ ಸಾಗ್ರಂ ತಪಶ್ಚೀರ್ಣಂ ಪುರಾಽನಘ ।
ಪುತ್ರಾರ್ಥಂ ವರಯಾಮಾಸ ಪುತ್ರಂ ಪುತ್ರವತಾಂ ವರಃ ॥ ೨ ॥
ವರೋ ದತ್ತೋ ಮಹಾಭಾಗ ದೇವೇನಾಂಧಕಘಾತಿನಾ ॥ ೩ ॥
ತತ್ರ ತೀರ್ಥೇ ತು ಯಃ ಸ್ನಾತ್ವಾ ಪೂಜಯೇತ್ಪರಮೇಶ್ವರಂ ।
ಅಗ್ನಿಷ್ಟೋಮಸ್ಯ ಯಜ್ಞಸ್ಯ ಫಲಮಷ್ಟಗುಣಂ ಲಭೇತ್ ॥ ೪ ॥
ಭೃಕುಟೇಶಂ ತು ಯಃ ಕಶ್ಚಿದ್ಘೃತೇನ ಮಧುನಾ ಸಹ ।
ಪುತ್ರಾರ್ಥೀ ಸ್ನಾಪಯೇದ್ಭಕ್ತ್ಯಾ ಸ ಲಭೇತ್ಪುತ್ರಮೀಪ್ಸಿತಂ ॥ ೫ ॥

---

## ಕನ್ನಡದ ಅನುವಾದ

### ಭೃಕುಟೀಶ್ವರತೀರ್ಥಮಾಹಾತ್ಮ್ಯವರ್ಣನ

೧. ಮಾರ್ಕಂಡೇಯನು ಹೇಳುತ್ತಾನೆ:—ಮಹಾರಾಜನೆ! ಅಲ್ಲಿಂದ ಉತ್ತಮವಾದ ಭೃಕುಟೇಶ್ವರಲಿಂಗವನ್ನು ನೋಡಲು ಹೋಗಬೇಕು. ಅಲ್ಲಿಯೇ ಮಹಾಭಾಗ್ಯವಂತನೂ, ಅತ್ಯಂತ ಕೋಪಿಷ್ಠನೂ ಆದ ಭೃಗುಮುನಿಯು ಸಿದ್ಧಿಯನ್ನು ಪಡೆದನು.

೨. ಅಲ್ಲಿ ಹಿಂದೆ ಆತನು ಪೂರ್ಣಶತಮಾನದವರೆಗೂ ತಪಸ್ಸನ್ನಾಚರಿಸಿದನು. ತನಗೆ ಪುತ್ರನೊಬ್ಬನು ಬೇಕೆಂದು ಬೇಡಿ ಪುತ್ರವಂತರಲ್ಲಿ ಶ್ರೇಷ್ಠನೆನಿಸಿಕೊಂಡನು.

೩. ಮಹಾಭಾಗನೆ! ಅಂಧಕವೈರಿಯಾದ ಪರಮೇಶ್ವರನು ಆತನಿಗೆ ಬೇಕಾದ ವರವನ್ನೂ ಕೊಟ್ಟನು.

೪. ಆ ತೀರ್ಥದಲ್ಲಿ ಸ್ನಾನವನ್ನುಮಾಡಿ ಮಹೇಶ್ವರನ ಪೂಜೆಯನ್ನು ನೆರವೇರಿಸಿದವನು ಅಗ್ನಿಷ್ಟೋಮಯಜ್ಞದ ಪುಣ್ಯದ ಎಂಟರಷ್ಟು ಪುಣ್ಯವನ್ನು ಪಡೆಯುವನು.

೫. ಪುತ್ರಾಭಿಲಾಷೆಯಿಂದ ಯಾವನು ಭೃಕುಟೇಶನಿಗೆ ತುಪ್ಪದಿಂದಾಗಲಿ, ಜೇನುತುಪ್ಪದಿಂದಾಗಲಿ ಅಭಿಷೇಕವನ್ನು ಮಾಡುವನೊ ಅವನು ತನ್ನ ಭಕ್ತಿಯಿಂದ ಇಚ್ಛಿಸಿದ ಪುತ್ರನನ್ನು ಪಡೆಯುವನು.

ತತ್ರ ತೀರ್ಥೇ ತು ಯಃ ಸ್ನಾತ್ವಾ ದದ್ಯಾದ್ವಿಪ್ರಾಯ ಕಾಂಚನಂ ।
ಗೋದಾನಂ ವಾ ಮಹೀಂ ವಾಽಪಿ ತಸ್ಯ ಪುಣ್ಯಫಲಂ ಶೃಣು ॥ ೬ ॥
ಸಸಮುದ್ರಗುಹಾ ತೇನ ಸಶೈಲವನಕಾನನಾ ।
ದತ್ತಾ ಪೃಥ್ವೀ ನ ಸಂದೇಹಸ್ತೇನ ಸರ್ವಾ ನೃಪೋತ್ತಮ ॥ ೭ ॥
ತೇನ ದಾನೇನ ಸ ಸ್ವರ್ಗೇ ಕ್ರೀಡಯಿತ್ವಾ ಯಥಾಸುಖಂ ।
ಮರ್ತ್ಯೇ ಭವತಿ ರಾಜೇಂದ್ರೋ ಬ್ರಾಹ್ಮಣೋ ವಾ ಸುಪೂಜಿತಃ ॥ ೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ಭೃಕುಟೇಶ್ವರತೀರ್ಥಮಾಹಾತ್ಮ್ಯವರ್ಣನಂ"
ನಾಮಾಷ್ಟವಿಂಶತ್ಯುತ್ತರಶತತಮೋಽಧ್ಯಾಯಃ

---

೬. ಆ ತೀರ್ಥದಲ್ಲಿ ಸ್ನಾನವನ್ನುಮಾಡಿ ಬ್ರಾಹ್ಮಣೋತ್ತಮನಿಗೆ ಹಿರಣ್ಯವನ್ನಾಗಲಿ, ಗೋವನ್ನಾಗಲಿ, ಭೂಮಿಯನ್ನಾಗಲಿ ದಾನಮಾಡಿದವನ ಪುಣ್ಯಫಲವನ್ನು ಕೇಳು.

೭. ರಾಜೇಂದ್ರನೆ! ಸಮುದ್ರಗಳು, ಗುಹೆಗಳು, ಪರ್ವತಗಳು, ಉದ್ಯಾನವನಗಳು, ಅರಣ್ಯಗಳನ್ನೊಳಕೊಂಡ ಸಮಸ್ತ ಭೂಮಂಡಲವೂ ಆತನಿಂದ ಕೊಡಲ್ಪಟ್ಟಿತೆಂಬುದರಲ್ಲಿ ಸಂಶಯವಿಲ್ಲ.

೮. ಆ ದಾನದ ಫಲವಾಗಿ ಆತನು ಸ್ವರ್ಗಲೋಕದಲ್ಲಿ ಯಥೇಚ್ಛವಾಗಿ ಸುಖಗಳನ್ನನುಭವಿಸಿ, ಭೂಮಿಯಲ್ಲಿ ಚಕ್ರವರ್ತಿಯಾಗಿಯೊ, ಲೋಕಪೂಜ್ಯನಾದ ಬ್ರಾಹ್ಮಣೋತ್ತಮನಾಗಿಯೊ, ಜನಿಸುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಭೃಕುಟೇಶ್ವರತೀರ್ಥಮಾಹಾತ್ಮ್ಯವರ್ಣನ"ವೆಂಬ
ನೂರಇಪ್ಪತ್ತೆಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥೈಕೋನತ್ರಿಂಶದಧಿಕಶತತಮೋಽಧ್ಯಾಯಃ

### ಬ್ರಹ್ಮತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ತತೋ ಗಚ್ಛೇನ್ಮಹೀಪಾಲ ಬ್ರಹ್ಮ ತೀರ್ಥಮನುತ್ತಮಂ ।
ಅನ್ಯೇಷಾಂ ಚೈವ ತೀರ್ಥಾನಾಂ ಪರಾತ್ಪರತರಂ ಮಹತ್ ॥ ೧ ॥
ತತ್ರ ತೀರ್ಥೇ ಸುರಶ್ರೇಷ್ಠೋ ಬ್ರಹ್ಮಾ ಲೋಕಪಿತಾಮಹಃ ।
ಚತುರ್ಣಾಮಪಿ ವರ್ಣಾನಾಂ ನರ್ಮದಾತಟಮಾಶ್ರಿತಃ ॥ ೨ ॥
ವಾಚಿಕಂ ಮಾನಸಂ ಪಾಪಂ ಕರ್ಮಜಂ ಯತ್ಪುರಾಕೃತಂ ।
ತತ್ಕ್ಷಾಲಯತಿ ದೇವೇಶೋ ದರ್ಶನಾದೇವ ಪಾತಕಂ ॥ ೩ ॥
ಶ್ರುತಿಸ್ಮೃತ್ಯುದಿತಾನ್ಯೇವ ತತ್ರ ಸ್ನಾತ್ವಾ ದ್ವಿಜರ್ಷಭಾಃ ।
ಪ್ರಾಯಶ್ಚಿತ್ತಾನಿ ಕುರ್ವಂತಿ ತೇಷಾಂ ವಾಸಸ್ತ್ರಿವಿಷ್ಟಪೇ ॥ ೪ ॥
ಯೇ ಪುನಃ ಶಾಸ್ತ್ರಮುತ್ಸೃಜ್ಯ ಕಾಮಲೋಭಪ್ರಪೀಡಿತಾಃ ।
ಪ್ರಾಯಶ್ಚಿತ್ತಂ ವದಿಷ್ಯಂತಿ ತೇ ವೈ ನಿರಯಗಾಮಿನಃ ॥ ೫ ॥

---

### ಕನ್ನಡದ ಅನುವಾದ

### ಬ್ರಹ್ಮತೀರ್ಥಮಾಹಾತ್ಮ್ಯವರ್ಣನ

೧. ಮಾರ್ಕಂಡೇಯನು ಹೇಳುತ್ತಾನೆ —ಮಹೀಪಾಲಕನೆ! ಬಳಿಕ ಬ್ರಹ್ಮತೀರ್ಥವನ್ನು ಸೇವಿಸಬೇಕು ಇತರ ಸಕಲತೀರ್ಥಗಳಿಗಿಂತಲೂ ಇದು ಸರ್ವೋತ್ತಮವೂ ಮಹಾಮಹಿಮಾನ್ವಿತವೂ ಆಗಿರುವುದು.

೨. ನರ್ಮದೆಯ ತೀರದ ಆ ತೀರ್ಥದಲ್ಲಿಯೇ ಲೋಕಪಿತಾಮಹನೂ, ನಾಲ್ಕುವರ್ಣಗಳವರಿಗೆ ಜನಕನೂ, ಸುರೋತ್ತಮನೂ ಆದ ಬ್ರಹ್ಮದೇವನು ನೆಲಸಿದ್ದನು.

೩. ಅಲ್ಲಿರುವ ಮಹಾದೇವನು ದರ್ಶನಮಾಡಿದವರ ವಾಚಿಕ, ಮಾನಸ, ಕಾಯಿಕಗಳೆಂಬ ಹಿಂದಿನ ಸಮಸ್ತಪಾತಕಗಳನ್ನೂ ನಿಮಿಷಮಾತ್ರದಲ್ಲಿ ತೊಡೆದು ಹಾಕುವನು.

೪. ಯಾವ ಬ್ರಾಹ್ಮಣೋತ್ತಮರು ವೇದಶಾಸ್ತ್ರಗಳಲ್ಲಿ ಹೇಳಿರುವ ಪ್ರಾಯಶ್ಚಿತ್ತಗಳನ್ನು ಅಲ್ಲಿ ಸ್ನಾನಪೂರ್ವಕವಾಗಿ ಆಚರಿಸುವರೊ, ಅವರಿಗೆ ಸ್ವರ್ಗವಾಸವು ನಿಶ್ಚಯವು.

೫. ಯಾರು ಶಾಸ್ತ್ರಗಳನ್ನು ತ್ಯಜಿಸಿ ಕಾಮಲೋಭಗಳಿಂದ ಅಭಿಭೂತರಾಗಿ ಮನಸ್ಸಿಗೆ ಬಂದ ಪ್ರಾಯಶ್ಚಿತ್ತಗಳನ್ನು ಹೇಳುವರೊ, ಅವರೇ ನರಕಕ್ಕೆ ಹೋಗುವವರು.

ಸ್ನಾತ್ವಾಽಽದೌ ಪಾತಕೀ ಬ್ರಹ್ಮನ್ನತ್ವಾ ತು ಕೀರ್ತಯೇದಘಂ ।
ತಸ್ಯ ತನ್ನಶ್ಯತೇ ಕ್ಷಿಪ್ರಂ ತಮಃ ಸೂರ್ಯೋದಯೇ ಯಥಾ ॥ ೬ ॥
ತತ್ರ ತೀರ್ಥೇ ತು ಯಃ ಸ್ನಾತ್ವಾ ಪೂಜಯೇತ್ಪಿತೃದೇವತಾಃ ।
ಅಗ್ನಿಷ್ಟೋಮಸ್ಯ ಯಜ್ಞಸ್ಯ ಸ ಲಭೇತ್ಫಲಮುತ್ತಮಂ ॥ ೭ ॥
ತತ್ರ ತೀರ್ಥೇ ತು ಯದ್ದಾನಂ ಬ್ರಹ್ಮೋದ್ದಿಶ್ಯ ಪ್ರಯಚ್ಛತಿ ।
ತದಕ್ಷಯಫಲಂ ಸರ್ವಮಿತ್ಯೇವಂ ಶಂಕರೋಽಬ್ರವೀತ್ ॥ ೮ ॥
ಗಾಯತ್ರೀ ಸಾರಮಾತ್ರೋಽಪಿ ತತ್ರ ಯಃ ಕ್ರಿಯತೇ ಜಪಃ ।
ಋಗ್ಯಜುಃಸಾಮಸಹಿತಃ ಸಭವೇನ್ನಾಽತ್ರ ಸಂಶಯಃ ॥ ೯ ॥
ತತ್ರ ತೀರ್ಥೇ ತು ಯೋ ಭಕ್ತ್ಯಾ ತ್ಯಜೇದ್ದೇಹಂ ಸುದುಸ್ತ್ಯಜಂ ।
ಅನಿವರ್ತಿಕಾ ಗತಿಸ್ತಸ್ಯ ಬ್ರಹ್ಮಲೋಕಾನ್ನ ಸಂಶಯಃ ॥ ೧೦ ॥
ಯಾವದಸ್ಥೀನಿ ತಿಷ್ಠಂತಿ ಬ್ರಹ್ಮತೀರ್ಥೇ ಚ ದೇಹಿನಾಂ ।
ತಾವದ್ವರ್ಷಸಹಸ್ರಾಣಿ ದೇವಲೋಕೇ ಮಹೀಯತೇ ॥ ೧೧ ॥
ಅವತೀರ್ಣಸ್ತತೋ ಲೋಕೇ ಬ್ರಹ್ಮಜ್ಞೋ ಜಾಯತೇ ಕುಲೇ ।
ಉತ್ತಮಃ ಸರ್ವವರ್ಣಾನಾಂ ದೇವಾನಾಮಿವ ದೇವತಾ ॥ ೧೨ ॥

---

೬. ಪಾತಕವನ್ನುಮಾಡಿದವನು ಆ ತೀರ್ಥದಲ್ಲಿ ಮೊದಲು ಸ್ನಾನಮಾಡಿ ತನ್ನ ಪಾಪವನ್ನು ಗಟ್ಟಿಯಾಗಿ ಹೇಳಬೇಕು. ಒಡನೆಯೇ ಸೂರ್ಯನು ಹುಟ್ಟಿದ ಕೂಡಲೆ ಕತ್ತಲೆಯು ನಾಶವಾಗುವಂತೆ ಅವನ ಪಾಪವು ನಾಶವಾಗುವುದು.

೭. ಅಲ್ಲಿ ಸ್ನಾನವನ್ನುಮಾಡಿ ಪಿತೃದೇವತೆಗಳಿಗೆ ಯಾವನು ಪೂಜೆಯನ್ನು ಅರ್ಪಿಸುವನೊ, ಅವನು ಅಗ್ನಿಷ್ಟೋಮಯಜ್ಞವನ್ನುಮಾಡಿದ ಉತ್ತಮ ಫಲವನ್ನು ಪಡೆಯುವನು.

೮. ಆ ತೀರ್ಥದಲ್ಲಿ ಬ್ರಹ್ಮಾರ್ಪಣಬುದ್ಧಿಯಿಂದ ಮಾಡಿದ ಯಾವದಾನವಾದರೂ ಅಕ್ಷಯಫಲದಾಯಕವಾಗುವುದೆಂದು ಶಂಕರನೇ ಹೇಳಿರುವನು.

೯. ಗಾಯತ್ರಿಯ ಸಾರವಾದ ಕೇವಲ ಪ್ರಣವದ ಜಪವನ್ನೇಮಾಡಿದರೂ ಅಲ್ಲಿ ಅದೇ ಋಗ್ವೇದ, ಯಜುರ್ವೇದ, ಸಾಮವೇದಗಳನ್ನೆಲ್ಲ ಪಾರಮಾಡಿದಂತಾಗುವುದರಲ್ಲಿ ಸಂಶಯವಿಲ್ಲ.

೧೦. ಆ ತೀರ್ಥದಲ್ಲಿ ಯಾವನು ಭಕ್ತಿಯಿಂದ ಬಿಡಲಾಗದ ಈ ದೇಹವನ್ನು ತ್ಯಜಿಸುವನೊ, ಅವನಿಗೆ ಬ್ರಹ್ಮಲೋಕದಿಂದ ಪುನರಾವೃತ್ತಿಯಿಲ್ಲವೆಂಬುದು ನಿಶ್ಚಯವು.

೧೧. ಈ ಬ್ರಹ್ಮತೀರ್ಥದಲ್ಲಿ ಮಾನವನ ಅಸ್ಥಿಗಳು ಎಷ್ಟು ಕಾಲವಿರುವುವೊ, ಅಷ್ಟು ಸಾವಿರ ವರ್ಷಗಳವರೆಗೂ ಅವನು ದೇವಲೋಕದಲ್ಲಿ ಪೂಜಿತನಾಗಿರುವನು.

೧೨. ಅಲ್ಲಿಂದ ಭೂಲೋಕಕ್ಕೆ ಇಳಿದು ಬಂದರೆ ಉತ್ತಮ ಕುಲದಲ್ಲಿ ಬ್ರಹ್ಮ

ವಿದ್ಯಾಸ್ಥಾನಾನಿ ಸರ್ವಾಣಿ ವೇತ್ತಿ ವೇದಾಂಗಪಾರಗಃ ।
ಜಾಯತೇ ಪೂಜಿತೋ ಲೋಕೇ ರಾಜಭಿಃ ಸ ನ ಸಂಶಯಃ ॥ ೧೩ ॥
ಪುತ್ರಪೌತ್ರಸಮೋಪೇತಃ ಸರ್ವವ್ಯಾಧಿವಿವರ್ಜಿತಃ ।
ಜೀವೇದ್ವರ್ಷಶತಂ ಸಾಗ್ರಂ ಬ್ರಹ್ಮತೀರ್ಥಪ್ರಭಾವತಃ ॥ ೧೪ ॥
ಏತತ್ಪುಣ್ಯಂ ಪಾಪಹರಂ ತೀರ್ಥಂ ಜ್ಞಾನವತಾಂ ವರಂ ।
ಯೇ ಪಶ್ಯಂತಿ ಮಹಾತ್ಮಾನೋ ಹ್ಯಮೃತತ್ವಂ ಪ್ರಯಾಂತಿ ತೇ ॥ ೧೫ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ಬ್ರಹ್ಮತೀರ್ಥಮಾಹಾತ್ಮ್ಯವರ್ಣನಂ"
ನಾಮೈಕೋನತ್ರಿಂಶದಧಿಕಶತತಮೋಽಧ್ಯಾಯಃ

---

ಜ್ಞಾನಿಯಾಗಿ ಜನಿಸುವನು. ದೇವತೆಗಳಲ್ಲಿ ಇಂದ್ರನಂತೆ ಸರ್ವವರ್ಣಗಳಲ್ಲಿ ಉತ್ತಮನೆನಿಸುವನು.

೧೩. ವಿದ್ಯೆಯ ರಹಸ್ಯಗಳೆಲ್ಲವನ್ನೂ ತಿಳಿದು ವೇದಾಂಗಗಳಲ್ಲಿ ಪಾರಂಗತನಾಗಿರುವನು. ರಾಜರಿಂದಲೂ ಲೋಕದಲ್ಲಿ ಪೂಜಿತನಾಗುವನೆಂಬುದರಲ್ಲಿ ಸಂದೇಹವಿಲ್ಲ.

೧೪. ಬ್ರಹ್ಮತೀರ್ಥದ ಸೇವೆಯ ಪ್ರಭಾವದಿಂದ ಪುತ್ರಪೌತ್ರಾದಿಗಳಿಂದೊಡಗೂಡಿ, ಯಾವ ವ್ಯಾಧಿಗಳನ್ನೂ ಅನುಭವಿಸದೆ ನೂರು ವರ್ಷಗಳ ಪೂರ್ಣಾಯುಷ್ಯವುಳ್ಳವನಾಗುವನು.

೧೫. ಈ ತೀರ್ಥವು ಪುಣ್ಯಪ್ರದವೂ, ಪಾಪಪರಿಹಾರಕವೂ, ಜ್ಞಾನಸಾಧನಗಳಲ್ಲಿ ಸರ್ವೋತ್ತಮವೂ ಆಗಿರುವುದು. ಯಾವ ಮಹಾತ್ಮರು ಇದನ್ನು ನೋಡುವರೊ, ಅವರೂ ಮರಣವಿಲ್ಲದವರಾಗುವರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಬ್ರಹ್ಮತೀರ್ಥಮಾಹಾತ್ಮ್ಯವರ್ಣನ"ವೆಂಬ
ನೂರಇಪ್ಪತ್ತೊಂಬತ್ತನೆಯ ಅಧ್ಯಾಯ ಮುಗಿದುದು

॥ ಶ್ರೀಃ ॥

# ಅಥ ತ್ರಿಂಶದಧಿಕಶತತಮೋಽಧ್ಯಾಯಃ

## ದೇವತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ನರ್ಮದಾದಕ್ಷಿಣೇ ಕೂಲೇ ದೇವತೀರ್ಥಮನುತ್ತಮಂ ।
ತತ್ರ ದೇವೈಃ ಸಮಾಗತ್ಯ ತೋಷಿತಃ ಪರಮೇಶ್ವರಃ ॥ ೧ ॥
ತತ್ರ ತೀರ್ಥೇ ತು ಯಃ ಸ್ನಾತ್ವಾ ಕಾಮಕ್ರೋಧವಿವರ್ಜಿತಃ ।
ಸ ಲಭೇನ್ನಾಽತ್ರ ಸಂದೇಹೋ ಗೋಸಹಸ್ರಫಲಂ ಧ್ರುವಂ ॥ ೨ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ದೇವತೀರ್ಥಮಾಹಾತ್ಮ್ಯವರ್ಣನಂ" ನಾಮ
ತ್ರಿಂಶದಧಿಕಶತತಮೋಽಧ್ಯಾಯಃ

---

## ಕನ್ನಡದ ಅನುವಾದ

### ದೇವತೀರ್ಥಮಾಹಾತ್ಮ್ಯವರ್ಣನ

೧. ಮಾರ್ಕಂಡೇಯನು ಹೇಳುತ್ತಾನೆ.—ನರ್ಮದೆಯ ದಕ್ಷಿಣತೀರದಲ್ಲಿ ದೇವತೀರ್ಥವೆಂಬುದಿರುವುದು. ಹಿಂದೆ ದೇವತೆಗಳೆಲ್ಲರೂ ಅಲ್ಲಿಗೆ ಬಂದು ಪರಮೇಶ್ವರನನ್ನು ಸೇವಿಸಿ ತೃಪ್ತಿಗೊಳಿಸಿದರು.

೨. ಕಾಮಕ್ರೋಧಗಳನ್ನು ದೂರಮಾಡಿ ಆ ತೀರ್ಥದಲ್ಲಿ ಸ್ನಾನವನ್ನಾಚರಿಸಿದವನು ಒಂದು ಸಾವಿರ ಗೋದಾನಗಳನ್ನುಮಾಡಿದ ಫಲವನ್ನು ಪಡೆಯುವುದು ನಿಶ್ಚಯವು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ದೇವತೀರ್ಥಮಾಹಾತ್ಮ್ಯವರ್ಣನ" ಎಂಬ
ನೂರಮೂವತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥೈಕತ್ರಿಂಶದಧಿಕಶತತಮೋಽಧ್ಯಾಯಃ

## ನಾಗೇಶ್ವರತೀರ್ಥಮಾಹಾತ್ಮ್ಯವರ್ಣನಂ

**ಶ್ರೀಮಾರ್ಕಂಡೇಯ ಉವಾಚ :—**

**ನರ್ಮದಾದಕ್ಷಿಣೇ ಕೂಲೇ ನಾಗತೀರ್ಥಮನುತ್ತಮಂ ।**
**ಯತ್ರಸಿದ್ಧಾ ಮಹಾನಾಗಾ ಭಯೇ ಜಾತೇ ತತೋ ನೃಪ ॥ ೧ ॥**

**ಯುಧಿಷ್ಠಿರ ಉವಾಚ :—**

**ಮಹಾಭಯಾನಾಂ ಲೋಕಸ್ಯ ನಾಗಾನಾಂ ದ್ವಿಜಸತ್ತಮ ।**
**ಕಥಂ ಜಾತಂ ಭಯಂ ತೀವ್ರಂ ಯೇನ ತೇ ತಪಸಿ ಸ್ಥಿತಾಃ ॥ ೨ ॥**
**ಭೂತಂ ಭವ್ಯಂ ಭವಿಷ್ಯಚ್ಚ ಯತ್ಸುರಾಸುರಮಾನನೇ ।**
**ತಾತ ತೇ ವಿದಿತಂ ಸರ್ವಂ ತೇನ ಮೇ ಕೌತುಕಂ ಮಹತ್ ॥ ೩ ॥**
**ಮಮ ಸಂತಾಪಜಂ ದುಃಖಂ ದುರ್ಯೋಧನಸಮುದ್ಭವಂ ।**
**ತವ ವಕ್ತ್ರಾಂಬುಜೌಘೇನ ಪ್ಲಾವಿತಂ ನಿರ್ವೃತಿಂ ಗತಂ ॥ ೪ ॥**

---

## ಕನ್ನಡದ ಅನುವಾದ

### ನಾಗೇಶ್ವರತೀರ್ಥಮಾಹಾತ್ಮ್ಯವರ್ಣನ

೧. ಮಾರ್ಕಂಡೇಯನು ಹೇಳುತ್ತಾನೆ.—ಮಹಾರಾಜನೆ! ನರ್ಮದಾ ನದಿಯ ದಕ್ಷಿಣತೀರದಲ್ಲಿ ನಾಗತೀರ್ಥವೆಂಬುದಿರುವುದು. ಅಲ್ಲಿ ಹಿಂದೆ ನಾಗರು ಭಯವನ್ನುಳಿದು ಅಭೀಷ್ಟಸಿದ್ಧಿಯನ್ನು ಪಡೆದರು.

೨. ಯುಧಿಷ್ಠಿರನು ಹೇಳುತ್ತಾನೆ.—ಬ್ರಾಹ್ಮಣೋತ್ತಮನೆ! ನಾಗರಿಂದಲೇ ಲೋಕಕ್ಕೆ ಮಹಾಭಯಗಳುಂಟಾಗಿರುವುವು. ಇಂತಹ ನಾಗರೂ ಅಲ್ಲಿಗೆ ಹೋಗಿ ತಪಸ್ಸನ್ನಾಚರಿಸಲು ಅವರಿಗೊದಗಿದ ಮಹಾಭಯವಾದರೂ ಏನು? ಹೇಗೆ ಉಂಟಾಯಿತು?

೩. ದೇವತೆಗಳ, ರಾಕ್ಷಸರ, ಮನುಷ್ಯರ ಲೋಕಗಳಲ್ಲಿ ಹಿಂದಿನ, ಈಗಿನ ಮುಂದಿನ ಸಕಲ ವಿಷಯಗಳೂ ನಿನಗೆ ತಿಳಿದಿರುವುದರಿಂದ ನನಗೆ ಬಹಳ ಕುತೂಹಲವಾಗಿರುವುದು.

೪. ದುರ್ಯೋಧನನ ಮೂಲಕ ನನಗೆ ಉಂಟಾದ ದುಃಖದ ಬಗೆಯೆಲ್ಲವೂ ನಿನ್ನ ಮುಖದಿಂದ ಬರುವ ಮಾತುಗಳೆಂಬ ಜಲದಲ್ಲಿ ಕೊನೆಗಂಡು ಶಾಂತವಾಯಿತು.

ಶ್ರುತ್ವಾ ತವ ಮುಖೋದ್ಗೀತಾಂ ಕಥಾಂ ಪಾಪಪ್ರಣಾಶನೀಂ ।
ಭೂಯೋ ಭೂಯಃ ಸ್ಪೃತಿರ್ಜಾತಾ ಶ್ರವಣೇ ಮಮ ಸುವ್ರತ ॥ ೫ ॥
ನ ಕ್ಲೇಶತ್ವಂ ದ್ವಿಜೇ ಯುಕ್ತಂ ನ ಚಾಽನ್ಯೋ ಜಾನತೇ ಫಲಂ ।
ವಿದ್ಯಾದಾನಸ್ಯ ಮಹತಃ ಶ್ರಾವಿತಸ್ಯ ಸುತಸ್ಯ ಚ ॥ ೬ ॥
ಏವಂ ಜ್ಞಾತ್ವಾ ಯಥಾನ್ಯಾಯಂ ಯಃ ಪ್ರಶ್ನಃ ಪೃಚ್ಛಿತೋ ಮಯಾ ।
ಕಥಾ ತು ಕಥ್ಯತಾಂ ವಿಪ್ರ ದಯಾಂ ಕೃತ್ವಾ ಮಮೋಪರಿ ॥ ೭ ॥

ಮಾರ್ಕಂಡೇಯ ಉವಾಚ:—

ಯಥಾ ಯಥಾ ತ್ವಂ ನೃಪ ಭಾಷಸೇ ಚ
ತಥಾ ತಥಾ ಮೇ ಸುಖಮೇತಿ ಭಾರತೀ ।
ಶೈಥಿಲ್ಯಭಾವಾಜ್ಜರಯಾನ್ವಿತಸ್ಯ
ತ್ವತ್ಸೌಹೃದಂ ನಶ್ಯತಿ ನೈವ ತಾತ ॥ ೮ ॥

ಕಥಯಾಮಿ ಯಥಾವೃತ್ತಮಿತಿಹಾಸಂ ಪುರಾತನಂ ।
ಕಥಿತಂ ಪೂರ್ವತೋ ವೃದ್ಧೈಃ ಪಾರಂಪರ್ಯೇಣ ಭಾರತ ॥ ೯ ॥
ದ್ವೇ ಭಾರ್ಯೇ ಕಶ್ಯಪಸ್ಯಾಸ್ತಾಂ ಸರ್ವಲೋಕೇಷ್ವನುತ್ತಮೇ ।
ಗರುತ್ಮತೋ ವೈ ವಿನತಾ ಸರ್ಪಾಣಾಂ ಕದ್ರುರೇವ ಚ ॥ ೧೦ ॥

---

೫. ಸಮಸ್ತಪಾಪನಾಶಕವಾದ ಈ ಕಥೆಯನ್ನು ನಿನ್ನ ಮುಖದಿಂದ ಕೇಳಿ ಮತ್ತೂ ಕೇಳಬೇಕೆಂಬ ಕುತೂಹಲವೇ ನನ್ನಲ್ಲಿ ಮೂಡುತ್ತಿರುವುದು.

೬. ಬ್ರಾಹ್ಮಣನಿಗೆ ಕಷ್ಟವನ್ನು ಕೊಡುವುದು ಯುಕ್ತವಲ್ಲ. ಆದರೂ ಮಹತ್ತರವಾದ ವಿದ್ಯೆಯ ದಾನಕ್ಕೂ, ಮಗನಿಗೆ ಮಾಡಿಸಿದ ಅಧ್ಯಯನಕ್ಕೂ ಲಭಿಸುವ ಫಲವು ಆತನಿಗಲ್ಲದೆ ಬೇರೊಬ್ಬನಿಗೆ ತಿಳಿಯದು.

೭. ವಿಪ್ರನೆ! ಇದನ್ನು ತಿಳಿದು ನೀನು ವಿವೇಚನೆಯಿಂದ ನನ್ನ ಮೇಲೆ ದಯೆಯನ್ನಿಟ್ಟು ನಾನು ಕೇಳಿದ ಪ್ರಶ್ನೆಗೆ ಸಂಬಂಧಿಸಿದ ಕಥೆಯನ್ನು ಹೇಳುವವನಾಗು

೮. ಮಾರ್ಕಂಡೇಯನು ಹೇಳುತ್ತಾನ —ಮಹಾರಾಜನೆ! ನೀನು ಹೇಗೆ ಹೇಗೆ ಮಾತನಾಡುತ್ತಿರುವೆಯೊ, ಹಾಗೆಲ್ಲ ನನ್ನ ಮಾತುಗಳೂ ಅನಾಯಾಸವಾಗಿ ಹೊರಡುತ್ತಿರುವುವು. ಮುದುಕನಾಗಿ ಜರ್ಝರಿತ ಶರೀರನಾದ ನನ್ನಲ್ಲಿ ನಿನ್ನ ಸ್ನೇಹವು ಕೊನೆಗಾಣದಿರುವುದು

೯. ಭರತಕುಲೋತ್ಪನ್ನನೆ! ಪೂರ್ವದಿಂದ ವೃದ್ಧರು ಪರಂಪರೆಯಾಗಿ ಹೇಳಿಕೊಂಡು ಬಂದಿರುವ ಪ್ರಾಚೀನಕಾಲದ ಇತಿಹಾಸವೊಂದನ್ನು ನಿನಗೆ ವಿಸ್ತರಿಸುವೆನು.

೧೦. ಕಶ್ಯಪ ಪ್ರಜೇಶ್ವರನಿಗೆ ಸಮಸ್ತಲೋಕಗಳಲ್ಲಿ ಸುಂದರಿಯರೆನಿಸಿದ

ಅಶ್ವಸಂದರ್ಶನಾತ್ತಾಭ್ಯಾಂ ಕಲಿರುಗ್ರಂ ವ್ಯವಸ್ಥಿತಂ ।
ಪ್ರಭಾತಕಾಲೇ ರಾಜೇಂದ್ರ ಭಾಸ್ಕರಾಕಾರವರ್ಚಸಂ ॥ ೧೧ ॥
ತಂ ದೃಷ್ಟ್ವಾ ವಿನತಾ ರೂಪಮುಶ್ವಂ ಸರ್ವತ್ರಪಾಂಡುರಂ ।
ಅಥ ತಾಂ ಕದ್ರೂಮುವ್ರೋಚತತ್ರಾ ಪಶ್ಯಪಶ್ಯ ವರಾನನೇ ॥ ೧೨ ॥
ಉಚ್ಚೈಃಶ್ರವಸಃ ಸಾದೃಶ್ಯಂ ಪಶ್ಯ ಸರ್ವತ್ರಪಾಂಡುರಂ ।
ಧಾವಮಾನಮವಿಶ್ರಾಂತಂ ಜವೇನ ಪವನೋಪಮಂ ॥ ೧೩ ॥
ತಂ ದೃಷ್ಟ್ವಾ ಸಹಸಾಯಾಂತಮಿಾರ್ಷ್ಯಾಭಾವೇನ ಮೋಹಿತಾ ।
ಕೃಷ್ಣಂ ಮತ್ವಾ ತಥಾಽಜಲ್ಪತ್ತಯಾ ಸಹ ನೃಪೋತ್ತಮ ॥ ೧೪ ॥
ವಿನತೇ ತ್ವಂ ಮೃಷಾ ಲೋಕೇ ನೃಶಂಸೇ ಕುಲಪಾಂಸನಿ ।
ಕೃಷ್ಣಂ ಚೈನಂ ವದ ಶ್ವೇತಂ ನರಕಂ ಯಾಸ್ಯಸೇ ಪರಂ ॥ ೧೫ ॥

ವಿನತೋವಾಚ :—

ಸತ್ಯಾಽನೃತೇ ತು ವಚನೇ ಪಣೋಽಯಂ ತೇ ಮಮೈವ ತು ।
ಸಹಸ್ರಂ ವತ್ಸರಾನ್ದಾಸೀ ಭವೇಯಂ ತವ ವೇಶ್ಮನಿ ॥ ೧೬ ॥

---

ಇಬ್ಬರು ಹೆಂಡತಿಯರಿದ್ದರು. ಒಬ್ಬಳು ಗರುಡನ ತಾಯಿಯಾದ ವಿನತೆಯು, ಮತ್ತೊಬ್ಬಳು ನಾಗಮಾತೆಯಾದ ಕದ್ರುವು.

೧೧. ಮಹಾರಾಜನೆ! ಸೂರ್ಯೋದಯಸಮಯದಲ್ಲಿ ಆತನಿಗೆ ಸಮನಾದ ತೇಜಸ್ಸಿನಿಂದ ಆಕಾಶದಲ್ಲಿ ಹಾರಾಡುತ್ತಿದ್ದ ಒಂದು ಕುದುರೆಯನ್ನು ನೋಡಿದ ವಿಷಯವಾಗಿ ಅವರಲ್ಲಿ ದೊಡ್ಡ ಕಲಹವುಂಟಾಯಿತು.

೧೨. ಮೈಯೆಲ್ಲವೂ ಬಿಳಿಯದಾಗಿದ್ದ ಆ ಅಶ್ವವನ್ನು ಕಂಡು ವಿನತೆಯು ಕದ್ರೂದೇವಿಗೆ ಹೇಳಿದಳು. "ಎಲೌ ಸುಂದರಮುಖಿಯೆ! ಅಲ್ಲಿ ನೋಡು.

೧೩. ಮೈಯೆಲ್ಲವೂ ಬಿಳಿಯದಾಗಿ ಉಚ್ಚೈಶ್ರವಸ್ಸಿಗೆ ಸಮಾನವಾಗಿರುವ ಆ ಕುದುರೆಯು ವಿಶ್ರಾಂತಿಯೇ ಇಲ್ಲದೆ ವಾಯುವೇಗದಿಂದ ಓಡುತ್ತಿರುವುದು."

೧೪. ನೃಪೋತ್ತಮನೆ! ಆಕೆಯೂ ಅದನ್ನು ಕಂಡು ತಕ್ಷಣವೇ ಅಸೂಯೆಯ ಭಾವವನ್ನು ತಾಳಿ ಅಜ್ಞಾನದಿಂದ ಕುದುರೆಯು ಕಪ್ಪೆಂದು ತಿಳಿದು ವಿನತೆಗೆ ಹಾಗೆಯೇ ಹೇಳಿದಳು.

೧೫. "ವಿನತೆಯೆ! ನೀನು ನೃಶಂಸೆಯು, ಕುಲಕಳಂಕಳು, ಸುಳ್ಳನ್ನಾಡುತ್ತಿರುವೆ. ಕಪ್ಪಗಿರುವ ಆ ಕುದುರೆಯನ್ನು ಬಿಳಿಯದೆಂದು ಹೇಳುವ ನೀನು ಮಹಾನರಕಕ್ಕೆ ಹೋಗುವೆ."

೧೬. ವಿನತೆಯು ಹೇಳುತ್ತಾಳೆ:—ನಮ್ಮ ಮಾತುಗಳಲ್ಲಿ ಯಾವುದು ಸತ್ಯ, ಯಾವುದು ಸುಳ್ಳೆಂಬ ವಿಷಯದಲ್ಲಿ ನಾನು ನಿನಗೆ ಪಣವನ್ನು ತೊಡುತ್ತೇನೆ. ನನ್ನ ಮಾತು ಸುಳ್ಳಾದರೆ ನಿನ್ನ ಮನೆಯಲ್ಲಿ ಒಂದು ಸಾವಿರ ವರ್ಷಗಳ ವರೆಗೂ ದಾಸಿಯಾಗಿರುತ್ತೇನೆ.

ತಥೇತಿ ತೇ ಪ್ರತಿಜ್ಞಾಯ ರಾತ್ರೌ ಗತ್ವಾ ಸ್ವಕಂ ಗೃಹಂ ।
ಪರಿತ್ಯಜ್ಯ ಉಭೇ ತೇ ತು ಕ್ರೋಧಮೂರ್ಛಿತಮೂರ್ಛಿತೇ ॥ ೧೭ ॥
ಬಂಧುವರ್ಗಸ್ಯ ಗತ್ವಾ ತು ಕಥಯಾಮಾಸ ತಂ ಪಣಂ ।
ಕದ್ರೂರ್ವಿನತಯಾ ಸಾರ್ಧಂ ಯದ್ವೃತ್ತಂ ಪ್ರಮದಾಲಯೇ ॥ ೧೮ ॥
ತಚ್ಛ್ರುತ್ವಾ ಬಾಂಧವಾಃ ಸರ್ವೇ ಕದ್ರುಪುತ್ರಾಸ್ತಥೈವ ಚ ।
ನ ಮನ್ಯಂತೇ ಹಿತಂ ಕಾರ್ಯಂ ಕೃತಂ ಮಾತ್ರಾ ವಿಗರ್ಹಿತಂ ॥ ೧೯ ॥
ಅಕೃಷ್ಣಃ ಕೃಷ್ಣತಾಮಂಬ ಕಥಂ ಗಚ್ಛೇದ್ಧಯೋತ್ತಮಃ ।
ದಾಸೀತ್ವಂ ಪ್ರಾಪ್ಸ್ಯಸೇ ತ್ವಂ ಹಿ ಪಣೇನಾನೇನ ಸುವ್ರತೇ ॥ ೨೦ ॥

ಕದ್ರೂರುವಾಚ :—

ಭವೇಯಂ ನ ಯಥಾ ದಾಸೀ ತತ್ಕುರುಧ್ವಂ ಹಿ ಸತ್ವರಂ ।
ವಿಶಧ್ವಂ ರೋಮಕೂಪೇಷು ತಸ್ಯಾಽಶ್ವಸ್ಯ ಮತಿರ್ಮಮ ॥ ೨೧ ॥
ಕ್ಷಣಮಾತ್ರಂ ಕೃತೇ ಕಾರ್ಯೇ ಸಾ ದಾಸೀ ಚ ಭವೇನ್ಮಮ ।
ತತಃ ಸ್ವಸ್ಥೋರಗಾಃ ಸರ್ವೇ ಭವಿಷ್ಯಥ ಯಥಾ ಸುಖಂ ॥ ೨೨ ॥

---

೧೭. ಹಾಗೆಯೇ ಆಗಲೆಂದು ಪ್ರತಿಜ್ಞೆಯನ್ನುಮಾಡಿ ಕೋಪದಿಂದ ಮೈಮರೆತ ಇಬ್ಬರೂ ಹೊರಟು ರಾತ್ರಿಯಲ್ಲಿ ತಮ್ಮ ತಮ್ಮ ಮನೆಗಳನ್ನು ಸೇರಿದರು.

೧೮. ಬಂಧುಗಳಲ್ಲಿ ಬಹುಮಾನವನ್ನು ನಡೆಯಲು ಕದ್ರುವು ಅಂತಃಪುರಕ್ಕೆ ಹೋಗಿ ವಿನತೆಯೊಡನೆ ತಾನು ಮಾಡಿಕೊಂಡ ಪಣವನ್ನು ಎಲ್ಲರಿಗೂ ತಿಳಿಸಿದಳು.

೧೯. ಅದನ್ನು ಕೇಳಿ ಬಂಧುಗಳೆಲ್ಲರೂ ಆಕೆಯ ಮಕ್ಕಳಾದ ನಾಗರು ಸಹ ತಾಯಿಯು ಮಾಡಿದ ಈ ಕೆಲಸವು ನಿಂದಾರ್ಹವೂ ಅಹಿತವೂ ಎಂದು ತಿಳಿದುಕೊಂಡರು.

೨೦. "ತಾಯಿ! ಕಪ್ಪೇ ಇಲ್ಲದ ಆ ಉತ್ತಮಾಶ್ವವು ಕಪ್ಪು ಬಣ್ಣವನ್ನು ತಾಳುವುದು ಹೇಗೆ? ಎಲೌ ಸುವ್ರತೆಯೆ! ಈ ಪಣದಿಂದ ನೀನೇ ಆಕೆಗೆ ದಾಸೀತ್ವವನ್ನು ಪಡೆಯುವೆ."

೨೧. ಕದ್ರುವು ಹೇಳುತ್ತಾನೆ.—ನೀವು ಬೇಗ ಹೋಗಿ ನಾನು ದಾಸಿಯಾಗದಿರುವುದಕ್ಕೆ ತಕ್ಕಂತೆ ನಡೆಯಬೇಕು. ನೀವೆಲ್ಲರೂ ಆ ಕುದುರೆಯ ರೋಮಕೂಪಗಳಿಗೆ ಅಂಟಿಕೊಳ್ಳಬೇಕೆಂದು ನನಗೆ ತೋರುತ್ತಿರುವುದು.

೨೨. ನಿಮಿಷಮಾತ್ರಕ್ಕೆ ಈ ಕಾರ್ಯವನ್ನು ನೀವು ಮಾಡಿದರೆ ಅವಳೇ ನನ್ನ ದಾಸಿಯಾಗುವಳು. ಬಳಿಕ ಸಕಲ ನಾಗರೂ ತಮ್ಮ ಪಾಡಿಗೆ ತಾವು ಸ್ವಸ್ಥರಾಗಿರಬಹುದು.

ಸರ್ಪಾ ಊಚುಃ:—

ಯದಿ ತ್ವಂ ಜನನೀ ದೇವಿ ಪನ್ನಗಾನಾಂ ಮತಾ ಭುವಿ ।
ತಥಾಽಪಿ ಸವಿಶೇಷೇಣ ವಂಚಿತವ್ಯಾ ನ ಕರ್ಹಿಚಿತ್ ॥ ೨೩ ॥

ಕದ್ರೂರುವಾಚ:—

ಮಮ ವಾಕ್ಯಮಕುರ್ವಾಣಾ ಯೇ ಕೇಚಿದ್ಭುವಿ ಪನ್ನಗಾಃ ।
ಹವ್ಯವಾಹಮುಖಂ ಸರ್ವೇ ತೇ ಯಾಸ್ಯಂತ್ಯವಿಚಾರಿತಾಃ ॥ ೨೪ ॥
ಏತಚ್ಛ್ರುತ್ವಾ ತು ವಚನಂ ಘೋರಂ ಮಾತೃಮುಖೋದ್ಭವಂ ।
ಕೇಚಿತ್ಪ್ರವಿಷ್ಟಾ ರೋಮಾಣಿ ತಥಾಽನ್ಯೇ ಗಿರಿಸಂಸ್ಥಿತಾಃ ॥ ೨೫ ॥
ಕೇಚಿತ್ಪ್ರವಿಷ್ಟಾ ಜಾಹ್ನವ್ಯಾಮನ್ಯೇ ಚ ತಪಸಿ ಸ್ಥಿತಾಃ ॥ ೨೬ ॥
ತತೋ ವರ್ಷಸಹಸ್ರಾಂತೇ ತುತೋಷ ಪರಮೇಶ್ವರಃ ।
ಮಹಾದೇವೋ ಜಗದ್ಧಾತಾ ಹ್ಯುವಾಚ ಪರಮಾ ಗಿರಾ ॥ ೨೭ ॥
ಭೋ ಭೋಃ ಸರ್ಪಾ ನಿವರ್ತಧ್ವಂ ತಪಸೋಽಸ್ಯ ಮಹತ್ಫಲಂ ।
ಯಮಿಚ್ಛಥ ದದಾಮ್ಯದ್ಯ ನಾಽತ್ರ ಕಾರ್ಯಾ ವಿಚಾರಣಾ ॥ ೨೮ ॥

---

೨೩. ನಾಗರು ಹೇಳುತ್ತಾರೆ.—ದೇವಿಯೆ! ಭೂಮಿಯಲ್ಲಿ ಸಮಸ್ತ ನಾಗರಿಗೂ ನೀನು ಹೇಗೆ ತಾಯಿಯೆಂದು ತಿಳಿಯಲ್ಪಟ್ಟಿರುವೆಯೊ, ಹಾಗೆಯೇ ಆಕೆಯೂ ತಾಯಿಯೇ ಆದುದರಿಂದ ಈ ವಂಚನೆಯು ಆಕೆಗೆ ಸಲ್ಲದು.

೨೪ ಕದ್ರುವು ಹೇಳುತ್ತಾಳೆ.—ನನ್ನ ಮಾತಿನಂತೆ ನಡೆಯದೆ ಈ ಭೂಮಿಯಲ್ಲಿ ಯಾವ ನಾಗರಿರುವರೊ, ಅವರೆಲ್ಲರೂ ಖಂಡಿತವಾಗಿಯೂ ಅಗ್ನಿಮುಖದಲ್ಲಿ ಬೀಳುವರು.

೨೫. ತಾಯಿಯಾಡಿದ ಈ ಭಯಂಕರವಾದ ಶಾಪವನ್ನು ಕೇಳಿ ಕೆಲವು ನಾಗರು ಆಕೆಯ ಮಾತಿನಂತೆ ಕುದುರೆಯ ರೋಮಕೂಪಗಳಿಗೆ ಹತ್ತಿಕೊಂಡರು. ಹಲವರು ಪರ್ವತಗಳಲ್ಲಿ ಸೇರಿಕೊಂಡರು.

೨೬. ಮತ್ತೆ ಕೆಲವರು ಗಂಗಾನದಿಯಲ್ಲಿ ಪ್ರವೇಶಿಸಿದರು. ಹಲವರು ಉಗ್ರತಪಸ್ಸನ್ನು ಮಾಡುತ್ತಿದ್ದರು.

೨೭. ಇಂತು ಒಂದು ಸಾವಿರ ವರ್ಷಗಳ ಕಳೆಯಲು ಪರಮೇಶ್ವರನೂ, ಲೋಕಸೃಷ್ಟಿಕಾರಕನೂ ಆದ ಮಹಾದೇವನು ಸಂತೋಷಗೊಂಡು ಕರುಣೆಯಿಂದ ಇಂತೆಂದನು.

೨೮. " ಎಲೈ ಸರ್ಪಗಳಿರಾ! ಸಾಕುಮಾಡಿರಿ. ಈ ನಿಮ್ಮ ತಪಸ್ಸಿಗೆ ಯಾವ ಮಹತ್ಫಲವನ್ನಪೇಕ್ಷಿಸಿದರೂ ಕೊಡುವೆನು. ಈ ವಿಷಯದಲ್ಲಿ ಸಂದೇಹಗೊಳ್ಳಬೇಡಿರಿ.

ಸರ್ಪಾ ಊಚುಃ:-

ಕದ್ರೂಶಾಪಭಯಾದ್ಭೀತಾ ದೇವದೇವ ಮಹೇಶ್ವರ ।
ತವ ಪಾರ್ಶ್ವೇ ವಸಿಷ್ಯಾಮೋ ಯಾವದಾಭೂತಸಂಪ್ಲವಂ ॥ ೨೯ ॥

ದೇವದೇವ ಉವಾಚ:-

ಏಕಶ್ಚಾಯಂ ಮಹಾಬಾಹುರ್ವಾಸುಕಿರ್ಭುಜಗೋತ್ತಮಃ ।
ಮಮ ಪಾರ್ಶ್ವೇ ವಸೇನ್ನಿತ್ಯಂ ಸರ್ವೇಷಾಂ ಭಯರಕ್ಷಕಃ ॥ ೩೦ ॥
ಅನ್ಯೇಷಾಂ ಚೈವ ಸರ್ಪಾಣಾಂ ಭಯಂ ನಾಸ್ತಿ ಮಮಾಜ್ಞಯಾ ।
ಆಪ್ಲುತ್ಯ ನರ್ಮದಾತೋಯೇ ಭುಜಗಾಸ್ತೇ ಚ ರಕ್ಷಿತಾಃ ॥ ೩೧ ॥
ನಾಸ್ತಿ ಮೃತ್ಯುಭಯಂ ತೇಷಾಂ ವಸಧ್ವಂ ಯತ್ರ ಚೇಪ್ಸಿತಂ ।
ಕದ್ರೂಶಾಪಭಯಂ ನಾಸ್ತಿ ಹ್ಯೇಷ ಮೇ ವಿಸ್ತರಃ ವರಃ ॥ ೩೨ ॥
ಏವಂ ದತ್ವಾ ವರಂ ತೇಷಾಂ ದೇವದೇವೋ ಮಹೇಶ್ವರಃ ।
ಜಗಾಮಾಕಾಶಮಾವಿಶ್ಯ ಕೈಲಾಸಂ ಧರಣೀತಲಂ ॥ ೩೩ ॥
ಗತೇ ಚಾದರ್ಶನಂ ದೇವೇ ವಾಸುಕಿಪ್ರಮುಖಾ ನೃಪ ।
ಸ್ಥಾಪಯಿತ್ವಾ ತಥಾ ಜಗ್ಮುರ್ದೇವದೇವಂ ಮಹೇಶ್ವರಂ ॥ ೩೪ ॥

೨೯. ಸರ್ಪರು ಹೇಳುತ್ತಾರೆ —ದೇವದೇವನೆ! ಮಹೇಶ್ವರನೆ! ಕದ್ರುವಿನ ಶಾಪಕ್ಕೆ ನಾವು ಭಯಗೊಂಡಿರುವೆವು. ಪಂಚಭೂತಗಳ ಲಯವಾಗುವವರೆಗೂ ನಾವು ನಿನ್ನ ಬಳಿಯಲ್ಲಿಯೇ ವಾಸಮಾಡುವೆವು.

೩೦. ಮಹಾದೇವನು ಹೇಳುತ್ತಾನೆ.–ಮಹಾಪರಾಕ್ರಮಿಯೂ, ನಾಗರಲ್ಲಿ ಸರ್ವೋತ್ತಮನೂ ಆದ ಈ ವಾಸುಕಿಯೊಬ್ಬನು ಮಾತ್ರ ನನ್ನ ಬಳಿಯಲ್ಲಿ ವಾಸಿಸುತ್ತ ನಿಮಗೆಲ್ಲರಿಗೂ ಭಯರಕ್ಷಕನಾಗಿರುವನು.

೩೧–೩೨ ನನ್ನ ಅಪ್ಪಣೆಯಂತೆ ಇತರ ಭುಜಂಗಗಳಿಗೂ ಭಯವಿರುವುದಿಲ್ಲ. ನರ್ಮದಾನದಿಯ ನೀರಿನಲ್ಲಿ ಮುಳುಗಿ ಬಂದವರೆಲ್ಲರಿಗೂ ಭಯದಿಂದ ರಕ್ಷಣೆಯಾಗುವುದು. ಅವರಿಗೆ ಮರಣದ ಭಯವಾಗಲಿ ಕದ್ರೂದೇವಿಯ ಶಾಪದ ಭಯವಾಗಲಿ ಇಲ್ಲ ಆದುದರಿಂದ ನೀವು ಇಷ್ಟಬಂದಂತೆ ವಾಸಿಸುತ್ತಿರಿ. ಇಂತಹ ದೊಡ್ಡ ವರವನ್ನು ನಿಮಗೆ ಕೊಟ್ಟಿರುವೆನು.

೩೩. ಇಂತೆಂದು ದೇವದೇವನಾದ ಮಹೇಶ್ವರನು ಅವರಿಗೆ ವರವನ್ನಿತ್ತು ಆಕಾಶಮಾರ್ಗದಿಂದ ತನ್ನ ನಿವಾಸವಾದ ಕೈಲಾಸ ಪರ್ವತವನ್ನು ಕುರಿತು ಹೊರಟುಹೋದನು.

೩೪. ಧರ್ಮರಾಜನೆ! ದೇವದೇವನು ಅದೃಶ್ಯನಾಗಲು ವಾಸುಕಿಯೇ ಮೊದಲಾದ ನಾಗರು ಅಲ್ಲಿಯೇ ಒಂದು ಮಹಾಲಿಂಗವನ್ನು ಸ್ಥಾಪಿಸಿ ಹೊರಟು ಹೋದರು.

**ತತ್ರ ತೀರ್ಥೇ ತು ಯಃ ಕಶ್ಚಿತ್ಪಂಚಮ್ಯಾಮರ್ಚಯೇಚ್ಛಿವಂ ।**
**ತಸ್ಯ ನಾಗಕುಲಾನ್ಯಷ್ಟೌ ನ ಹಿಂಸಂತಿ ಕದಾಚನ ॥ ೩೫ ॥**
**ಮೃತಃ ಕಾಲೇನ ಮಹತಾ ತತ್ರ ತೀರ್ಥೇ ನರೇಶ್ವರ ।**
**ಶಿವಸ್ಯಾನುಚರೋ ಭೂತ್ವಾ ವಸತೇ ಕಾಲಮೀಪ್ಸಿತಂ ॥ ೩೬ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ "ನಾಗೇಶ್ವರತೀರ್ಥಮಾಹಾತ್ಮ್ಯವರ್ಣನಂ" ನಾಮ್ನೈಕತ್ರಿಂಶದಧಿಕಶತತಮೋಽಧ್ಯಾಯಃ**

---

೩೫. ಆ ತೀರ್ಥದ ಬಳಿಯಲ್ಲಿರುವ ಶಿವಲಿಂಗವನ್ನು ಪಂಚಮಿಯ ದಿನದಲ್ಲಿ ಪೂಜಿಸಿದವನನ್ನು ನಾಗರ ಎಂಟು ಕುಲದವರೂ ಎಂದಿಗೂ ಹಿಂಸಿಸುವುದಿಲ್ಲ.

೩೬. ನರೇಶ್ವರನೆ! ಬಹಳ ಕಾಲದಮೇಲೆ ಆತನು ಮೃತನಾದರೂ ಶಿವನ ಲೋಕದಲ್ಲಿ ಅನುಚರನಾಗಿ ಯಥೇಚ್ಛವಾದ ಕಾಲದವರೆಗೂ ವಾಸಮಾಡುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ "ನಾಗೇಶ್ವರತೀರ್ಥಮಾಹಾತ್ಮ್ಯವರ್ಣನ"ವೆಂಬ ನೂರಮೂವತ್ತೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ದ್ವಾತ್ರಿಂಶದಧಿಕಶತತಮೋಽಧ್ಯಾಯಃ

## ಆದಿವಾರಾಹತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ:—

ತತೋ ಗಚ್ಛೇತ್ತು ರಾಜೇಂದ್ರ ಉತ್ತರೇ ನರ್ಮದಾತಟೇ ।
ಸರ್ವಪಾಪಹರಂ ತೀರ್ಥಂ ವಾರಾಹಂ ನಾಮ ನಾಮತಃ ॥ ೧ ॥
ತತ್ರ ದೇವೋ ಜಗದ್ಧಾತಾ ವಾರಾಹಂ ರೂಪಮಾಸ್ಥಿತಃ ।
ಸ್ಥಿತೋ ಲೋಕಹಿತಾರ್ಥಾಯ ಸಂಸಾರಾರ್ಣವತಾರಕಃ ॥ ೨ ॥
ತತ್ರ ತೀರ್ಥೇ ತು ಯಃ ಸ್ನಾತ್ವಾ ಪೂಜಯೇದ್ಧರಣೀಧರಂ ।
ಗಂಧಮಾಲ್ಯವಿಶೇಷೈಶ್ಚ ಜಯಶಬ್ದಾದಿಮಂಗಲೈಃ ॥ ೩ ॥
ಉಪವಾಸಪರೋ ಭೂತ್ವಾ ದ್ವಾದಶ್ಯಾಂ ನೃಪಸತ್ತಮ ।
ವೃಷಲಾಃ ಪಾಪಕರ್ಮಾಣಸ್ತಥೈವಾಂಧಪಿಶಾಚಿನಃ ॥ ೪ ॥
ಆಲಾಪಾದ್ಗಾತ್ರಸಂಪರ್ಕಾನ್ನಿಃಶ್ವಾಸಾತ್ಸಹ ಭೋಜನಾತ್ ।
ಪಾಪಂ ಸಂಕ್ರಮತೇ ಯಸ್ಮಾತ್ತಸ್ಮಾತ್ತಾನ್ಪರಿವರ್ಜಯೇತ್ ॥ ೫ ॥

---

## ಕನ್ನಡದ ಅನುವಾದ

### ಆದಿವರಾಹತೀರ್ಥಮಾಹಾತ್ಮ್ಯವರ್ಣನ

೧. ಮಾರ್ಕಂಡೇಯನು ಹೇಳುತ್ತಾನೆ —ರಾಜೇಂದ್ರನೆ! ಬಳಿಕ ನರ್ಮದೆಯ ಉತ್ತರತೀರದಲ್ಲಿ ವರಾಹವೆಂಬ ಹೆಸರಿನಿಂದ ಪ್ರಖ್ಯಾತವಾಗಿ ಸಮಸ್ತ ಪಾಪಹರವೆಂದೆನಿಸಿದ ತೀರ್ಥವನ್ನು ಸೇರಬೇಕು.

೨. ಅಲ್ಲಿ ಲೋಕಪಾಲಕನೂ, ಸಂಸಾರಸಮುದ್ರದಿಂದ ಕಡೆಹಾಯಿಸುವವನೂ ಆದ ಮಹಾವಿಷ್ಣುವು ಲೋಕಕಲ್ಯಾಣಕ್ಕಾಗಿ ವರಾಹರೂಪವನ್ನು ಸ್ವೀಕರಿಸಿ ನೆಲಸಿರುವನು.

೩. ಆ ತೀರ್ಥದಲ್ಲಿ ಸ್ನಾನವನ್ನು ಮಾಡಿ ಭೂಮಿಯನ್ನುದ್ಧರಿಸಿದ ವರಾಹಸ್ವಾಮಿಗೆ ವಿವಿಧಗಳಾದ ಗಂಧಮಾಲ್ಯಗಳಿಂದಲೂ ಜಯಜಯಕಾರಗಳಿಂದಲೂ ಮಂಗಳವಾದ್ಯಗಳಿಂದಲೂ ಪೂಜೆಯನ್ನು ಮಾಡಬೇಕು.

೪—೫. ರಾಜಸತ್ತಮನೆ! ದ್ವಾದಶಿಯಲ್ಲಿ ಉಪವಾಸದಿಂದ ಪೂಜೆಯನ್ನು ಮಾಡಬೇಕು. ಶೂದ್ರರು ಮತ್ತು ಪತಿತದ್ವಿಜರು, ಪಾಪಕರ್ಮಿಗಳು, ಅಂಧ ಪಿಶಾಚಿಗಳು ಮುಂತಾದವರೊಡನೆ ಮಾತನಾಡುವುದರಿಂದಲೂ, ಸ್ಪರ್ಶದಿಂದಲೂ, ಉಸಿರಾಟದಿಂದಲೂ, ಸಹಭೋಜನದಿಂದಲೂ ಪಾಪವು ಸಂಘಟಿಸುವುದರಿಂದ ಇವುಗಳೆಲ್ಲವನ್ನೂ ತ್ಯಜಿಸಬೇಕು.

**ಬ್ರಾಹ್ಮಣಾನ್ಪೂಜಯೇದ್ಭಕ್ತ್ಯಾ ಯಥಾಶಕ್ತ್ಯಾ ಯಥಾವಿಧಿ ।**
**ರಾತ್ರೌ ಜಾಗರಣಂ ಕಾರ್ಯಂ ಕಥಾಯಾಂ ತತ್ರ ಭಾರತ ॥ ೬ ॥**
**ಪ್ರಭಾತೇ ವಿಮಲೇ ಸ್ನಾತ್ವಾ ತತ್ರ ತೀರ್ಥೇ ಜಗದ್ಗುರುಂ ।**
**ಯೇ ಪಶ್ಯಂತಿ ಜಿತಕ್ರೋಧಾಸ್ತೇ ಮುಕ್ತಾಃ ಸರ್ವಪಾತಕೈಃ ॥ ೭ ॥**
**ಯಥಾ ತು ದೃಷ್ಟ್ವಾ ಭುಜಗಾಃ ಸುಪರ್ಣಂ**
**ನಶ್ಯಂತಿ ಮುಕ್ತ್ವಾ ವಿಷಮುಗ್ರತೇಜಃ ।**
**ನಶ್ಯಂತಿ ಪಾಪಾನಿ ತಥೈವ ಶೀಘ್ರಂ**
**ದೃಷ್ಟ್ವಾ ಮುಖಂ ಶೂಕರರೂಪಿಣಸ್ತು ॥ ೮ ॥**
**ನಭೋಗತಂ ನಶ್ಯತಿ ಚಾಂಧಕಾರಂ**
**ದೃಷ್ಟ್ವಾ ರವಿಂ ದೇವವರಂ ತಥೈವ ।**
**ನಶ್ಯಂತಿ ಪಾಪಾನಿ ಸುದುಸ್ತರಾಣಿ**
**ದೃಷ್ಟ್ವಾ ಮುಖಂ ಪಾರ್ಥ ಧರಾಧರಸ್ಯ ॥ ೯ ॥**
**ಕಿಂ ತಸ್ಯ ಬಹುಭಿರ್ಮಂತ್ರೈರ್ಭಕ್ತಿರ್ಯಸ್ಯ ಜನಾರ್ದನೇ ।**
**ನಮೋ ನಾರಾಯಣಾಯೇತಿ ಮಂತ್ರಃ ಸರ್ವಾರ್ಥಸಾಧಕಃ ॥ ೧೦ ॥**

---

೬. ಆ ತೀರ್ಥದಲ್ಲಿ ಯಥಾಶಕ್ತಿಯಾಗಿ ಭಕ್ತಿಯಿಂದ ವಿಧ್ಯುಕ್ತರೀತಿಯಲ್ಲಿ ಬ್ರಾಹ್ಮಣರನ್ನರ್ಚಿಸಿ ರಾತ್ರಿಯನ್ನು ಕ್ಷೇತ್ರಚರಿತ್ರೆಯನ್ನು ಕೇಳುವುದರಲ್ಲಿ ಜಾಗರಣೆ ಮಾಡಿ ಕಳೆಯಬೇಕು.

೭. ವಿಮಲವಾಗಿ ಸುಪ್ರಭಾತವಾಗಲು ಕೋಪವನ್ನು ಕಳೆದು ತೀರ್ಥದಲ್ಲಿ ಮಿಂದು ಆ ಲೋಕಗುರುವನ್ನು ನೋಡುವ ಮಾನವರು ಸಕಲ ಪಾತಕಗಳಿಂದಲೂ ಮುಕ್ತರಾಗುವರು.

೮. ಮಹಾತೇಜಸ್ವಿಗಳಾದ ಸರ್ಪಗಳು ಹೇಗೆ ಗರುಡನನ್ನು ಕಂಡೊಡನೆಯೇ ತಮ್ಮ ವಿಷವನ್ನುಳಿದು ನಾಶವಾಗುವುವೋ, ಹಾಗೆಯೇ ಸೂಕರರೂಪನಾದ ಈ ಸ್ವಾಮಿಯ ಮುಖಕಮಲವನ್ನು ಕಂಡವನ ಪಾಪಗಳೂ ಶೀಘ್ರವಾಗಿ ನಾಶವಾಗುವುವು.

೯. ಆಕಾಶವನ್ನೆಲ್ಲ ವ್ಯಾಪಿಸಿರುವ ಅಂಧಕಾರವೆಲ್ಲವೂ ದೇವದೇವನಾದ ಸೂರ್ಯನನ್ನು ಕಂಡೊಡನೆಯೇ ನಷ್ಟವಾಗುವುದು. ಪಾರ್ಥನೆ! ಹಾಗೆಯೇ ಭೂಧರನಾದ ವರಾಹಸ್ವಾಮಿಯ ಮುಖವನ್ನು ನೋಡಿದೊಡನೆಯೇ ದುಸ್ತರಗಳಾದ ಪಾಪಗಳೂ ಕಳೆದುಹೋಗುವುವು.

೧೦. ಜನಾರ್ದನನಲ್ಲಿ ಯಾವನಿಗೆ ಭಕ್ತಿಯಿರುವುದೊ, ಅವನಿಗೆ ಇತರ ಅನೇಕ ಮಂತ್ರಗಳಿಂದೇನು? "ಓಂ ನಮೋ ನಾರಾಯಣಾಯ" ಎಂಬ ಒಂದು ಮಂತ್ರವೇ ಸರ್ವಾರ್ಥಸಾಧಕವಾಗಿರುವುದು.

ಏಕೋಽಪಿ ಕೃಷ್ಣಸ್ಯ ಕೃತಪ್ರಣಾಮೋ
ದಶಾಶ್ವಮೇಧಾಽವಭೃಥೇನ ತುಲ್ಯಃ ।
ದಶಾಶ್ವಮೇಧೀ ಪುನರೇತಿ ಜನ್ಮ
ಕೃಷ್ಣಪ್ರಣಾಮೀ ನ ಪುನರ್ಭವಾಯ ॥ ೧೧ ॥
ಧ್ಯಾಯಮಾನಾ ಮಹಾತ್ಮಾನೋ ರೂಪಂ ನಾರಾಯಣಂ ಹರೇಃ ।
ಯೇ ತ್ಯಜಂತಿ ಸ್ವಕಂ ದೇಹಂ ತತ್ರ ತೀರ್ಥೇ ಜಿತೇಂದ್ರಿಯಾಃ ॥ ೧೨ ॥
ತೇ ಗಚ್ಛಂತ್ಯಮಲಂ ಸ್ಥಾನಂ ಯತ್ಸುರೈರಪಿ ದುರ್ಲಭಂ ।
ಕ್ಷರಾಕ್ಷರವಿನಿರ್ಮುಕ್ತಂ ತದ್ವಿಷ್ಣೋಃ ಪರಮಂ ಪದಂ ॥ ೧೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ಆದಿವಾರಾಹತೀರ್ಥಮಾಹಾತ್ಮ್ಯವರ್ಣನಂ" ನಾಮ
ದ್ವಾತ್ರಿಂಶದಧಿಕಶತತಮೋಽಧ್ಯಾಯಃ

---

೧೧. ಶ್ರೀ ಕೃಷ್ಣನಿಗೆ ಮಾಡಿದ ಒಂದೇ ಪ್ರಣಾಮವು ಹತ್ತು ಅಶ್ವಮೇಧ ಯಾಗಗಳನ್ನು ಮುಗಿಸಿ ಮಾಡಿದ ಅವಭೃಥಸ್ನಾನಕ್ಕೆ ಸಮಾನವಾಗಿರುವುದು. ದಶಾಶ್ವಮೇಧಗಳನ್ನು ಮಾಡಿದವನಿಗೂ ಪುನರ್ಜನ್ಮವುಂಟು. ಕೃಷ್ಣನನ್ನು ನಮಸ್ಕರಿಸಿದವನು ಮತ್ತೆ ಜನ್ಮವನ್ನು ತಾಳುವುದಿಲ್ಲ.

೧೨–೧೩. ಯಾವ ಮಹಾತ್ಮರು ಜಿತೇಂದ್ರಿಯರಾಗಿ ಆ ತೀರ್ಥದಲ್ಲಿ ಶ್ರೀ ಹರಿಯ ನಾರಾಯಣ ರೂಪವನ್ನು ಧ್ಯಾನಿಸುತ್ತ ತಮ್ಮ ದೇಹಗಳನ್ನು ತ್ಯಜಿಸುವರೊ, ಅವರು ದೇವತೆಗಳಿಗೂ ಅಸಾಧ್ಯವೆನಿಸಿ, ಕ್ಷರಾಕ್ಷರಗಳೆಂಬ ಭೇದವಿಲ್ಲದ ನಿರ್ಮಲವಾದ ಮಹಾವಿಷ್ಣುವಿನ ವೈಕುಂಠಲೋಕಕ್ಕೆ ಹೋಗುವರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಆದಿವರಾಹತೀರ್ಥಮಾಹಾತ್ಮ್ಯವರ್ಣನ"ವೆಂಬ
ನೂರಮೂವತ್ತೆರಡನೆಯ ಅಧ್ಯಾಯವು ಮುಗಿದುದು

